# ದಾವಣಗೆರೆ ಜಿಲ್ಲೆಯ ಸ್ಮಾರಕ ಶಿಲ್ಪಗಳು

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪ[illegible])



ಸಂಶೋಧಕ

ಹೊನ್ನೂರಸ್ವಾಮಿ ಹೆಚ್

ಮಾರ್ಗದರ್ಶಕರು

ಡಾ. ರಮೇಶ ನಾಯಕ

ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯



# ದಾವಣಗೆರೆ ಜಿಲ್ಲೆಯ ಸ್ಮಾರಕ ಶಿಲ್ಪಗಳು

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕ

**ಹೊನ್ನೂರಸ್ವಾಮಿ ಹೆಚ್**

ಮಾರ್ಗದರ್ಶಕರು

**ಡಾ. ರಮೇಶ ನಾಯಕ**

ಪ್ರಾಧ್ಯಾಪಕರು





**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**

ಸಮಾಜವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

**೨೦೧೯**

## ಸಂಶೋಧಕರ ಪ್ರಮಾಣಪತ್ರ

**ದಾವಣಗೆರೆ ಜಿಲ್ಲೆಯ ಸ್ಮಾರಕ ಶಿಲ್ಪಗಳು** ಎಂಬ ಮಹಾಪ್ರಬಂಧವನ್ನು **ಡಾ. ರಮೇಶ ನಾಯಕ,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನಗಳ ನಿಕಾಯದ **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

Honnuraswamy.H
(ಹೊನ್ನೂರಸ್ವಾಮಿ ಹೆಚ್)
ಸಂಶೋಧನ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ: ೦4.೦1.೨೦೨೦
ಸ್ಥಳ: ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

**ಹೊನ್ನೂರಸ್ವಾಮಿ ಹೆಚ್** ಅವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ದಾವಣಗೆರೆ ಜಿಲ್ಲೆಯ ಸ್ಮಾರಕ ಶಿಲ್ಪಗಳು** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನಗಳ ನಿಕಾಯದ **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ರಮೇಶ ನಾಯಕ**
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : 04/01/2020
ಸ್ಥಳ : ವಿದ್ಯಾರಣ್ಯ

# ಸಂಕ್ಷೇಪಗಳು

| | | |
|---|---|---|
| ಇ.ಸಿ. | : | ಎಪಿಗ್ರಾಫಿಯಾ ಕರ್ನಾಟಕ |
| ಎ.ಐ | : | ಎಪಿಗ್ರಾಫಿಯಾ ಇಂಡಿಕಾ |
| ಎಸ್.ಐ.ಐ. | : | ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ |
| ಐ.ಎ. | : | ಇಂಡಿಯನ್ ಆ್ಯಂಟಿಕ್ವೆರಿ |
| ಕ.ವಿ.ಶಾ.ಸಂ. | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಕ.ಶಾ.ಸಾ.ಅ. | : | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| ಕ.ಇ.ಅ. | : | ಕರ್ನಾಟಕ ಇತಿಹಾಸ ಅಕಾಡೆಮಿ |

| | | |
|---|---|---|
| **A.R.** | : | Annual Reports |
| **A.R.I.E.** | : | Annual Reports on Indian Epigraphy |
| **A.R.S.I.E** | : | Annual Reports on South Indian Epigraphy |
| **A.S.I** | : | Archaeology Survey of India |
| **B.K.I** | : | Bombay Karnataka Inscription |
| **J.B.B.R.A.S** | : | Journal of Bombay Branch of the Royal Asiatic Society |
| **J.E.S.I** | : | Journal of the Epigraphical Society of India Mysore |
| **M.A.R.** | : | Mysore Archaeological Reports |

# ಪರಿವಿಡಿ

# ಅಧ್ಯಾಯ: ಒಂದು

# ಪ್ರಸ್ತಾವನೆ

## ೧.೧. ಪ್ರಸ್ತಾವನೆ

ಪ್ರಾರಂಭದಲ್ಲಿ ಮಾನವನು ಅಲೆಮಾರಿಯಾಗಿ ಬದುಕು ಸಾಗಿಸುತ್ತಿದ್ದ. ಶಾಶ್ವತವಾಗಿ ನೆಲೆ ಕಾಣದೆ ತನಗೆ ಅನುಕೂಲಕರ ಪ್ರದೇಶಗಳಲ್ಲಿ ಅಲೆದಾಡುತ್ತಾ ಅಲ್ಲಲ್ಲಿ ಸಿಗುತ್ತಿದ್ದ ಆಹಾರವನ್ನೇ ಉಪಯೋಗಿಸಿ ಗವಿ ಕಲ್ಲಾಸರೆಗಳನ್ನು ಆಶ್ರಯಿಸಿದ್ದ. ಕಾಲಕ್ರಮೇಣ ಶಾಶ್ವತವಾಗಿ ನೆಲೆ ನಿಂತು ತನಗೆ ಬೇಕಾದ ಆಹಾರ ಪದಾರ್ಥಗಳನ್ನು ತಾನೇ ಉತ್ಪಾದಿಸಲು ಪ್ರಾರಂಭಿಸಿದ. ಇದು ಮಾನವನು ಬೇಟೆ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಯ ಕಡೆಗೆ ಹಾಗೂ ಅಲೆಮಾರಿ ಸಂಸ್ಕೃತಿಯಿಂದ ಗ್ರಾಮ ಸಂಸ್ಕೃತಿಯಾಗಿ ರೂಪಗೊಂಡ ವಿಕಾಸವಾದವನ್ನು ಸೂಚಿಸುತ್ತದೆ.

ನಾಗರೀಕನಾದಂತೆ ತನ್ನ ಸಮುದಾಯದವರೊಂದಿಗೆ ನಿರ್ದಿಷ್ಟ ಪ್ರದೇಶದಲ್ಲಿ ನೆಲೆ ನಿಲ್ಲಲು ಆರಂಭಿಸಿ ಗ್ರಾಮ ಸಮಾಜದ ಹುಟ್ಟಿಗೂ ಕಾರಣನಾಗಿದ್ದಾನೆ. ಗ್ರಾಮಾಡಳಿತ ಮತ್ತು ನಗರ ರಾಜ್ಯಗಳು ಏಳಿಗೆ ಹೊಂದಿ ಪ್ರತಿಯೊಂದು ನಗರ ರಾಜ್ಯವೂ ರಾಜ್ಯ ಸ್ವರೂಪದಲ್ಲಿ ವಿಸ್ತರಣೆಗೊಂಡಿರುವುದನ್ನು ಗುರುತಿಸಲಾಗಿದೆ. ಪ್ರಾರಂಭ ಕಾಲದಿಂದಲೂ ಸಮುದಾಯಗಳ ರೂಪದ ರಾಜ್ಯ ವಿಸ್ತರಣೆಗಳಂಥ ಮಹತ್ವಾಕಾಂಕ್ಷೆಗೆ ಹೆಚ್ಚು ಪ್ರಾಧಾನ್ಯತೆ ನೀಡುತ್ತಿದ್ದವು. ಇಂತಹ ಮಹಾತ್ವಾಕಾಂಕ್ಷೆ ನಗರ ರಾಜ್ಯಗಳನ್ನು ನಿರಂತರ ಸಂಘರ್ಷದಲ್ಲಿ ತೊಡಗುವಂತೆ ಮಾಡಿತು. ರಾಜ್ಯ ವ್ಯವಸ್ಥೆಯ ಅಸ್ತಿತ್ವಕ್ಕಿಂತ ಪೂರ್ವದಲ್ಲೇ ಮಾನವ ಸಂಘರ್ಷದಲ್ಲಿ ನಿರತವಾಗಿರುವುದು ಕಂಡುಬರುತ್ತದೆ. ಇದರಿಂದಾಗಿ ಇಂದಿಗೂ ಜಗತ್ತಿನಲ್ಲಿ ಯುದ್ಧ ರಹಿತ ಸ್ಥಿತಿ ಎಂಬುದು ಅಸಾಧ್ಯವಾದ ಆದರ್ಶವಾಗಿ ಉಳಿದಿದೆ.[೧] ಯುದ್ಧದ ದುಷ್ಪರಿಣಾಮಗಳು ಅರವಿಗೆ ಬಂದಿದ್ದರೂ ಮಾನವನ ಸ್ವಭಾವದಲ್ಲಿ ಬದಲಾವಣೆಯಾಗಿರುವುದಿಲ್ಲ. ಹಾಗಾಗಿ ಯುದ್ಧದ ಉದ್ದೇಶಗಳು ಎಲ್ಲಾ ಕಾಲಘಟ್ಟದಲ್ಲಿಯೂ ಒಂದೇ ಆಗಿವೆಯೆಂದೇ ಪರಿಭಾವಿಸಬಹುದು. ಅದೆಂದರೆ ಶತ್ರುವಿನ ಬಲವನ್ನು ಗೆಲ್ಲುವುದು ಮತ್ತು ಶತ್ರುವು ಮತ್ತೆ ಬಲಗೊಳ್ಳದಿರುವಂತೆ ದಮನಿಸುವುದೆ ಯುದ್ಧ ವಿಸ್ತರಣೆಗಳ ಬಹುಮುಖ್ಯ ಉದ್ದೇಶಗಳಾಗಿವೆಯೆಂದರೆ ತಪ್ಪಾಗಲಾರದು.

ಅರಸು ಮನೆತನಗಳ ಅಥವಾ ಸಾಮ್ರಾಜ್ಯಗಳ ಚರಿತ್ರೆ ನಿರ್ಮಾಣವೂ ಕೇವಲ ರಾಜಕೀಯ ಚರಿತ್ರೆಗಷ್ಟೇ ಸೀಮಿತಗೊಂಡಿತು. ಆದರೆ ಅರಸು ಮನೆತನಗಳ ಚರಿತ್ರೆ ಕೇವಲ ರಾಜಕೀಯ ವಿವರಗಳಷ್ಟೇ ಆಗಿರದೆ ಅದು ರಾಜ್ಯ ವ್ಯವಸ್ಥೆಯನ್ನು ಪ್ರತಿನಿಧಿಸುವ ಸಾಮಾಜಿಕ ಮತ್ತು

ಸಾಂಸ್ಕೃತಿಕ ಅಂಶಗಳನ್ನು ಕೂಡಾ ಒಳಗೊಂಡಿರುವುದು ಬಹು ಮುಖ್ಯ ಅಂಶ. ಹೀಗಾಗಿ ನಾಡಿನ ಇತಿಹಾಸವೆಂದರೆ ಆ ನಾಡನ್ನು ಆಯಾ ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೆಂಬ ಭಾವನೆ ಬಹುಪ್ರಚಲಿತವಾಗಿದ್ದ ಆಲೋಚನೆಗಳನ್ನು ಪುನರ್ ಪರಿಶೀಲಿಸುವ ಅಥವಾ ದಾಖಲಿಸುವ ತುರ್ತು ಈ ಹೊತ್ತಿನ ಚರಿತ್ರೆಯ ಬರವಣಿಗೆಯ ಮುಖ್ಯ ಉದ್ದೇಶವಾಗಿವೆ. ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲ. ಅಲ್ಲಿ ಬದುಕಿದ ಜನ. ಹೀಗೆ ಬದುಕಿದ ಜನರ ಒಂದು ಗಣನೀಯವಾದ ಬದುಕು ಎಂಬುದು ಮುಖ್ಯವಾಗುತ್ತದೆ. ಆ ನಾಡನ್ನಾಳಿದ ರಾಜಸಮೂಹ ಯಾವ ಬಗೆಯಲ್ಲಿ ಜನಮುಖಿ ಧೋರಣೆ ತಾಳಿತ್ತು ಎಂಬ ವಿವರಗಳನ್ನು ತಿಳಿದುಕೊಳ್ಳುವುದು ಅಧ್ಯಯನದ ಆದ್ಯತೆಗಳಾಗಿವೆ. ನಾಡಿನ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ, ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು, ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ. ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನಗಳನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನಗಳೆಂದು ವಿದ್ವಾಂಸರು ಅಭಿಪ್ರಾಯಿಸಿರುವುದುಂಟು.[೨] ಸ್ಮಾರಕ ಶಿಲ್ಪಗಳ ವ್ಯಾಪ್ತಿಗೆ ಒಳಗೊಳ್ಳುವ ವೀರಗಲ್ಲು, ಮಾಸ್ತಿಗಲ್ಲು, ಆತ್ಮಬಲಿದಾನ ಮತ್ತು ನಿಸಿದಿ ಸ್ಮಾರಕಗಳು ಸಮಾಜೋ-ಧಾರ್ಮಿಕ ಇತಿಹಾಸವನ್ನು ಪ್ರಚುರ ಪಡಿಸುತ್ತವೆ. ಅಲ್ಲದೇ ಆಯಾ ಸಂದರ್ಭದ ಬದುಕಿನ ಮೌಲ್ಯಗಳನ್ನು ಪ್ರತಿಬಿಂಬಿಸುವ ಕೈಗನ್ನಡಿಗಳಂತೆ ತೋರುತ್ತವೆ.

ಸಾಮ್ರಾಜ್ಯಗಳ ಆಳ್ವಿಕೆ ಸ್ಥಿರವಾಗಿರಬೇಕಾದರೆ ರಾಜರಲ್ಲಿ ಬಹುದೊಡ್ಡ ಸುಸಜ್ಜಿತ ಸೈನ್ಯ ಅತ್ಯಗತ್ಯವಾಗಿ ಇರಬೇಕಾಗುತ್ತಿತ್ತು. ಹೀಗಾಗಿ ರಾಜರು ತಮ್ಮ ಸೈನ್ಯದ ಬಲವನ್ನು ದೊಡ್ಡ ಸಂಖ್ಯೆಯಲ್ಲಿ ವ್ಯವಸ್ಥೆ ಮಾಡಿಕೊಂಡಿರುತ್ತಿದ್ದರು. ರಾಜ್ಯ ವಿಸ್ತರಣೆ, ಗ್ರಾಮ ರಕ್ಷಣೆ, ಗೋ ರಕ್ಷಣೆ, ಹೆಣ್ಣಿನ ರಕ್ಷಣೆ, ಒಡೆಯನ ಪರವಾಗಿ ತನ್ನ ಋಣ ತೀರಿಸಲು, ಬೇಟೆಗಾಗಿ, ದುಷ್ಟ ಮೃಗಗಳೊಡನೆ ಹೋರಾಡಿ ಇಂತಹ ಹತ್ತು ಹಲವು ಕಾರಣಗಳಿಗಾಗಿ ವೀರರು ಮಡಿಯುತ್ತಿದ್ದರು. ಇಂತಹ ಉದಾತ್ತವಾದ ಉದ್ದೇಶದಿಂದ ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಸ್ಮಾರಕವಾಗಿ ವೀರಗಲ್ಲುಗಳನ್ನು ನಿಲ್ಲಿಸಲಾಗುತ್ತಿತ್ತು. ಯುದ್ಧದಲ್ಲಿ ಗೆದ್ದರೆ ಇಹಲೋಕದಲ್ಲಿ, ಸತ್ತರೆ ಪರಲೋಕದಲ್ಲಿ ಸುಖಿಸಬಹುದು ಎಂಬ ನಂಬಿಕೆಗಳು ಸಮಾಜದಲ್ಲಿ ಇದ್ದವು. ಇಂತಹ ನಂಬಿಕೆಗಳನ್ನು ಭಿತ್ತರಿಸಿದ ಸಮಾಜ ಜನರಲ್ಲಿ ಯುದ್ಧೋತ್ಸಾಹಗಳನ್ನು ತುಂಬಿ ಯುದ್ಧಗಳಲ್ಲಿ ಪಾಲ್ಗೊಳ್ಳುವಂತೆ ಮಾಡುವ ಪ್ರಯತ್ನಗಳಿದ್ದವು. ರಾಜ್ಯದ ರಕ್ಷಣೆ ಇತ್ಯಾದಿ ಕಾರಣಗಳಿಗಾಗಿ ರಾಜನ ಪರ ಹೋರಾಡಿ ಮಡಿಯುವುದು ಒಂದು ವಿಧವಾಗಿದ್ದರೆ, ರಾಜನ ಶ್ರೇಯಸ್ಸನ್ನು ಬಯಸಿ ತಮ್ಮನ್ನು ತಾವೇ ಆತ್ಮಾರ್ಪಣೆ ಮಾಡಿಕೊಂಡ ವೀರರ ವಿಶಿಷ್ಟ ಪರಂಪರೆಯೂ ಸಮಾಜದಲ್ಲಿ ಬೆಳೆದುಬಂದಿತ್ತು.[೩] ರಾಜನ ಆರೋಗ್ಯ ವೃದ್ಧಿಸಲೆಂದೋ, ಅವನಿಗೆ ಗಂಡು ಮಕ್ಕಳಾಗಲೆಂದೋ ಇಲ್ಲವೇ ತನ್ನ ಒಡೆಯನ ಸೈನ್ಯ ಶತ್ರುಪಡೆಯ ವಿರುದ್ಧ ಜಯಸಲೆಂದೋ ಬಯಸಿ ಸ್ವಆತ್ಮಹತ್ಯಗೈಯುತ್ತಿದ್ದರು. ಇಂತಹ ಮರಣಗಳು ಸಮಾಜದಲ್ಲಿನ ಸಂಘ ಸಂಸ್ಥೆಗಳ ಪ್ರೇರಣೆಗಳಿಂದಾಗಿ ಘಟಿಸಿರುವುದನ್ನು

ಸೂಚಿಸುತ್ತವೆ. ಹೀಗೆ ಮಡಿದ ವೀರರ ಮರಣಗಳು ಜನ ಸಮುದಾಯಗಳಲ್ಲಿ ಹೊಸ ಬಗೆಯ ಆಯಾಮಗಳನ್ನು ಸೃಷ್ಟಿಸಿದವು. ಅವರ ಈ ಆದರ್ಶಗಳು ಮುಂಬರುವ ಪೀಳಿಗೆಗೆ ಬದುಕಿನ ಮಾರ್ಗಗಳಾಗಿ ಪರಿಗಣಿತವಾಗಿದ್ದವು.

ವೀರ ಅಥವಾ ಪತಿ ಮರಣದ ಘಟನೆಗಳ ಜೊತೆಗೆ ಸ್ತ್ರೀ ಸತಿ ಹೋಗುವ ವಿಶಿಷ್ಟ ಸಂಪ್ರದಾಯ ಅಂದಿನ ಸಮಾಜದಲ್ಲಿ ರೂಢಿಯಲ್ಲಿತ್ತು. ಪತಿಯು ಕಾರಣಾಂತರಗಳಿಂದ ಮಡಿದಾಗ ಅವನೊಂದಿಗೆ ಸತಿಯೂ ಕೂಡ ಬೆಂಕಿಗೆ ಬಿದ್ದು ಪ್ರಾಣವನ್ನು ಅರ್ಪಿಸುತ್ತಿದ್ದಳು. ಇದು ಅವಳ ಪತಿ ಭಕ್ತಿಯನ್ನು ತೋರಿಸುವ ಆಚರಣೆಯಾದರೂ ಅದರ ಹಿಂದೆ ಸಾಮಾಜಿಕ ಕಟ್ಟಳೆ, ಸಂಪ್ರದಾಯ ಮತ್ತು ಶೋಷಣೆಯ ಅಂಶಗಳು ಬಲವಾದ ಪ್ರೇರಣೆಯನ್ನು ನೀಡುತ್ತಿದ್ದವು. ಗಂಡನ ಹಿಂದೆಯೇ ಸತಿ ಹೋಗದವಳಿಗೆ ಸಮಾಜದಲ್ಲಿ ಅಷ್ಟಾಗಿ ಗೌರವಿರುತ್ತಿರಲಿಲ್ಲ ಎಂಬುದು ಶೋಷಣೆಯ ಅಂಶವಾಗಿರದೇ ಮತ್ತೇನೂ ಇರಲಾರದು. ಈ ಕಾರಣದಿಂದ ಮಹಿಳೆಯರು ಸ್ವ ಇಚ್ಚೆಯಿಂದಲೇ ಸಹಗಮನಗೊಳ್ಳುತ್ತಿದ್ದರು. ಇಂತಹ ಘಟನೆಗಳಿಗೆ ಲೌಕಿಕ ಕಾರಣಗಳು ಪ್ರಧಾನವಾಗಿ ಪ್ರೇರಕವಾಗಿದ್ದವು. ಇದಕ್ಕೂ ಭಿನ್ನವಾದ ಧಾರ್ಮಿಕ ಬಲಿದಾನವೂ ಸಮಾಜದಲ್ಲಿ ಆಚರಣೆಯಲ್ಲಿತ್ತು. ದೈವನಿಷ್ಟವಾಗಿ ನಡೆಸುವ ಆತ್ಮಾನುಸಂಧಾನದಿಂದ ಸದ್ಗತಿ ಸಾಧ್ಯವೆಂದು ಭಾವಿಸಿದ ಜನರು, ದೇವರ ಹೆಸರಿನಲ್ಲಿ ಕೈಗೊಳ್ಳುವ ಆತ್ಮಬಲಿದಾನದಿಂದಲೂ ಸದ್ಗತಿ ಸಾಧ್ಯವೆಂದು ನಂಬಿ ಅಗ್ನಿ ಪ್ರವೇಶ, ಜಲಪ್ರವೇಶ, ಎತ್ತರ ಪ್ರದೇಶದಿಂದ ಬೀಳುವುದು ಮೊದಲಾದ ವಿಧಾನಗಳ ಮೂಲಕ ಆತ್ಮಬಲಿಗೈಯುತ್ತಿದ್ದರು. ಹೀಗೆ ವಿವಿಧ ಉದ್ದೇಶಗಳಿಗಾಗಿ ಮಡಿದವರಿಗಾಗಿ ನಿರ್ಮಿಸಿದ ಸ್ಮಾರಕ ಶಿಲ್ಪಗಳು ಸಾಮಾಜಿಕ ಸ್ವರೂಪದವುಗಳಾಗಿದ್ದು, ಇಂತಹ ಘಟನೆಗಳು ಸಾಮಾನ್ಯ ವೀರರು ಮತ್ತು ಮಹಿಳೆಯರಿಗೆ ಸಂಬಂಧಿಸಿದ ಚರಿತ್ರೆಯನ್ನು ಅನಾವರಣಗೊಳಿಸುತ್ತಿವೆ. ಇವುಗಳಿಂದ ಲಭ್ಯವಾಗುವ ರಾಜಕೀಯ ಇತಿಹಾಸವು ಕಡಿಮೆಯಾದರೂ ಆಯಾ ಕಾಲಘಟ್ಟದ ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸಕ್ಕೆ ಮಹತ್ವದ ಮಾಹಿತಿಗಳು ಲಭ್ಯವಾಗುತ್ತವೆ. ಪ್ರಸ್ತುತ ಅಧ್ಯಯನವು ಸಹ ಈ ನಿಟ್ಟಿನಲ್ಲಿ ಕೈಗೊಂಡಿರುವುದಾಗಿದೆ.

### ೧.೨. ಉದ್ದೇಶ

ಆಯಾ ಪ್ರದೇಶದ ಇತಿಹಾಸವನ್ನು ಒಂದೇ ಮಗ್ಗಲಿನಲ್ಲಿ ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯವಾದ ಕೆಲಸ. ಈ ಹಿನ್ನೆಲೆಯಲ್ಲಿ ಸಮಾಜದ ಸಂಸ್ಕೃತಿಯನ್ನು ಬಿಡಿ ಬಿಡಿಯಾಗಿ ತೋರಿಸುವ ನಿಟ್ಟಿನಲ್ಲಿ ಇತಿಹಾಸವನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡಲಾಗುತ್ತದೆ. ಕರ್ನಾಟಕ ಚರಿತ್ರೆಯನ್ನು ಅಧ್ಯಯನ ಮಾಡಿರುವ ವಿದ್ವಾಂಸರ ಪ್ರಯತ್ನಗಳನ್ನು ಗಮನಿಸಿದರೆ ಪ್ರಮುಖವಾಗಿ ಮೂರು ವಿಧಗಳು ಕಂಡುಬರುತ್ತವೆ. ಒಂದು ರಾಜವಂಶವನ್ನು ಗಮನದಲ್ಲಿಟ್ಟುಕೊಂಡು ರಚಿತವಾದ ಇತಿಹಾಸ, ಎರಡು ಕಾಲವನ್ನು ಆಧಾರವಾಗಿಟ್ಟುಕೊಂಡು ರಚಿತವಾದ ಇತಿಹಾಸ, ಮೂರು ಸಾಂಸ್ಕೃತಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ರಚಿತವಾದ

ಇತಿಹಾಸ. ಹೀಗೆ ಸಂಶೋಧಕರು ನಾಡಿನ ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲಿದ್ದನ್ನು ಹಾಗೂ ಘಟನೆಗಳನ್ನು ಸಂಯೋಜಿಸಿ ಚರಿತ್ರೆ ಬರವಣಿಗೆಯನ್ನು ರೂಪಿಸಿರುವುದನ್ನು ಮನಗಾಣಬಹುದು. ನಮ್ಮ ನಾಡಿನ ಪ್ರತಿಯೊಂದು ಜಿಲ್ಲೆಯ ಅಥವಾ ಒಂದು ಭಾಗದ ಇತಿಹಾಸ ರಚನೆಯ ಕಾರ್ಯಗಳು ತಕ್ಕಮಟ್ಟಿಗೆ ರೂಪುಗೊಳ್ಳುತ್ತಿದ್ದರು ನಾವಿನ್ನು ಹೆಚ್ಚು ಹೆಚ್ಚು ವಿಷಯ ವಿವರಗಳನ್ನು ಸಂಶೋಧಿಸಬೇಕಾಗಿರುವುದು ಕೂಡಾ ಅಷ್ಟೇ ಜರೂರಿನ ಸಂಗತಿಯಾಗಿವೆ. ಈ ಹಿನ್ನೆಲೆಯಾಗಿ ಪ್ರಸ್ತುತ ಸಂದರ್ಭದಲ್ಲಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳು ವಿಶಾಲ ವ್ಯಾಪ್ತಿಯಿಂದ ಕಿರು ವ್ಯಾಪ್ತಿಯತ್ತ ತಿರುವು ಪಡೆದುಕೊಳ್ಳುತ್ತಿವೆ. ಸೂಕ್ಷ್ಮತೆ ಮತ್ತು ಹೆಚ್ಚಿನ ಸಮಗ್ರತೆಯೆಡೆಗೆ ಮುಖಮಾಡಿ ರೂಪಗೊಳ್ಳುವ ಇಂಥ ಕ್ರಿಯೆಗಳು ಇತಿಹಾಸ ಅಧ್ಯಯನದಲ್ಲಿ ಜರುಗುವ ಪ್ರಮುಖ ಬದಲಾವಣೆಗಳೆಂದೇ ಪರಿಭಾವಿಸಲಾಗುತ್ತದೆ. ಅಲ್ಲದೇ ಈ ರೀತಿಯಲ್ಲಿ ರಚನೆಗೊಳ್ಳುವ ಅಧ್ಯಯನಗಳು ಮೂಲ, ತಳಸ್ಪರ್ಶಿಯ, ಕೆಳಸ್ತರದ ಹಾಗೂ ಗ್ರಾಮ ಸಮುದಾಯಗಳ ಚರಿತ್ರೆ ವಿವರಗಳಿಗೆ ಹೆಚ್ಚು ವಾಲುತ್ತವೆ. ಈ ನಿಟ್ಟಿನಲ್ಲಿ ಹಲವು ಸಂಶೋಧಕರು ದಾವಣಗೆರೆ ಜಿಲ್ಲೆಯನ್ನು ವ್ಯಾಪ್ತಿಯನ್ನಾಗಿ ಇಟ್ಟುಕೊಂಡು ದೇವಾಲಯ, ಶಾಸನ, ಶಿಲ್ಪಗಳು ಮೊದಲಾದ ವಿಷಯಗಳ ಕುರಿತಂತೆ ಅಂಶಿಕ ಹಾಗೂ ಸಮಗ್ರವಾದ ಅಧ್ಯಯನಗಳು ನಡೆದಿವೆ. ಆದರೆ ಅಂಥ ಅಧ್ಯಯನಗಳೆಲ್ಲವೂ ನಿರ್ದಿಷ್ಟ ವಿಷಯಗಳಿಗೆ ಸೀಮಿತಗೊಂಡು ರೂಪಗೊಂಡಿದ್ದಾಗೂ ಅದೇ ಸಂದರ್ಭದಲ್ಲಿ ಚರಿತ್ರೆಯ ಪುನಾರಚನೆಗೆ ಬಹುಮುಖ್ಯ ಆಕಾರಗಳಾದ ಸ್ಮಾರಕ ಶಿಲ್ಪಗಳನ್ನು ಅಲಕ್ಷಿಸಿರುವುದು ಕೂಡಾ ಗೋಚರವಾಗುತ್ತದೆ. ಈ ಹಿನ್ನೆಲೆಯಲ್ಲಿ ಸ್ಮಾರಕ ಶಿಲ್ಪಗಳನ್ನು ಕುರಿತಂತೆಯೇ ಸಮಗ್ರವಾಗಿ ಹಾಗೂ ಸಾಧ್ಯವಾದ ಮಟ್ಟಿಗೆ ವಿಶ್ಲೇಷಣಾ ನಿಟ್ಟಿನಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ರೂಪಿಸುವ ಪ್ರಯತ್ನ ಮಾಡಲಾಗಿದೆ. ಅಂಥ ಉದ್ದೇಶಗಳನ್ನಿಟ್ಟುಕೊಂಡೇ 'ದಾವಣಗೆರೆ ಜಿಲ್ಲೆಯ ಸ್ಮಾರಕ ಶಿಲ್ಪಗಳು' ಎಂಬ ವಿಷಯವನ್ನು ಆಯ್ದುಕೊಂಡು ಪೂರೈಸುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಸುವ ಸ್ಮಾರಕ ಶಿಲ್ಪಗಳು ಈ ಪ್ರದೇಶದಲ್ಲಿ ಲಭ್ಯವಿದ್ದು ಆ ಪ್ರದೇಶದ ಮೇಲೆ ಬೆಳಕು ಚೆಲ್ಲುತ್ತವೆ. ಸ್ಮಾರಕ ಶಿಲ್ಪಗಳು ನಿರ್ದಿಷ್ಟ ಪ್ರದೇಶದಲ್ಲಿ ವಾಸವಿದ್ದ ಆಯಾ ಸಮುದಾಯಗಳ ಬದುಕಿನ ವಿಶ್ವಾಸರ್ಹವಾದ ದಾಖಲೆಗಳಾಗಿವೆ. ಗತಕಾಲದ ಪ್ರಾಮಾಣಿಕ ಧ್ವನಿಗಳಾದ ಇವು ಒಂದು ಪ್ರದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಮುಖವಾದ ಆಕರಗಳಾಗಿವೆ. ಅವುಗಳಿಂದ ಈ ಜಿಲ್ಲೆಯ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಚಿತ್ರಿಸಲು ಸಹಾಯಕವಾಗುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಪ್ರಾಚೀನ ಹಾಗೂ ಮಧ್ಯಕಾಲೀನ ಯುಗದಲ್ಲಿ ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ, ವಿಜಯನಗರ ಹಾಗೂ ಪಾಳೆಯಗಾರರ ರಾಜಮನೆತನಗಳಲ್ಲದೆ ಕೆಲವು ಸಾಮಂತ ರಾಜಮನೆತನಗಳು ಕೂಡಾ ಈ

ಪ್ರದೇಶದಲ್ಲಿ ಆಳ್ವಿಕೆ ನಡೆಸಿವೆ. ಇಂಥೆಲ್ಲಾ ರಾಜಮನೆತನಗಳು ತಮ್ಮದೇ ಆದ ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿರುವುದು ಸಹ ದಿಟ. ಈ ಹಿನ್ನೆಲೆಯಲ್ಲಿ ಆಯಾ ಕಾಲಘಟ್ಟದ್ದ ಇತಿಹಾಸದ ಆಕಾರಗಳಾಗಿ ಪರಿಗಣಿತವಾಗಿರುವ ಸ್ಮಾರಕ ಶಿಲ್ಪಗಳನ್ನು ಕುರಿತಂತೆ ಅಧ್ಯಯನ ನಡೆಸುವ ಉದ್ದೇಶವನ್ನು ಪ್ರಸ್ತುತ ಪ್ರಬಂಧ ಅಥವಾ ಅಧ್ಯಯನವು ಹೊಂದಲಾಗಿದೆ. ಇತಿಹಾಸ ಬರವಣಿಗೆಗಳಲ್ಲಿ ಬಹುತೇಕ ಪ್ರಮಾಣದಲ್ಲಿ ರಾಜ, ಅವನ ಪರಿವಾರ ಹಾಗೂ ಅವರ ಜೀವನದ ಘಟನೆಗಳನ್ನು ನಿರೂಪಿಸುವುದೇ ಇತಿಹಾಸವೆಂದು ನಂಬಲಾಗಿತ್ತು. ಆದರೆ ಇಂದು ರಾಜನ ಜೀವನದಲ್ಲಿ ಸಂಭವಿಸಿದ ಘಟನೆಗಳನ್ನು ಮಾತ್ರವಲ್ಲದೆ ಅದರ ಜೊತೆಗೆ ಆ ರಾಜ್ಯದಲ್ಲಿದ್ದ ಜನರ ಜೀವನ ಕ್ರಮವನ್ನು ನಿರೂಪಿಸುವುದು ಅಗತ್ಯವಾಗಿದೆಯೆಂದು ಆಧುನಿಕ ಇತಿಹಾಸಕಾರರು ಹಾಗೂ ಚಿಂತಕರು ಪ್ರಬಲವಾಗಿ ಮಂಡಿಸುತ್ತಿದ್ದಾರೆ. ಹಾಗಾಗಿ ಒಂದು ರಾಜ್ಯ ವ್ಯವಸ್ಥೆಯಲ್ಲಿ ಜನತೆಯ ಪಾತ್ರವೇನು? ಎಂಬುದನ್ನು ತಿಳಿಯಲು ಹೆಚ್ಚಿನಾಂಶ ತಿಳಿಯಲು ಸಾಧ್ಯವಾಗುವ ಕಡೆಗೆ ಇತಿಹಾಸ ಬರವಣಿಗೆಗಳು ಮುಖಮಾಡಿವೆಯೆಂದರೆ ತಪ್ಪಾಗಲಾರರು. ಅಂದರೆ ರಕ್ಷಣೆ, ಸಮಾಜ, ಆರ್ಥಿಕ ಮತ್ತು ಧಾರ್ಮಿಕ ವ್ಯವಸ್ಥೆಗಳಲ್ಲಿ ಅವರ ಪಾತ್ರವೇನು? ಅವರ ಹಕ್ಕು ಮತ್ತು ಕರ್ತವ್ಯಗಳಾವುವು ಇನ್ನು ಹಲವು ವಿಚಾರಗಳ ಬಗ್ಗೆ ನಿರೂಪಿಸುವುದು ಇಂದಿನ ಬರವಣಿಗೆಗಳ ಉದ್ದೇಶಕ್ಕೆ ಅವಶ್ಯಕವಾಗಿದೆ. ಈ ದೃಷ್ಟಿಕೋನದಿಂದ ಸ್ಮಾರಕ ಶಿಲ್ಪಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇವುಗಳಿಂದ ಅಂದಿನ ಸಾಮಾನ್ಯ ಜನರು ಬದುಕಿ ತೋರಿಸಿದ ವೀರತ್ವವನ್ನು, ಸ್ವಾಮಿನಿಷ್ಠೆ, ದೇಶಭಕ್ತಿಯನ್ನು ಪ್ರದರ್ಶಿಸುತ್ತವೆ. ಮಾಸ್ತಿಗಲ್ಲುಗಳು ಅಂದಿನ ಸಮಾಜದಲ್ಲಿ ರೂಢಿಯಲ್ಲಿದ್ದ ಸ್ತ್ರೀಯರ ಸ್ಥಾನಮಾನ, ಪತಿಭಕ್ತಿ ಹಾಗೂ ಸಾಮಾಜಿಕ ಪದ್ಧತಿಯನ್ನೂ, ಆತ್ಮಬಲಿದಾನದ ಶಿಲ್ಪಗಳು ಧಾರ್ಮಿಕ ಪದ್ಧತಿಯನ್ನು ನಿರೂಪಿಸುತ್ತವೆ. ಈ ಸ್ಮಾರಕಗಳಿಂದ ಆ ಕಾಲದ ಜನತೆಯ ಇತಿಹಾಸವನ್ನು ನಿರ್ಮಿಸಲು ಸಹಾಯಕವಾಗುತ್ತದೆ. ಜೊತೆಗೆ ಸ್ಮಾರಕ ಶಿಲ್ಪಗಳನ್ನು ಈ ಪ್ರದೇಶದಲ್ಲಿನ ಐತಿಹ್ಯ, ನಂಬಿಕೆ ಹಾಗೂ ಆಚರಣೆಗಳ ಹಿನ್ನೆಲೆಯಲ್ಲಿ ಗಮನಿಸಿ ಅಂದಿನ ಜನತೆಯ ಇತಿಹಾಸವನ್ನು ನಿರೂಪಿಸುವ ಉದ್ದೇಶವನ್ನು ಪೂರೈಸುವ ಪ್ರಯತ್ನ ಮಾಡಲಾಗಿದೆ. ಈ ದೃಷ್ಟಿಕೋನದಿಂದ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿರುವ ಸ್ಮಾರಕ ಶಿಲ್ಪಗಳನ್ನು ಸಮಗ್ರವಾಗಿ ಹಾಗೂ ಸೂಕ್ಷ್ಮ ನೆಲೆಯಲ್ಲಿ ಪರಿಶೀಲಿಸಿ ಅಧ್ಯಯನವನ್ನು ಸಾಕಾರಗೊಳಿಸುವ ಕಾರ್ಯ ಮಾಡಲಾಗಿದೆ. ಒಟ್ಟಿನಲ್ಲಿ ಜಿಲ್ಲೆಯ ಸ್ಮಾರಕ ಶಿಲ್ಪಗಳನ್ನು ಕುರಿತಂತೆ ಸಮಗ್ರವಾಗಿ ಅಧ್ಯಯನ ನಡೆಸುವ ಉದ್ದೇಶದಿಂದ ಅಧ್ಯಯನವನ್ನು ಪ್ರಾರಂಭಿಸಿ ಅಂಥ ಆಕರಗಳ ಹಿನ್ನೆಲೆಯಲ್ಲಿ ಪ್ರತಿಫಲನಗೊಂಡಿರುವ ವಿವರಣೆಗಳನ್ನು ಅಧ್ಯಾಯಗಳಲ್ಲಿ ಆದ್ಯತಾನುಸಾರ ವಿವರಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

### ೧.೩. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಈ ಜಿಲ್ಲೆಯ ಭೌಗೋಳಿಕ ಪ್ರದೇಶವೇ ವ್ಯಾಪ್ತಿಯಾಗಿದೆ. ಇದು ದಾವಣಗೆರೆ, ಹೊನ್ನಾಳಿ, ಚನ್ನಗಿರಿ, ಹರಿಹರ, ಜಗಲೂರು ಮತ್ತು ಹರಪನಹಳ್ಳಿ ಪ್ರದೇಶಗಳನ್ನು ಒಳಗೊಂಡಿರುವುದು. ಈ ಆರು ತಾಲೂಕುಗಳ ವ್ಯಾಪ್ತಿಯಲ್ಲಿ ಹರಡಿಕೊಂಡಿರುವ ಸ್ಮಾರಕ

ಶಿಲ್ಪಗಳನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಈ ಅಧ್ಯಯನವು ಸೂಕ್ಷ್ಮ ಮತ್ತು ಸ್ಥಳೀಯ ಅಧ್ಯಯನವಾಗಿದೆ. ಸಮಗ್ರ ಅಧ್ಯಯನದ ಸಂದರ್ಭದಲ್ಲಿ ಪ್ರಾದೇಶಿಕ ವೈವಿಧ್ಯತೆಗಳನ್ನು ನಿರ್ಲಕ್ಷಿಸಿ ವಿಷಯಗಳ ಸಾಮಾನ್ಯೀಕರಣವಾಗುವ ಸಂಭವವಿರುತ್ತದೆ. ಸೂಕ್ಷ್ಮ ಮತ್ತು ಸ್ಥಳೀಯ ಮಟ್ಟದ ಅಧ್ಯಯನದಲ್ಲಿ ಪ್ರಾದೇಶಿಕ ವೈವಿಧ್ಯತೆಯುಳ್ಳ ಹಲವು ವಿಚಾರಗಳು ಬೆಳಕಿಗೆ ಬರುವ ಸಾಧ್ಯತೆಯಿರುತ್ತದೆ. ಅಂಥ ಅಂಶಗಳನ್ನು ಗಮನಿಸಲಾಗಿದೆ.

ಈ ಅಧ್ಯಯನದ ಕಾಲ ವ್ಯಾಪ್ತಿಯು ರಾಷ್ಟ್ರಕೂಟರ ಕಾಲದಿಂದ ವಿಜಯನಗರೋತ್ತರ ಅರಸರವರೆಗಿನ ಜರುಗಿದ ಘಟನೆಗಳ ಹಿನ್ನೆಲೆಯಲ್ಲಿ ಕಾಲಮಿತಿ ಹಾಕಿಕೊಳ್ಳಲಾಗಿದೆ. ಆದರೂ ಸಂದರ್ಭೋಚಿತವಾಗಿ ಶಾತವಾಹನರು, ಕದಂಬರು ಹಾಗೂ ಗಂಗರ ಕಾಲದ ಸಂಗತಿಗಳನ್ನು ಅಧ್ಯಯನ ಅವಶ್ಯಕತೆಯ ಹಿನ್ನೆಲೆಯಲ್ಲಿ ಬಳಸಿಕೊಳ್ಳಲಾಗಿದೆ. ಈ ಪ್ರದೇಶದ ಎಲ್ಲಾ ಕಾಲದ ಪ್ರಕಟಿತ ಮತ್ತು ಅಪ್ರಕಟಿತ ಸ್ಮಾರಕ ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ, ಯಾದವ ಮತ್ತು ವಿಜಯನಗರ ಅರಸರ ನಡುವೆ ಸ್ಥಳೀಯ ಸಾಮಂತ ಅರಸರು ತಮ್ಮ ಪ್ರಭುತ್ವವನ್ನು ಭದ್ರಪಡಿಸಿಕೊಳ್ಳಲು ಮತ್ತು ಹೆಚ್ಚಿನ ಸ್ಥಾನಮಾನ ಹೊಂದುವ ಉದ್ದೇಶಕ್ಕೆ ತಕ್ಕಂತೆ ಸಮಾಜವನ್ನು ರೂಪಿಸುವ ಪ್ರಯತ್ನವನ್ನು ಮಾಡಿರುವ ಸಂಗತಿಗಳು ಕಂಡುಬರುತ್ತವೆ. ಅಂಥ ಪ್ರಮುಖ ಉದ್ದೇಶಗಳು ಅವರ ಕಾಲದಲ್ಲಿ ರಚನೆಗೊಂಡ ಸ್ಮಾರಕ ಶಿಲ್ಪಗಳಲ್ಲಿ ವೇದ್ಯವಾಗುವುದನ್ನು ಗಮನಿಸಬಹುದು. ಈ ಉದ್ದೇಶಗಳ ಹಿನ್ನೆಲೆಯಲ್ಲಿ ಪ್ರತಿ ಕಾಲಘಟ್ಟದಲ್ಲಿಯೂ ವೀರಗಲ್ಲು ಸಂಸ್ಕೃತಿಯನ್ನು ಹೆಚ್ಚಾಗಿ ಪ್ರೋತ್ಸಾಹಿಸಲಾಗಿದೆ. ವೀರತತ್ವವನ್ನು ಪ್ರಧಾನವಾಗಿ ಮಾಡುವ ಪ್ರಯತ್ನ ಇದಾಗಿದೆ. ಈ ಅವಧಿಯಲ್ಲಿ ಮಾಸ್ತಿಮರಣ, ಜೋಳವಾಳಿ, ವೇಳಾವಳಿ, ಲೆಂಕ, ನಿಸಿದಿ ಮೊದಲಾದ ನಿಷ್ಠೆ ಪ್ರಧಾನವಾದ ಪದ್ಧತಿಗಳು ಹುಟ್ಟಿಕೊಂಡಿವೆ. ಅವುಗಳೆಲ್ಲವನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಸಂದರ್ಭಗಳಿಗನುಗುಣವಾಗಿ ಜಿಲ್ಲೆಯ ಭೌಗೋಳಿಕ ಹಾಗೂ ಗೊತ್ತುಪಡಿಸಿಕೊಂಡ ಕಾಲಮಿತಿ ವ್ಯಾಪ್ತಿಯನ್ನು ಮೀರಿಯೂ ಕೆಲವು ಮಾಹಿತಿಗಳನ್ನು ಬೇರೆ ಬೇರೆ ಪ್ರದೇಶದಿಂದಲೂ ಪಡೆಯಲಾಗಿದೆ.

### ೧.೪. ಅಧ್ಯಯನದ ವಿಧಾನ

ಯಾವುದೇ ಸಂಶೋಧನೆಗೆ ಅಧ್ಯಯನ ಕ್ರಮ ಅತಿ ಮುಖ್ಯ. ಸಂಶೋಧನೆಯನ್ನು ಸುಸೂತ್ರವಾಗಿ ಮತ್ತು ವ್ಯವಸ್ಥಿತವಾಗಿ ಮುನ್ನಡೆಸಿಕೊಂಡು ಹೋಗಲು ಪೂರ್ವನಿರ್ಧರಿತ ಅಧ್ಯಯನ ಕ್ರಮವನ್ನು ಅನುಸರಿಸಬೇಕು. ಇದರಿಂದಾಗಿ ಒಂದು ವ್ಯವಸ್ಥಿತವಾದ ಸಂಶೋಧನಾ ಪ್ರಬಂಧವನ್ನು ರಚಿಸಬಹುದು. ಪ್ರಸ್ತುತ ಅಧ್ಯಯನವು 'ದಾವಣಗೆರೆ ಜಿಲ್ಲೆಯ ಸ್ಮಾರಕ ಶಿಲ್ಪಗಳು' ಎಂಬ ಶೀರ್ಷಿಕೆಯನ್ನು ಹೊಂದಿದ್ದು ಈ ಕೆಳಗಿನ ಕ್ರಮವನ್ನು ಅನುಸರಿಸಲಾಗಿದೆ. ಅಧ್ಯಯನದ ವಿಧಾನದ ಹಿನ್ನೆಲೆಯಲ್ಲಿ ಈ ಪರಿಸರದಲ್ಲಿದ್ದ ಇಂಪಿರಿಕಲ್ ಅಥವಾ ಮೌಖಿಕ ಐತಿಹ್ಯ, ಜಾನಪದ ಹಾಗೂ ಕಥನದಲ್ಲಿ ವ್ಯಕ್ತವಾದ ಅಂಶಗಳನ್ನು ಬಳಸಿಕೊಳ್ಳಲಾಗಿದೆ ಹಾಗೂ ಪ್ರಸ್ತುತ ಅಧ್ಯಯನದ ಶೀರ್ಷಿಕೆಯಂತೆ ಈಗಾಗಲೇ ಬೇರೆ ಬೇರೆ ಪ್ರದೇಶದಲ್ಲಿ ಇಂಥ ಅಧ್ಯಯನಗಳು

ಜರುಗಿವೆ. ಅಂಥ ಫಲಿತಗಳ ಹಿನ್ನೆಲೆಯಲ್ಲಿ ರೂಪಗೊಂಡ ಸಿದ್ಧಾಂತ ಅಥವಾ ಪ್ರವೇಶಗಳನ್ನು ಕೂಡಾ ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅಲ್ಲದೇ ವೈಧಾನಿಕತೆಯ ಅಡಿಯಲ್ಲಿ ಜರುಗಬಹುದಾದ ಕ್ಷೇತ್ರಕಾರ್ಯ ಹಾಗೂ ಇತರೆ ವಿವರಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನವು ಪ್ರಧಾನವಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಜೊತೆಗೆ ಸ್ಮಾರಕ ಶಿಲ್ಪಗಳ ಶಾಸನ ಪಾಠ ಮತ್ತು ಶಿಲ್ಪಗಳ ವಿವರಣೆಯನ್ನು ಆಧರಿಸಿದ್ದಾಗಿದೆ. ಮೊದಲಿಗ ಲಭ್ಯ ಸ್ಮಾರಕ ಶಿಲ್ಪಗಳ ಶಾಸನ ಪಾಠಗಳನ್ನು ಸಂಗ್ರಹಿಸಿ ಕಾಲಾನುಕ್ರಮಣಿಕೆಯಲ್ಲಿ ಜೋಡಿಸಿಕೊಂಡು, ಅವುಗಳಿಂದ ಅಧ್ಯಯನದ ಉದ್ದೇಶಿತ ವಿಷಯಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಯನ್ನು ರಚಿಸಿಕೊಳ್ಳಲಾಯಿತು. ಸಮಕಾಲೀನ ಸಾಹಿತ್ಯ ಕೃತಿಗಳಿಂದಲೂ ಸ್ಮಾರಕ ಶಿಲ್ಪಗಳಿಗೆ ಸಂಬಂಧಿತ ವಿಷಯಗಳನ್ನು ಸಂಗ್ರಹಿಸಲಾಯಿತು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವೀರಗಲ್ಲು, ಮಾಸ್ತಿಗಲ್ಲು, ಆತ್ಮಬಲಿದಾನ ಹಾಗೂ ನಿಸಿದಿ ಶಿಲ್ಪಗಳ ಛಾಯಾಚಿತ್ರಣಗಳನ್ನು ತೆಗೆದುಕೊಂಡು ಅವುಗಳಿಂದ ಅಗತ್ಯವಾದ ಟಿಪ್ಪಣಿ ಸಿದ್ಧಪಡಿಸಿಕೊಳ್ಳಲಾಯಿತು. ಇದರೊಂದಿಗೆ ವಿಷಯಕ್ಕೆ ಅಗತ್ಯವೆನಿಸಿದ ಸಾಂಸ್ಕೃತಿಕ ಅಂಶಗಳನ್ನು ತಿಳಿಯಲು ಐತಿಹ್ಯ, ನಂಬಿಕೆ ಹಾಗೂ ಆಚರಣೆಗಳಿಗೆ ಸಂಬಂಧಿಸಿದಂತೆ ಜನರ ನಡುವೆ ಇರುವ ಚಾರಿತ್ರಿಕ ಅಂಶಗಳನ್ನು ಕ್ರೂಢೀಕರಿಸಲಾಯಿತು. ಸ್ಮಾರಕ ಶಿಲ್ಪಗಳಿಗೆ ಸಂಬಂಧಿಸಿದಂತೆ ಈವರೆಗೆ ರಾಜ್ಯವನ್ನು ಅಧ್ಯಯನ ವ್ಯಾಪ್ತಿಯಾಗಿಟ್ಟುಕೊಂಡು ನಡೆದಿರುವ ಅಧ್ಯಯನಗಳಲ್ಲಿ ಪ್ರಮುಖವಾದವುಗಳನ್ನು ಅವಲೋಕಿಸಿ ಆಯಾ ವಿದ್ವಾಂಸರ ದೃಷ್ಟಿಕೋನಗಳನ್ನು ಟಿಪ್ಪಣಿ ಮಾಡಿಕೊಂಡಿರುತ್ತೇನೆ. ಈ ಎಲ್ಲಾ ಮಾಹಿತಿಗಳನ್ನಾಧರಿಸಿ ಪ್ರಸ್ತುತ ಪ್ರದೇಶದ ಸ್ಮಾರಕ ಶಿಲ್ಪಗಳಿಗೆ ಸಂಬಂಧಿಸಿದಂತೆ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯ ಮಿತಿಯಲ್ಲಿ ಒಂದು ಚಿತ್ರಣ ನೀಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

### ೧.೫. ಅಧ್ಯಯನದ ಸಮೀಕ್ಷೆ

'ದಾವಣಗೆರೆ ಜಿಲ್ಲೆಯ ಸ್ಮಾರಕ ಶಿಲ್ಪಗಳು' ಕುರಿತು ಸ್ವತಂತ್ರ ಹಾಗೂ ಪ್ರತ್ಯೇಕ ಅಧ್ಯಯನ ಈವರೆಗೂ ಪ್ರಕಟಗೊಂಡಿಲ್ಲವಾದರೂ ಈ ಪ್ರದೇಶಕ್ಕೆ ಸಂಬಂಧಿಸಿದ ಹಲವಾರು ಸಂಗತಿಗಳ ಕುರಿತು ಆಂಶಿಕ ವಿವರಗಳು ಪ್ರಕಟವಾಗಿವೆ. ಜೊತೆಗೆ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ರಾಜ್ಯವನ್ನು ಅಧ್ಯಯನದ ವ್ಯಾಪ್ತಿಯಾಗಿಟ್ಟುಕೊಂಡು ನಡೆದಿರುವ ಅಧ್ಯಯನಗಳು ಸಹ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿವೆ. ಅಂಥ ಅಧ್ಯಯನಗಳ ಕುರಿತು ಸ್ಥೂಲ ಪರಿಚಯ ನೀಡುವ ಪ್ರಯತ್ನ ಇದಾಗಿದೆ. ಅಲ್ಲದೇ ಅವರು ಕಟ್ಟಿಕೊಟ್ಟ ಆಲೋಚನೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಮನಃಪೂರ್ವಕವಾಗಿ ಬಳಸಿಕೊಳ್ಳಲಾಗಿದೆ.

ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕೃತಿಯಲ್ಲಿ 'ಯುದ್ಧ ಕಲೆ' ಎಂಬ ಅಧ್ಯಾಯದಲ್ಲಿ ತಮ್ಮ ಅಧ್ಯಯನದ ಪರಿಮಿತಿಯಲ್ಲಿ ವೀರಗಲ್ಲು, ಮಾಸ್ತಿಗಲ್ಲು, ಆತ್ಮಬಲಿದಾನ ಸ್ಮಾರಕ ಶಿಲ್ಪಗಳ ಬಗ್ಗೆ ವಿಸ್ತಾರವಾಗಿ ಚರ್ಚೆ ಮಾಡಿದ್ದಾರೆ. ಅವರ ಮತ್ತೊಂದು ಚಿಕ್ಕ ಕೃತಿಯಾದ 'ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು' ಎಂಬುದರಲ್ಲಿ ಸ್ಮಾರಕ ಶಿಲ್ಪಗಳ ಬಗೆಗೆ ಹೊಸ ಸಂಗತಿಗಳನ್ನು ತಿಳಿಸಿರುವರು. ಬಿ.ಆರ್. ಹಿರೇಮಠ ಅವರ 'ವೀರಗಲ್ಲುಗಳು' ಎಂಬ ಕಿರುಹೊತ್ತಿಗೆ ಅಧ್ಯಯನಕ್ಕೆ ಪೂರಕವಾಗಿದೆ. ಚನ್ನಕ್ಕ ಎಲಿಗಾರ ಅವರ 'ಮಾಸ್ತಿಗಲ್ಲು' ಎಂಬ ಕೃತಿಯಲ್ಲಿ ಮಾಸ್ತಿಗಲ್ಲುಗಳ ವಿಷಯವನ್ನು ಗ್ರಂಥ ಸಾಹಿತ್ಯ, ಜನಪದ ಸಾಹಿತ್ಯ, ಪ್ರವಾಸ ಸಾಹಿತ್ಯದ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇದನ್ನೇ ಅವರು 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ಎಂಬ ಗ್ರಂಥದಲ್ಲಿ ಒಂದು ಅಧ್ಯಾಯದಲ್ಲಿ ವಿವರಿಸಿದ್ದಾರೆ. ಎಂ.ಎಂ. ಕಲಬುರ್ಗಿಯವರ 'ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು' ಎಂಬ ಕೃತಿ ಅಧ್ಯಯನದ ದೃಷ್ಟಿಯಿಂದ ಬಹಳ ಮಹತ್ವಪೂರ್ಣವಾದುದು. ಇದರಲ್ಲಿ ಸ್ಮಾರಕ ಶಿಲ್ಪಗಳ ಬೆಳವಣಿಗೆಗೆ ಕಾರಣಗಳನ್ನು, ಆತ್ಮಬಲಿ ಪ್ರಕಾರದ ಶಿಲ್ಪಗಳನ್ನು ದೀರ್ಘವಾಗಿ ಚರ್ಚಿಸಿದ್ದಾರೆ. ಸ್ಮಾರಕ ಶಿಲ್ಪಗಳನ್ನು ತಾತ್ವಿಕ ಹಿನ್ನೆಲೆಯೊಂದಿಗೆ ಅಧ್ಯಯನ ಮಾಡಿದ ಮೊದಲ ಕೃತಿ ಇದಾಗಿದೆ.

ಆರ್. ಶೇಷಶಾಸ್ತ್ರಿಯವರ 'ಕರ್ನಾಟಕದ ವೀರಗಲ್ಲುಗಳು' ಎಂಬ ಕೃತಿಯು ವೀರಗಲ್ಲುಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಿದುದಾಗಿದೆ. ಇದೇ ವಿದ್ವಾಂಸರ 'ಶಾಸನ ಪರಿಚಯ' ಎಂಬ ಕಿರು ಕೃತಿಯು ಸ್ಮಾರಕ ಶಿಲ್ಪಗಳ ಕಿರುಪರಿಚಯವನ್ನು ಮಾಡಿಕೊಡುತ್ತದೆ. ಬಸವರಾಜ ಕಲ್ಗುಡಿಯವರ 'ಮಹಾಸತಿ ಆಚರಣೆ-ಒಂದು ಅಧ್ಯಯನ' ಎಂಬ ಕೃತಿಯಲ್ಲಿ ಮಹಾಸತಿ ಶಿಲ್ಪಗಳ ಬಗೆಗೆ ವಿವರವಾಗಿ ಚರ್ಚಿಸಲಾಗಿದೆ. ಮಹಾಸತಿ ಆಚರಣೆಗೆ ಸಂಬಂಧಿಸಿದ ಜಾನಪದ ಗೀತೆಗಳು ಮತ್ತು ಸ್ಥಳೀಯರ ನಂಬಿಕೆಗಳನ್ನು ಆಧರಿಸಿ ಮಹಾಸತಿ ಸಂಪ್ರದಾಯದ ತಾತ್ವಿಕ ನೆಲೆಗಟ್ಟನ್ನು ಕುರಿತು ಚರ್ಚಿಸಲಾಗಿದೆ. ಬಿ.ಎಸ್. ಶೇಠ ಅವರ 'ಕರ್ನಾಟಕದಲ್ಲಿ ಸತಿ ಪದ್ಧತಿ' ಎಂಬ ನಿಬಂಧದಲ್ಲಿ ಮಹಾಸತಿಗಲ್ಲುಗಳ ಶಾಸನ ಪಾಠ ಮತ್ತು ಶಿಲ್ಪಗಳನ್ನು ದೀರ್ಘವಾಗಿ ವಿಶ್ಲೇಷಣೆ ಮಾಡಿದ್ದಾರೆ. ಡಿ.ವಿ. ಪರಮಶಿವಮೂರ್ತಿಯವರ 'ಕನ್ನಡ ಶಾಸನಶಿಲ್ಪ' ಎಂಬ ನಿಬಂಧದಲ್ಲಿ ಕೇವಲ ಸ್ಮಾರಕ ಶಿಲ್ಪಗಳನ್ನಷ್ಟೇ ಅಲ್ಲದೆ ಎಲ್ಲಾ ಬಗೆಯ ಶಾಸನಗಳ ಮೇಲಿರುವ ಶಿಲ್ಪಗಳನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಂಡು ಕನ್ನಡ ಶಾಸನಗಳ ಮಹತ್ವವನ್ನು ಗುರುತಿಸಿದ್ದಾರೆ. ಶಾಸನ ಶಿಲ್ಪದ ಸ್ವರೂಪ, ಅದರ ಇತಿಹಾಸ ಮತ್ತು ಅವುಗಳನ್ನು ವರ್ಗೀಕರಣ ಮಾಡಿ ಆಯಾ ಶಿಲ್ಪಗಳನ್ನು ವಿಶ್ಲೇಷಿಸುವ ಕೆಲಸ ಮಾಡಿದ್ದಾರೆ. ಇದೇ ವಿದ್ವಾಂಸರ 'ಪೆಣ್ಬುಯಲ್' ಮತ್ತು 'ತುರುಗೋಳ್ ಸಂಕಥನ' ಎಂಬ ಎರಡು ಕಿರು ಹೊತ್ತಿಗೆಗಳಲ್ಲಿ ತಾವು ಗಮನಿಸಿದ ಹಲವಾರು ವೀರಗಲ್ಲುಗಳ ಶಿಲ್ಪ ಹಾಗೂ ಪಾಠವನ್ನು ಉಪಯೋಗಿಸಿಕೊಂಡು ವಿವರಿಸಿದ್ದಾರೆ. ಸಿ.ಯು. ಮಂಜುನಾಥ ಅವರ 'ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ' ಎಂಬ ಕೃತಿಯಲ್ಲಿ ಯುದ್ಧ ಪದ್ಧತಿ, ಆತ್ಮಬಲಿಯ ವಿವಿಧ ಪ್ರಕಾರಗಳು, ವೀರಗಲ್ಲು ಮುಂತಾದ ಸ್ಮಾರಕಗಳನ್ನು ಆ ಕಾಲದ ಸಾಹಿತ್ಯದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

ಎಸ್. ಶೆಟ್ಟರ್ ಮತ್ತು ಸೊಂತೆಮಿಯರ್ ಅವರು ಸಂಪಾದಿಸಿದ 'ಮೆಮೊರಿಯಲ್ ಸ್ಟೋನ್' ಎಂಬ ಗ್ರಂಥದಲ್ಲಿ ಹಲವು ವಿದ್ವಾಂಸರು ಬೇರೆ ಬೇರೆ ರಾಜ್ಯಗಳ ಸ್ಮಾರಕ ಶಿಲ್ಪಗಳ ಬಗೆಗೆ ತಮ್ಮ ಲೇಖನಗಳಲ್ಲಿ ಚರ್ಚಿಸಿದ್ದಾರೆ. ಕೆ. ರಾಜನ್ ಅವರು ಇಡೀ ದಕ್ಷಿಣ ಭಾರತದ ವೀರಗಲ್ಲು ಸ್ಮಾರಕಗಳ ಬಗ್ಗೆ ಒಂದು ಸಮೀಕ್ಷಾ ರೂಪವನ್ನು 'ಸೌತ್ ಇಂಡಿಯನ್ ಮೆಮೋರಿಯಲ್ ಸ್ಟೋನ್' ಎಂಬ ಕೃತಿಯಲ್ಲಿ ಪ್ರಕಟಿಸಿದ್ದಾರೆ. ಎಡ್ವರ್ಡ್ ಥಾಮ್ಸ್ ಅವರ 'ಸತಿ', ಪಿ.ವಿ. ಕಾಣೆ ಅವರ 'ಹಿಸ್ಟ್ರಿ ಆಫ್ ಧರ್ಮಶಾಸ್ತ್ರ', ಎ.ಎಸ್. ಅಲ್ತೇಕರ್ ಅವರ 'ದಿ ಪೊಜಿಶನ್ ಆಫ್ ವುಮೆನ್ ಇನ್ ಹಿಂದು ಸಿವಲೈಜೇಶನ್' ಹಾಗೂ ವಿ.ಎನ್. ದತ್ತೆ ಅವರ 'ಸತಿ' ಈ ಗ್ರಂಥಗಳು ಸತಿಪದ್ಧತಿಯ ಕುರಿತಾಗಿ ವಿವರವಾದ ವಿಷಯ ನಿರೂಪಣೆ ಮಾಡುತ್ತವೆ.

ಎಸ್. ಶೆಟ್ಟರ್ ಅವರ 'ಇನ್ ವೈಟಿಂಗ್ ಡೆತ್' ಮತ್ತು 'ಪರ್ಸೂಯಿಂಗ್ ಡೆತ್' ಎಂಬ ಎರಡು ವಿದ್ವತ್‌ಪೂರ್ಣ ಗ್ರಂಥಗಳಲ್ಲಿ ನಿಸಿದಿಗಳ ಪಾಠ ಮತ್ತು ಜೈನ ಸಿದ್ಧಾಂತದ ಹಿನ್ನೆಲೆಯಲ್ಲಿ ಅವುಗಳ ಮಹತ್ವವನ್ನು ಚರ್ಚಿಸಿದ್ದಾರೆ. ಎಂ.ಜಿ. ಮಂಜುನಾಥ ಅವರ 'ನಿಸಿಧಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ನಿಬಂಧದಲ್ಲಿ ಜೈನ ಶಾಸನ ಮತ್ತು ಸಾಹಿತ್ಯದ ಹಿನ್ನೆಲೆಯಲ್ಲಿ ನಿಸಿದಿಗಲ್ಲುಗಳ ಬಗ್ಗೆ ವಿಸ್ತೃತ ಅಧ್ಯಯನ ಮಾಡಿದ್ದಾರೆ. ಇದೇ ವಿದ್ವಾಂಸರ 'ಮಾಸ್ತಿಗಲ್ಲು ವೀರಗಲ್ಲು ಮತ್ತು ನಿಸಿಧಿ ಶಾಸನಗಳು' ಎಂಬ ಕಿರು ಹೊತ್ತಿಗೆ ಅಧ್ಯಯನಕ್ಕೆ ಪೂರಕವಾಗಿದೆ. ಮೇಲೆ ಉಲ್ಲೇಖಿಸಿರುವ ಎಲ್ಲ ಗ್ರಂಥಗಳು ಪ್ರಸ್ತುತ ಅಧ್ಯಯನ ಪ್ರದೇಶದ ಕೆಲವು ಆಯ್ದ ಸ್ಮಾರಕ ಶಿಲ್ಪಗಳನ್ನು ಮಾತ್ರ ವಿವರಿಸಲಾಗಿರುತ್ತದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಜಿಲ್ಲೆಯಲ್ಲಿ ಕಂಡುಬರುವ ಎಲ್ಲ ಬಗೆಯ ಸ್ಮಾರಕ ಶಿಲ್ಪಗಳ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

ಉಲ್ಲೇಖಿತ ಅಧ್ಯಯನಗಳಲ್ಲದೆ ಪ್ರಸ್ತುತ ಅಧ್ಯಯನ ಪ್ರದೇಶದ ಜಿಲ್ಲೆ ಅಥವಾ ತಾಲೂಕುಗಳನ್ನು ವ್ಯಾಪ್ತಿಯನ್ನಾಗಿಟ್ಟುಕೊಂಡು ವಿವಿಧ ನೆಲೆಗಳಲ್ಲಿ ಅಧ್ಯಯನಗಳು ನಡೆದಿವೆ. ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನಗಳನ್ನು ಕಟ್ಟಿಕೊಡುವಲ್ಲಿ ಶಾಸನ ಆಕರಗಳು ಅತ್ಯಂತ ಪ್ರಮುಖ ಪಾತ್ರವಹಿಸುತ್ತವೆ. ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳ ಮಾಹಿತಿ ಸಂಗ್ರಹ ಹಾಗೂ ಅವುಗಳನ್ನು ಪ್ರಕಟಿಸುವ ಕಾರ್ಯಗಳು ನಡೆದಿವೆ. ಅವುಗಳನ್ನು ಈ ಕೆಳಕಂಡಂತೆ ಸಮೀಕ್ಷಿಸಲಾಗಿದೆ.

ಬಿ.ಎಲ್. ರೈಸ್ ಸಂಪಾದಿತ 'ಎಪಿಗ್ರಾಫಿಯಾ ಕರ್ನಾಟಿಕ' ಸಂಪುಟ ಹನ್ನೊಂದು (ದಾವಣಗೆರೆ, ಹರಿಹರ, ಜಗಲೂರು) ಮತ್ತು ಸಂಪುಟ ಏಳರಲ್ಲಿ (ಚನ್ನಗಿರಿ, ಹೊನ್ನಾಳಿ) ಜಿಲ್ಲೆಯಲ್ಲಿ ಕಂಡುಬಂದ ವೀರಗಲ್ಲು, ಮಾಸ್ತಿಗಲ್ಲು ಮತ್ತು ನಿಸಿದಿ ಶಾಸನಗಳ ಪೂರ್ಣ ಪಾಠವನ್ನು ಸಂಗ್ರಹಿಸಿದ ರೀತಿ ಶ್ಲಾಘನೀಯವಾದುದು. ಈ ಸಂಪುಟಗಳು ನನ್ನ ಸಂಶೋಧನೆಯಲ್ಲಿ ಪ್ರಧಾನವಾದ ಆಕರಗಳಾಗಿ ಬಳಕೆಯಾಗಿವೆ. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ರಲ್ಲಿ ಹರಪನಹಳ್ಳಿ ತಾಲೂಕಿನ ಶಾಸನೋಕ್ತ ಸ್ಮಾರಕ ಶಿಲ್ಪಗಳ ವಿವರಣೆಗಳು ದೊರೆಯುತ್ತವೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದಿಂದ ಪ್ರಕಟಗೊಂಡಿರುವ ರಾಷ್ಟ್ರಕೂಟರ ಶಾಸನಗಳು

ಸಂಪುಟ–೧ ಮತ್ತು ೨, ಕಲ್ಯಾಣ ಚಾಲುಕ್ಯರ ಶಾಸನಗಳು ಸಂಪುಟ–೧ ಹಾಗೂ ಪಾಳೆಯಗಾರರ ಶಾಸನಗಳು ಸಂಪುಟ–೧ ಮತ್ತು ೨ ಅಧ್ಯಯನ ವಿಷಯಕ್ಕೆ ಪೂರಕ ಮಾಹಿತಿ ನೀಡುತ್ತವೆ. ಬಿ.ಎನ್. ಸತ್ಯನ್ ಅವರು ಸಂಪಾದಿತ 'ಚಿತ್ರದುರ್ಗ ಜಿಲ್ಲೆ ಗೆಜೆಟಿಯರ್' ಮತ್ತು ಜಾನ್ ಕೆಸ್ಸಲ್ ಅವರ 'ಬಳ್ಳಾರಿ ಜಿಲ್ಲೆ ಗೆಜೆಟಿಯರ್' ಹಾಗೂ ೧೯೭೫ರಲ್ಲಿ ಪ್ರಕಟಗೊಂಡಿರುವ 'ಶಿವಮೊಗ್ಗ ಜಿಲ್ಲೆ ಗೆಜೆಟಿಯರ್'ಗಳು ಅಧ್ಯಯನ ಪ್ರದೇಶದ ಭೌಗೋಳಿಕ, ರಾಜಕೀಯ, ಕಲೆ ಮತ್ತು ವಾಸ್ತು ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಸಂಕ್ಷಿಪ್ತ ವಿವರಗಳನ್ನು ನೀಡುತ್ತವೆ.

ಲೇಖಕಿ ಟಿ. ಗಿರಿಜ ಅವರ 'ದಾವಣಗೆರೆ ಇದು ನಮ್ಮ ಜಿಲ್ಲೆ' ಎಂಬ ಕೃತಿಯು ಜಿಲ್ಲೆಯ ಹಲವು ಗ್ರಾಮಗಳ ಐತಿಹಾಸಿಕ ಮಾಹಿತಿಗಳನ್ನು ಸಮೀಕ್ಷಾ ರೂಪದಲ್ಲಿ ನೀಡುತ್ತದೆ. ಇದೇ ಲೇಖಕರ 'ದಾವಣಗೆರೆ ತಾಲೂಕು ದರ್ಶಿನಿ' ಮತ್ತು 'ಚಿತ್ರದುರ್ಗ ಜಿಲ್ಲಾ ದರ್ಶಿನಿ' ಎಂಬ ಕೃತಿಗಳು ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ನೀಡುತ್ತವೆ.

ಬಿ. ಸುರೇಶ್ ಅವರ 'ಚಿತ್ರದುರ್ಗ–ದಾವಣಗೆರೆ ಜಿಲ್ಲೆಗಳ ದೇವಾಲಯಗಳು', ಎಚ್. ತಿಪ್ಪೇಸ್ವಾಮಿಯವರ 'ದಾವಣಗೆರೆ ಜಿಲ್ಲೆಯ ದೇವಾಲಯಗಳು' ಮತ್ತು ಮಂಜುನಾಥ ಜಿ.ವಿ. ಅವರ 'ದಾವಣಗೆರೆ ಜಿಲ್ಲೆಯ ದೇವಾಲಯಗಳು–ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ನಿಬಂಧಗಳಲ್ಲಿ ಜಿಲ್ಲೆಯಲ್ಲಿರುವ ದೇವಾಲಯಗಳನ್ನು ಕುರಿತು ವಿಸ್ತೃತ ಅಧ್ಯಯನ ಮಾಡಿದ್ದಾರೆ. ಮಂಜುನಾಥ ಹ. ಪಾಟೀಲ ಅವರು 'ದಾವಣಗೆರೆ ಜಿಲ್ಲೆಯ ಶಾಸನಗಳು–ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ನಿಬಂಧದಲ್ಲಿ ಜಿಲ್ಲೆಯ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಆಡಳಿತ ಇತ್ಯಾದಿ ಅಂಶಗಳನ್ನು ಶಾಸನಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಎನ್.ಜಿ. ಸಂತೋಷ್ ಅವರ 'ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ' ಎಂಬ ನಿಬಂಧವು ಪ್ರಸ್ತುತ ಅಧ್ಯಯನಕ್ಕೆ ವಿಜಯನಗರ ಮತ್ತು ಪಾಳೆಯಗಾರರ ರಾಜಕೀಯ ಮತ್ತು ಜಿಲ್ಲೆಯ ಭೌಗೋಳಿಕ ಅಂಶಗಳ ಕುರಿತು ಮಾಹಿತಿ ನೀಡುತ್ತದೆ. ಭೋಜನಾಯ್ಕ ಅವರ 'ದಾವಣಗೆರೆ ಜಿಲ್ಲೆಯಲ್ಲಿ ಪಾಳೆಗಾರರ ಆಳ್ವಿಕೆ' ಎಂಬ ನಿಬಂಧದಲ್ಲಿ ಪಾಳೇಯಗಾರರ ಆಡಳಿತ, ಕಲೆ, ವಾಸ್ತು ಮೊದಲಾದ ಸಾಂಸ್ಕೃತಿಕ ವಿಚಾರಗಳನ್ನು ವಿಶ್ಲೇಷಿಸಿದ್ದಾರೆ. ಜೆ.ಕೆ. ಮಲ್ಲಿಕಾರ್ಜುನಪ್ಪ ಅವರ 'ಹರಪನಹಳ್ಳಿ ಪಾಳೆಯಗಾರರು–ಒಂದು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ' ಎಂಬ ನಿಬಂಧದಲ್ಲಿ ಹರಪನಹಳ್ಳಿ ಪಾಳೇಯಗಾರರ ರಾಜಕೀಯ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆರ್ಥಿಕ ಹಾಗೂ ಶಾಸನಗಳನ್ನು ದೀರ್ಘವಾಗಿ ಕಟ್ಟಿಕೊಟ್ಟಿದ್ದಾರೆ.

ಪ್ರವೀಣ್ ದೊಡ್ಡಗೌಡ್ರ ಅವರ 'ದಾವಣಗೆರೆ ಜಿಲ್ಲೆಯ ಪುರಾತತ್ವ ನೆಲೆಗಳು ಮತ್ತು ಅವಶೇಷಗಳ ಅಧ್ಯಯನ', ಜಿ. ಸಿದ್ದಪ್ಪ ಅವರ 'ಜಗಳೂರು ತಾಲ್ಲೂಕು: ಒಂದು ಸಾಂಸ್ಕೃತಿಕ ಅಧ್ಯಯನ', ಹೆಚ್. ರಮೇಶ್ ಅವರ 'ಹರಿಹರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ' ಹಾಗೂ ಎಸ್.ಕೆ. ಯೋಗಾನಂದ ಅವರ 'ಚನ್ನಗಿರಿ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು' ಎಂಬ ನಿಬಂಧಗಳು ಆಯಾ ತಾಲೂಕಿನ ಸ್ಮಾರಕಗಳನ್ನು ಕುರಿತಂತೆ ವಿವರಗಳನ್ನು ನೀಡುತ್ತವೆ.

ಎಂ.ಜಿ. ಈಶ್ವರಪ್ಪ ಸಂಪಾದನೆಯ 'ಶತಮಾನದ ದಾವಣಗೆರೆ' ಮತ್ತು 'ದವನಸಿರಿ' ಕೃತಿಗಳು ಈ ಜಿಲ್ಲೆಯ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಲೇಖನಗಳಿವೆ. ಬಿ.ಎಂ. ಸದಾಶಿವಪ್ಪ ಶ್ಯಾಗಲೆ ಸಂಪಾದನೆಯ 'ದಾವಣಗೆರೆ ಜಿಲ್ಲೆ ಒಂದು ಪಕ್ಷಿನೋಟ' ಎಂಬ ಕೃತಿಯಲ್ಲಿ ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುವ ಹಲವು ಲೇಖನಗಳಿದ್ದು ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ನೀಡುತ್ತದೆ. ಕೊಟ್ರೇಶ್ ನಾ ಉತ್ತಂಗಿಯವರು 'ಹೊನ್ನೆಲೆಗಳು' ಮತ್ತು 'ಹರಿಹರದೇಲೆಗಳು' ಎಂಬ ಗ್ರಂಥಗಳಲ್ಲಿ ಹೊನ್ನಾಳಿ ಮತ್ತು ಹರಿಹರ ತಾಲೂಕುಗಳಲ್ಲಿನ ಗ್ರಾಮಗಳ ಇತಿಹಾಸ, ಸಾಮಾಜಿಕ, ಆರ್ಥಿಕ ಮೊದಲಾದ ಅಂಶಗಳನ್ನು ಸಮೀಕ್ಷಾ ರೂಪದಲ್ಲಿ ಅಧ್ಯಯನ ಮಾಡಿ ವಿಶ್ಲೇಷಿಸಿದ್ದಾರೆ. ಎಚ್.ಎಂ. ಶಂಕರನಾರಾಯಣರಾವ್ ಅವರ 'ಶ್ರೀ ಹರಿಹರ ದೇವಾಲಯ' ಎಂಬ ಪುಸ್ತಕವು ಹರಿಹರದ ಶಾಸನಗಳಲ್ಲಿರುವ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಅಂಶಗಳನ್ನು ವಿವರಿಸಿದ್ದಾರೆ. ಜೊತೆಗೆ ಹರಿಹರೇಶ್ವರ ದೇವಾಲಯದ ಸ್ಥಳಪುರಾಣ, ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪವನ್ನು ಕುರಿತಾಗಿಯೂ ವಿವರಣೆಗಳನ್ನು ನೀಡಿರುತ್ತಾರೆ.

ಸಂತೇಬೆನ್ನೂರು ಸುಮತೀಂದ್ರ ನಾಡಿಗ ಅವರು 'ದಾವಣಗೆರೆ ಜಿಲ್ಲೆ ಇತಿಹಾಸದ ಕೆಲವು ಹೆಜ್ಜೆಗಳು' ಮತ್ತು 'ದಾವಣಗೆರೆ ಜಿಲ್ಲೆ: ಇತಿಹಾಸದ ಇನ್ನಷ್ಟು ಹೆಜ್ಜೆಗಳು' ಎಂಬ ಗ್ರಂಥಗಳಲ್ಲಿ ಹೊಸದಾಗಿ ಶೋಧಿಸಿದ ಶಾಸನ ಮತ್ತು ಶಿಲ್ಪಗಳನ್ನು ಲೇಖನಗಳ ರೂಪದಲ್ಲಿ ಪ್ರಕಟಿಸಿದ್ದಾರೆ. ಇದೇ ವಿದ್ವಾಂಸರ ಸಂತೇಬೆನ್ನೂರು ನಾಯಕರಿಗೆ ಸಂಬಂಧಿಸಿದ ಐವತ್ತೇಳು ಶಾಸನಗಳನ್ನು 'ಸಂತೆಬೆನ್ನೂರು ನಾಯಕರು' ಎಂಬ ಗ್ರಂಥದಲ್ಲಿ ಪ್ರಕಟಿಸಿದ್ದಾರೆ. ವೈ.ಸಿ. ಭಾನುಮತಿ ಸಂಪಾದಿತ 'ಸಂತೆಬೆನ್ನೂರು ವೃತ್ತಾಂತ' ಹಾಗೂ 'ಹೊದಿಗೆರೆ ಸೀಮೆಯ ವೃತ್ತಾಂತ'ಗಳಲ್ಲಿ ಸಂತೆಬೆನ್ನೂರು ಪಾಳೆಯಗಾರರು ಆಡಳಿತಕ್ಕೆ ಬಂದ ರೀತಿ, ಅವರು ನೀಡಿದ ದಾನ-ದತ್ತಿ, ದೇವಾಲಯಗಳ ನಿರ್ಮಾಣ, ಚಿತ್ರದುರ್ಗ ಪಾಳೆಯಗಾರರೊಂದಿಗಿದ್ದ ಸಂಬಂಧಗಳು ಮುಂತಾದ ವಿವರಗಳಿವೆ. ಕುಂ.ಬಾ. ಸದಾಶಿವಪ್ಪನವರು ಬರೆದ 'ಹರಪನಹಳ್ಳಿ ಪಾಳೆಯಗಾರರು' ಎಂಬ ಗ್ರಂಥದಲ್ಲಿ ಪಾಳೆಯಗಾರರ ಮೂಲ, ವಂಶಾವಳಿ ಇತ್ಯಾದಿ ವಿಷಯಗಳನ್ನು ತಿಳಿಯಲು ಸಹಕಾರಿಯಾಗಿದೆ. ಅವರ ಇನ್ನೊಂದು ಗ್ರಂಥವಾದ 'ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ'ದಲ್ಲಿ ಕೆಲವು ಸಂಶೋಧನಾ ಲೇಖನಗಳನ್ನು, ಪ್ರಕಟಗೊಂಡಿರುವ ಶಾಸನಗಳನ್ನು ಒಟ್ಟಾಗಿಸಿ ಹರಪನಹಳ್ಳಿ ಪಾಳೆಯಗಾರರ ಇತಿಹಾಸವನ್ನು ಇನ್ನಷ್ಟು ವಿಸ್ತರಿಸಿದ್ದಾರೆ.

ಎಸ್.ವೈ. ಸೋಮಶೇಖರ್ ಅವರು ಸಂಪಾದಿಸಿದ ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೪ 'ಜಗಲೂರು' ಎಂಬ ಗ್ರಂಥದಲ್ಲಿ ಹದಿಮೂರು ಸಂಶೋಧನಾ ಲೇಖನಗಳಿವೆ. ಈ ಪುಸ್ತಕದಲ್ಲಿರುವ ಸಂಶೋಧನಾ ಲೇಖನಗಳು ಜಗಲೂರು ತಾಲೂಕಿನಲ್ಲಿ ಉಂಟಾಗಿರುವ ಸಾಂಸ್ಕೃತಿಕ ರೂಪಾಂತರಗಳನ್ನು ಅರ್ಥಮಾಡಿಕೊಳ್ಳಲು ಸಹಕಾರಿಯಾಗಿದೆ. ಆರ್. ಮಂಜುನಾಯ್ಕ ಅವರು 'ಚನ್ನಗಿರಿ ತಾಲೂಕಿನ ಪುರಾತತ್ವ ಅವಶೇಷಗಳು' ಎಂಬ ಕೃತಿಯಲ್ಲಿ ತಾಲೂಕಿನ

ಶಾಸನ, ದೇವಾಲಯ, ಮೂರ್ತಿಶಿಲ್ಪಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಶಾಸನಗಳ ಅಧ್ಯಯನ ಎಂಬ ಅಧ್ಯಾಯದಲ್ಲಿ ಕೆಲವು ಸ್ಮಾರಕಶಿಲ್ಪಗಳನ್ನು ಗುರುತಿಸಿ ವಿವರಿಸಿದ್ದಾರೆ. ಎಂ. ಕೊಟ್ರೇಶ್ ಅವರ 'ಹರಪನಹಳ್ಳಿ ತಾಲೂಕಿನ ರಕ್ಷಣಾ ವಾಸ್ತುಶಿಲ್ಪ' ಎಂಬ ಕಿರುಹೊತ್ತಿಗೆ ಅಧ್ಯಯನಕ್ಕೆ ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ ಪೂರಕ ಮಾಹಿತಿಯನ್ನು ನೀಡುತ್ತದೆ. ಬಿ.ಪಿ. ಕುಮಾರ್ ಅವರ 'ದಾವಣಗೆರೆ ಹತ್ತಿ ಗಿರಿಣಿ ಕಾರ್ಮಿಕರ ಚಳವಳಿಗಳು' ಎಂಬ ಕೃತಿ ಈ ಜಿಲ್ಲೆಯ ಭೌಗೋಳಿಕ ಮತ್ತು ರಾಜಕೀಯ ವಿಚಾರಗಳನ್ನು ಪರಿಶೀಲಿಸಲು ಯೋಗ್ಯವಾಗಿದೆ.

ಬೆನಕನಹಳ್ಳಿ ಜಿ. ನಾಯಕ್ ಅವರ 'ಚನ್ನಗಿರಿ ತಾಲೂಕು ದರ್ಶನ', ಕೆ.ಆರ್. ಇಕ್ಬಾಲ್ ಅಹಮದ್ ಅವರ 'ಚನ್ನಗಿರಿ ದರ್ಶನ ಭಾಗ-೨', ಬಳ್ಳೆಕೆರೆ ಹನುಮಂತಪ್ಪ ಅವರ 'ಹರಿಹರ ತಾಲೂಕು ದರ್ಶಿನಿ', ಕಮಲದಾನಿ ಗುರುರಾಯರ 'ಹರಿಹರ ಕ್ಷೇತ್ರದ ಮಹಾತ್ಮೆ', ಬರುಡೇಕಟ್ಟೆ ಮಂಜಪ್ಪ ಸಂಪಾದಿತ 'ಬಾತಿಯ ಬೆಳಗು' ಹಾಗೂ ಎಸ್.ಎಚ್. ಹೂಗಾರ್ ಸಂಪಾದಿತ 'ಜೀವಧಾರೆ' ಸ್ಮರಣ ಸಂಚಿಕೆ ಉಲ್ಲೇಖಿತ ಈ ಗ್ರಂಥಗಳೆಲ್ಲವು ಪ್ರಸ್ತುತ ಅಧ್ಯಯನ ಪ್ರದೇಶದ ಕುರಿತು ಕೆಲವು ಮಾಹಿತಿಗಳನ್ನು ನೀಡುವಲ್ಲಿ ಸಹಾಯಕವಾಗುತ್ತವೆ. ಮೇಲಿನ ಎಲ್ಲಾ ಅಧ್ಯಯನಗಳು ದಾವಣಗೆರೆ ಜಿಲ್ಲೆಗೆ ಸಂಬಂಧಿಸಿವೆ. ಇವುಗಳನ್ನು ಅವಲೋಕಿಸಿದಾಗ ಯಾವುದೇ ಕೃತಿಗಳು ಸ್ಮಾರಕಶಿಲ್ಪಗಳನ್ನು ಪ್ರಧಾನವಿಷಯವಾಗಿ ಅಧ್ಯಯನ ಮಾಡಿರುವುದು ಕಂಡುಬರುವುದಿಲ್ಲ. ಕೇವಲ ಭಾಗಶಃ ಒಂದು ಅಧ್ಯಾಯ ಅಥವಾ ಸಂದರ್ಭಕ್ಕನುಗುಣವಾಗಿ ಸ್ಮಾರಕಶಿಲ್ಪಗಳನ್ನು ಕುರಿತು ಚರ್ಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಸ್ಮಾರಕಶಿಲ್ಪಗಳ ಕುರಿತು ಸಮಗ್ರ ಅಥವಾ ಪೂರ್ಣಪ್ರಮಾಣದ ಅಧ್ಯಯನಗಳಾಗಿಲ್ಲ ಎಂದು ಹೇಳಬಹುದು.

### ೧.೬. ಅಧ್ಯಯನದ ಸ್ವರೂಪ

ಅಧ್ಯಯನದ ಉದ್ದೇಶ, ವ್ಯಾಪ್ತಿಯ ಹಿನ್ನೆಲೆಯಲ್ಲಿ ಪ್ರಸ್ತುತ ಸಂಶೋಧನಾ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಎಂಟು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಅವಶ್ಯಕತೆಗೆ ತಕ್ಕಂತೆ ಉಪಶೀರ್ಷಿಕೆಗಳನ್ನು ಹಾಕಿಕೊಳ್ಳಲಾಗಿದೆ.

ಪ್ರಸ್ತಾವನೆ ರೂಪದ ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸಮೀಕ್ಷೆ ಹಾಗೂ ಸ್ವರೂಪದ ಕುರಿತು ವಿವರಗಳನ್ನು ದಾಖಲಿಸಿ ಚರ್ಚಿಸಲಾಗಿದೆ. ಪ್ರಸ್ತಾವನೆಯಲ್ಲಿ ಅಧ್ಯಯನ ವಿಷಯಕ್ಕೆ ಪೂರಕವಾಗಿ ಹಿನ್ನೆಲೆ ಹಾಗೂ ಸೂಕ್ಷ್ಮ ಸ್ವರೂಪವನ್ನು ತಿಳಿಸಿಕೊಡಲಾಗಿದೆ. ಜೊತೆಗೆ ದಾವಣಗೆರೆ ಜಿಲ್ಲೆಯ ಸ್ಮಾರಕಶಿಲ್ಪಗಳ ಬಗ್ಗೆ ವಿವಿಧ ವಿದ್ವಾಂಸರು ಈವರೆಗೆ ನಡೆಸಿರುವ ಅಧ್ಯಯನಗಳನ್ನು ಸಂಪೂರ್ಣವಾಗಿ ಅವಲೋಕನ ಮಾಡಿ ಅವುಗಳ ಮಿತಿಗಳನ್ನು ತಿಳಿಸಲಾಗಿದೆ.

ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ ಶೀರ್ಷಿಕೆಯಡಿಯಲ್ಲಿ ರೂಪಗೊಂಡ ಎರಡನೆಯ ಅಧ್ಯಾಯವು ಜಿಲ್ಲೆಯ ಕುರಿತ ಭೌಗೋಳಿಕ ಸನ್ನಿವೇಶಗಳು, ನದಿಗಳು, ಪ್ರಾಣಿ ಸಂಪತ್ತು, ಕೃಷಿ, ಖನಿಜ ಸಂಪತ್ತು ಹಾಗೂ ಕೈಗಾರಿಕೆಗಳ ಅಂಶಗಳ ಕುರಿತು ವಿವರಿಸಲಾಗಿದೆ. ಪ್ರಾಗಿತಿಹಾಸದ

ವಿವರಗಳನ್ನು ಜಿಲ್ಲೆಯ ಆದಿ ಇತಿಹಾಸಕ್ಕೆ ಸಂಬಂಧಿಸಿದ ಸಮಗ್ರ ಮಾಹಿತಿಗಳ ವಿವರ ನೀಡಲಾಗಿದೆ. ಇತಿಹಾಸ ಕಾಲದಲ್ಲಾದ ರಾಜಕೀಯ ಹಾಗೂ ಇತರೆ ವಿದ್ಯಮಾನಗಳನ್ನು ಒಟ್ಟಾರೆ ಈ ವಿವರಗಳು ಪ್ರಮುಖ ರಾಜಕೀಯ ನೋಟಗಳನ್ನು ವಿವರಿಸುತ್ತವೆ. ಇಂಥ ವಿಷಯಗಳನ್ನು ನಿರೂಪಿಸಲು ಶಾಸನ ಹಾಗೂ ಇತರೆ ಆಕರಗಳಲ್ಲಿರುವ ಸಂಗತಿಗಳನ್ನೇ ಹೆಚ್ಚಾಗಿ ಅವಲಂಬಿಸಿ ವಿಮರ್ಶಾತ್ಮಕವಾಗಿ ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸ್ಮಾರಕಶಿಲ್ಪಗಳ ಇತಿಹಾಸವನ್ನು ಕುರಿತು ದೀರ್ಘವಾಗಿ ಚರ್ಚಿಸಲಾಗಿದೆ. ಸ್ಮಾರಕಶಿಲ್ಪದ ಸ್ವರೂಪದಲ್ಲಿ ಸ್ಮಾರಕಶಿಲ್ಪಗಳು ಮತ್ತು ಇತರೆ ಸ್ಮಾರಕಗಳ ನಡುವೆ ಇರುವ ಭಿನ್ನತೆಯನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಸ್ಮಾರಕಶಿಲ್ಪದ ಬೆಳವಣಿಗೆಯಲ್ಲಿ ವಿವಿಧ ಕಾಲಘಟ್ಟದಲ್ಲಿ ಅದು ಬೆಳೆದು ಬಂದ ಬಗೆಯನ್ನು ವಿವರಿಸಲಾಗಿದೆ. ಧರ್ಮ, ರಾಜಕೀಯ ಮತ್ತು ಸಂಸ್ಕೃತಿಯ ಬೆಂಬಲದ ಜೊತೆಗೆ, ಕರ್ನಾಟಕದ ಹಲವು ಅರಸು ಮನೆತನಗಳ ಕಾಲದಲ್ಲಿ ಹಲವಾರು ಪ್ರಭಾವಗಳನ್ನೊಳಗೊಂಡು ಬದಲಾವಣೆ, ಅವನತಿ ಹೊಂದಿದಂತೆ ಆಯಾ ಕಾಲದಲ್ಲಿ ತನ್ನ ವೈಶಿಷ್ಟ್ಯತೆಯನ್ನು ಮೆರೆದು ಬೆಳೆದು ಬಂದಿರುವುದನ್ನು ತುಸು ದೀರ್ಘವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಸ್ಮಾರಕಶಿಲ್ಪಗಳನ್ನು ಹಾಕಿಸುತ್ತಿದ್ದವರಲ್ಲಿ ಆಳುವ ವರ್ಗಕ್ಕಿಂತ ವೀರನ ಕುಟುಂಬದವರು ಹೆಚ್ಚು ಭಾಗಿಯಾಗಿರುವುದನ್ನು ಶಾಸನಾಧಾರಗಳಿಂದ ವಿವರಿಸಲಾಗಿದೆ. ಸ್ಮಾರಕಶಿಲ್ಪಗಳಲ್ಲಿ ಮೂಡಿಬಂದಿರುವ ಸ್ವರ್ಗದ ಚಿತ್ರಣವನ್ನು ಸಾಹಿತ್ಯ ಹಾಗೂ ಶಾಸನಾಧಾರಗಳಿಂದ ವಿಶ್ಲೇಷಿಸಲಾಗಿದೆ. ಶಾಸನ ಪಾಠ ಮತ್ತು ಶಿಲ್ಪಗಳಲ್ಲಿ ವ್ಯಕ್ತವಾಗುವ ಪರಲೋಕದ ಚಿತ್ರಣವು ಅಂದಿನ ಸಮಾಜದ ನಂಬಿಕೆಯನ್ನು ಪ್ರತಿನಿಧಿಸುತ್ತದೆ. ಅದರೊಂದಿಗೆ ಸಮಕಾಲೀನ ಮತಗಳ ಪ್ರತಿಕ್ರಿಯೆಯನ್ನು ತೋರಿಸುತ್ತದೆ. ವೀರನು ಯಾವ ಮತಕ್ಕೆ ಸೇರಿದವನೋ ಆ ಮತದ ದೇವರಿಗೆ ಸೇರಿದ ಲೋಕದಲ್ಲಿ ಅಂತಿಮ ಸ್ಥಾನ ಪಡೆಯುತ್ತಾನೆ ಎಂಬ ನಂಬಿಕೆಯು ಅಂದಿನ ಕಾಲದಲ್ಲಿ ಇದ್ದಿತು. ಅಲ್ಲದೆ ಸಮಕಾಲೀನ ಮತಗಳು ವೀರತ್ವ ಮತ್ತು ವೀರಮರಣದ ಕಲ್ಪನೆಯನ್ನು ಒಪ್ಪಿಕೊಂಡಿರುವುದನ್ನು ಸ್ಮಾರಕಶಿಲ್ಪಗಳಲ್ಲಿ ವ್ಯಕ್ತವಾಗಿರುವ ಚಿತ್ರಣ ಮತ್ತು ಶಾಸನ ಪಾಠದ ಮೂಲಕ ವಿವರಿಸುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ವೀರಮರಣದ ಸ್ವರೂಪ ಮತ್ತು ಇತಿಹಾಸವನ್ನು ತಿಳಿಸಿ ಪ್ರಸ್ತುತ ಜಿಲ್ಲೆಯಲ್ಲಿ ಕಂಡುಬರುವ ವೀರಮರಣದ ಸ್ಮಾರಕಶಿಲ್ಪಗಳನ್ನು ವಿವರವಾಗಿ ವಿಶ್ಲೇಷಿಸಿ ವಿಷಯಗಳನ್ನು ಪ್ರಕಟಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಅವುಗಳ ಹೋರಾಟದ ಪ್ರಭೇದಗಳನ್ನು ಆಧರಿಸಿ ಯುದ್ಧ, ತುರುಗಾಳಗ, ಊರಳಿವು, ಕೋಟೆಕಾಳಗ, ಪೆಣ್ಬುಯ್ಯಲ್, ಕಳ್ಳರೊಡನೆ ಹಾಗೂ ಪ್ರಾಣಿಗಳೊಂದಿಗೆ ಹೋರಾಡಿ ಮಡಿದ ವೀರರೆಂದು ವಿಂಗಡಿಸಿಕೊಂಡು ವಿವರಿಸಲಾಗಿದೆ. ಜೊತೆಗೆ ಪ್ರತಿಯೊಂದು ಭಾಗದಲ್ಲಿ ಶಾಸನ ಮತ್ತು ಶಾಸನ ರಹಿತ ಸ್ಮಾರಕಶಿಲ್ಪಗಳೆಂದು ಬೇರ್ಪಡಿಸಿಕೊಂಡು ನಿರೂಪಿಸಲಾಗಿದೆ. ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ವಿಶೇಷ ಸ್ಮಾರಕಶಿಲ್ಪಗಳನ್ನು ಗುರುತಿಸಿ ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಲೌಕಿಕ ಮತ್ತು ಧಾರ್ಮಿಕ ಆತ್ಮಬಲಿದಾನ ಸ್ಮಾರಕಶಿಲ್ಪಗಳನ್ನು ಕುರಿತು ಚರ್ಚಿಸಲಾಗಿದೆ. ಲೌಕಿಕದಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಕಾರಣಗಳು, ಅಲೌಕಿಕದಲ್ಲಿ ಪರಲೋಕ, ಪುನರ್ಜನ್ಮ ಕಲ್ಪನೆಗಳು ಕಾರಣವೆಂಬುದನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ. ಲೌಕಿಕ ಆತ್ಮಬಲಿದಾನದಲ್ಲಿ ಮಾಸ್ತಿ ಮರಣ ಮತ್ತು ವೇಳೆವಾಳಿ ಮರಣ ಎಂಬ ಎರಡು ಸಂಗತಿಗಳನ್ನು ನಿರೂಪಿಸಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ಮಾಸ್ತಿಶಿಲ್ಪಗಳ ಮುಖ್ಯ ಸಂಗತಿಗಳನ್ನು ಗಮನಿಸಿ ಅವುಗಳನ್ನು ಸಹಗಮನ ಮತ್ತು ಅನುಗಮನ ಸತಿ ಸ್ಮಾರಕಶಿಲ್ಪಗಳೆಂದು ವಿಂಗಡಿಸಿ ವಿಶ್ಲೇಷಿಸಲಾಗಿದೆ. ಅಧ್ಯಯನ ಪ್ರದೇಶದ ಕೆಲವು ಗ್ರಾಮಗಳಲ್ಲಿ ಕಂಡುಬರುವ ವಿಶಿಷ್ಟ ಸತಿಗಲ್ಲುಗಳನ್ನು ಚರ್ಚಿಸಿ ನಿರೂಪಿಸುವ ಪ್ರಯತ್ನ ಮಾಡಲಾಗಿದೆ. ವೇಳವಾಳಿ ಮರಣಗಳು ಅಧ್ಯಯನ ಪ್ರದೇಶದಲ್ಲಿ ವಿರಳವಾಗಿ ಕಂಡುಬಂದರೂ, ಅದು ಕೀಳ್ಗಿಂಟೆ ಮತ್ತು ವೇಳವಾಳಿ ರೂಪದಲ್ಲಿ ಅಸ್ತಿತ್ವದಲ್ಲಿ ಇದ್ದುದನ್ನು ಕೆಲವೇ ಆಧಾರಗಳಿಂದ ವಿವರಿಸುವ ಪ್ರಯತ್ನ ಮಾಡಲಾಗಿದೆ. ಧಾರ್ಮಿಕ ಆತ್ಮಬಲಿದಾನವೂ ಸಹ ಜಿಲ್ಲೆಯಲ್ಲಿ ಹೆಚ್ಚು ಪ್ರಭಾವಿಸದಿರುವುದು ಕಂಡುಬರುತ್ತದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಕೆಲವು ಧಾರ್ಮಿಕ ಆತ್ಮಬಲಿದಾನ ಸ್ಮಾರಕಶಿಲ್ಪಗಳನ್ನು ಗಮನಿಸಿ, ಹಿಂದೂ ಮತ್ತು ಜೈನ ಧಾರ್ಮಿಕ ಆತ್ಮಬಲಿದಾನಗಳನ್ನು ಕುರಿತು ವಿಶ್ಲೇಷಿಸುವ ಪ್ರಯತ್ನ ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ವೀರರ ಸಾಮಾಜಿಕ ಹಾಗೂ ಆರ್ಥಿಕ ಹಿನ್ನೆಲೆಗೆ ಸಂಬಂಧಿಸಿದ ಸಂಗತಿಗಳನ್ನು ಶಾಸನಗಳಲ್ಲಿ ವ್ಯಕ್ತವಾದ ವಿವರಗಳ ಹಿನ್ನೆಲೆಯಲ್ಲಿ ಚರ್ಚಿಸಿ ವಿಶ್ಲೇಷಿಸಲಾಗಿದೆ. ಹೋರಾಟಗಳಲ್ಲಿ ಪ್ರಮುಖವಾಗಿ ಅಂದಿನ ಸಮಾಜದಲ್ಲಿದ್ದ ಬಡಿಗ, ಕುರುಬ, ಅಗಸ, ಅಕ್ಕಸಾಲಿಗ, ಸೆಟ್ಟಿ, ನಾಯಕ ಹಾಗೂ ಗೌಡ ಸಮುದಾಯಗಳಿಗೆ ಸೇರಿದ ವೀರರು ವಿವಿಧ ಹೋರಾಟಗಳಲ್ಲಿ ಮಡಿದಿರುವುದನ್ನು ಶಾಸನಗಳ ಮೂಲಕ ಚರ್ಚಿಸಲಾಗಿದೆ. ಮಡಿದ ವೀರರ ಕುಟುಂಬದವರು ನೀಡಿದ ದಾನದತ್ತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಅವರ ಆರ್ಥಿಕ ಸ್ಥಿತಿಗತಿಗೆ ಸಂಬಂಧಿಸಿದ ವಿವರಗಳನ್ನು ಪ್ರಕಟಿಸುವ ಪ್ರಯತ್ನ ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

ಏಳನೆಯ ಅಧ್ಯಾಯವು ನಂಬಿಕೆ ಮತ್ತು ಆಚರಣೆಗಳಿಗೆ ಸಂಬಂಧಿಸಿದೆ. ಜಿಲ್ಲೆಯಲ್ಲಿ ವೀರರು ಹಾಗೂ ಮಹಾಸತಿಯರ ಮೇಲೆ ಹುಟ್ಟಿಕೊಂಡಿರುವ ವಿವಿಧ ರೀತಿಯ ನಂಬಿಕೆ, ಆಚರಣೆ ಮತ್ತು ಐತಿಹ್ಯಗಳ ಕುರಿತು ವಿವರಿಸಲಾಗಿದೆ.

ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು, ಅದರಲ್ಲಿ ಮುಖ್ಯವಾಗಿ ಪ್ರಕಟಗೊಂಡಿರುವ ಅಧ್ಯಾಯಗಳ ಒಟ್ಟು ಸ್ವರೂಪವನ್ನು ಹಾಗೂ ಅಧ್ಯಯನದಲ್ಲಿ ಕಂಡುಕೊಂಡ ಒಟ್ಟು ಫಲಿತಗಳನ್ನು ನಿರೂಪಿಸುವ ಪ್ರಯತ್ನ ಇದಾಗಿದೆ. ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳು, ಸ್ಮಾರಕಶಿಲ್ಪಗಳ ಪಟ್ಟಿ, ನಕ್ಷೆಗಳು ಹಾಗೂ ಅಧ್ಯಯನಕ್ಕೆ ಪೂರಕವಾದ ಛಾಯಾಚಿತ್ರಗಳನ್ನು ನೀಡಲಾಗಿದೆ.

**ಅಡಿ ಟಿಪ್ಪಣಿಗಳು**

೧. Will and Ariel Durant, 1968, The Lessons of History XI, P. 81

೨. ಚಿದಾನಂದಮೂರ್ತಿ ಎಂ., ೨೦೧೫, ಕ.ಶಾ.ಸಾ.ಅ, ಪು. ೧

೩. ಕಲಬುರ್ಗಿ ಎಂ.ಎಂ., ೨೦೧೧, ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು, ಪು. ೫೨

## ಅಧ್ಯಾಯ: ಎರಡು

# ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ

೨.೧. ಭೌಗೋಳಿಕ ಪರಿಸರ

೨.೨. ಪ್ರಾಗಿತಿಹಾಸ

೨.೩. ಇತಿಹಾಸ ಕಾಲ

## ಅಧ್ಯಾಯ: ಎರಡು

# ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆ

ಆಯಾ ಭೂಪ್ರದೇಶದ ಅಧ್ಯಯನವೆಂದರೆ ಅಲ್ಲಿರುವ ಜನತೆಯ ಇತಿಹಾಸವೇ ಆಗಿರುತ್ತದೆ. ಅದು ಆಯಾ ಪ್ರದೇಶದ ಅಥವಾ ಪರಿಸರದ ಎಲ್ಲಾ ಆಯಾಮಗಳನ್ನು ಒಳಗೊಂಡು ರೂಪಗೊಂಡಿರುತ್ತದೆ. ಹಾಗಾಗಿ ಚರಿತ್ರೆ ಅಥವಾ ಇತಿಹಾಸ ಎಂಬುದು ಕೇವಲ ಮಾನವನ ಏರಿಳಿತಗಳನ್ನು ತಿಳಿಹೇಳುವ ಮಾದರಿಯಲ್ಲಿ ಅದು ಅಲ್ಲಿಯ ಮಾನವನ ಚರಿತ್ರೆಯ ಜೊತೆಗೆ ಆ ಪ್ರದೇಶದ ಭೌಗೋಳಿಕ ವ್ಯಾಪ್ತಿಯಲ್ಲಿರುವ ಬೆಟ್ಟ, ಗುಡ್ಡ, ಖನಿಜ ಸಂಪತ್ತು, ಅರಣ್ಯ, ನದಿ, ಕೊಳ್ಳ, ಹವಾಗುಣ ಮತ್ತು ಕೃಷಿ ಮೊದಲಾದ ಅಂಶಗಳನ್ನು ಅಭ್ಯಸಿಸುವುದು ಅಷ್ಟೇ ಮಹತ್ವವಾದುದು. ಏಕೆಂದರೆ ಪ್ರಪಂಚದ ಎಲ್ಲಾ ನಾಗರಿಕತೆ ಮತ್ತು ಸಂಸ್ಕೃತಿಗಳು ಬೆಟ್ಟ, ಗುಡ್ಡ, ನದಿ ಸಂಚಯಗಳಲ್ಲೇ ಏಳಿಗೆ ಹೊಂದಿವೆ. ಆ ಮೂಲಕ ಮಾನವನ ಜೀವನಶೈಲಿ, ಚಿಂತನೆ, ನಂಬಿಕೆ ಮತ್ತು ಆಚರಣೆ, ಸಂಪ್ರದಾಯ ಹಾಗೂ ಭಾಷೆ ವಿಕಸನಕ್ಕೂ ಕಾರಣವಾಗಿವೆ. ಇಂಥ ಪ್ರಾಥಮಿಕ ವಿವರಗಳನ್ನು ತಿಳಿದುಕೊಂಡಾಗಲೇ ಆಯಾ ಪ್ರದೇಶದಲ್ಲಿ ಮಾನವನ ಸಂಸ್ಕೃತಿಯ ಬೆಳವಣಿಗೆಯ ಕುರಿತಿರುವ ವಿವಿಧ ಆಯಾಮಗಳನ್ನು ಸೂಕ್ಷ್ಮವಾಗಿ ಗ್ರಹಿಸಬಹುದು. ಜೊತೆಗೆ ಆ ಪ್ರದೇಶದ ಚರಿತ್ರೆಯನ್ನು ರೂಪಿಸಲು ಸಹಕಾರಿಯಾಗುತ್ತದೆ.

ಭೌಗೋಳಿಕವಾಗಿ ದಾವಣಗೆರೆ ಕರ್ನಾಟಕ ರಾಜ್ಯದ ಹೃದಯಭಾಗದಲ್ಲಿದೆ. ಅಧ್ಯಯನ ಪ್ರದೇಶದ ಬಹುತೇಕ ಭೌಗೋಳಿಕ ಪರಿಸರವು ಬೆಟ್ಟ, ಗುಡ್ಡ, ಹಳ್ಳ-ಕೊಳ್ಳಗಳಿಂದ ತುಂಬಿವೆ. ಇಲ್ಲಿನ ಪ್ರಾಕೃತಿಕ ಸಂಪತ್ತೇ ಅನಾದಿ ಕಾಲದಿಂದಲೂ ಈ ಪರಿಸರದಲ್ಲಿ ಮಾನವನು ನೆಲೆಗೊಳ್ಳುವಂತೆ ಮಾಡಿದೆ. ಅವನ ವಾಸದ ನೆಲೆಗಳು, ದೇವಾಲಯ, ಶಾಸನ ಹಾಗೂ ಶಿಲ್ಪಗಳು ಈ ಪರಿಸರದ ಪ್ರಾಚೀನ, ಅರ್ವಾಚೀನ ಸಂಸ್ಕೃತಿಗಳ ಭವ್ಯ ಪರಂಪರೆಯನ್ನು ಕಟ್ಟಿಕೊಡಲು ಆಧಾರಗಳಾಗಿವೆ. ಈ ಹಿನ್ನೆಲೆಯಲ್ಲಿ ಪ್ರಾಗಿತಿಹಾಸದಿಂದ ವಿಜಯನಗರೋತ್ತರ ಕಾಲದವರೆಗೆ ಹಲವು ಚಾರಿತ್ರಿಕ ಘಟನೆಗಳಿಗೆ ಕಾರಣೀಭೂತವಾಗಿರುವ ಜಿಲ್ಲೆಯ ಭೌಗೋಳಿಕ ಅಂಶಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ೨.೧. ಭೌಗೋಳಿಕತೆ

ಅಖಂಡವಾಗಿದ್ದ ಚಿತ್ರದುರ್ಗ ಜಿಲ್ಲೆಯನ್ನು ೧೯೯೭ರಲ್ಲಿ ವಿಭಾಗಿಸಲಾಯಿತು. ಈ ಭಾಗದ ಜನರ ಬಹುದಿನಗಳ ಬೇಡಿಕೆ ಹಾಗೂ ಆಡಳಿತ ಮತ್ತು ಅಭಿವೃದ್ಧಿಯ ಪ್ರಮುಖ ಉದ್ದೇಶಗಳು ಇಂಥ ಪ್ರತ್ಯೇಕಿಸುವಿಕೆಗೆ ಮುಖ್ಯ ಕಾರಣಗಳಾಗಿವೆ. ಶ್ರೀ ಹುಂಡೇಕಾರ ಮತ್ತು ಗದ್ದೀಗೌಡರ್ ಆಯೋಗಗಳ ಒಮ್ಮತದ ಶಿಫಾರಸ್ಸಿನಂತೆ ರಾಜ್ಯದಲ್ಲಿ ಏಳು ಹೊಸ ಜಿಲ್ಲೆಗಳನ್ನು ೧೯೯೭ ಆಗಸ್ಟ್ ೧೫ರಂದು ರಚಿಸಲಾಯಿತು. ಹೀಗೆ ಹೊಸದಾಗಿ ಅಸ್ತಿತ್ವಕ್ಕೆ ಬಂದ ಜಿಲ್ಲೆಗಳಲ್ಲಿ ದಾವಣಗೆರೆ ಜಿಲ್ಲೆಯೂ ಒಂದಾಗಿತ್ತು.[೧] ಕರ್ನಾಟಕ ರಾಜ್ಯದ ೨೨ನೆಯ ಹೊಸ ಜಿಲ್ಲೆಯಾಗಿ ರೂಪುಗೊಂಡಿರುವ ಇದು ಈ ಮೊದಲು ಚಿತ್ರದುರ್ಗ ಜಿಲ್ಲೆಯ ಕಂದಾಯ ವಿಭಾಗಗಳಲ್ಲಿ ಒಂದಾಗಿತ್ತು. ಹಿಂದಿನ ಚಿತ್ರದುರ್ಗ ಜಿಲ್ಲೆಯ ದಾವಣಗೆರೆ, ಹರಿಹರ, ಜಗಲೂರು ಹಾಗೂ ಶಿವಮೊಗ್ಗ ಜಿಲ್ಲೆಯ ಚನ್ನಗರಿ, ಹೊನ್ನಾಳಿ ಮತ್ತು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕುಗಳೇ ಪ್ರಸ್ತುತ ಜಿಲ್ಲೆಯ ವ್ಯಾಪ್ತಿಯಲ್ಲಿ ಕೇಂದ್ರಿಕರಣಗೊಂಡಿರುವ ತಾಲೂಕುಗಳಾಗಿವೆ (ಇತ್ತೀಚೆಗೆ ಹರಪನಹಳ್ಳಿ ತಾಲೂಕನ್ನು ಮತ್ತೆ ಬಳ್ಳಾರಿ ಜಿಲ್ಲೆಗೆ ಸೇರಿಸಲಾಗಿದೆ). ದಾವಣಗೆರೆ ತಾಲೂಕು ಇದರ ಆಡಳಿತದ ಮುಖ್ಯ ಕೇಂದ್ರವಾಗಿದೆ. ಈ ನಗರವು ರಾಜ್ಯದ ಯಾವುದೇ ಮೂಲೆಯಿಂದ ಸುಮಾರು ೨೦೦ ಕಿ.ಮೀ. ದೂರವಿರುವ ಕೇಂದ್ರಭಾಗವಾಗಿದೆ. ಅಲ್ಲದೇ ಹೊರ ರಾಜ್ಯಗಳೊಂದಿಗೂ ಸಂಪರ್ಕ ಕಲ್ಪಿಸುವ ರಸ್ತೆ ಮತ್ತು ರೈಲು ಸಾರಿಗೆ ವ್ಯವಸ್ಥೆಯನ್ನು ಹೊಂದಿರುವುದು. ಈ ಜಿಲ್ಲೆಯ ಪಶ್ಚಿಮದಲ್ಲಿ ಶಿವಮೊಗ್ಗ ಮತ್ತು ಹಾವೇರಿ, ಪೂರ್ವದಲ್ಲಿ ಚಿತ್ರದುರ್ಗ, ಉತ್ತರದಲ್ಲಿ ಬಳ್ಳಾರಿ ಹಾಗೂ ದಕ್ಷಿಣದಲ್ಲಿ ಚಿಕ್ಕಮಗಳೂರು ಗಡಿ ಜಿಲ್ಲೆಗಳಾಗಿವೆ.

### ಸ್ಥಳನಾಮ

ನಿರ್ದಿಷ್ಟವಾದ ಸ್ಥಳದ ಹೆಸರು ಹೇಗೆ ಹುಟ್ಟಿತು ಎನ್ನುವುದಕ್ಕೆ ಪ್ರಚಲಿತವಾಗಿರುವ ಸ್ಥಳೀಯ ಹೇಳಿಕೆಗಳು ಹಾಗೂ ಚಾರಿತ್ರಿಕ ಅಂಶಗಳನ್ನು ಗಮನಿಸುವುದು ಅವಶ್ಯಕವಾಗಿರುತ್ತದೆ. ಪ್ರಸ್ತುತ ಜಿಲ್ಲೆಯು ದಕ್ಷಿಣ ಕರ್ನಾಟಕದವರಿಂದ ದಾವಣಗೆರೆ, ಸ್ಥಳದ ಸುತ್ತಮುತ್ತಲ ಪ್ರದೇಶದವರಿಂದ 'ದಾವಣಗೇರಿ', ಉತ್ತರ ಕರ್ನಾಟಕದವರಿಂದ 'ಡಾವಣಗೇರಾ'[೨] ಎಂದು ಕರೆಯಲ್ಪಡುತ್ತಿದೆ.

ದಾವಣಗೆರೆ ಸ್ಥಳನಾಮದ ಕುರಿತು ಸ್ಥಳೀಯವಾಗಿ ಪ್ರಚಲಿತವಿರುವ ಹೇಳಿಕೆಯೊಂದು ಈ ರೀತಿಯಿದೆ. ಈ ಪ್ರದೇಶದಲ್ಲಿ ಸದಾ ನೀರಿನಿಂದ ತುಂಬಿರುತ್ತಿದ್ದ ದೊಡ್ಡ ಕೆರೆಯೊಂದಿದ್ದು, ಈ ಕೆರೆಯಂಗಳದಲ್ಲಿ ಹಚ್ಚು ಹಸುರಿನ ದೊಡ್ಡ ಹುಲ್ಲುಗಾವಲು ಇತ್ತಂತೆ. ಆಗಿನ ಕಾಲದ ಕುದುರೆ ಸವಾರರು ಮತ್ತು ಎತ್ತಿನ ಗಾಡಿ ಮುಂತಾದವರು ಈ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿದ್ದರು. ಈ ಕೆರೆಯಂಗಳದ ಹುಲ್ಲುಗಾವಲಿನಲ್ಲಿ ಕುದುರೆ, ಎತ್ತು, ದನಗಳನ್ನು ದವಣೆಗಳಿಂದ(ದವಣೆ=ಹಗ್ಗ) ಬಿಗಿದು ಕಟ್ಟಿ ವಿಶ್ರಾಂತಿ ಪಡೆದು, ಮುಂದೆ ಪ್ರಯಾಣ ಮಾಡುತ್ತಿದ್ದರಂತೆ. ಅಲ್ಲದೆ ದನಗಳನ್ನು, ಎತ್ತುಗಳನ್ನು ಒಂದೇ ಹಗ್ಗದಲ್ಲಿ ಕಟ್ಟುತ್ತಿದ್ದು, ಇದೊಂದು ವಿಶಿಷ್ಟ ರೀತಿಯ ಕಟ್ಟಾಗಿದ್ದು,

'ದವಣೆಕಟ್ಟು' ಎಂದು ಹೇಳುತ್ತಿದ್ದುದು ಪ್ರಚಲಿತದಲ್ಲಿದೆ. 'ದವಣೆಕಟ್ಟು' ಬಿಗಿದು ದನಗಳನ್ನು ಕಟ್ಟುವ ಸ್ಥಳದ ಪಕ್ಕದಲ್ಲೇ ಕೆರೆ ಇದ್ದುದರಿಂದ 'ದವಣಕೆರೆ' ಎಂದು ಹೇಳುತ್ತಿದ್ದರಂತೆ.[೩] ಕಾಲ ಕ್ರಮೇಣದಲ್ಲಿ 'ದವಣಕೆರೆ'ಯನ್ನು ಅಪಭ್ರಂಶಗೊಳಿಸಿ 'ದಾವಣಗೆರೆ' ಎಂದು ಹೆಸರಾಗಿರಬೇಕು.

ಜನರಲ್ಲಿ ಪ್ರಚಲಿತವಿರುವ ಇನ್ನೊಂದು ಹೇಳಿಕೆ ಹೀಗಿದೆ. ಈ ಸ್ಥಳದಲ್ಲಿ ಹಿಂದೆ ಅನೇಕ ದಾನಿಗಳಿದ್ದರು. ಆದ್ದರಿಂದ ಈ ಊರು 'ದಾನಿಗಳ ಕೇರಿ' ಎನಿಸಿ ಮುಂದೆ ಅದೇ 'ದಾವಣಗೆರೆ' ಆಯಿತು ಎಂಬುದು.[೪] ಈ ವಿವರಣೆಯನ್ನು ಬದಲಾವಣೆಗೊಳಿಸಿ ಹೀಗೂ ಹೇಳುವುದುಂಟು. ಈ ಪ್ರದೇಶದಲ್ಲಿ ದಾನಿಗಳಿಂದ ಆದ(ದೊಡ್ಡ) ಕೆರೆಯೊಂದಿತ್ತು. ಆದುದರಿಂದ ಈ ಕೆರೆ 'ದಾನಿಗಳ ಕೆರೆ' ಎನಿಸಿ, ಇಲ್ಲಿಯ ಊರಿಗೂ ಅದೇ ಹೆಸರಾಗಿ, ಅದೇ ಬರಬರುತ್ತ 'ದಾವಣಗೆರೆ' ಆಗಿದೆ ಎನ್ನುವುದು.[೫]

ಲೇಖಕ ಶ್ರೀ ಹಿ.ಚಿ. ಶಾಂತವೀರಯ್ಯನವರು ದಾವಣಗೆರೆಯನ್ನು ಹೀಗೆ ವಿಶ್ಲೇಷಿಸಿದ್ದಾರೆ.

ದಾವಣ + ಕೆರೆ(ರೆ)

ದಾವಣ = ದಾವಣಿ, ಹಗ್ಗ, ಕಣ್ಣಿ, ದಾವ = ಅಡವಿ, ಕಾಡು, ಕಾಡ್ಗಿಚ್ಚು

ದಾವಣ = ದಾವಣಿ, ಸಂಸ್ಕೃತ– ದಾಮನಿ = ಕಟ್ಟುವ ಹಗ್ಗ

ದವಣಿ = ಗುಂಪು, ಸಮೂಹ

ಕೆರೆ = ಪ್ರವಾಹವನ್ನು ತಡೆದು ಏರಿ ಹಾಕಿ ನಿಲ್ಲಿಸಿದ ಪ್ರದೇಶ, ಜಲಾಶಯ

ದೇವನ ಕೆರೆ= ದೇವ = ಒಂದು ಹೆಸರು, ಆ ಹೆಸರಿನ ಸೂಚಕವಾಗಿ ಕಟ್ಟಿದ ಕೆರೆ ಅಥವಾ ದೇವನು ಕಟ್ಟಿಸಿದ ಕೆರೆ.

ದಾವ + ನಗರಿ, ದಾವ = ಯಾವ

ನಗರಿ = ನಗರಗಳಲ್ಲಿ ದೊಡ್ಡದು

ದಾವನ + ಕೇರಿ ದಾವನ ಎಂಬುವನ ಕೇರಿ, ಬೀದಿ

ದೇವನ + ಕೇರಿ ದೇವರು ನೆಲಸಿದ ಬೀದಿ, ರಸ್ತೆ

ದಾವಣಗೆರೆ ಎಂಬುದರ ರೂಪಾಂತರ 'ದೇವನ ಕೆರೆ' ಎಂಬುದರಿಂದ ಬಂದಿದೆ. ದೇವನಕೆರೆ, ದೇವನಗರೆ, ದೇವನಗರೆ–ದೇವಣಗೆರೆ, ದ್ಯಾವಣಗೆರೆ, ದ್ಹಾವಣಗೆರೆಯು ಕಾಲಕ್ರಮೇಣ 'ದಾವಣಗೆರೆ'ಯಾಗಿರಬಹುದೆಂಬ ಲೇಖಕರ ಅಭಿಪ್ರಾಯವನ್ನು ಒಪ್ಪುವಂಥದ್ದಾಗಿದೆ.[೬]

ಲೇಖಕಿ ಟಿ. ಗಿರಿಜ ಅವರು ದಾವಣಗೆರೆಯಲ್ಲಿ ಗುಡಿ ಗುಂಡಾರಗಳು, ಮಠ ಮಾನ್ಯಗಳಿಗೇನೂ ಕೊರತೆಯಿಲ್ಲ. ಆಧ್ಯಾತ್ಮಿಕ ಚಿಂತನೆಗೂ ಅವಕಾಶವಿದೆ. ಇದು ಸಾಹಿತ್ಯ, ನೃತ್ಯ, ಚಿತ್ರ, ಸಂಗೀತ, ಕಲೆಗಳ ಸಂಗಮವಾಗಿದೆ. ಆದ್ದರಿಂದ 'ದೇವನಗರಿ' ಎಂಬುದೇ 'ದಾವಣಗೆರೆ' ಆಗಿರಬಹುದೆಂದು ಲೇಖಕಿ ಟಿ. ಗಿರಿಜ ಅಭಿಪ್ರಾಯಿಸಿದ್ದಾರೆ.[೭]

ಸಂಶೋಧಕರಾದ ಬಿ. ರಾಜಶೇಖರಪ್ಪ ಅವರು ದಾವಣಗೆರೆ ಎಂಬ ಪದದಲ್ಲಿ 'ದಾವಣಿ' ಮತ್ತು 'ಕೆರೆ' ಎರಡು ಭಾಗಗಳಿರುವುದು ಸ್ಪಷ್ಟವಾಗಿದೆ. 'ದಾವಣಿ' ಎಂಬುದು 'ದಾವಣಿ' ಅರ್ಥದ ಶಬ್ದವಾಗಿರದೆ, ಒಂದು ವ್ಯಕ್ತಿನಾಮವಾಗಿರುವುದು ಸ್ಪಷ್ಟವಾಗುತ್ತದೆ. 'ದಾವಣ'ನ ಹೆಸರಿನ 'ದಾವಣಗೆರೆ' ೧೨ನೇ ಶತಮಾನದ ವೇಳೆಗೆ ಷಷ್ಠಿ ವಿಭಕ್ತಿ ಲೋಪಗೊಂಡು ದಾವಣಗೆರೆ ಆಗಿದೆ. ಆದ್ದರಿಂದ 'ದಾವಣ' ಎನ್ನುವ ವ್ಯಕ್ತಿಯ ಹೆಸರಿನ ಊರಾಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ.[೮]

ಮೇಲ್ಕಂಡ ವಿದ್ವಾಂಸರ ಅಭಿಪ್ರಾಯಗಳಲ್ಲದೆ ಈ ಸ್ಥಳನಾಮದ ಪ್ರಾಚೀನ ರೂಪ ಕಂಡುಬರುವುದು ಈವರೆಗೆ ಪ್ರಕಟಗೊಂಡಿರುವ ಶಾಸನಗಳಿಂದ. ಕ್ರಿ.ಶ. ೯೧೪ರ ಶಿಕಾರಿಪುರದ ಕನ್ನರದೇವನ ಶಾಸನದಲ್ಲಿ 'ದಾವಣಗವುದ' ಮಹಾಜನ ಎಂಬ ಪದ ಬರುತ್ತದೆ.[೯] ದಾವಣಗೆರೆ ಸ್ಥಳನಾಮದ ಮೂಲ ವ್ಯಕ್ತಿ ದಾವಣ(ನ)ನಾಗಿದ್ದಾನೆ ಎಂಬ ವಿದ್ವಾಂಸ ಬಿ. ರಾಜಶೇಖರಪ್ಪ ಅವರ ಊಹೆಗೆ ಈ ಶಾಸನ ಪುಷ್ಟಿ ನೀಡುತ್ತದೆ. ಈ ಶಾಸನದಿಂದ ನಿಖರವಾಗಿ ನಿರ್ಧಾರಕ್ಕೆ ಬರದಿದ್ದರೂ ದಾವಣಗೆರೆ ಹೆಸರಿನ ಪ್ರಾಚೀನತೆ ಕ್ರಿ.ಶ. ೧೦ನೇ ಶತಮಾನದ ಹಿಂದಿನದೆಂದು ಭಾವಿಸಬಹುದು. ಈ ಶಾಸನವಲ್ಲದೇ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯನ ಕ್ರಿ.ಶ. ೧೧೨೧ರ ಬೇತೂರಿನ ಶಾಸನದಲ್ಲಿ 'ದಾವಣಗೆರ್ಯ್ಯ ಸೀಮೆ' ಎಂಬ ಪದ ಪ್ರಯೋಗವಾಗಿದೆ.[೧೦] ಈ ಶಾಸನವೇ ದಾವಣಗೆರೆ ಎಂಬ ಪದವನ್ನು ಉಲ್ಲೇಖಿಸುವ ಮೊಟ್ಟಮೊದಲ ಶಾಸನವಾಗಿದೆಯೆಂದು ವಿದ್ವಾಂಸರಾದ ಟಿ. ಗಿರಿಜ[೧೧] ಮತ್ತು ಬಿ. ರಾಜಶೇಖರಪ್ಪ[೧೨] ಅವರ ಅಭಿಪ್ರಾಯವಾಗಿದೆ. ಕ್ರಿ.ಶ. ೨೪.೦೨.೧೧೩೮ರ ಶಾಸನದಲ್ಲೂ 'ದಾವಂಣನಕೆರೆ' ಎಂಬ ಪದದ ಉಲ್ಲೇಖ ಕಂಡುಬರುತ್ತದೆ.[೧೩] ಕ್ರಿ.ಶ. ೧೮೦೭ರಲ್ಲಿ ಫ್ರಾನ್ಸಿಸ್ ಬುಕಾನನ್ ಬರೆದ 'A Journey from Madras Through Mysore Canara and Malabar' ಎಂಬ ಕೃತಿಯಲ್ಲೂ 'ದಾವಣಗೆರೆ' ಎಂಬ ಪದ ರೂಪ ಸಿಗುತ್ತದೆ. ಇದೇ ಪದ ಪ್ರಸ್ತುತ ಬಳಕೆಯಲ್ಲಿದೆ. ಒಟ್ಟಾರೆ ಕ್ರಿ.ಶ. ೯೧೪ರ ಶಿಕಾರಿಪುರದ ಶಾಸನ ತರುವಾಯ ದಾವಣಗೆರೆ ಸ್ಥಳನಾಮದಲ್ಲಿ ಯಾವ ರೂಪವು ಬದಲಾವಣೆಗೊಳ್ಳದಿರುವುದು ಕಂಡುಬರುತ್ತದೆ.

### ೨.೨.೧. ವಾಯುಗುಣ ಮತ್ತು ಜನಸಾಂದ್ರತೆ

ದಾವಣಗೆರೆ ಜಿಲ್ಲೆಯು ಉತ್ತರ ದಕ್ಷಿಣವಾಗಿ ೧೧೭ ಕಿ.ಮೀ., ಪೂರ್ವ ಪಶ್ಚಿಮವಾಗಿ ೧೧೦ ಕಿ.ಮೀ. ಉದ್ದಗಲವಿದೆ. ಒಟ್ಟು ೫೯೬೩ ಚದರ ಮೈಲಿ ಭೂ ವಿಸ್ತೀರ್ಣವನ್ನು ಹೊಂದಿದ್ದು, ೧೪°.೨೮ರಿಂದ ೨೮ರವರೆಗಿನ ಅಕ್ಷಾಂಶ ಮತ್ತು ೭೫°.೫೯ರವರೆಗಿನ ರೇಖಾಂಶದಲ್ಲಿದೆ. ಸಮುದ್ರಮಟ್ಟದಿಂದ ೬೦೨.೬ ಮೀ. ಎತ್ತರದಲ್ಲಿರುವ ಪ್ರದೇಶವು ಬಯಲು ಹಾಗೂ ಸಮತಲದಲ್ಲಿರುವುದರಿಂದ ವರ್ಷದ ಬಹುಕಾಲ ಒಣಹವೆಯಿಂದ ಕೂಡಿರುತ್ತದೆ. ಜನವರಿ ಕೊನೆಯಿಂದ ಪ್ರಾರಂಭವಾಗುವ ಬೇಸಿಗೆಯ ತಾಪಮಾನ ಮಾರ್ಚ್–ಏಪ್ರಿಲ್–ಮೇ ತಿಂಗಳುಗಳಲ್ಲಿ ಹೆಚ್ಚಿರುತ್ತದೆ. ವಾರ್ಷಿಕವಾಗಿ ಸರಾಸರಿ ೭೭.೨° ಪ್ಯಾರಾಮೀಟರಿನಷ್ಟು ಉಷ್ಣಾಂಶವಿರುತ್ತದೆ. ಶೇ.

೫೦ ಸಾಪೇಕ್ಷ ಆರ್ದ್ರತೆಯು ಮಾರ್ಚ್ ತಿಂಗಳಿನಲ್ಲಿರುತ್ತದೆ. ಆದರೆ ಜುಲೈ ಮತ್ತು ಆಗಸ್ಟ್ ತಿಂಗಳುಗಳಲ್ಲಿ ಶೇ. ೮೦ರವರೆಗೂ ಏರಿರುತ್ತದೆ. ಜೂನ್ ತಿಂಗಳಿನಿಂದ ಮಳೆಗಾಲ ಪ್ರಾರಂಭವಾದರೂ ಜುಲೈ, ಆಗಸ್ಟ್, ಸೆಪ್ಟಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಹೆಚ್ಚು ಮಳೆ ಬೀಳುತ್ತದೆ. ವಾರ್ಷಿಕ ಸರಾಸರಿ ೫೭೮ ಮಿ.ಮೀ. ಮಳೆ ಬೀಳುತ್ತದೆ.[೧೪]

ಜಿಲ್ಲೆಯಲ್ಲಿ ೮೧೦ ಜನವಸತಿಯಿರುವ ಹಾಗೂ ೧೧೩ ಜನವಸತಿ ಇಲ್ಲದ ಗ್ರಾಮಗಳು ಸೇರಿ ಒಟ್ಟು ೯೨೩ ಗ್ರಾಮಗಳಿವೆ.[೧೫] ೨೦೧೧ರ ಜನಗಣತಿ ಪ್ರಕಾರ ೪೩೫೧೨೮ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ಪುರುಷರು ೨೨೦೫೪೪ ಮತ್ತು ೨೧೪೫೮೪ ಮಹಿಳೆಯರಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಶೇ. ೮೪.೮೯ರಷ್ಟು ಸಾಕ್ಷರರಿದ್ದಾರೆ.[೧೬]

**೨.೨.೨. ಬೆಟ್ಟಗಳು**

ಬೆಟ್ಟ, ಗುಡ್ಡಗಳು ಪ್ರಕೃತಿ ನೀಡಿದ ನೈಸರ್ಗಿಕ ಸಂಪನ್ಮೂಲಗಳಾಗಿವೆ. ಅವು ಮಾನವನ ಬದುಕಿನಲ್ಲಿ ಪ್ರತ್ಯಕ್ಷ ಇಲ್ಲವೇ ಪರೋಕ್ಷವಾಗಿ ಪ್ರಭಾವ ಬೀರಿರುವುದುಂಟು. ಅದರಂತೆ ಮಾನವನು ತನ್ನ ಬುದ್ಧಿಚಾತುರ್ಯ ಮತ್ತು ಕೌಶಲ್ಯದ ಮೂಲಕ ಪರಿಸರವನ್ನು ನಿಯಂತ್ರಿಸಲು ಪ್ರಯತ್ನಿಸುತ್ತಾನೆಯಾದರೂ, ಆತನು ಪರಿಸರದ ನಿರ್ಬಂಧಿತವಾದ ಚೌಕಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಾನೆ.[೧೭] ದಾವಣಗೆರೆ ಪರಿಸರದಲ್ಲಿ ಹಬ್ಬಿರುವ ಬೆಟ್ಟ, ಗುಡ್ಡ, ಹಳ್ಳ-ಕೊಳ್ಳ ಮತ್ತು ಕಣಿವೆಗಳ ಸಾಲುಗಳು ಅನಾದಿಕಾಲದಿಂದ ಮಾನವನ ವಾಸಕ್ಕೆ ಹಾಗೂ ಅವನ ಇತರೆ ಚಟುವಟಿಕೆಗಳಿಗೆ ಯೋಗ್ಯ ಸ್ಥಳಗಳಾಗಿದ್ದವೆಂದು ತೋರುತ್ತದೆ.

ದಾವಣಗೆರೆ ತಾಲೂಕು ಮಾಯಕೊಂಡದಿಂದ ಅಣಜಿವರೆಗೆ ಪೂರ್ವದಲ್ಲಿ ಅಷ್ಟೇನು ಎತ್ತರವಲ್ಲದ ಗುಡ್ಡದ ಸಾಲು ಹಬ್ಬಿದೆ. ಇದೇ ತಾಲೂಕಿನ ಬಾವಿಹಾಳು ನೀರ್ಥಡಿ, ಹುಲಿಕಟ್ಟೆ, ಹಾಲೇಕಲ್, ಬಾತಿ ಹಾಗೂ ಕರಡಿಗುಡ್ಡದ ಸಾಲುಗಳಿರುವುದು ಕಂಡುಬರುತ್ತದೆ.[೧೮] ಹೊನ್ನಾಳಿ ತಾಲೂಕಿನ ದಕ್ಷಿಣದಿಂದ ಉತ್ತರಕ್ಕೆ ಹಬ್ಬಿರುವ ಬೋಳುಬೆಟ್ಟದ ದೊಡ್ಡ ಶ್ರೇಣಿಯಿದೆ. ಇದು ಕಲ್ವರಂಗನಬೆಟ್ಟ, ಕುದುರೆಕೊಂಡ ಬೆಟ್ಟ ಹಾಗೂ ಬಸವಾಪಟ್ಟಣದ ಹಾಲಸ್ವಾಮಿ ಬೆಟ್ಟಗಳವರೆಗೂ ಮುಂದುವರಿದಿದೆ. ಕಲ್ವರಂಗನಬೆಟ್ಟವು ಭೂಮಟ್ಟದಿಂದ ೧೦೩೧ ಮೀ. ಅಡಿ ಎತ್ತರದಲ್ಲಿದೆ.[೧೯]

ಚನ್ನಗಿರಿ ತಾಲೂಕಿನ ದಕ್ಷಿಣ ಹಾಗೂ ಪಶ್ಚಿಮ ಭಾಗದಲ್ಲಿ ಬೆಟ್ಟದ ಸಾಲುಗಳಿವೆ. ಬಸವಪಟ್ಟಣದಿಂದ ಸೂಳೆಕೆರೆಯವರೆಗೆ ಹಬ್ಬಿನಿಂತಿರುವ ಗುಡ್ಡಗಳನ್ನು ಕಾಳೊದಡಿಯ ಕರಿಗುಡ್ಡ ಎಂಬುದಾಗಿ ಕರೆಯಲಾಗುತ್ತದೆ.[೨೦] ತಾಲೂಕಿನ ದಕ್ಷಿಣಕ್ಕೆ ಸುಮಾರು ೨೪ ಕಿ.ಮೀ. ದೂರದಲ್ಲಿ ಉಬ್ರಾಣಿ ಗುಡ್ಡವಿದೆ. ತರೀಕೆರೆ ತಾಲೂಕು ಗಡಿಯಿಂದ ಆರಂಭವಾಗುವ ಈ ಗುಡ್ಡ ದಕ್ಷಿಣೋತ್ತರವಾಗಿ ಸುಮಾರು ೫೮ ಕಿ.ಮೀ. ಉದ್ದವಾಗಿ ಭದ್ರಾವತಿ ತಾಲೂಕು ಗಡಿಯವರೆಗೂ ಹಬ್ಬಿದೆ. ಇದು ಸಮುದ್ರಮಟ್ಟದಿಂದ ೯೪೦ ಮೀ. ಎತ್ತರವಾಗಿದೆ.[೨೧] ಹರಪನಹಳ್ಳಿ ತಾಲೂಕಿನ ಉತ್ತರದಲ್ಲಿ ಕಲ್ಲಹಳ್ಳಿ ಗುಡ್ಡ ಶ್ರೇಣಿಯಿದೆ. ಇಳಿಜಾರಾಗಿ ಮುಂದೆ ಸಾಗುವ ಈ ಶ್ರೇಣಿಯು

ಕವಲೊಡೆದು ತೆಲಿಗಿ ಗುಡ್ಡ ಸಮೂಹ ಮತ್ತು ಹರಪನಹಳ್ಳಿಯ ದಕ್ಷಿಣ ಗುಡ್ಡ ಸಮೂಹವಾಗಿದೆ. ಈ ಶ್ರೇಣಿಯೇ ತಾಲೂಕಿನ ದಕ್ಷಿಣ ಭಾಗದಲ್ಲಿ ಉಚ್ಚಂಗಿದುರ್ಗದವರೆಗೂ ಮುಂದುವರಿದಿದೆ. ಕಲ್ಲಹಳ್ಳಿ ಗುಡ್ಡದ ಶಿಖರ ಸಮುದ್ರಮಟ್ಟದಿಂದ ೮೫೩ ಮೀ. ಎತ್ತರವಿದೆ.[೨೨] ಇದೇ ತಾಲೂಕಿನಲ್ಲಿ ನರಸಿಂಹ ದೇವರಬೆಟ್ಟ, ಕರಡಿದುರ್ಗ, ನೀಲಗುಂದ ಬಳಿ ಬೆಟ್ಟ ಸಮೂಹಗಳಿವೆ. ನರಸಿಂಹದೇವರ ಬೆಟ್ಟದ ಶಿಖರ ೭೭೫ ಮೀ. ಎತ್ತರವಿದೆ. ನೀಲಗುಂದದ ಬಳಿಯ ತಿಮ್ಮಪ್ಪನ ಪರ್ವತದ ಶ್ರೇಣಿಯು ಉಚ್ಚಂಗಿದುರ್ಗದವರೆಗೂ ಸಾಗಿದೆ.[೨೩] ಹರಿಹರ ತಾಲೂಕಿನ ನೈರುತ್ಯದಲ್ಲಿ ತುಮ್ಮಿನಕಟ್ಟಿಯ ಜೇನುಕೊಳ್ಳ ಗುಡ್ಡದಿಂದ ಪೂರ್ವದ ಕಡೆ ಹಬ್ಬಿರುವ ಕೊಮಾರನಹಳ್ಳಿ, ಹೆಳವನಕಟ್ಟೆ, ಕೊಪ್ಪದ ಗವಿಸಿದ್ಧೇಶ್ವರ ಗುಡ್ಡಗಳಿವೆ. ಉತ್ತರದಲ್ಲಿ ಚಿಕ್ಕಬಿದರೆ, ಕೊಂಡಜ್ಜಿ, ಸಾರಥಿ ಗುಡ್ಡಗಳು ಗೋಚರಿಸುತ್ತವೆ.[೨೪] ಇವುಗಳಲ್ಲದೇ ಐರಣಿ, ಬೇವಿನಹಳ್ಳಿ, ಗೋರವಂಕನ ಗುಡ್ಡಗಳನ್ನು ಕಾಣಬಹುದು. ಜಗಲೂರು ತಾಲೂಕಿನ ವಾಯವ್ಯದಲ್ಲಿ ಬೆಟ್ಟ ಸಾಲುಗಳಿವೆ. ಮುಖ್ಯವಾಗಿ ಗುಹೇಶ್ವರ ಬೆಟ್ಟ, ರಂಗಯ್ಯನ ಗುಡ್ಡಸಾಲು, ಕಣಕುಪ್ಪೆ, ಕೆಳಗೋಟೆ, ಹಾಲೇಕಲ್ ಬೆಟ್ಟಶ್ರೇಣಿ, ಕೊಡದಗುಡ್ಡ ಮತ್ತು ಕೊಣಚಕಲ್ ಬೆಟ್ಟ ಸಾಲುಗಳು ಕಂಡುಬರುತ್ತವೆ. ಇವುಗಳಲ್ಲದೆ ಉರುಲಕಟ್ಟೆ, ಮಲೆಮಾಚಿಕೆರೆ, ಮಾರೇನಹಳ್ಳಿ, ಅಣಬೂರು, ಗುತ್ತಿದುರ್ಗ ಹಾಗೂ ಗುರುಸಿದ್ಧಾಪುರಗಳಲ್ಲಿ ಸಣ್ಣ ಪ್ರಮಾಣದ ಬೆಟ್ಟದ ಸಾಲುಗಳಿವೆ.

### ೨.೨.೩. ಜಲಸಂಪತ್ತು

ದಾವಣಗೆರೆ ಪ್ರದೇಶವು ಕೃಷ್ಣ ಜಲಾನಯನ ಪ್ರದೇಶಕ್ಕೆ ಒಳಪಟ್ಟಿದೆ. ತುಂಗಭದ್ರಾ, ಚಿನ್ನಹಗರಿ, ಹರಿದ್ರಾ ನದಿಗಳು ಈ ಜಿಲ್ಲೆಯಲ್ಲಿ ಹಾಯ್ದು ಹೋಗುವ ಪ್ರಮುಖ ನದಿಗಳಾಗಿವೆ. ದೊಡ್ಡಕೆರೆಗಳಾದ ಶಾಗಲಿಹಳ್ಳ, ಕೊಡಗನೂರು ಕೆರೆ ಹಾಗೂ ಸೂಳೆಕೆರೆಗಳು ಈ ಭಾಗದ ರೈತರ ಜೀವನಾಡಿಯಾಗಿವೆ. ತುಂಗಭದ್ರಾ ನದಿಯು ಹರಿಹರ, ಹೊನ್ನಾಳಿ, ಚನ್ನಗಿರಿ, ಹರಪನಹಳ್ಳಿ ತಾಲೂಕುಗಳಲ್ಲಿ ಹರಿಯುತ್ತದೆ. ಜಿಲ್ಲೆಯ ಎಡಪಾರ್ಶ್ವದ ಗಡಿಯಾಗಿ ಹರಿಯುವ ಈ ನದಿಯು ರಾಣೆಬೆನ್ನೂರು ಮತ್ತು ಹಡಗಲಿ ತಾಲೂಕುಗಳನ್ನು ಬೇರ್ಪಡಿಸುತ್ತದೆ. ಮುಂದುವರಿದು ಪಶ್ಚಿಮದಲ್ಲಿ ಹಾವೇರಿ ಜಿಲ್ಲೆಯ ಗಡಿಯನ್ನು ಮುಟ್ಟುತ್ತದೆ.[೨೫] ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಹರಿಯುವ ತುಂಗಭದ್ರಾ ನದಿಯು ಸುಮಾರು ಐವತ್ತು ಸಾವಿರ ಹೆಕ್ಟೇರ್ ಭೂಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ.

ಭದ್ರಾ ಜಲಾಶಯದ ಎರಡು ಕಾಲುವೆ ಜಿಲ್ಲೆಯಲ್ಲಿ ಹರಿಯುವುದರಿಂದ ನೀರಾವರಿಗೆ ಮತ್ತಷ್ಟು ಅನುಕೂಲವಾಗಿದೆ. ಮಲೆಬೆನ್ನೂರು ಮತ್ತು ದಾವಣಗೆರೆಯ ಮೂಲಕ ಹರಿಯುವ ಎರಡು ನಾಲೆಗಳು ಸುಮಾರು ೨,೭೬,೮೮೮(೬೦ ಸಾವಿರ) ಹೆಕ್ಟೇರು ಭೂಮಿಗೆ ನೀರನ್ನು ಒದಗಿಸಿವೆ.[೨೬]

ಶಾಗಲಿಹಳ್ಳ ಹಾಗೂ ಹರಿದ್ರಾ(ಸೂಳೆಕೆರೆ ಹಳ್ಳ) ನದಿಗಳ ಸಂಗಮ ಸ್ಥಳವಾದ ದೇವರಬೆಳಕೆರೆಯಲ್ಲಿ ಅಣೆಕಟ್ಟು ನಿರ್ಮಿಸಿಸಲಾಗಿದೆ. ಜಲಾಶಯದ ಸುಮಾರು ೬೦೦೦ ಹೆಕ್ಟೇರು

ಪ್ರದೇಶದಲ್ಲಿ ನೀರು ನಿಲ್ಲುತ್ತದೆ. ಈ ಅಣೆಕಟ್ಟಿನಿಂದ ಸುಮಾರು ೧೩.೩೧೩ ಹೆಕ್ಟೇರ್ ಕೃಷಿ ಭೂಮಿಗೆ ನೀರೊದಗಿಸಲಾಗುತ್ತದೆ.[೨೯] ಚನ್ನಗಿರಿ ತಾಲೂಕಿನಿಂದ ೨೦ ಕಿ.ಮೀ. ದೂರದಲ್ಲಿರುವ ಶಾಂತಿಸಾಗರ(ಸೂಳೆಕೆರೆ) ದಕ್ಷಿಣ ಭಾರತದ ಸುಂದರ ಜಲಾಶಯಗಳಲ್ಲಿ ಒಂದಾಗಿದೆ. ಆಂಧ್ರಪ್ರದೇಶದ ಕಡಪದಲ್ಲಿರುವ 'ಕುಂಬಕೆರೆ'ಯನ್ನು ಬಿಟ್ಟರೆ ಸೂಳೆಕೆರೆ ದಕ್ಷಿಣ ಭಾರತದ ಎರಡನೇ ಅತಿ ದೊಡ್ಡ ಕೆರೆಯಾಗಿದೆ. ಈ ಕೆರೆ ೬೪ ಕಿ.ಮೀ. ಸುತ್ತಳತೆಯನ್ನು ಹೊಂದಿದೆ. ಇದನ್ನು ಸ್ವರ್ಗಾವತಿ ಪಟ್ಟಣದ ದೊರೆ ವಿಕ್ರಮರಾಯನ ಮಗಳು 'ಶಾಂತವ್ವೆ' ಕಟ್ಟಿಸಿದಳೆಂಬ ಪ್ರತೀತಿಯುಂಟು.[೩೦] ಕ್ರಿ.ಶ. ಸು. ೧೧-೧೨ನೇ ಶತಮಾನದಲ್ಲೇ ಹಿರೇಹಳ್ಳ ಮತ್ತು ಸೊಪ್ಪಿನಹಳ್ಳಗಳಿಗೆ ಕಟ್ಟೆ ಕಟ್ಟಿ ಜಲಾಶಯ ನಿರ್ಮಿಸಲಾಗಿದೆ. ಬೆಟ್ಟ, ಗುಡ್ಡಗಳ ನಡುವಿನ ತಗ್ಗು ಪ್ರದೇಶದ ನೀರನ್ನು ಕಾಲುವೆಗಳ ಮೂಲಕ ಕೆರೆಗೆ ಹರಿಸಲಾಗುತ್ತದೆ. ಈ ಕೆರೆಯ ಮುಖ್ಯ ಕಾಲುವೆಗೆ 'ಹರಿದ್ರಾವತಿ' ಎಂದು ಕರೆಯಲಾಗುತ್ತದೆ. ಉತ್ತರದ ನಾಲೆಗೆ 'ಸಿದ್ಧನಾಲೆ', ದಕ್ಷಿಣದ ನಾಲೆಗೆ 'ಬಸವನಾಲೆ' ಎಂದು ಹೆಸರಿಸಲಾಗಿದೆ.[೩೧] ಇವುಗಳ ಮೂಲಕ ೧,೬೯೨.೫ ಹೆಕ್ಟೇರ್ ಅಚ್ಚುಕಟ್ಟು ಪ್ರದೇಶಕ್ಕೆ ನೀರಿನ ಸೌಲಭ್ಯ ಕಲ್ಪಿಸಲಾಗಿದೆ. ಜಗಲೂರು ತಾಲೂಕು ಸಂಗೇನಹಳ್ಳಿಯ ಬಳಿ ಜಿನಗಿಹಳ್ಳ(ಚಿನ್ನಹಗರಿ)ಕ್ಕೆ ಅಣೆಕಟ್ಟು ನಿರ್ಮಾಣ ಮಾಡಲಾಗಿದೆ.[೩೨] ಇದರಿಂದ ತಾಲೂಕಿನ ನೀರಾವರಿ ವ್ಯವಸಾಯಕ್ಕೆ ಹೆಚ್ಚು ಅನುಕೂಲವಾಗಿದೆ. ಕೊಡಗನೂರು, ಬಾಗಳಿ, ಅಣಜಿ, ಭರಮಸಾಗರ, ಬಾತಿ ಮತ್ತು ಹರಪನಹಳ್ಳಿಯ ಕೆರೆಗಳು ಆಯಾ ಪ್ರದೇಶಗಳಿಗೆ ಸೀಮಿತವಾಗಿ ನೀರಾವರಿ ಸೌಲಭ್ಯ ಒದಗಿಸುವ ಜಲಸಂಪನ್ಮೂಲಗಳಾಗಿವೆ. ಇವುಗಳಲ್ಲದೆ ಸುಮಾರು ೨೧೬ ಕೆರೆಗಳು, ೧೦೧೨ ಬಾವಿಗಳಿರುವುದು ತಿಳಿಯುತ್ತದೆ.[೩೩] ಇಷ್ಟೆಲ್ಲಾ ಜಲಸಂಪತ್ತನ್ನು ಹೊಂದಿರುವ ಈ ಪ್ರದೇಶ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಾಸದ ಯೋಗ್ಯ ಸ್ಥಳವಾಗಿತ್ತೆಂದು ತೋರುತ್ತದೆ. ಇದರ ಪರಿಣಾಮವಾಗಿ ಹೆಚ್ಚಿನ ಸಂಖ್ಯೆಯ ಜನವಸತಿ ನೆಲೆಗಳು ಇಲ್ಲಿ ಕಂಡುಬರುತ್ತವೆ.

### ೨.೨.೪. ಅರಣ್ಯ ಹಾಗೂ ಪ್ರಾಣಿ ಸಂಪತ್ತು

ಪ್ರಸ್ತುತ ಅಧ್ಯಯನ ಪ್ರದೇಶದ ಬಹುಭಾಗವು ಅರೆಮಲೆನಾಡು ಆಗಿರುವುದರಿಂದ ಅರಣ್ಯ ಸಂಪತ್ತು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಜಿಲ್ಲೆಯ ಸುಮಾರು ೪೯೧೮ ಹೆಕ್ಟೇರ್ ಪ್ರದೇಶದಲ್ಲಿ ಅರಣ್ಯವು ವ್ಯಾಪಿಸಿಕೊಂಡಿದೆ. ಅರಣ್ಯದಲ್ಲಿ ವಿವಿಧ ಜಾತಿಯ ಗಿಡ, ಮರ, ಪ್ರಾಣಿ, ಪಕ್ಷಿಗಳು ಕಂಡುಬರುತ್ತವೆ. ಚನ್ನಗಿರಿ ಮತ್ತು ಹೊನ್ನಾಳಿ ಭಾಗದ ಅರಣ್ಯದಲ್ಲಿ ಹಲಸು, ಬೀಟೆ, ತೇಗ, ಹೊನ್ನೆ, ನಂದಿ, ಶ್ರೀಗಂಧ, ಸಂಪಿಗೆ, ದಿಂಡಿಗ ಹಾಗೂ ಬಿದಿರು ಮರಗಳು ಬೆಳೆದಿವೆ.[೩೪] ಇನ್ನೂಳಿದ ತಾಲೂಕುಗಳ ಬಹುತೇಕ ಅರಣ್ಯ ಪ್ರದೇಶ ಕುರುಚಲು ಗಿಡಗಂಟಿ ಮತ್ತು ಹುಲ್ಲುಗಾವಲಿನಿಂದ ಕೂಡಿದೆ. ಈ ಕಾಡುಗಳಲ್ಲಿ ಬೇವು, ಹುಣಸೆ, ಕಕ್ಕೆ, ಮತ್ತಿ, ಅಂಟುವಾಳ, ಹೊಂಗೆ, ಸಾಗುವಾನಿ, ಆಲ, ಬೀಟಿ ಮರಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಜಿಲ್ಲೆಯಲ್ಲಿರುವ ಅರಣ್ಯ ಸಂಪತ್ತಿನಿಂದ ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾಪದಾರ್ಥಗಳು ದೊರೆಯುತ್ತವೆ. ಮುಖ್ಯವಾಗಿ ಕಾಗದ, ಗಂಧ ಮತ್ತು ಬೆಂಕಿಕಡ್ಡಿ ಕಾರ್ಖಾನೆಗಳು ಅದರ ಉಪಯೋಗವನ್ನು ಪಡೆದಿವೆ.

ಕಟ್ಟಡ ನಿರ್ಮಾಣಕ್ಕೆ ಬೇಕಾದ ಮರ ಮುಟ್ಟುಗಳು, ಉರುವಲು ಕಟ್ಟಿಗೆ, ಬೊಂಬುಗಳು ಹಾಗೂ ಬೀಡಿ ಎಲೆ, ಎಣ್ಣೆ ಬೀಜ, ಹುಣಸೆ ಹಣ್ಣು, ಸೀಗೆಕಾಯಿ, ಹಾಲುವಾಣ, ಅಂಟುವಾಳದ ಕಾಯಿ, ಗೇರುಬೀಜ ಮುಂತಾದವು ಅರಣ್ಯದ ಇತರೆ ಉತ್ಪನ್ನಗಳಾಗಿವೆ.

ಅರಣ್ಯದಲ್ಲಿ ವಿವಿಧ ಜಾತಿಯ ಪ್ರಾಣಿ, ಪಕ್ಷಿಗಳು ವಾಸಿಸುತ್ತಿವೆ. ಹಂದಿ, ಹುಲಿ, ಚಿರತೆ, ಕರಡಿ, ಕತ್ತೆಕಿರುಬ, ಕಾಡುಮಿಕ, ಜಿಂಕೆ, ತೋಳ, ನರಿ ಮತ್ತು ಮೊಲಗಳು ಕಾಡಲ್ಲಿ ಕಂಡುಬರುವ ಪ್ರಮುಖ ಪ್ರಾಣಿಗಳಾಗಿವೆ. ಜಗಲೂರು ತಾಲೂಕು ಕುರುಚಲು ಅರಣ್ಯದಲ್ಲಿ ವಿಶೇಷವಾಗಿ 'ಕೊಂಡುಕುರಿ'[೩೫] ಪ್ರಾಣಿ ಕಂಡುಬರುತ್ತದೆ. ಗಿಳಿ, ಗೊರವಂಕ, ಕಾಡುಕಾಗೆ, ಮೈನ, ಮರಕುಟಿಗ, ನೀರುಕೋಳಿ, ಕಾಡುಪಾರಿವಾಳ, ಹಸಿರು ಪಾರಿವಾಳ, ಕೋಗಿಲೆ, ಮಿಂಚುಳ್ಳಿ, ಕಾಡುಕೋಳಿ ಹಾಗೂ ಕವುಜಗ ಮುಂತಾದ ಪಕ್ಷಿಗಳನ್ನು ಅರಣ್ಯದಲ್ಲಿ ಕಾಣಬಹುದು.

### ೨.೨.೫. ಕೃಷಿ

ದಾವಣಗೆರೆ ಜಿಲ್ಲೆಯ ಜನರ ಪ್ರಮುಖ ವೃತ್ತಿ ವ್ಯವಸಾಯವಾಗಿದೆ. ಈ ಪ್ರದೇಶದ ಕೃಷಿಯನ್ನು ನೀರಾವರಿ ಮತ್ತು ಒಣ ಬೇಸಾಯದ ಕ್ಷೇತ್ರವೆಂದು ಪರಿಗಣಿಸಲಾಗಿದೆ. ಜಿಲ್ಲೆಯಲ್ಲಿ ಮಳೆಯ ಪ್ರಮಾಣ ಕಡಿಮೆ ಇದ್ದು ವಾರ್ಷಿಕ ಸರಾಸರಿ ೬೪೯.೧೦ ಮಿ.ಮೀ. ಮಳೆ ಬೀಳುತ್ತದೆ. ಈ ಪ್ರದೇಶದಲ್ಲಿ ಮುಖ್ಯ ನದಿಯಾಗಿ ಹರಿಯುವ ತುಂಗಭದ್ರಾ ಜಿಲ್ಲೆಯ ರೈತರ ಜೀವನಾಡಿಯಾಗಿದೆ. ಇದರಿಂದ ಸುಮಾರು ೧೫೭೯೮ ಹೆಕ್ಟೇರ್ ಕೃಷಿ ಭೂಮಿಗೆ ನೀರಿನ ಸೌಲಭ್ಯ ದೊರೆತಿದೆ. ಇದಲ್ಲದೆ ಕಾಲುವೆಗಳ ಮೂಲಕ ೫೮೪೫೮, ಕೆರೆಗಳಿಂದ ೧೫೭೧, ತೆರೆದ ಬಾವಿಗಳಿಂದ ೪೨೯, ಏತ ನೀರಾವರಿ ೧೫೯೦೦, ಕೊಳವೆ ಬಾವಿಗಳಿಂದ ೮೦೭೪೦ ಹಾಗೂ ಇತರೆ ಮೂಲಗಳಿಂದ ೫೫೭ ಹೆಕ್ಟೇರ್ ಭೂಪ್ರದೇಶಕ್ಕೆ ನೀರಾವರಿಯ ಅನುಕೂಲವಿದೆ.[೩೬]

ದಾವಣಗೆರೆ ಜಿಲ್ಲೆಯಲ್ಲಿ ಮೂರು ವಿಧದ ಮಣ್ಣು ಕಂಡುಬರುತ್ತದೆ. ಜಿಲ್ಲೆಯ ಬಹುಭಾಗ ಕಪ್ಪು ಎರೆಮಣ್ಣಿನ ಭೂಮಿ ಇದ್ದರೆ, ನೈರುತ್ಯದಲ್ಲಿ ಕೆಂಪು ಮಣ್ಣಿನಿಂದ ಕೂಡಿದೆ. ಹೊನ್ನಾಳಿ ತಾಲೂಕಿನ ವಿವಿಧ ಭಾಗದಲ್ಲಿ ಜೇಡಿ, ಮರಳು ಮಿಶ್ರಿತ ಜೇಡಿ, ಕೆಂಪು, ಮಧ್ಯಮ ಕಪ್ಪು ಮಣ್ಣಿನ ಭೂಮಿಯಿದೆ. ಚನ್ನಗಿರಿ ತಾಲೂಕು ಸೂಳೆಕೆರೆಯ ವಾಯವ್ಯ ಹಾಗೂ ಉತ್ತರದಲ್ಲಿ ಫಲವತ್ತಾದ ಕಪ್ಪುಮಣ್ಣು ಕಂಡುಬಂದರೆ, ದಕ್ಷಿಣದಲ್ಲಿ ಕಲ್ಲುಮಿಶ್ರಿತ ಕೆಂಪು ಮಣ್ಣಿನ ಭೂಮಿಯಿದೆ. ಉಳಿದ ಭಾಗದಲ್ಲಿ ಕೆಂಪು ಮತ್ತು ಕಪ್ಪು ಮಣ್ಣಿನ ಭೂಮಿಯನ್ನು ಹೊಂದಿದೆ.[೩೭] ಹರಿಹರ ತಾಲೂಕಿನ ಭೂ ಪ್ರದೇಶ ಕಪ್ಪು, ಮರಳು ಮಿಶ್ರಿತ, ಮಸಾರಿ, ಕಲ್ಲುರಗು, ಕೆಂಪು ಮಿಶ್ರಿತ ಕಪ್ಪು ಮಣ್ಣಿನ ಭೂಮಿಯನ್ನು ಹೊಂದಿದೆ.[೩೮] ಜಗಲೂರು ತಾಲೂಕು ಏರು ತಗ್ಗುಗಳಿರುವ ಮೈದಾನ ಪ್ರದೇಶವಾಗಿದೆ. ಈ ತಾಲೂಕಿನ ಕಾಲು ಭಾಗದ ಭೂಮಿ ಕಪ್ಪು ಮಣ್ಣಿನಿಂದ ಕೂಡಿದ್ದರೆ, ಉಳಿದ ಭಾಗವು ಅಷ್ಟೇನೂ ಫಲವತ್ತಲ್ಲದ ಕೆಂಪು ಮರಳಿನ ಭೂಮಿಯಿದೆ.[೩೯]

ಜಿಲ್ಲೆಯ ಬಹು ಭಾಗದ ಭೂಮಿ ಮಳೆ ಹಾಗೂ ನೀರಾವರಿ ಆಶ್ರಿತವಾಗಿದೆ. ಈ ಭೂಮಿಯಲ್ಲಿ ಹಲವು ಮುಖ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ. ಮಳೆಯನ್ನು ಆಶ್ರಯಿಸಿ ಜೋಳ, ಮೆಕ್ಕೆ ಜೋಳ, ಗೋಧಿ, ರಾಗಿ, ಸಜ್ಜೆ, ನವಣೆ, ಸೂರ್ಯಕಾಂತಿ, ದ್ವಿದಳ ಧಾನ್ಯಗಳನ್ನು ಹಾಗೂ ನೀರಾವರಿಯನ್ನು ಆಶ್ರಯಿಸಿ ಭತ್ತ, ಬಾಳೆ, ಗೋಧಿ, ಹತ್ತಿ, ಕಬ್ಬು, ಶೇಂಗಾ, ತೆಂಗು, ಶುಂಠಿ, ಅಡಿಕೆ, ಮಾವು ಮೊದಲಾದ ವಾಣಿಜ್ಯ ಬೆಳೆಗಳ ಕೃಷಿ ಮಾಡಲಾಗುತ್ತಿದೆ.

### ೨.೨.೬. ಖನಿಜ ಸಂಪತ್ತು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಪದರು ಶಿಲೆ ಅಥವಾ ಸ್ಫಟಿಕ ಶಿಲೆ, ವಿವಿಧ ಜಾತಿಯ ಬೆಣಚುಕಲ್ಲು, ಸುಣ್ಣದಕಲ್ಲು ಮತ್ತು ಅದಿರುಯುಕ್ತ ಶಿಲಾಪದರುಗಳು ಹೆಚ್ಚಾಗಿ ಕಂಡುಬರುತ್ತವೆ. ಧಾರವಾಡದ ಶಿಲಾವರ್ಗ ಮತ್ತು ಗ್ರಾನೈಟ್ ಗುಡ್ಡಗಳು ಈ ಪರಿಸರದಲ್ಲಿ ಹಾಸುಹೊಕ್ಕಾಗಿವೆ. ಇಲ್ಲಿಯ ಭೂಗರ್ಭ ಕ್ರಿಸ್ಟೈಲೆನ್ ಶಿಲಾವರ್ಗ ಮತ್ತು ಗ್ರಾನೈಟ್ ಬೆಣಚುಕಲ್ಲಿನಿಂದ ಕೂಡಿದೆ. ಈ ಶಿಲಾಹಂದರ ಭಾರತದ ಅತ್ಯಂತ ಪ್ರಾಚೀನ ಶಿಲಾರಚನೆಗೆ ಸೇರಿದವೆಂದು ಅಭಿಪ್ರಾಯಿಸಲಾಗಿದೆ.[೪೦] ಪ್ರಸ್ತುತ ಜಿಲ್ಲೆಯ ಶಿಲೆಯನ್ನು ಧಾರವಾಡ ಶಿಲಾವರ್ಗ ಮತ್ತು ಜುರಾಸಿಕ್ ಶಿಲಾವರ್ಗವೆಂದು ವಿದ್ವಾಂಸರು ವಿಭಾಗಿಸಿದ್ದಾರೆ.[೪೧] ಧಾರವಾಡ ಶಿಲಾವರ್ಗದಲ್ಲಿ ಕಂಡುಬರುವ ಶಿಲೆಯು ಹೊನ್ನಾಳಿ ತಾಲೂಕಿನಲ್ಲಿ ಹೆಚ್ಚಾಗಿ ದೊರೆಯುತ್ತದೆ. ಅದು ಹೊನ್ನಾಳಿ ಗ್ರಾನೈಟ್ ಎಂದೇ ಹೆಸರುವಾಸಿಯಾಗಿದೆ. ಹಾಗೆಯೇ ಜಿಲ್ಲೆಯ ಕೆಲವು ಭಾಗಗಳಲ್ಲಿ ಕಾಂಗ್ಲಾಮರೇಡ್, ಬೆಣಚುಕಲ್ಲು ಅಥವಾ ಸ್ಫಟಿಕಾಂತರ ಶಿಲೆ(ಕ್ವಾರ್ಟಜೈಡ್), ಡೊಲರೈಡ್ ಡೈಕ್(ಕಪ್ಪುಶಿಲೆ), ವಾಲ್ಕನಿಕ್ ರಾಕ್ಸ್(ಅಗ್ನಿಜನ್ಯ ಶಿಲೆ) ಸುಣ್ಣದಕಲ್ಲು, ಸೋಪ್‌ಸ್ಟೋನ್(ನೀಲಿ ಛಾಯಯ ಹಸಿರು ಬಳಪದ ಕಲ್ಲು) ದೊರೆಯುತ್ತವೆ. ಅಧ್ಯಯನ ಪ್ರದೇಶದ ಬಾಗಳಿ(ಅಡವಿಯಲ್ಲಿ), ನೀಲಗುಂದ, ಹಲವಾಗಲು ಹಾಗೂ ಹೊಸಕೊಪ್ಪದಲ್ಲಿ ದೊರಕುವ ಬಳಪದ ಕಲ್ಲು ಹೆಚ್ಚು ಪ್ರಸಿದ್ಧಿ ಪಡೆದಿದ್ದವೆಂಬ ಅಭಿಪ್ರಾಯಗಳುಂಟು. ಹೊನ್ನಾಳಿ ತಾಲೂಕಿನ ಬಲಮುರಿಯಲ್ಲಿ ಕಂಕರ್ ಎಂಬ ಹೆಸರಿನ ವಿಶೇಷವಾದ ಶಿಲೆ ದೊರೆಯುತ್ತದೆ.[೪೨]

ಚನ್ನಗಿರಿಯ ದಕ್ಷಿಣ(ಶಾಂತಿಸಾಗರದ ಬೆಟ್ಟ ಸಾಲುಗಳಲ್ಲಿ) ಭಾಗದಲ್ಲಿ, ಹೊನ್ನಾಳಿಯ ಕುದುರೆಕೊಂಡ,[೪೩] ಜಗಲೂರು ತಾಲೂಕಿನ ಹೊಸಕೆರೆ[೪೪] ಹಾಗೂ ದಾವಣಗೆರೆಯ ಮಾಯಕೊಂಡ ಮತ್ತು ದೇವರಬೆಳಕೆರೆಯಲ್ಲಿ ಸುಣ್ಣದಕಲ್ಲು ಹೇರಳವಾಗಿ ದೊರೆಯುತ್ತದೆ.[೪೫]

ಈ ಜಿಲ್ಲೆಯ ಹಾಲೇಕಲ್(ದಾವಣಗೆರೆ),[೪೬] ಚಿಗಟೇರಿ, ಕಲ್ಲಹಳ್ಳಿ, ಕೊಂಗನಹೊಸೂರು (ಹರಪನಹಳ್ಳಿ),[೪೭] ಹೊನ್ನಮರಡಿ, ಮಾರೇನಹಳ್ಳಿ(ಜಗಲೂರು)[೪೮] ಹಾಗೂ ಕುದುರೆಕೊಂಡ, ಚಿನ್ನಿಕಟ್ಟೆ, ಫಲವನಹಳ್ಳಿ, ಚಟ್ನಿಹಳ್ಳಿ(ಹೊನ್ನಾಳಿ)ಗಳಲ್ಲಿ ಚಿನ್ನದ ನಿಕ್ಷೇಪಗಳಿರುವುದನ್ನು ಗುರುತಿಸಲಾಗಿದೆ.[೪೯] ಹೊನ್ನಾಳಿ ತಾಲೂಕಿನ ಚಿನ್ನಿಕಟ್ಟೆಯು ಈ ಹಿಂದೆ ಚಿನ್ನ ಮಾರಾಟದ ಕಟ್ಟೆಯಾಗಿತ್ತೆಂದು ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ. ಫಲವನಹಳ್ಳಿ ಮತ್ತು ಚಟ್ನಿಹಳ್ಳಿಗಳಲ್ಲಿ ಈಗಲೂ ಚಿನ್ನದ ನಿಕ್ಷೇಪ ಇರುವುದಾಗಿ ತಿಳಿದುಬರುತ್ತದೆ.[೫೦] ಹಾಗೆಯೇ ಅಣಜಿ,

ಹುಲಿಕಟ್ಟೆ(ದಾವಣಗೆರೆ), ಹೊನ್ನಮರಡಿ, ಹೊಸಕೆರೆ(ಜಗಲೂರು), ಹರಪನಹಳ್ಳಿ ಹತ್ತಿರ, ಚನ್ನಗಿರಿ(ಶಾಂತಿಸಾಗರದ ಬೆಟ್ಟ ಸಾಲು)ಗಳಲ್ಲಿ ಮ್ಯಾಂಗನೀಸ್ ದೊರೆತಿದೆ.[೫೧] ಚನ್ನಗಿರಿ ತಾಲೂಕಿನ ಚಿಲ್ಲನಹಳ್ಳಿ ಮತ್ತು ಉಬ್ರಾಣಿಗಳಲ್ಲಿ ಟೈಟಾನಿಯಂ ದೊರೆಯುವ ಲಕ್ಷಣಗಳಿವೆಯೆಂದು ಭೂಗರ್ಭಶಾಸ್ತ್ರಜ್ಞರು ಅಭಿಪ್ರಾಯಿಸಿದ್ದಾರೆ.[೫೨] ಹರಪನಹಳ್ಳಿ ಹಾಗೂ ದಾವಣಗೆರೆ ತಾಲೂಕಿನ ಕೈದಾಳದಲ್ಲಿ[೫೩] ತಾಮ್ರದ ಅದಿರು ದೊರೆಯುತ್ತದೆ. ಅಲ್ಲದೆ ದಾವಣಗೆರೆ ತಾಲೂಕಿನ ಅಣಜಿ ಮತ್ತು ದೇವರಬೆಳಗೆರೆ,[೫೪] ಗುಮ್ಮನೂರು ಬೆಟ್ಟ ಸಾಲು ಹಾಗೂ ಚನ್ನಗಿರಿ ಜೋಳದಾಳ್ ಅರಣ್ಯ ಪ್ರದೇಶದಲ್ಲಿ ಕಬ್ಬಿಣದ ಅದಿರು ಇರುವುದನ್ನು ಗುರುತಿಸಲಾಗಿದೆ.[೫೫] ಇಂತಹ ಹಲವು ಖನಿಜ ಸಂಪತ್ತಿನಿಂದಾಗಿಯೇ ಪ್ರಸ್ತುತ ಜಿಲ್ಲೆಯಲ್ಲಿ ಬೃಹತ್ ಕೈಗಾರಿಕೆಗಳ ಸ್ಥಾಪನೆ ಮತ್ತು ಅವುಗಳ ಅಭಿವೃದ್ಧಿಗೆ ಕಾರಣವಾಗಿರುವುದನ್ನು ಮನಗಾಣಬಹುದು.

### ೨.೨.೭. ಕೈಗಾರಿಕೆಗಳು

ದಾವಣಗೆರೆ ಹಲವು ದಶಕಗಳ ಹಿಂದೆ ಚಿಕ್ಕ ಗ್ರಾಮವಾಗಿದ್ದು ಇಂದು ರಾಜ್ಯದಲ್ಲಿಯೇ ದೊಡ್ಡ ಕೈಗಾರಿಕೆ ಮತ್ತು ವಾಣಿಜ್ಯ ಕೇಂದ್ರಗಳಲ್ಲೊಂದಾಗಿದೆ. ಜಿಲ್ಲೆಯ ಬಗ್ಗೆ ಅಧ್ಯಯನ ಮಾಡಿರುವ ಆರ್.ಪಿ. ಮಿಶ್ರಾ ಅವರು ಹೀಗೆ ವ್ಯಾಖ್ಯಾನಿಸಿದ್ದಾರೆ. ಔದ್ಯೋಗೀಕರಣ ಹೇಗೆ ಕೃಷಿಯ ಆಧಾರದ ಮೇಲೆ ಮುಂದುವರಿಯಲು ಸಾಧ್ಯವಿದೆ ಮತ್ತು ಹೇಗೆ ಯಶಸ್ವಿಯಾಗಬಹುದು ಹಾಗೂ ಉತ್ಪಾದನಾಕಾರಿಯಾಗಬಹುದು ಎನ್ನುವುದಕ್ಕೆ ದಾವಣಗೆರೆ ಒಳ್ಳೆಯ ಉದಾಹರಣೆಯಾಗಿದೆ.[೫೬] ವಿದ್ವಾಂಸರ ವ್ಯಾಖ್ಯಾನಕ್ಕೆ ಪುಷ್ಟಿ ನೀಡುವಂತೆ ಜಿಲ್ಲೆಯಲ್ಲಿ ಇಂದು ಹಲವು ಕೈಗಾರಿಕೆಗಳು ಬೆಳವಣಿಗೆಯಾಗಿರುವುದನ್ನು ಗುರುತಿಸಬಹುದು. ಮುಖ್ಯವಾಗಿ ಸಾಬೂನು, ಗಂಧ, ಬೆಂಕಿಕಡ್ಡಿ, ಚರ್ಮೋದ್ಯಮ, ಹೆಂಚು ಮತ್ತು ಉಕ್ಕಿನ ಪೀಠೋಪಕರಣಗಳ ಘಟಕ, ಮರ ಕೊಯ್ಯುವುದು, ಮುದ್ರಣಾಲಯ, ಇಂಜಿನಿಯರಿಂಗ್ ಕಾರ್ಖಾನೆಗಳಲ್ಲದೆ ಪ್ರಸಿದ್ಧಿ ಪಡೆದಿರುವ ಹರಿಹರದ ಫಾಲಿಫೈಬರ್ಸ್ ಕಾರ್ಖಾನೆಯು ಒಂದಾಗಿದೆ.[೫೭]

ಪ್ರಸ್ತುತ ಅಧ್ಯಯನ ಪ್ರದೇಶವು ಹತ್ತಿ ಗಿರಣಿಗಳ ನೆಲೆಯಾಗಿ ಕರ್ನಾಟಕದ 'ಮ್ಯಾಂಚೆಸ್ಟರ್' ನಗರವೆಂದೇ ಖ್ಯಾತಿ ಪಡೆದಿದೆ. ಆ ಮೂಲಕ ಬಟ್ಟೆ ಕೈಗಾರಿಕೆಯಲ್ಲಿ ಗಣನೀಯ ಸ್ಥಾನ ಪಡೆದುಕೊಂಡಿದೆ. ದಿ ದಾವಣಗೆರೆ ಕಾಟನ್ ಮಿಲ್ಸ್ ಲಿಮಿಟೆಡ್, ಚಿಗಟೇರಿ ಮಿಲ್ಸ್, ಶ್ರೀ ಸಿದ್ಧೇಶ್ವರ ಮಿಲ್ಸ್ ಪ್ರೈ. ಲಿಮಿಟೆಡ್, ಚಂದ್ರೋದಯ ಮಿಲ್ಸ್ ಪ್ರೈ. ಲಿಮಿಟೆಡ್ ಮೊದಲಾದ ಪ್ರಮುಖ ಹತ್ತಿ ಗಿರಣಿಗಳು ಹಲವು ಕಾರಣಗಳಿಂದ ೯೦ರ ದಶಕದ ನಂತರದಲ್ಲಿ ಕಣ್ಮರೆಯಾಗಿವೆ. ಜಾಗತೀಕರಣ ಮುಂತಾದ ಪ್ರವಾಹದಲ್ಲೂ ಗಣೇಶ ಹತ್ತಿ ಗಿರಿಣಿ ಮತ್ತು ಆಂಜನೇಯ ಹತ್ತಿ ಗಿರಣಿಗಳು ಇಂದಿಗೂ ಮುನ್ನಡೆಯುತ್ತಿವೆ.[೫೮] ಬೃಹತ್ ಕೈಗಾರಿಕೆಗಳಲ್ಲದೇ ಗುಡಿಕೈಗಾರಿಕೆಗಳೂ ಜಿಲ್ಲೆಯಲ್ಲಿವೆ. ಮರಗೆಲಸದ ಕುಶಲ ಕಲೆಗಾರಿಕೆ, ಮಣ್ಣಿನ ವಿಗ್ರಹಗಳ ತಯಾರಿಕೆ, ಶಿಲ್ಪಕಲೆ ಪ್ರಮುಖವಾಗಿವೆ. ಶಿಲ್ಪಕಲಾಕೃತಿಗಳನ್ನು ತಯಾರಿಸುವಲ್ಲಿ ಜಿಲ್ಲೆಯ ಕುಶಲ ಕಲಾಕಾರರು ರಾಜ್ಯಾದ್ಯಂತ ಪ್ರಸಿದ್ಧಿ ಪಡೆದಿದ್ದಾರೆ. ಇಂತಹ ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳ ಅಸ್ತಿತ್ವದಿಂದಾಗಿ ದಾವಣಗೆರೆ ಇಂದು ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಮುಂದುವರೆದಿದೆ.

### ೨.೨. ಪ್ರಾಗಿತಿಹಾಸ

ವಿಶ್ವದ ಹಲವು ಪ್ರಾಣಿ ಪ್ರಬೇಧಗಳಲ್ಲಿ ಮಾನವ ಕೂಡಾ ಒಬ್ಬನಾಗಿದ್ದಾನೆ. ಇತರೆ ಎಲ್ಲಾ ಪ್ರಾಣಿಗಳಿಗಿಂತ ಭಿನ್ನವಾಗಿ ಚಿಂತಿಸಿ ತನ್ನನ್ನು ತಾನೇ ಸಂಪೂರ್ಣವಾಗಿ ತರಬೇತಿಗೊಳಪಡಿಸಿಕೊಂಡ ಏಕೈಕ ಪ್ರಾಣಿ ಮನುಷ್ಯನಾಗಿದ್ದಾನೆ.[೫೯] ಅವನ ಹುಟ್ಟು ಮತ್ತು ಬೆಳವಣಿಗೆಯ ಅಂಶಗಳು ನಮಗೆ ಕುತೂಹಲ ಮೂಡಿಸುತ್ತವೆ. ಹುಟ್ಟಿನಿಂದಲೇ ಜೀವನ ನಿರ್ವಹಣೆಗಾಗಿ ಪ್ರಯೋಗಗಳನ್ನು ನಡೆಸುತ್ತಾ ಹಲವು ಸಂಸ್ಕೃತಿಗಳ ಹುಟ್ಟಿಗೂ ಕಾರಣನಾಗಿದ್ದಾನೆ. ಅವನು ಉಪಯೋಗಿಸಿ ಬಿಟ್ಟುಹೋಗಿರುವ ಭೌತಿಕ ಕುರುಹುಗಳಾದ ಗುಹೆ, ಕಟ್ಟಡ, ವರ್ಣಚಿತ್ರ, ಮಡಕೆ-ಕುಡಿಕೆ, ಆಯುಧೋಪಕರಣಗಳು ಮೊದಲಾದ ಪ್ರಾಚ್ಯಾವಶೇಷಗಳಿಂದ ಅವರ ಸಾಂಸ್ಕೃತಿಕ ಚಿತ್ರಣವನ್ನು ರೂಪಿಸಲು ಸಾಧ್ಯವಾಗುತ್ತದೆ.

ಲಿಖಿತ ರೂಪದ ಆಧಾರಗಳು ದೊರೆಯದ ಕಾಲವನ್ನು ಇಲ್ಲವೇ ಮಾನವನ ಆದಿಮ ಹಂತದಿಂದ ನಾಗರಿಕ ಹಂತಕ್ಕೆ ತಲುಪುವವರೆಗಿನ ಕಾಲವನ್ನು ಪ್ರಾಗಿತಿಹಾಸ ಅಥವಾ ಇತಿಹಾಸ ಪೂರ್ವಕಾಲ ಎಂದು ಕರೆಯಲಾಗಿದೆ. ಪ್ರಾಗಿತಿಹಾಸದ ಬಹು ದೀರ್ಘವಾದ ಕಾಲ ಆದಿ ಶಿಲಾಯುಗವಾಗಿದೆ. ಸುಮಾರು ನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಮಾನವ ಜೀವಿಸಿದ್ದಾನೆಂಬ ಅಭಿಪ್ರಾಯಗಳುಂಟು.[೬೦] ಅಂದಿನಿಂದಲೂ ಮಾನವ ಶಿಲೆಯೊಂದಿಗೆ ನಿಕಟ ಸಂಬಂಧ ಹೊಂದಿದ್ದಾನೆ. ಅಲೆಮಾರಿಯಾಗಿದ್ದ ಅವನಿಗೆ ಗೆಡ್ಡೆ ಗೆಣಸುಗಳನ್ನು ಅಗೆಯಲು, ಪ್ರಾಣಿಗಳನ್ನು ಬೇಟೆಯಾಡಲು ಶಿಲೆ ಹೆಚ್ಚು ನೆರವಾಗಿದೆ. ಲೋಹದ ಬಳಕೆ ಆರಂಭವಾಗುವವರೆಗೆ ಶಿಲೆಯನ್ನೇ ಅವಲಂಬಿಸಿದ್ದ ಮಾನವನ ಈ ಕಾಲವನ್ನು ಶಿಲಾಯುಗವೆಂದು ಕರೆಯಲ್ಪಟ್ಟಿದೆ. ಆಹಾರ ಸಂಗ್ರಹಣೆಯ ಅಲೆಮಾರಿ ಸ್ಥಿತಿಯಿಂದ ಆಹಾರೋತ್ಪಾದನೆಯ ಹಂತಕ್ಕೆ ಬೆಳೆದ ಸಮುದಾಯಗಳು ತಮ್ಮ ಬೆಳವಣಿಗೆ ಹಾಗೂ ಪರಿವರ್ತನೆಯ ಸ್ವರೂಪವನ್ನು ನಾನಾ ವಿಧದಲ್ಲಿ ಅರ್ಥೈಸಿಕೊಟ್ಟಿದೆ.

ಆ ಕಾಲದ ಮಾನವನ ವಿಕಸನದ ಹಂತವನ್ನು ಗುರುತಿಸಿದ ಪುರಾತತ್ವ ವಿದ್ವಾಂಸರು ಹಳೆ ಶಿಲಾಯುಗ, ಸೂಕ್ಷ್ಮ ಅಥವಾ ಮಧ್ಯ ಶಿಲಾಯುಗ, ನೂತನ ಶಿಲಾಯುಗ, ಬೃಹತ್ ಶಿಲಾಯುಗವೆಂದು ವಿಂಗಡಿಸಿದ್ದಾರೆ. ಅಧ್ಯಯನದ ದೃಷ್ಟಿಯಿಂದ ಹಳೆ ಶಿಲಾಯುಗವನ್ನು ಆದಿ ಹಳೆ ಶಿಲಾಯುಗ, ಮಧ್ಯ ಹಳೆಯ ಶಿಲಾಯುಗ ಹಾಗೂ ಅಂತ್ಯ ಹಳೆಯ ಶಿಲಾಯುಗ ಎಂದು ಪುನಃ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಈ ರೀತಿಯ ವಿಭಜನೆಗೆ ಆಯುಧಗಳ ತಯಾರಿಕಾ ವಿಧಾನ, ಅವುಗಳ ಸ್ವರೂಪವೇ ಪ್ರಮುಖ ಮಾನದಂಡಗಳಾಗಿವೆ.

ಭಾರತದಲ್ಲಿ ಪ್ರಾಗಿತಿಹಾಸದ ಅಧ್ಯಯನಗಳನ್ನು ಅವಲೋಕಿಸಿದರೆ ಕ್ಯೂಬೋಲ್ಡ್ ಎಂಬ ಬ್ರಿಟಿಷ್ ಅಧಿಕಾರಿ ೧೮೩೬ರಲ್ಲಿ ಕರ್ನಾಟಕದ ಕುಡತಿನಿ ಮತ್ತು ಕಪ್ಪಗಲ್ ಬೂದಿದಿಬ್ಬದ ನೆಲೆಗಳನ್ನು ಶೋಧಿಸುವುದರ ಮೂಲಕ ಭಾರತದ ಪ್ರಾಗಿತಿಹಾಸದ ಅಧ್ಯಯನವನ್ನು ಆರಂಭಿಸಿದನು. ಅನಂತರ ಹಲವು ವಿದ್ವಾಂಸರು ನಡೆಸಿದ ಕ್ಷೇತ್ರಾನ್ವೇಷಣೆ ಮತ್ತು ಉತ್ಖನನದಿಂದ ಕರ್ನಾಟಕದಲ್ಲಿ

ಬಹುಸಂಖ್ಯೆಯ ಪ್ರಾಗಿತಿಹಾಸದ ಮಾನವನ ನೆಲೆಗಳು ಬೆಳಕಿಗೆ ಬಂದಿವೆ. ದಾವಣಗೆರೆ ಜಿಲ್ಲೆಯಲ್ಲೂ ಪ್ರಾಗಿತಿಹಾಸದ ಅಧ್ಯಯನಗಳು ನಡೆದಿವೆ. ೧೮೮೧ರಲ್ಲಿ ಸಿಂಗಲ್‌ಬೆಡ್ ಎಂಬುವವನು ನ್ಯಾಮತಿಯಲ್ಲಿ ಆದಿ ಹಳೆಶಿಲಾಯುಗಕ್ಕೆ ಸೇರಿದ ಎರಡು ಶಿಲಾಯುಧಗಳನ್ನು ಶೋಧಿಸಿದನು. ಪ್ರಾಗಿತಿಹಾಸದ ಪಿತಾಮಹ ರಾಬರ್ಟ್ ಬ್ರೂಸ್‌ಫೂಟ್ ಅವರು ೧೯೧೬ರಲ್ಲಿ ಈ ಪರಿಸರದಲ್ಲಿ ನಡೆಸಿದ ಸರ್ವೇಕ್ಷಣೆಯಿಂದ ನ್ಯಾಮತಿ ಮತ್ತು ಕೊಮಾರನಹಳ್ಳಿ ನೆಲೆಗಳು ಶೋಧಗೊಂಡವು. ಈ ನೆಲೆಗಳ ವಿವರಗಳನ್ನು Indian Preheistoric and Protohistoric Antiquities of Madras ಎಂಬ ಕೃತಿಯಲ್ಲಿ ಪ್ರಕಟಿಸಿದ್ದಾರೆ. ಶ್ರೀಯುತ ಬಿ. ಸುಬ್ಬರಾವ್ ಅವರ ಅಧ್ಯಯನದಿಂದ ೧೯೪೯ರಲ್ಲಿ ತೆಲಗಿ ಬೃಹತ್ ಶಿಲಾಯುಗದ ನೆಲೆ ಬೆಳಕಿಗೆ ಬಂದಿದೆ. ವಿದ್ವಾಂಸರಾದ ಅ. ಸುಂದರ ೧೯೭೫ರಲ್ಲಿ ನೀಲಗುಂದ ಬೃಹತ್ ಶಿಲಾಯುಗದ ನೆಲೆಯನ್ನು ಕಂಡುಹಿಡಿದಿದ್ದಾರೆ. ಈ ನೆಲೆಯ ವಿವರಗಳನ್ನು 'Early Chamber Tombs of South India' ಎಂಬ ತಮ್ಮ ಕೃತಿಯಲ್ಲಿ ನೀಡಿದ್ದಾರೆ. ೧೯೧೬ರಲ್ಲಿ ರಾಬರ್ಟ್ ಬ್ರೂಸ್‌ಫೂಟ್ ಪತ್ತೆ ಹಚ್ಚಿದ ಕೊಮಾರನಹಳ್ಳಿ ನೆಲೆಯನ್ನು ಎಂ.ಎಸ್. ನಾಗರಾಜರಾವ್ ೧೯೭೮ರಲ್ಲಿ ಉತ್ಖನನ ಮಾಡಿ ಅದರ ವರದಿಗಳನ್ನು Archaeology of Karnataka (Sundara A (Edt) 1990) ಕೃತಿಯಲ್ಲಿ ಪ್ರಕಟಿಸಿದ್ದಾರೆ. ಕೆ.ಪಿ. ಪೂಣಚ್ಚ ಅವರು ೧೯೯೦ರಲ್ಲಿ ಕೈಗೊಂಡ ಸರ್ವೇಕ್ಷಣೆಯಿಂದ ಶೋಧಗೊಂಡ ಈ ಭಾಗದ ಹಲವು ನೆಲೆಗಳನ್ನು 'Archaeology of Malnad region' ಎಂಬ ಮಹಾಪ್ರಬಂಧದಲ್ಲಿ ಉಲ್ಲೇಖಿಸಿರುವರು. ಎಸ್.ವೈ. ಸೋಮಶೇಖರ್ ಅವರು ೧೯೯೭ರಲ್ಲಿ ಆಕನೂರು ಬೃಹತ್ ಶಿಲಾಯುಗದ ನೆಲೆಯನ್ನು ಪತ್ತೆ ಹಚ್ಚಿ ಇತಿಹಾಸ ದರ್ಶನ ಸಂ-೧೨ರಲ್ಲಿ ಪ್ರಕಟಿಸಿದ್ದಾರೆ. ೧೯೯೮ರಲ್ಲಿ ವಾಸುದೇವ ಬಡಿಗೇರ ಅವರು ಶೋಧಿಸಿದ ಮಾಡಲಗೇರಿ ಸೂಕ್ಷ್ಮ ಶಿಲಾಯುಗದ ವಿವರಗಳು ಇತಿಹಾಸ ದರ್ಶನ ಸಂ-೧೩ರಲ್ಲಿ ಪ್ರಕಟಗೊಂಡಿವೆ. ಜಯದೇವಪ್ಪ ಜೈನಕೇರಿ ಅವರು ಹೊಳಲೂರು ತಾಮ್ರ ಶಿಲಾಯುಗದ ನೆಲೆಯನ್ನು ಗುರುತಿಸಿ ಇತಿಹಾಸ ದರ್ಶನ ಸಂ-೧೪(೧೯೯೯)ರಲ್ಲಿ ಪ್ರಕಟಿಸಿದ್ದಾರೆ. ಕೆ.ಬಿ. ಶಿವತಾರಕ್ ಪತ್ತೆಹಚ್ಚಿದ ಕೊಂಡಜ್ಜಿ ಸೂಕ್ಷ್ಮ ಶಿಲಾಯುಗದ ವಿವರಗಳು ೨೦೦೧ರ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ವರದಿಯಾಗಿವೆ. ಎಂ. ಕೊಟ್ರೇಶ್ ಅವರು ನೂತನ ಶಿಲಾಯುಗಕ್ಕೆ ಸೇರಿದ ಗಡಿಗುಡಾಳ್ ನೆಲೆಯನ್ನು ಗುರುತಿಸಿ ಇತಿಹಾಸ ದರ್ಶನ ಸಂ-೨೧ (೨೦೦೬)ರಲ್ಲಿ ಪ್ರಕಟಿಸಿರುವರು. ಹೆಚ್. ರಮೇಶ್ ಅವರ ಅಧ್ಯಯನದಿಂದ ತಮ್ಮಿನಕಟ್ಟೆ, ಹಿರೇಹಾಲಿವಣ, ಸಾರಥಿ ನೆಲೆಗಳು ಬೆಳಕಿಗೆ ಬಂದಿವೆ. ಹಲವು ವಿದ್ವಾಂಸರುಗಳ ಅಧ್ಯಯನದ ಫಲವಾಗಿ ಜಿಲ್ಲೆಯಲ್ಲಿ ಸುಮಾರು ೧೦೨ಕ್ಕೂ ಹೆಚ್ಚು ನೆಲೆಗಳು ಶೋಧಗೊಂಡಿವೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ನೂತನವಾಗಿ ಏಳು ಪ್ರಾಗಿತಿಹಾಸದ ನೆಲೆಗಳನ್ನು ಗುರುತಿಸಲಾಗಿದೆ. ಪ್ರಾಗಿತಿಹಾಸದ ಕುರಿತು ಪ್ರತ್ಯೇಕ ಅಧ್ಯಯನಗಳು ಜಿಲ್ಲೆಯಲ್ಲಿ ನಡೆದರೆ ಇನ್ನೂ ಹೆಚ್ಚಿನ ಪ್ರಮಾಣದ ನೆಲೆಗಳು ಕಂಡುಬರುವ ಸಾಧ್ಯತೆಯಿದೆ.

### ೨.೨.೧. ಆದಿ ಹಳೆಶಿಲಾಯುಗ

ಭಾರತದಲ್ಲಿ ಆದಿ ಹಳೆಶಿಲಾಯುಗ ಸಂಸ್ಕೃತಿಯ ಅವಶೇಷಗಳು ಮೊದಲ ಬಾರಿಗೆ ಕಂಡುಬಂದಿದ್ದು ೧೮೬೩ರಲ್ಲಿ. ರಾಬರ್ಟ್ ಬ್ರೂಸ್‌ಫೂಟ್ ಅವರು ತಮಿಳುನಾಡಿನ 'ಪಲ್ಲವರಂ'ನಲ್ಲಿ ಕೈಕೊಡಲಿಯನ್ನು ಪತ್ತೆ ಹಚ್ಚುವ ಮೂಲಕ ಈ ಸಂಸ್ಕೃತಿಯ ಅಧ್ಯಯನಕ್ಕೆ ನಾಂದಿ ಹಾಡಿದ್ದಾರೆ.[೪೧] ಹಾಗಾಗಿ ಅವರನ್ನು 'ಪ್ರಾಗಿತಿಹಾಸದ ಪಿತಾಮಹ' ಎಂದು ಕರೆಯಲಾಗಿದೆ. ಕರ್ನಾಟಕ ಪ್ರಾಗಿತಿಹಾಸದ ಅಧ್ಯಯನಕ್ಕೂ ಇವರೇ ಮೊದಲ ನೇತಾರರಾಗಿದ್ದಾರೆ. ಆ ನಂತರ ಕಾಲದಲ್ಲಿ ಭಾರತ ಮತ್ತು ಕರ್ನಾಟಕದಲ್ಲಿ ಹಲವು ವಿದ್ವಾಂಸರು ಈ ಸಂಸ್ಕೃತಿಯ ಕುರಿತು ನಡೆಸಿದ ಸಂಶೋಧನೆ ಹಾಗೂ ಉತ್ಖನನಗಳ ಫಲವಾಗಿ ಭಾರತದಲ್ಲಿ ಬಹುಸಂಖ್ಯೆಯ ಪ್ರಾಗೈತಿಹಾಸಿಕ ನೆಲೆಗಳು ಬೆಳಕಿಗೆ ಬಂದಿವೆ.

ಈ ಕಾಲದ ಮಾನವ ಅಲೆಮಾರಿ ಜೀವನವನ್ನು ನಡೆಸುತ್ತಿದ್ದನು. ಗುಡ್ಡಗಾಡುಗಳಲ್ಲಿ ಅಲೆದು ಮಾಂಸವನ್ನು ತುಂಡರಿಸುವುದು, ಗಿಡಗಳನ್ನು ಕಡಿಯುವುದು ತನ್ನ ವೃತ್ತಿಯನ್ನಾಗಿ ಮಾಡಿಕೊಂಡಿದ್ದನು.[೪೨] ಗುಹೆಗಳಲ್ಲಿ ವಾಸವಿದ್ದು ಹಸಿ ಮಾಂಸವನ್ನು ಆಹಾರಕ್ಕಾಗಿ ಬಳಸುತ್ತಿದ್ದನು. ಬಿಸಿಲು-ಮಳೆಯಿಂದ ದೇಹದ ರಕ್ಷಣೆಗಾಗಿ ಮರದ ತೊಗಟೆ ಮತ್ತು ಪ್ರಾಣಿಗಳ ಚರ್ಮವನ್ನು ಉಪಯೋಗಿಸುತ್ತಿದ್ದ. ಈ ಕಾರ್ಯಕ್ಕಾಗಿ ಅವನು ಕೈಗೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ಕೊರಗತ್ತಿ, ದುಂಡು ಚಪ್ಪಟೆ ಆಯುಧ[೪೩] ಇತ್ಯಾದಿ ಉಪಕರಣಗಳನ್ನು ತಯಾರಿಸಿ ಉಪಯೋಗಿಸುತ್ತಿದ್ದನು.

ಪ್ರಸ್ತುತ ಜಿಲ್ಲೆಯಲ್ಲಿ ಆದಿ ಹಳೆಶಿಲಾಯುಗಕ್ಕೆ ಸಂಬಂಧಿಸಿದ ನೆಲೆಗಳನ್ನು ವಿದ್ವಾಂಸರು ಅಧ್ಯಯನಗಳ ಮೂಲಕ ಗುರುತಿಸಿದ್ದಾರೆ. ಹೊನ್ನಾಳಿ ತಾಲೂಕಿನ ನ್ಯಾಮತಿ ನೆಲೆಯು ೧೮೮೧ರಲ್ಲಿ ಸಿಂಗಲ್‌ಬೆಡ್ ಎಂಬುವವರಿಂದ ಶೋಧಿಸಲ್ಪಟ್ಟಿತ್ತು.[೪೪] ಈ ನೆಲೆಯಲ್ಲಿ ಕೈಕೊಡಲಿ, ಹೆರೆಚಕ್ಕೆ ಆಯುಧಗಳು ಕಂಡುಬಂದಿವೆ. ಈ ಜಿಲ್ಲೆಯ ಗೋವಿನಕೋವಿ[೪೫] ನೆಲೆಯಲ್ಲಿ ಕೈಕೊಡಲಿ, ಚಿತ್ರಾಕಾರ ಹಾಗೂ ಹೆರೆಗತ್ತಿ ಉಪಕರಣಗಳು ದೊರೆತಿವೆ. ಚಿಕ್ಕಬಸೂರು[೪೬] ನೆಲೆಯಲ್ಲಿ ಉಂಡೆಕಲ್ಲಿನಲ್ಲಿ ರೂಪಿಸಿದ ಉಪಕರಣಗಳು ಮಧ್ಯಮ ಗಾತ್ರದಲ್ಲಿವೆ. ಲಿಂಗದಹಳ್ಳಿಯಲ್ಲಿ[೪೭] ಕ್ವಾರ್ಟ್ಸ್‌ಟ್ ಶಿಲೆಯಲ್ಲಿ ಮಾಡಿರುವ ಕೈಗೊಡಲಿ ಮತ್ತು ಮಚ್ಚುಗತ್ತಿ ಆಯುಧಗಳು ದೊರೆತಿವೆ. ಹಾಡೋನಹಳ್ಳಿ ನೆಲೆಯಲ್ಲಿ ಕೈಗೊಡಲಿ ಕಂಡುಬಂದಿದೆ. ಅಶ್ಯೂಲಿಯನ್ ಮಾದರಿಯ ಕೈಗೊಡಲಿ ಜಗಲೂರು ತಾಲೂಕಿನ ಸಂಗೇನಹಳ್ಳಿಯಲ್ಲಿ ಶೋಧಗೊಂಡಿದೆ.[೪೮]

### ೨.೨.೨. ಮಧ್ಯ ಹಳೆಶಿಲಾಯುಗ

ಮಧ್ಯ ಹಳೆಶಿಲಾಯುಗವು ಆದಿ ಮತ್ತು ಅಂತಿಮ ಹಳೆ ಶಿಲಾಯುಗ ಸಂಸ್ಕೃತಿಗಳ ನಡುವಿನ ಕಾಲದ್ದಾಗಿದೆ. ಶ್ರೀಯುತ ಹೆಚ್.ಡಿ. ಸಂಕಾಲಿಯಾ ಅವರು ೧೯೫೪ರಲ್ಲಿ ಮಹಾರಾಷ್ಟ್ರದ ಅಹಮದ್ ನಗರ ಜಿಲ್ಲೆಯ ಗೋದಾವರಿಯ ಉಪನದಿಯಾದ ಪ್ರವರಾ ನದಿ ದಂಡೆಯ ಮೇಲಿನ ನೇವಾಸದಲ್ಲಿ ಈ ಸಂಸ್ಕೃತಿಯ ಅವಶೇಷಗಳನ್ನು ಮೊದಲ ಬಾರಿಗೆ ಪತ್ತೆಹಚ್ಚಿದರು.[೪೯]

ಕರ್ನಾಟಕದಲ್ಲೂ ಈ ಸಂಸ್ಕೃತಿ ಕುರುಹುಗಳಿರುವ ನೆಲೆಗಳನ್ನು ಗುರುತಿಸಲಾಗಿದೆ. ೧೯೫೭ರಲ್ಲಿ ವಿದ್ವಾಂಸರಾದ ಆರ್.ಡಿ. ಬ್ಯಾನರ್ಜಿಯವರು ಘಟಪ್ರಭಾ, ಮಲಪ್ರಭಾ ಹಾಗೂ ಕೃಷ್ಣಾ ನದಿಗಳ ಕೆಲವು ಭಾಗಗಳಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಆಯುಧಗಳನ್ನು ಗುರುತಿಸಿದ್ದಾರೆ.[೨೦]

ಮಧ್ಯ ಹಳೆ ಶಿಲಾಯುಗದ ಜನರು ಗುಂಪುಗೂಡಿ ಪ್ರಾಣಿಗಳನ್ನು ಬೇಟೆಯಾಡುವಂತಹ ವಿಧಾನವನ್ನು ಬಿಟ್ಟು ಬಿಲ್ಲು-ಬಾಣಗಳ ಮೂಲಕ ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡುವ ಕಲೆಯನ್ನು ಮೈಗೂಡಿಸಿಕೊಂಡರು. ಹೊಲಿಗೆ ಮಾಡುವ ಕೌಶಲ್ಯವನ್ನು ಕಂಡುಕೊಂಡಿದ್ದು ಈ ಕಾಲದ ಪ್ರಗತಿಯ ಸಂಕೇತವಾಗಿದೆ. ಇದರಿಂದ ಪ್ರಾಣಿಗಳ ಚರ್ಮವನ್ನು ತನಗೆ ಬೇಕಾದ ರೀತಿಯಲ್ಲಿ ಕತ್ತರಿಸಿ, ಹೊಲಿದುಕೊಳ್ಳಲು ಅನುಕೂಲವಾಯಿತು. ಆಯುಧಗಳ ತಯಾರಿಕೆಗೆ ಈ ಯುಗದಲ್ಲಿ ಹಿಂದಿನ ತಂತ್ರವನ್ನು ಅನುಸರಿಸಿದರೂ ಹೊಸ ತಂತ್ರವನ್ನು ರೂಪಿಸಿಕೊಂಡರು.[೨೧] ಹಿಂದಿನ ಕಾಲದ ಕೈಗೊಡಲಿ, ಮಚ್ಚುಗತ್ತಿ, ಚಕ್ರಾಕಾರದ ಉಪಕರಣಗಳು ಈ ಅವಧಿಯಲ್ಲಿ ಮುಂದುವರಿದಿರುವುದು ಕಂಡುಬರುತ್ತದೆ. ಜೊತೆಗೆ ಮೊನಚು, ರಂಧ್ರಕೊರಗಳು, ಚೂರಿ ಚಕ್ಕೆಗಳು, ಬೈರಿಗೆಗಳನ್ನು ಹೊಸದಾಗಿ ತಯಾರಿಸಿಕೊಂಡನು.[೨೨] ಈ ಸಂಸ್ಕೃತಿಯ ಕೆಲವೇ ನೆಲೆಗಳು ಜಿಲ್ಲೆಯಲ್ಲಿ ಕಂಡುಬಂದಿವೆ. ಗೋವಿನಕೋವಿ[೨೩] ನೆಲೆಯಲ್ಲಿ ಕೈಗೊಡಲಿ ಮತ್ತು ಹೆರೆಚಕ್ಕೆ ಉಪಕರಣಗಳು ಶೋಧಗೊಂಡಿವೆ. ಚಿಕ್ಕಬಸೂರಿನಲ್ಲಿ[೨೪] ಹೆರೆಚಕ್ಕೆ, ಮೊನೆಗಳು ಕಂಡುಬಂದಿವೆ. ತಕ್ಕನಹಳ್ಳಿಯಲ್ಲಿ ನೀಳಚಕ್ಕೆ, ಕೊರೆಯುಳಿ, ಮೊನೆಗಳು ದೊರೆತಿವೆ. ಈ ನೆಲೆಗಳಲ್ಲಿ ಕಂಡುಬಂದಿರುವ ಆಯುಧಗಳನ್ನು ಚರ್ಟ ಹಾಗೂ ಕ್ವಾರ್ಟ್ಜ್ ಶಿಲೆಯಲ್ಲಿ ರೂಪಿಸಲಾಗಿದೆ.

### ೨.೨.೩. ಅಂತ್ಯ ಹಳೆಶಿಲಾಯುಗ

ವಿಸ್ತಾರವಾದ ಕಾಲಖಂಡವನ್ನು ವ್ಯಾಪಿಸಿಕೊಂಡಿದ್ದ ಹಳೆಶಿಲಾಯುಗದ ಸಂಸ್ಕೃತಿಯ ಕೊನೆಯ ಹಂತವೇ ಅಂತಿಮ ಹಳೆಶಿಲಾಯುಗ. ಇದು ಮಧ್ಯ ಹಳೆಶಿಲಾಯುಗದ ಸ್ಥಿತ್ಯಂತರ ಹಾಗೂ ಸೂಕ್ಷ್ಮ ಶಿಲಾಯುಗದ ನಡುವಿನ ಹಂತವಾಗಿದೆ. ಅಂತ್ಯ ಹಳೆಶಿಲಾಯುಗದ ನೆಲೆಗಳು ಭಾರತದಲ್ಲಿ ಕೆಲವು ಮಾತ್ರ ಕಂಡುಬಂದಿವೆ ಎಂಬುದು ವಿದ್ವಾಂಸರುಗಳ ಅಭಿಪ್ರಾಯವಾಗಿದೆ. ಭಾರತೀಯ ಹಳೆ ಶಿಲಾಯುಗ ಸಂಸ್ಕೃತಿಯ ಹಂತಗಳ ಅನುಕ್ರಮದಲ್ಲಿ ಈ ಸಾಂಸ್ಕೃತಿಕ ಹಂತವೂ ಇತ್ತೆಂಬ ಸಂಗತಿಯು ಗೊತ್ತಾದುದೇ ಇತ್ತೀಚಿನ ಅಧ್ಯಯನಗಳಿಂದ. ಕರ್ನಾಟಕದಲ್ಲಿ ಮೊಟ್ಟಮೊದಲಿಗೆ ೧೯೬೯ರಲ್ಲಿ ಸಾಲ್ವಡಿ(ವಿಜಯಪುರ ಜಿಲ್ಲೆ)ಯಲ್ಲಿ ನೀಳಚಕ್ಕೆಗಳ ಉಪಕರಣಗಳ ಉತ್ಪಾದನಾ ನೆಲೆಯನ್ನು ವಿದ್ವಾಂಸರಾದ ಅ. ಸುಂದರ ಅವರು ಗುರುತಿಸಿದರು.[೨೫] ಎಂ. ಶೇಷಾದ್ರಿಯವರು ಈ ನೆಲೆಯಲ್ಲಿ ದೊರೆತ ಆಯುಧಗಳನ್ನು ಅಧ್ಯಯನ ನಡೆಸುವಾಗ ಮಧ್ಯ ಹಳೆಶಿಲಾಯುಗದ ಹೆರೆಯುವ ಚಕ್ಕೆ ಹಾಗೂ ಅಂತ್ಯ ಶಿಲಾಯುಗದ ತೆಳು ನೀಳಚಕ್ಕೆಗಳನ್ನು ಗುರುತಿಸಿ ಇಲ್ಲಿ ಎರಡು ಭಿನ್ನವಾದ ಔದ್ಯಮಿಕ ಸಂಪ್ರದಾಯಗಳು ಇದ್ದವು ಎಂದು ತರ್ಕಿಸಿದ್ದಾರೆ.

ಈ ಸಂಸ್ಕೃತಿಯ ಮಾನವ ಮೀನು ಮತ್ತು ಇತರೆ ಜಲಚರ ಪ್ರಾಣಿಗಳ ಬೇಟೆಯಾಡುವುದನ್ನು ಪ್ರಾರಂಭಿಸಿದ. ಈ ಆರಂಭವೇ ಮುಂದೆ ಆಹಾರ ಪದಾರ್ಥಗಳನ್ನು ಒಂದೆಡೆ ಸಂಗ್ರಹಿಸಿಕೊಳ್ಳುವಂತೆ ಮಾಡಿತು. ಇದರೊಂದಿಗೆ ಸ್ಥಿರ ಜೀವನ ನಡೆಸುವ ಉಪಾಯ ಕಂಡುಕೊಂಡನು. ಹೀಗೆ ಒಂದೆಡೆ ನೆಲೆ ನಿಂತ ಈ ಕಾಲದ ಮಾನವನಿಗೆ ಹಲವು ಪ್ರಾಣಿಗಳ ಪರಿಚಯವಾಯಿತು. ನಾಯಿ ಈ ಸಂಸ್ಕೃತಿ ಮಾನವನಿಗೆ ಮೊದಲ ಪರಿಚಯದ ಪ್ರಾಣಿಯಾಗಿದೆ. ನಂತರ ಕುರಿ, ಮೇಕೆ, ಎಮ್ಮೆ ಮೊದಲಾದ ಪ್ರಾಣಿಗಳನ್ನು ಸಾಕಿದನು. ಇವುಗಳಿಂದ ಹಾಲು ಇತರೆ ಆಹಾರದ ಉತ್ಪನ್ನಗಳನ್ನು ಪಡೆಯುವ ಉದ್ದೇಶದಿಂದ ಪಶುಪಾಲನೆಯಂತಹ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಮುಂದಾದನು.[೭೭] ನೀಳ ಅಲಗು ಮತ್ತು ಓರೆ ಮೊನೆಗಳು ಈ ಸಂಸ್ಕೃತಿಯ ವಿಶಿಷ್ಟ ಉಪಕರಣಗಳಾಗಿವೆ.[೭೮] ಈ ಹಂತದ ಏಕೈಕ ನೆಲೆ ಅಧ್ಯಯನ ಪ್ರದೇಶದ ತಕ್ಕನಹಳ್ಳಿಯಲ್ಲಿ[೭೯] ಶೋಧಗೊಂಡಿವೆ. ಪ್ರಸ್ತುತ ನೆಲೆಯಲ್ಲಿ ನೀಳಚಕ್ಕೆ, ಕೆರೆಯುಳಿ, ಮೊನೆ ಉಪಕರಣಗಳು ದೊರೆತಿವೆ. ಅವುಗಳನ್ನು ಚರ್ಟ್, ಕ್ವಾರ್ಟ್ಸ್ ಮತ್ತು ಕ್ವಾರ್ಟ್ಸ್‌ಟ್ ಶಿಲೆಯಲ್ಲಿ ತಯಾರಿಸಲಾಗಿದೆ.

### ೨.೨.೪. ಸೂಕ್ಷ್ಮ ಶಿಲಾಯುಗ

ಸೂಕ್ಷ್ಮ ಶಿಲಾಯುಗವು ಅಂತ್ಯ ಹಳೆ ಶಿಲಾಯುಗ ಹಾಗೂ ನೂತನ ಶಿಲಾಯುಗಗಳ ನಡುವಿನ ಹಂತವಾಗಿದೆ. ಈ ಯುಗದ ಮಾನವನು ತನ್ನ ಜೀವನ ನಿರ್ವಹಣೆಗಾಗಿ ಹರಿತವುಳ್ಳ ಅತಿ ಸಣ್ಣ ನೀಳ ಅಲಗುಗಳನ್ನು ಬಳಸಿದನು. ಅವುಗಳು ಸೂಕ್ಷ್ಮವಾದವುಗಳಾಗಿರುವುದರಿಂದ ಈ ಸಂಸ್ಕೃತಿಯನ್ನು ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಸೂಕ್ಷ್ಮ ಶಿಲಾಯುಗವು ಇಂದಿಗೆ ಸುಮಾರು ೨೫೦೦ ವರ್ಷಗಳಿಂದ ೧೦೦೦೦ ವರ್ಷಗಳಷ್ಟು ಪೂರ್ವದಲ್ಲಿತ್ತೆಂದು ತಿಳಿದುಬಂದಿದೆ.[೮೦] ಮೇಲಿನ ಅಂಶವನ್ನು ಗಮನಿಸಿದರೆ ಈ ಸಂಸ್ಕೃತಿಯು ಪ್ಲೀಸ್ಟೋಸೀನ್ ಯುಗದ ಕೊನೆಯಲ್ಲಿ ಆರಂಭವಾಗಿ ಆದಿ ಮತ್ತು ಮಧ್ಯ ಹೋಲೋಸೀನ್ ಅವಧಿಯವರೆಗೂ ಮುಂದುವರಿದಿರುವುದು ವೈಜ್ಞಾನಿಕ ಅಂಶಗಳಿಂದ ತಿಳಿದುಬಂದಿದೆ.[೮೧]

ಭಾರತದಲ್ಲಿ ಎ.ಸಿ.ಎಲ್. ಕಾರ್ಲೈಲ್ ಎಂಬುವರು ೧೮೬೭ರ ಸಮಯದಲ್ಲಿ ಉತ್ತರ ಪ್ರದೇಶ ಹಾಗೂ ಮಧ್ಯಪ್ರದೇಶಗಳಲ್ಲಿ ಹರಡಿಕೊಂಡಿರುವ ಕೈಮಾರ ಬೆಟ್ಟಸಾಲುಗಳ ಗುಹೆಗಳಲ್ಲಿ ಮೊದಲ ಬಾರಿಗೆ ಸೂಕ್ಷ್ಮ ಶಿಲಾಯುಧಗಳನ್ನು ಶೋಧಿಸಿದರು.[೮೨] ಕರ್ನಾಟಕದಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆಗಳು ೧೯೩೯ರ ವೇಳೆಗೆ ಶೋಧಗೊಂಡಿದ್ದರೂ ಈ ಸಂಸ್ಕೃತಿಯ ಆಯುಧಗಳ ವೈಜ್ಞಾನಿಕ ಅಧ್ಯಯನವು ೧೯೫೬ರ ನಂತರವೇ ಆರಂಭಗೊಂಡಿದೆ. ವಿದ್ವಾಂಸರಾದ ಹೆಚ್.ಡಿ. ಸಂಕಾಲಿಯಾ ಅವರು ಬಳ್ಳಾರಿ ಜಿಲ್ಲೆಯ ಸಂಗನಕಲ್ಲಿನಲ್ಲಿ ನಡೆಸಿದ ಉತ್ಖನನದ ಮೂಲಕ ಈ ಸಂಸ್ಕೃತಿ ಇರುವಿಕೆಯನ್ನು ದೃಢಪಡಿಸಲಾಯಿತು.[೮೩]

ಮಾನವನ ಸಾಂಸ್ಕೃತಿಕ ಮುನ್ನಡೆಯಲ್ಲಿ ಸೂಕ್ಷ್ಮ ಶಿಲಾಯುಗದ ಪಾತ್ರ ಬಹಳ ಗಮನಾರ್ಹವಾಗಿದೆ. ಹಿಂದಿನ ಕಾಲಘಟ್ಟದಲ್ಲಿದ್ದ ಬೇಟೆಯಾಡುವ, ಮೀನು ಹಿಡಿಯುವ,

ಆಹಾರ ಸಂಗ್ರಹಿಸುವ ಜೀವನಪದ್ಧತಿ ಈ ಯುಗದಲ್ಲೂ ಮುಂದುವರಿದಿರುವುದು ಕಂಡುಬರುತ್ತಿದೆ. ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಒಂದು ಮುಖ್ಯ ಬೆಳವಣಿಗೆಯೆಂದರೆ ವ್ಯವಸಾಯ ಮಾಡುವುದನ್ನು ಕಂಡುಕೊಂಡಿದ್ದು. ಇದು ಮುಂದೆ ನವಶಿಲಾಯುಗದಲ್ಲಿ ಅಭಿವೃದ್ಧಿಗೊಂಡಿರುವುದು ತಿಳಿಯುತ್ತದೆ. ಬೇಟೆ, ಮೀನುಗಾರಿಕೆ, ಆಹಾರ ಸಂಗ್ರಹಣೆ, ಆಹಾರೋತ್ಪಾದನೆಯ ಹಂತವಾಗಿ ಬೆಳೆದಿದ್ದು ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಒಂದು ವೈಶಿಷ್ಟ್ಯವಾಗಿದೆ. ಆದ್ದರಿಂದ ಇದನ್ನು ಸ್ಥಿತ್ಯಂತರ ಶಿಲಾಯುಗ ಹಂತವೆಂದು ವರ್ಣಿಸಲಾಗಿದೆ.[೮೪] ನಾಗರಿಕನಾಗುವ ಹಾದಿಯತ್ತ ದಾಪುಗಾಲಿಡುವ ಮೊದಲ ಹಂತವಾಗಿದ್ದರೂ ಅಂತಹ ಮಹತ್ವಪೂರ್ಣ ಬದಲಾವಣೆಗಳೇನು ಘಟಿಸಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಕುಡುಗೋಲಿನಂತಹ ಉಪಕರಣಗಳನ್ನು ಕಂಡುಕೊಂಡರೂ ಕಾಡನ್ನು ಕಡಿದು ನೆಲವನ್ನು ಹಸನು ಮಾಡಿ ಬೀಜ ಬಿತ್ತಿ ಆಹಾರ ಬೆಳೆಗಳನ್ನು ಬೆಳೆದುಕೊಳ್ಳುವಂಥ ಜ್ಞಾನ ಪಡೆಯಲಿಲ್ಲವೆಂದು ತೋರುತ್ತದೆ. ಆದರೂ ಸತ್ತವರನ್ನು ಹೂಳುವ, ಗವಿಗಳಲ್ಲಿ ವಾಸಿಸುವ, ಗೋಡೆ ಕಲ್ಲಾಸರೆಗಳಲ್ಲಿ ಕೆಮ್ಮಣ್ಣು ಮತ್ತು ಸುಣ್ಣದಲ್ಲಿ ಚಿತ್ರ ಬರೆಯುವುದನ್ನು ಕಲಿತು ಸಾಂಸ್ಕೃತಿಕ ಮುನ್ನಡೆಗೆ ಕಾರಣನಾಗಿದ್ದಾನೆ.[೮೫]

ದಾವಣಗೆರೆ ಜಿಲ್ಲೆಯಲ್ಲಿ ಈವರೆಗೆ ಒಟ್ಟು ೧೯ ಸೂಕ್ಷ್ಮ ಶಿಲಾಯುಗದ ನೆಲೆಗಳನ್ನು ಶೋಧಿಸಲಾಗಿದೆ. ಬಹುತೇಕ ನೆಲೆಗಳು ಹೊನ್ನಾಳಿ ತಾಲೂಕು ಪರಿಸರದಲ್ಲಿಯೇ ವಿಸ್ತರಿಸಲ್ಪಟ್ಟಿವೆ. ಮುಖ್ಯವಾಗಿ ನ್ಯಾಮತಿ,[೮೬] ಕೋನಾಯಕನಹಳ್ಳಿ,[೮೭] ಸಾಸಿವೆಹಳ್ಳಿ,[೮೮] ಹನಗವಾಡಿ,[೮೯] ಸುರಹೊನ್ನೆ,[೯೦] ಬೆನಕನಹಳ್ಳಿ,[೯೧] ಹರಗನಹಳ್ಳಿ,[೯೨] ಚಿಕ್ಕಬಸೂರು,[೯೩] ಹರಳಹಳ್ಳಿ,[೯೪] ಸಲಬಾಳು,[೯೫] ತಕ್ಕನಹಳ್ಳಿ,[೯೬] ಹಳೆ ಲಿಂಗಾಪುರ,[೯೭] ಹಳೆ ಚಟ್ನಹಳ್ಳಿ,[೯೮] ಹಳೆಹರಹಳ್ಳಿ[೯೯] ಮತ್ತು ಹೊನ್ನಾಳಿ[೧೦೦] ಶೋಧಗೊಂಡ ಪ್ರಮುಖ ನೆಲೆಗಳಾಗಿವೆ. ಈ ನೆಲೆಗಳಲ್ಲಿ ಕ್ವಾರ್ಟ್ಜ್ ಶಿಲೆಯಲ್ಲಿ ರೂಪಿಸಿದ ಹೆರೆಚಕ್ಕೆ, ಮೊನೆ, ನೀಳಚಕ್ಕೆ ಆಯುಧೋಪಕರಣಗಳು ದೊರೆತಿವೆ. ಕೊಂಡಜ್ಜಿ[೧೦೧] ಗುಹೆಗಳಲ್ಲಿ ಈ ಸಂಸ್ಕೃತಿಯ ವರ್ಣಚಿತ್ರಗಳು ಕಂಡುಬಂದಿವೆ. ತಮ್ಮಿನಕಟ್ಟೆ[೧೦೨] ಗುಡ್ಡದ ತಪ್ಪಲಲ್ಲಿ ಬೆಣಚುಕಲ್ಲಿನ ಕೈಗೊಡಲಿ ದೊರೆತಿದೆ. ಹರಸಬಾಳು[೧೦೩] ನಿವೇಶನದಲ್ಲಿ ಹೆರೆಚಕ್ಕೆ, ಮೊನೆ, ನೀಳಚಕ್ಕೆ ಉಪಕರಣಗಳನ್ನು ಪತ್ತೆ ಹಚ್ಚಲಾಗಿದೆ. ಮಾಡಲಗೇರಿ[೧೦೪] ನೆಲೆಯಲ್ಲಿ ಈ ಸಂಸ್ಕೃತಿಯ ಅವಶೇಷಗಳನ್ನು ಗುರುತಿಸಲಾಗಿದೆ.

### ೨.೨.೫. ನವಶಿಲಾಯುಗ

ನವಶಿಲಾಯುಗದ ಮಾನವ ಮರಳು ದಿನ್ನೆ ಅಥವಾ ಎತ್ತರದ ಪ್ರದೇಶಗಳಲ್ಲಿ ವಾಸಿಸುತ್ತಿದ್ದ. ಸೂಕ್ಷ್ಮ ಶಿಲಾಯುಗ ಮತ್ತು ನವಶಿಲಾಯುಗಕ್ಕೂ ಇರುವ ಭೇದ ಅಂದಿನ ಜನರು ಉಪಯೋಗಿಸುತ್ತಿದ್ದ ಆಯುಧಗಳಿಗಿಂತ ಮಿಗಿಲಾಗಿ ಅವರು ಜೀವಿಸುತ್ತಿದ್ದ ವಿಧಾನದಿಂದ ತಿಳಿದುಬರುತ್ತದೆ. ಬೇಟೆ ಮತ್ತು ಮೀನುಗಾರಿಕೆಯಿಂದ ಜೀವಿಸುತ್ತಿದ್ದ ಮಾನವ ಆಹಾರವನ್ನು ತಾನೇ ಬೆಳೆಯುವ ಬೇಸಾಯದ ಗುಟ್ಟನ್ನು ತಿಳಿದಂತೆಲ್ಲಾ ಅವನ ಜೀವನ ಪದ್ಧತಿಯೂ ಬದಲಾಯಿತು. ತಾನು ಬೆಳೆದ ಆಹಾರವನ್ನು ಮುಂದಿನ ದಿನಗಳಿಗಾಗಿ ಶೇಖರಿಸಿಡಬೇಕಾದಾಗ

ಒಂದು ಕಡೆ ಸ್ಥಿರವಾಗಿ ನಿಲ್ಲಬೇಕಾಯಿತು. ದಿನನಿತ್ಯದ ಬಳಕೆ ಮತ್ತು ಆಹಾರ ಸಂಗ್ರಹಣೆಗಾಗಿ ಪಾತ್ರೆಗಳು ಅವಶ್ಯಕವೆನಿಸಿ ಮಣ್ಣಿನಲ್ಲಿ ಪಾತ್ರೆಗಳನ್ನು ತಯಾರಿಸಬಹುದಾದ ಕಲೆಯನ್ನು ಕಂಡುಕೊಂಡನು.[೧೦೫] ಮೊದಲು ಕೈಯಿಂದ ನಂತರ ಚಕ್ರದ ಸಹಾಯದಿಂದ ಬೂದುಬಣ್ಣದ ಮಡಕೆಗಳನ್ನು ತಯಾರಿಸಿಕೊಂಡನು. ಅವುಗಳ ಮೇಲೆ ಬಣ್ಣ ಬಳೆಯುವ, ಮೆರುಗು ಕೊಡುವ ರೇಖಾಚಿತ್ರಗಳನ್ನು ಬಿಡಿಸುವ ಕಲೆಯನ್ನು ಸಾಧಿಸಿದನು. ಹಸು, ಎಮ್ಮೆ, ಕುರಿ, ಮೇಕೆ, ಕತ್ತೆ ಮತ್ತು ನಾಯಿ ಮುಂತಾದ ಪ್ರಾಣಿಗಳನ್ನು ನವಶಿಲಾಯುಗದ ಮಾನವ ಸಾಕಲಾರಂಭಿಸಿದನು.

ತಕ್ಕಲಿ(ಚರಕ)ಯಿಂದ ನೂಲುವುದು, ಮರಗೆಲಸ, ಆಭರಣ ಮತ್ತು ಚಾಪೆ ತಯಾರಿಕೆ ನವ ಶಿಲಾಯುಗದ ಮಾನವನ ಪ್ರಮುಖ ಕಸುಬುಗಳಾಗಿದ್ದವು. ಅವನ ಜೀವನ ರೀತಿಯಲ್ಲಿ ತಲೆದೋರಿದ ಇಂಥ ಪ್ರಮುಖ ಬದಲಾವಣೆಗಳು ಅಂದಿನ ಸರ್ವತೋಮುಖ ಪ್ರಗತಿ ಮತ್ತು ನಾಗರಿಕತೆಗೆ ಭದ್ರ ಬುನಾದಿಯನ್ನೊದಗಿಸಿದವು. ಆದ್ದರಿಂದ ಪ್ರಾಕ್ತನತಜ್ಞ ಗೋರ್ಡನ್ ಚೈಲ್ಡ್ ಈ ಹಂತವನ್ನು 'ಆಹಾರೋತ್ಪಾದನಾ ಕ್ರಾಂತಿ ಮತ್ತು ಮಾನವ ಪ್ರಗತಿಯ ಮೊದಲ ದಿಟ್ಟ ಹೆಜ್ಜೆ' ಎಂದು ವರ್ಣಿಸಿದ್ದಾರೆ.[೧೦೬]

ಡೈಕ್ ಶಿಲೆಯಿಂದ ಉಜ್ಜಿ ನಯಗೊಳಿಸಿದ ಕೈಗೊಡಲಿ, ಕೈಬಾಚಿ, ಉಳಿ ಮುಂತಾದವು. ನವ ಶಿಲಾಯುಗದ ಮಾನವನ ಪ್ರಮುಖ ಆಯುಧಗಳಾಗಿವೆ. ಈ ಸಂಸ್ಕೃತಿಯ ನಯವಾದ ಆಯುಧಗಳನ್ನು ಕಂಡು ಪುರಾತತ್ವಜ್ಞ ಮಾರ್ಟಿಮರ್ ವೀಲರ್ ಅವರು ಭಾರತದ ನವ ಶಿಲಾಯುಗದ ಸಂಸ್ಕೃತಿಯನ್ನು 'ಮಿರುಗುವ ಕಲ್ಲುಕೊಡಲಿಯ ಸಂಸ್ಕೃತಿ' ಎಂದು ಹೆಸರಿಸುವುದೇ ಹೆಚ್ಚು ಯುಕ್ತವೆಂದಿದ್ದಾನೆ.[೧೦೭]

ಭಾರತದಲ್ಲಿ ಮೊಟ್ಟಮೊದಲು ೧೮೬೦ರಲ್ಲಿ ಲಿಮೆ ಸೋರಿಯರ್ ಎಂಬ ವಿದ್ವಾಂಸರು ಉತ್ತರ ಪ್ರದೇಶದ ಪೂರ್ವದ 'ತೋಸ್ಸೆ' ನದಿಯ ದಂಡೆಯಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಅವಶೇಷಗಳನ್ನು ಗುರುತಿಸಿದರು.[೧೦೮] ಕರ್ನಾಟಕದಲ್ಲಿ ನೂತನ ಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದ ಶೋಧನೆಗಳು ಪ್ರಥಮವಾಗಿ ೧೮೭೨ರಲ್ಲಿ ನಡೆದಿವೆ. ಫ್ರೇಸರ್ ಎಂಬ ವಿದ್ವಾಂಸ ಬಳ್ಳಾರಿ ಜಿಲ್ಲೆ ಕಪ್ಪುಗಲ್ಲು ಬೆಟ್ಟದಲ್ಲಿ ನೂತನ ಶಿಲೋಪಕರಣ ಹಾಗೂ ವಾಸ್ತವ್ಯದ ನೆಲೆಯೊಂದನ್ನು ಶೋಧಿಸಿದರು.[೧೦೯] ಅನಂತರ ರಾಬರ್ಟ್ ಬ್ರೂಸ್‌ಫೂಟ್ ಕೋಲಾರ ಜಿಲ್ಲೆ ಶ್ರೀನಿವಾಸಪುರ ಮತ್ತು ಬೀರಮಂಗಲ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ.

ದಾವಣಗೆರೆ ಜಿಲ್ಲೆಯಲ್ಲಿ ಇದುವರೆಗೆ ಒಟ್ಟು ೨೫ ನೂತನ ಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿವೆ. ಬಹುತೇಕ ನೆಲೆಗಳು ಈ ಜಿಲ್ಲೆಯ ಹೊನ್ನಾಳಿ ಮತ್ತು ಜಗಲೂರು ತಾಲೂಕು ಪರಿಸರದಲ್ಲಿಯೇ ಶೋಧಗೊಂಡಿವೆ. ಬೆನಕನಹಳ್ಳಿ,[೧೧೦] ಸಾಸಿವೆಹಳ್ಳಿ,[೧೧೧] ನ್ಯಾಮತಿ,[೧೧೨] ಹಾಡೋನಹಳ್ಳಿ,[೧೧೩] ದಿಡಗೂರು,[೧೧೪] ಅಯ್ಯನೂರು,[೧೧೫] ಹರಗನಹಳ್ಳಿ,[೧೧೬] ಹಳೆಲಿಂಗಾಪುರ[೧೧೭] ಹಾಗೂ ಹೊಸಹಳ್ಳಿ[೧೧೮] ಪ್ರಮುಖವಾಗಿವೆ. ಈ ನೆಲೆಗಳಲ್ಲಿ ಕಂದು ಮತ್ತು ಕಪ್ಪು ವರ್ಣದ,

ಹೊಳಪುಳ್ಳ ಕಂದುವರ್ಣದ ಬಿಳಿ ಚಿತ್ರಿತ ಕಪ್ಪು ಮತ್ತು ಕೆಂಪು ವರ್ಣದ ಮಡಕೆಗಳು ಹಾಗೂ ಉಜ್ಜಿ ನಯಗೊಳಿಸಿದ ಕಲ್ಲಿನ ಉಪಕರಣಗಳು ಕಂಡುಬರುವುದನ್ನು ಅಧ್ಯಯನಕಾರರು ಗುರುತಿಸಿದ್ದಾರೆ. ಹರಿಹರ[೧೧೯] ಮತ್ತು ಹಲಸಬಾಲು[೧೨೦] ನೆಲೆಗಳಲ್ಲಿ ಈ ಸಂಸ್ಕೃತಿಯ ಕೈಗೊಡಲಿ, ಬೂದುಬಣ್ಣದ ಮಡಕೆ ಚೂರುಗಳು ದೊರೆತಿವೆ. ಗುಡ್ಡದ ತಮ್ಮಿನಕಟ್ಟೆ[೧೨೧] ಕರ್ಲ್ಲಾಳಗುಡ್ಡದ ತಪ್ಪಲಿನಲ್ಲಿ ಆಗೆಟ್ ಕೈಗೊಡಲಿಗಳಿಂದ ಹೊರತೆಗೆದ ಚಪ್ಪಟೆಯಾಕಾರದ ಬ್ಲೇಡ್ಸ್‌ಗಳು, ಕವಣೆಕಲ್ಲು, ಬೂದುಬಣ್ಣದ ಮಡಕೆ, ಹೆರೆಚಕ್ಕೆ ಇತ್ಯಾದಿ ಉಪಕರಣಗಳು ದೊರೆತಿವೆ. ಇದೇ ಮಾದರಿಯ ಉಪಕರಣಗಳು ಸಾರಥಿ[೧೨೨] ನೆಲೆಯಲ್ಲಿ ಕಂಡುಬಂದಿವೆ. ಹಿರೇಹಾಲಿವಾಣ ಬೆಟ್ಟದಲ್ಲಿ ಕೈಕೊಡಲಿ ದೊರೆತಿದೆ. ಮಾಡಲಗೇರಿ[೧೨೪] ಮತ್ತು ಗಡಿಗುಡಾಳ್[೧೨೫] ನಿವೇಶನಗಳಲ್ಲಿ ಬೂದುಬಣ್ಣದ ಮಡಕೆ ಹಾಗೂ ಉಜ್ಜಿ ನಯಗೊಳಿಸಿದ ಕೊಡಲಿಗಳು ಶೋಧಗೊಂಡಿವೆ. ಜಗಲೂರು ತಾಲೂಕು ಚಿಕ್ಕಮಲ್ಲನ ಹೊಳೆ,[೧೨೬] ಸಂಗೇನಹಳ್ಳಿ,[೧೨೭] ಅರಶಿನಗುಂಡಿ,[೧೨೮] ಕೊಣಚುಗಲ್ಲು ಗುಡ್ಡ,[೧೨೯] ನಂದಿಹಳ್ಳಿ,[೧೩೦] ಅರಸೂರು,[೧೩೧] ಹಳುಉದರು,[೧೩೨] ಎಮ್ಮನಗಟ್ಟ[೧೩೩] ಹಾಗೂ ದೇವಿಕೆರೆ[೧೩೪] ಮೊದಲಾದವು ಈ ಸಂಸ್ಕೃತಿಯ ಪ್ರಮುಖ ನೆಲೆಗಳಾಗಿವೆ. ಈ ಎಲ್ಲಾ ನೆಲೆಗಳಲ್ಲಿ ಬೂದಿದಿಬ್ಬ ಮತ್ತು ನಯಗೊಳಿಸಿದ ಕೊಡಲಿಗಳನ್ನು ಪತ್ತೆ ಹಚ್ಚಲಾಗಿದೆ.

### ೨.೨.೬. ಶಿಲಾತಾಮ್ರಯುಗ

ನೂತನ ಶಿಲಾಯುಗ ಸಂಸ್ಕೃತಿಯ ನಂತರ ವಿಕಸನಗೊಂಡ ಹಂತವಿದು. ತಾಮ್ರದ ಅದುರಿನ ಜ್ಞಾನ, ನೀಳಚಕ್ಕೆಗಳ ಉಪಯೋಗ, ಶಿಲೆಗೆ ಬದಲಾಗಿ ಲೋಹದ ಆಯುಧಗಳ ಬಳಕೆ, ಸುಟ್ಟ ಮಣ್ಣಿನ ಪಾತ್ರೆಗಳ ಬಳಕೆ, ಸುಧಾರಿಸಿದ ಬೇಸಾಯ ಪದ್ಧತಿ ಮೊದಲಾದವು ಈ ಸಂಸ್ಕೃತಿಯ ಮುಖ್ಯ ಲಕ್ಷಣಗಳಾಗಿವೆ. ನೂತನ ಶಿಲಾಯುಗ ಸಂಸ್ಕೃತಿಯ ಶಿಲೋಪಕರಣಗಳ ಬಳಕೆಯು ಈ ಹಂತದಲ್ಲೂ ಮುಂದುವರಿದಿರುವುದು ತಿಳಿಯುತ್ತದೆ. ಶಿಲಾತಾಮ್ರ ಯುಗದ ಮಡಕೆ ಮಾದರಿಯು ವಿಶಿಷ್ಟವಾಗಿರುವುದು ಕಂಡುಬರುತ್ತದೆ. ಕುಸುರಿತನದ ಸುಟ್ಟ ಮಣ್ಣಿನ ಪಾತ್ರೆಗಳ ಮೇಲೆ ವರ್ಣರೇಖಾಚಿತ್ರಗಳು ಮತ್ತು ಪ್ರಾಣಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ಇಂತಹ ಮಣ್ಣಿನ ಪಾತ್ರೆಗಳನ್ನು ಜೋರ್ವೆ ಮತ್ತು ಸಾವಳದ ಮಡಕೆ ಮಾದರಿಗಳೆಂದು ಕರೆಯಲಾಗುತ್ತದೆ.[೧೩೫] ಶಿಲಾ ತಾಮ್ರಯುಗದ ಜನರು ಸೌಂದರ್ಯ ಪ್ರಜ್ಞೆಯುಳ್ಳವರಾಗಿದ್ದಾರೆಂದು ಅವರ ಮಣ್ಣಿನ ಗೊಂಬೆ ಹಾಗೂ ದೊರೆತ ವರ್ಣಚಿತ್ರಗಳಿಂದ ತಿಳಿದುಬರುತ್ತದೆ. ಈ ಸಂಸ್ಕೃತಿಯ ನೆಲೆಗಳು ಜಿಲ್ಲೆಯಲ್ಲಿ ಈವರೆಗೆ ಕಂಡುಬಂದಿಲ್ಲ. ಆದರೆ ನೆರೆಯ ಜಿಲ್ಲೆಗಳಾದ ಚಿತ್ರದುರ್ಗ, ಬಳ್ಳಾರಿ, ಶಿವಮೊಗ್ಗ ಹಾಗೂ ಹಾವೇರಿ ಜಿಲ್ಲೆಗಳಲ್ಲಿ ಶಿಲಾತಾಮ್ರಯುಗದ ನೆಲೆಗಳು ಶೋಧಗೊಂಡಿವೆ.

### ೨.೨.೭. ಬೃಹತ್ ಶಿಲಾಯುಗ

ಮೆಗಾಲಿಥ್(Megalith) ಎಂಬ ಆಂಗ್ಲ ಪದವು 'ಮೆಗಾ'(Mega) ಮತ್ತು 'ಲಿಥೋಸ್' (Lithos) ಎಂಬ ಎರಡು ಗ್ರೀಕ್ ಪದಗಳಿಂದ ನಿಷ್ಪತ್ತಿಯಾಗಿದೆ. 'ಮೆಗಾ' ಎಂದರೆ ಬೃಹತ್

(ಬಹುದೊಡ್ಡ), 'ಲಿಥಿಯೋ' ಎಂದರೆ ಶಿಲೆ ಎಂದರ್ಥ. ಅಂದರೆ ಮೆಗಾಲಿಥಿಕ್ ಕಲ್ಚರ್ ಎಂಬ ಆಂಗ್ಲ ಪದವು ಬೃಹತ್ ಶಿಲಾಯುಗ ಸಂಸ್ಕೃತಿ ಎಂಬ ಕನ್ನಡ ಅರ್ಥವನ್ನು ನೀಡುತ್ತದೆ.[೧೩೬]

ನೂತನ ತಾಮ್ರ ಶಿಲಾಯುಗದ ನಂತರದ ಕಾಲವನ್ನು ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗ ಎಂದು ಕರೆಯಲಾಗಿದೆ. ಈ ಸಂಸ್ಕೃತಿಯ ಜನರು ಕುತೂಹಲಕರವಾದ ವಿಭಿನ್ನ ಮಾದರಿಯ ಬೃಹತ್ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದುದರಿಂದ ಆ ಕಾಲವನ್ನು ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯುವ ವಾಡಿಕೆಯುಂಟು. ಪ್ರಥಮ ಬಾರಿಗೆ ಈ ಸಂಸ್ಕೃತಿಯ ಜನರು ಕಬ್ಬಿಣದ ಅದಿರನ್ನು ಉಪಯೋಗಿಸಿಕೊಂಡು ಕಬ್ಬಿಣದ ಆಯುಧೋಪಕರಣಗಳನ್ನು ತಯಾರಿಸಿಕೊಂಡಿದ್ದರಿಂದ ಈ ಹಂತವನ್ನು ಕಬ್ಬಿಣಯುಗವೆಂತಲೂ ಕರೆಯಲಾಗಿದೆ.

ಭಾರತದಲ್ಲಿ ೧೮೨೩ರಲ್ಲಿ ಬ್ಯಾಬಿಂಗ್‌ಟನ್ ಎಂಬುವರು ಪ್ರಥಮ ಬಾರಿಗೆ ಕೇರಳದ ಕರಾವಳಿ ಪ್ರದೇಶದಲ್ಲಿ ಈ ಸಂಸ್ಕೃತಿಯ ಅವಶೇಷಗಳನ್ನು ಕಂಡುಹಿಡಿದಿದ್ದಾರೆ.[೧೩೭] ಅನಂತರ ಹಲವು ಪುರಾತತ್ವಶಾಸ್ತ್ರಜ್ಞರು ದೇಶದ ನಾನಾ ಭಾಗಗಳಲ್ಲಿ ಬಹುಸಂಖ್ಯೆಯ ನೆಲೆಗಳನ್ನು ಶೋಧಿಸಿದ್ದಾರೆ. ಆ ಮೂಲಕ ಈ ಸಂಸ್ಕೃತಿಯ ಜನರ ವಸತಿ, ಸಾಮಾಜಿಕ ಮತ್ತು ಆರ್ಥಿಕ ಜೀವನ, ಶವಸಂಸ್ಕಾರ ಪದ್ಧತಿ ಮೊದಲಾದ ಆಚರಣೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಆದರೂ ಎಲ್ಲರೂ ಒಪ್ಪುವಂತಹ ನಿಖರವಾದ ವಿಷಯಗಳು ದೊರೆತಿಲ್ಲವೆಂಬ ಅಭಿಪ್ರಾಯಗಳುಂಟು. ಕರ್ನಾಟಕದಲ್ಲಿ ಉತ್ತರ ಕನ್ನಡ ಜಿಲ್ಲೆಯೂ ಸೇರಿದಂತೆ ಎಲ್ಲಾ ಜಿಲ್ಲೆಗಳಲ್ಲಿ ಬೃಹತ್ ಶಿಲಾ ಸಮಾಧಿ ನೆಲೆಗಳು(ಸುಮಾರು ೬೮೦) ಬೆಳಕಿಗೆ ಬಂದಿವೆ.[೧೩೮] ಈ ಸಂಸ್ಕೃತಿಯ ನೆಲೆಗಳು ಹೆಚ್ಚಾಗಿ ಗಷ್ಪುಕಲ್ಲು ಮತ್ತು ಗ್ರಾನೈಟ್ ಶಿಲೆಯ ಬೆಟ್ಟಪ್ರದೇಶಗಳಲ್ಲಿ ಪತ್ತೆಯಾಗಿವೆ. ಆದ್ದರಿಂದ ಈ ಸಂಸ್ಕೃತಿಯ ಮಾನವ ಎಲ್ಲೆಲ್ಲಿ ವಾಸವಿದ್ದನೋ ಅಲ್ಲಿ ದೊಡ್ಡ ಪ್ರಮಾಣದ ಬೆಟ್ಟ ಗುಡ್ಡಗಳ ತಪ್ಪಲಿನ ಪ್ರದೇಶವಿರುತ್ತದೆ.

ಪಶುಸಂಗೋಪನೆ, ಬೇಟೆಯಾಡುವುದಲ್ಲದೇ ಸುಧಾರಿತ ಬೇಸಾಯವು ಬೃಹತ್ ಶಿಲಾಯುಗದ ಮುಖ್ಯ ಕಸುಬುಗಳಾಗಿದ್ದವು. ಈ ಹಂತದ ಮಾನವ ತಯಾರಿಸಿಕೊಂಡ ಕಬ್ಬಿಣದ ನೇಗಿಲಕುಳ, ಕುಡಗೋಲು, ಈಟಿ, ಭರ್ಚಿ, ಕತ್ತಿ, ಬಾಣದ ಮೊನೆ[೧೩೯] ಮೊದಲಾದ ಆಯುಧೋಪಕರಣಗಳು ಬೇಟೆ ಮತ್ತು ಕೃಷಿಯಂತಹ ಚಟುವಟಿಕೆಗಳಲ್ಲಿ ತೊಡಗಿರುವುದನ್ನು ಸೂಚಿಸುತ್ತವೆ. ಈ ಬದಲಾವಣೆಯೇ ನವಶಿಲಾಯುಗಕ್ಕಿಂತಲೂ ಕೃಷಿಯಲ್ಲಿ ಹೆಚ್ಚಿನ ಪ್ರಗತಿ ಸಾಧಿಸಲು ಮತ್ತು ಬೃಹತ್ ಪ್ರಮಾಣದ ಕಲ್‌ಗೋರಿಗಳನ್ನು ನಿರ್ಮಿಸಿಕೊಳ್ಳಲು ಸಾಧ್ಯವನ್ನಾಗಿಸಿರುವುದು. ಎತ್ತು, ಎಮ್ಮೆ, ಮೇಕೆ, ಕುರಿ, ಕೋಳಿ, ಕುದುರೆ ಮತ್ತು ನಾಯಿ ಮುಂತಾದ ಪ್ರಾಣಿಗಳನ್ನು ಬೃಹತ್ ಶಿಲಾಯುಗದ ಮಾನವ ಹೆಚ್ಚಿನ ಪ್ರಮಾಣದಲ್ಲಿ ಸಾಕಲಾರಂಭಿಸಿದನು. ತಕ್ಕಲಿಯಿಂದ ನೂಲುವ, ಚಾಪೆ ಹೆಣೆಯುವುದು, ಕಪ್ಪು ಮತ್ತು ಕೆಂಪು, ಏಕ ಮತ್ತು ದ್ವಿವರ್ಣವುಳ್ಳ ಮೃತ್‌ಪಾತ್ರೆಗಳ ಬಳಕೆಯು ಬೃಹತ್ ಶಿಲಾಯುಗದ ಜನರ ಜೀವನಶೈಲಿಯನ್ನು ತಿಳಿಯಪಡಿಸುತ್ತವೆ.

ಈ ಮಾದರಿಯ ಸಂಸ್ಕೃತಿಯನ್ನು ದೃಢೀಕರಿಸುವ ೩೪ ನೆಲೆಗಳು ಜಿಲ್ಲೆಯಲ್ಲಿ ಶೋಧಗೊಂಡಿವೆ. ಅವುಗಳಲ್ಲಿ ೧೯ ವಸತಿನೆಲೆಗಳಾದರೆ, ಕಲ್ಲುವೃತ್ತ, ಕಲ್ಮನೆ, ನಿಲಸುಗಲ್ಲು, ಸ್ವಸ್ತಿಕ್, ಚಪ್ಪಟೆಯಾಕಾರದ ಹಾಸುಗಲ್ಲು ಮೊದಲಾದಂತಹ ಶಿಲಾಗೋರಿಗಳಿರುವ ೧೫ ನೆಲೆಗಳು ಕಂಡುಬಂದಿವೆ. ಜಿಲ್ಲೆಯ ಹೊನ್ನಾಳಿ ತಾಲೂಕಿನ ದಿಡಗೂರು,[೧೪೦] ಬನ್ನಿಕೋಡು,[೧೪೧] ಬೆನಕನಹಳ್ಳಿ,[೧೪೨] ಸಾಸಿವೆಹಳ್ಳಿ,[೧೪೩] ಹಳೆಲಿಂಗಾಪುರ,[೧೪೪] ಹೊಸಹಳ್ಳಿ,[೧೪೫] ಸೂರಗೊಂಡನಕೊಪ್ಪ,[೧೪೬] ಹರಪನಹಳ್ಳಿ ತಾಲೂಕಿನ ತೆಲಗಿ,[೧೪೭] ನೀಲಗುಂದ,[೧೪೮] ಮಾಡಲಗೇರಿ,[೧೪೯] ಹೊಸಕೋಟೆ,[೧೫೦] ಜಗಲೂರು ತಾಲೂಕಿನ ಆಕನೂರು,[೧೫೧] ಸಂಗೇನಹಳ್ಳಿ,[೧೫೨] ತಮಲೇನಹಳ್ಳಿ[೧೫೩] ಮತ್ತು ಹರಿಹರದ ಕೊಕ್ಕನೂರು,[೧೫೪] ತಮ್ಮಿನಕಟ್ಟೆ[೧೫೫] ನೆಲೆಗಳಲ್ಲಿ ಕಪ್ಪು, ಹೊಳಪುಳ್ಳ ಕಪ್ಪು ಮತ್ತು ಕೆಂಪು ಮೃತ್‌ಪಾತ್ರೆಯ ಅವಶೇಷಗಳು ಪತ್ತೆಯಾಗಿವೆ. ಹೊನ್ನಾಳಿ ತಾಲೂಕಿನ ಕಮ್ಮಾರಗಟ್ಟೆ,[೧೫೬] ಚಿನ್ನಿಕಟ್ಟೆ,[೧೫೭] ಬೇಲಿಮಲ್ಲೂರು,[೧೫೮] ಸಿದ್ಧಾಪುರ,[೧೫೯] ಸುಂಕದಕಟ್ಟೆ,[೧೬೦] ಸವಳಂಗ,[೧೬೧] ಹನುಮನಹಳ್ಳಿ,[೧೬೨] ಹರಗನಹಳ್ಳಿ,[೧೬೩] ಹಾಡೋನಹಳ್ಳಿ,[೧೬೪] ಚನ್ನಗಿರಿ ತಾಲೂಕಿನ ಬೆಟ್ಟದ ಬೆನಕನಹಳ್ಳಿ,[೧೬೫] ನಿಲೋಗಲ್[೧೬೬] ಜಗಲೂರು ತಾಲೂಕಿನ ಗುಹೇಶ್ವರಗುಡ್ಡ,[೧೬೭] ಮಲೆಮಾಚಿಕೆರೆ,[೧೬೮] ಆಸಗೋಡು,[೧೬೯] ಕಣಕುಪ್ಪೆ[೧೭೦] ಹಾಗೂ ಉಚ್ಚಂಗಿದುರ್ಗ,[೧೭೧] ಕೊಮಾರನಹಳ್ಳಿ,[೧೭೨] ದೊಡ್ಡಬಾತಿ[೧೭೩] ಪ್ರಮುಖ ಶಿಲಾಗೋರಿ ನೆಲೆಗಳಾಗಿವೆ.

ಕೊಮಾರನಹಳ್ಳಿ ಮತ್ತು ಬೇಲಿಮಲ್ಲೂರು ಜನವಾಸ್ತವ್ಯ ಮತ್ತು ಕಲ್ಗೋರಿ ಎರಡನ್ನು ಒಳಗೊಂಡಿರುವ ನೆಲೆಗಳಾಗಿವೆ. ಕೊಮಾರನಹಳ್ಳಿ ನಿವೇಶನದಲ್ಲಿ ದೊರೆತಿರುವ ಮೃತ್‌ಪಾತ್ರೆಗಳು ಹರಪ್ಪಾ ಸಂಸ್ಕೃತಿಯ ಮಡಕೆಗೆ ಹೋಲಿಕೆ ಇವೆಯೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಈ ನೆಲೆಯ ಕಾಲವನ್ನು ಥರ್ಮೊಲೂಮಿನಿಸೆಸ್ಸ್ ವೈಜ್ಞಾನಿಕ ತಂತ್ರದಿಂದ ಕ್ರಿ.ಪೂ. ೧೪೦೦ ರಿಂದ ೧೦೦೦ ಎಂದು ತೀರ್ಮಾನಿಸಲಾಗಿದೆ. ಬೇಲಿಮಲ್ಲೂರು ನೆಲೆಯಲ್ಲಿ ಕಪ್ಪು, ಕೆಂಪು ವರ್ಣದ ಮಡಕೆ ಭಾಗಗಳು ಗೀಚುಗಳನ್ನು ಹೊಂದಿದ್ದು, ಪೂರ್ಣ ಕಪ್ಪು ವರ್ಣದ ಮಡಕೆ ಭಾಗಗಳು ದೊರೆತಿವೆ.

ಸೂರಗೊಂಡನಕೊಪ್ಪ, ಹೊಸಕೋಟೆ, ತಮಲೇನಹಳ್ಳಿ ನೆಲೆಗಳಲ್ಲಿ ಕಪ್ಪು, ಹೊಳಪುಳ್ಳ ಕಪ್ಪು ಮತ್ತು ಕೆಂಪು ವರ್ಣದ ಮೃತ್‌ಪಾತ್ರೆಗಳ ಅವಶೇಷಗಳನ್ನು ಹೊಸದಾಗಿ ಗುರುತಿಸಲಾಗಿದೆ. ಬೆಟ್ಟದ ಬೆನಕನಹಳ್ಳಿ ಹೊಲವೊಂದರಲ್ಲಿ ಕಲ್ಮನೆ ಸಮಾಧಿ ಹಾಗೂ ನಿಲೋಗಲ್‌ನಲ್ಲಿ ನಿಲಿಸುಗಲ್ಲು ಇರುವುದನ್ನು ನೂತನವಾಗಿ ಶೋಧಿಸಲಾಗಿದೆ. ನಿಲೋಗಲ್ ಗ್ರಾಮದಲ್ಲಿರುವ ನಿಲಸುಗಲ್ಲನ್ನು ಸ್ಥಳೀಯರು ನೆಟ್ಟಗಲ್ಲಪ್ಪ ಎಂದು ಕರೆಯುತ್ತಾರೆ.

### ೨.೨.೮. ಇತಿಹಾಸ ಆರಂಭಕಾಲ

ಮಾನವನ ಜೀವನದ ವಿವಿಧ ಸಂಸ್ಕೃತಿಗಳ ಹಂತದಿಂದ ಲಿಪಿಯ ಬಳಕೆಗೆ ಬಂದ ಹಂತವನ್ನು ಇತಿಹಾಸದ ಆರಂಭಕಾಲವೆಂದು ಗುರುತಿಸಲಾಗಿದೆ. ಕರ್ನಾಟಕದಲ್ಲಿ ಇತಿಹಾಸ ಯುಗವು ಕ್ರಿ.ಪೂ. ೪-೩ನೆಯ ಶತಮಾನದಲ್ಲಿಯೇ ಆರಂಭಗೊಂಡಿರುವುದಕ್ಕೆ ಆಧಾರಗಳಿವೆ.

ಇತಿಹಾಸ ಆರಂಭಕಾಲದ ಮನುಷ್ಯನು ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿ ವಸತಿನೆಲೆಗಳು ಇರುವಲ್ಲೇ ವಾಸಿಸಿರುವುದಕ್ಕೆ ಆ ಸಾಂಸ್ಕೃತಿಕ ನೆಲೆಗಳಲ್ಲಿ ಕಂಡುಬಂದಿರುವ ಅವಶೇಷಗಳಿಂದ ಸ್ಪಷ್ಟವಾಗುತ್ತದೆ. ಈ ಹಂತದ ನೆಲೆಗಳಲ್ಲಿ ದೊರೆಯುವ ಕೆಂಪು ಹೊಳಪುಳ್ಳ ಮೃತ್‌ಪಾತ್ರೆಗಳು, ಅರೆಟೈನ್ ಮಾದರಿಯ ಮಧ್ಯದ ಜಾಡಿಗಳು, ನಕ್ಷಾಂಕಿತ ಪಾತ್ರೆಗಳು, ಕೆಂಪು ಲೇಪನದಡಿ ಬಿಳಿವರ್ಣ ಚಿತ್ರವುಳ್ಳ ಮಡಕೆ, ಕಲಾತ್ಮಕ ಗೊಂಬೆಗಳು, ನಾಣ್ಯ, ವಾಸದ ಮನೆಗಳು,[೧೭೪] ಅವರ ಜೀವನವಿಧಾನ ಮತ್ತು ಸಂಸ್ಕೃತಿಯನ್ನು ತಿಳಿಸುತ್ತವೆ. ಅಲ್ಲದೆ ಅಂದಿನ ಕಾಲದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳ ಬಗೆಗೆ ಸಾಕಷ್ಟು ಮಾಹಿತಿಗಳು ದೊರೆಯುತ್ತವೆ.

ಪ್ರಸ್ತುತ ಅಧ್ಯಯನ ಪ್ರದೇಶದ ೨೨ ನೆಲೆಗಳಲ್ಲಿ ಈ ಸಂಸ್ಕೃತಿಯ ಕುರುಹುಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಕೋನಾಯಕನಹಳ್ಳಿ, ಕೋಟೆಹಾಳು, ಗೋವಿನಕೋವಿ, ನರಸಗೊಂಡನಹಳ್ಳಿ, ಸೊರಟೂರು,[೧೭೫] ಚಟ್ನಿಹಳ್ಳಿ(ಹೊನ್ನಾಳಿ),[೧೭೬] ಆಕನೂರು, ಸಂಗೇನಹಳ್ಳಿ, ಕಲ್ಲೆದೇವರಪುರ, ಚದುರಗೊಳ, ಸೊಕ್ಕೆ, ಆಸಗೋಡು, ಬೀಳಚೋಡು,[೧೭೭] ಕಣಗುಪ್ಪೆ, ದ್ಯಾಮವ್ವನಹಳ್ಳಿ, ದೇವಿಕೆರೆ, ಓಬೇನಹಳ್ಳಿ(ಜಗಲೂರು),[೧೭೮] ಹಳಸಬಾಳು,[೧೭೯] ಸಾರಥಿ,[೧೮೦] ಮೂಗಿಗೊಂದಿ(ಹರಿಹರ), ಬೆಟ್ಟಕಡೂರು(ಚನ್ನಗಿರಿ)[೧೮೧] ಮತ್ತು ಬಾಗಳಿ(ಹರಪನಹಳ್ಳಿ)[೧೮೨] ಇತಿಹಾಸ ಆರಂಭ ಕಾಲದ ಪ್ರಮುಖ ನೆಲೆಗಳಾಗಿವೆ. ಈ ನಿವೇಶನಗಳಲ್ಲಿ ಕೆಂಪು ಹೊಳಪುಳ್ಳ, ಕೆಂಪು ಲೇಪನದಡಿ ಬಿಳಿವರ್ಣ ಚಿತ್ರಗಳುಳ್ಳ ಮೃತ್‌ಪಾತ್ರೆಗಳು ಸಾಮಾನ್ಯವಾಗಿ ಕಂಡುಬಂದಿವೆ. ಆಕನೂರು ನೆಲೆಯಲ್ಲಿ ಆಂಧ್ರ ಸಂಸ್ಕೃತಿ ಎಂದು ಕರೆಯಲಾಗಿರುವ ಶಾತವಾಹನರ ಕಾಲಕ್ಕೆ ಸೇರಿದ ಕೆಂಪು ಲೇಪನದಡಿ ಬಿಳಿವರ್ಣ ಚಿತ್ರಿತ ಮಡಕೆ ಭಾಗಗಳು ದೊರೆತಿವೆ. ಬಾಗಳಿಯಲ್ಲಿ ಇಟ್ಟಿಗೆ ಕಟ್ಟಡದ ದೇವಾಲಯ ಶೋಧಗೊಂಡಿದೆ. ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಚಟ್ನಿಹಳ್ಳಿ ಮತ್ತು ಬೆಟ್ಟಕಡೂರುಗಳನ್ನು ಹೊಸದಾಗಿ ಗುರುತಿಸಿದೆ. ಈ ನೆಲೆಗಳಲ್ಲಿ ಕಬ್ಬಿಣ ಕಿಟ್ಟದ ರಾಶಿಗಳು ಕಂಡುಬರುತ್ತವೆ.

### ೨.೩. ಇತಿಹಾಸ ಕಾಲ

ಅರೆಮಲೆನಾಡು ಪ್ರದೇಶವಾಗಿರುವ ದಾವಣಗೆರೆ ಜಿಲ್ಲೆ ತನ್ನದೇ ಆದ ವಿಶಿಷ್ಟ ರಾಜಕೀಯ ಚರಿತ್ರೆಯನ್ನು ಹೊಂದಿದೆ. ಈ ಪ್ರದೇಶದ ಭೂಲಕ್ಷಣಗಳು ಪ್ರಾಗಿತಿಹಾಸ ಕಾಲದಿಂದ ಹಿಡಿದು ಐತಿಹಾಸಿಕ ಕಾಲದವರೆಗೆ ಮಾನವನ ಜೀವನದ ಹಲವು ಹೋರಾಟಗಳಿಗೆ ಸಾಕ್ಷಿಯಾಗಿವೆ. ಆ ಮೂಲಕ ಇಲ್ಲಿಯ ಜನಜೀವನದ ಸಾಂಸ್ಕೃತಿಕ ಚಟುವಟಿಕೆಗಳಿಗೆ ಭದ್ರ ಬುನಾದಿಯನ್ನು ಒದಗಿಸಿವೆ.

ದಾವಣಗೆರೆ ಯಾವುದೇ ರಾಜವಂಶದ ರಾಜಧಾನಿ ಪ್ರದೇಶವಾಗಿ ಆಳ್ವಿಕೆಗೆ ಒಳಪಡದಿದ್ದರೂ, ಪ್ರಾಚೀನವೂ ಮತ್ತು ವೀರ ಪುರುಷರ ಸಾಹಸ ಜೀವನದ ಕಥೆಯೂ ಉಳ್ಳಂತಹ ಇತಿಹಾಸವಿದೆ. ಜಿಲ್ಲೆಯ ಹಲವು ಗ್ರಾಮ ಪರಿಸರದಲ್ಲಿ ಕಂಡುಬರುವ ದೇವಾಲಯ, ಕೋಟೆ, ಸ್ಮಾರಕ ಶಿಲ್ಪ,

ಕೆರೆ–ಬಾವಿ ಶಾಸನಗಳನ್ನು ವಿವೇಚಿಸಿದಾಗ ರಾಜಸಂತತಿಗಳ ಚರಿತ್ರೆ ದೃಢಪಡುತ್ತದೆ. ಇದರಿಂದಾಗಿ ಕನ್ನಡ ನಾಡಿನಲ್ಲಿ ಆಳಿದಂತಹ ಅರಸುಮನೆತನಗಳ ಪ್ರಭಾವ ಈ ಪ್ರದೇಶಕ್ಕಾಗಿದೆ. ಅವರ ನೇರವಾದ ಆಳ್ವಿಕೆಯಲ್ಲದಿದ್ದರೂ, ಪರೋಕ್ಷವಾಗಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಮೌರ್ಯ ಕಾಲದಿಂದ ವಿಜಯನಗರೋತ್ತರ ಕಾಲದವರೆಗೆ ದೊಡ್ಡ ಹಾಗೂ ಸಣ್ಣ ಮನೆತನಗಳ ಆಳ್ವಿಕೆಯನ್ನು ಅಧ್ಯಯನದ ಪ್ರದೇಶದಲ್ಲಿ ಗುರುತಿಸಬಹುದಾಗಿದೆ. ರಾಜವಂಶಗಳು ಜಿಲ್ಲೆಯಲ್ಲಿ ಬಿಟ್ಟುಹೋಗಿರುವಂತಹ ಸ್ಮಾರಕಗಳ ಹಿನ್ನೆಲೆಯಲ್ಲಿ ಅವರ ರಾಜಕೀಯ ಚರಿತ್ರೆ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

### ೨.೩.೧. ಮೌರ್ಯರು

ಕರ್ನಾಟಕದಲ್ಲಿ ಇತಿಹಾಸಯುಗ ಆರಂಭವಾಗುವುದು ಕ್ರಿಪೂ. ೪–೩ನೇ ಶತಮಾನಗಳಿಂದ. ಕ್ರಿಪೂ. ೪ನೇ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯವು ಸ್ಥಾಪನೆಯಾಗುವ ಮೊದಲೇ ಉತ್ತರದ ಸಾಮ್ರಾಜ್ಯ ಸ್ಥಾಪಕರು ದಕ್ಷಿಣ ಭಾರತದ ಅನೇಕ ಪ್ರದೇಶಗಳನ್ನು ಗೆದ್ದು ತಮ್ಮ ಆಳ್ವಿಕೆಯನ್ನು ವಿಸ್ತರಿಸಿದ್ದರು. ದಕ್ಷಿಣ ಭಾರತವನ್ನು ಗೆದ್ದ ಮೌರ್ಯರು ಯಾರು ಎಂಬುದು ಸರಿಯಾಗಿ ತಿಳಿದುಬಂದಿಲ್ಲ. ಮೌರ್ಯರಿಗಿಂತ ಮೊದಲು ನಂದರು, ಶೈಶುನಾಗರು(ಶಿಶುನಾಗರು) ಕರ್ನಾಟಕದ ಕೆಲವು ಭಾಗಗಳನ್ನು ಆಳಿರುವುದಕ್ಕೆ ಆಧಾರಗಳಿವೆ.[೧೮೩] ಹನ್ನೆರಡನೆಯ ಶತಮಾನದ ಶಿಕಾರಿಪುರದ ಶಾಸನಗಳು ಆ ಪ್ರದೇಶದಲ್ಲಿ ನಂದರ ಆಳ್ವಿಕೆಯಿದ್ದಿತೆಂಬುದನ್ನು ಸೂಚಿಸುತ್ತವೆ.[೧೮೪] ಪ್ರೊ. ನೀಲಕಂಠಶಾಸ್ತ್ರಿಯವರು ಅಭಿಪ್ರಾಯಪಡುವಂತೆ ನಂದರನ್ನು ಕೊನೆಗಾಣಿಸಿದ ಮೌರ್ಯರು ಅನುಕ್ರಮವಾಗಿ ದಕ್ಷಿಣ ಭಾರತದವರೆಗೂ ವಿಸ್ತಾರವಾಗಿ ವ್ಯಾಪಿಸಿದ್ದ ಮಗಧ ರಾಜ್ಯಕ್ಕೆ ಒಡೆಯರಾದರೆಂದು ತಿಳಿದುಬರುತ್ತದೆ.[೧೮೫]

ಜಿಲ್ಲೆಯಲ್ಲಿ ಮೌರ್ಯರ ನೇರ ಆಳ್ವಿಕೆ ಇತ್ತೇ? ಎಂದು ಅವಲೋಕಿಸಿದಾಗ ಪ್ರಶ್ನಾರ್ಥಕವಾಗಿ ಕಾಣುತ್ತದೆ. ಆದರೂ ದಾವಣಗೆರೆ ಜಿಲ್ಲೆ ಅವರ ಆಳ್ವಿಕೆಗೆ ಒಳಪಟ್ಟಿರುವುದಕ್ಕೆ ಅಪ್ರತ್ಯಕ್ಷವಾದ ಹಲವು ಆಧಾರಗಳಿವೆ. ನೆರೆಯ ಚಿತ್ರದುರ್ಗ ಜಿಲ್ಲೆಯ ಉತ್ತರ ಭಾಗದಲ್ಲಿ ದೊರೆತಿರುವ ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ. ಬ್ರಹ್ಮಗಿರಿ, ಅಶೋಕ ಸಿದ್ಧಾಪುರ ಮತ್ತು ಜಟಿಂಗ ರಾಮೇಶ್ವರ ಎಂಬಲ್ಲಿಯ ಅಶೋಕನ ಧಾರ್ಮಿಕ ಶಾಸನಗಳು ಅವರ ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೮೬] ದಾವಣಗೆರೆ ಅವಿಭಜಿತ ಚಿತ್ರದುರ್ಗ ಜಿಲ್ಲೆಯ ಅದರ ಭಾಗವೇ ಆಗಿದ್ದರಿಂದ ಈ ಜಿಲ್ಲೆಯ ಸುತ್ತಲಿನ ಪ್ರದೇಶಗಳು ಸಹ ಮೌರ್ಯರ ಆಳ್ವಿಕೆಗೆ ಒಳಗಾಗಿರುವುದನ್ನು ಕಾಣಬಹುದು. ಕರ್ನಾಟಕದಲ್ಲಿನ ಮಸ್ಕಿ, ಕೊಪ್ಪಳ, ಸನ್ನತಿ, ನಿಟ್ಟೂರು[೧೮೭] ಹಾಗೂ ಮೇಲೆ ವಿವರಿಸಿದ ಶಾಸನಗಳ ಉಲ್ಲೇಖಗಳನ್ನು ಒಟ್ಟಾಗಿ ಪರಿಗಣಿಸಿದಾಗ ಮೌರ್ಯರು ಈ ಪ್ರದೇಶದಲ್ಲಿ ಗಟ್ಟಿಯಾಗಿ ನೆಲೆಯೂರಿರುವುದು ತಿಳಿದುಬರುತ್ತದೆ.

ಈವರೆಗೆ ನಡೆದ ಸಂಶೋಧನೆಗಳಿಂದಾಗಿ ಮೌರ್ಯ ಸಾಮ್ರಾಜ್ಯವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಭಾಗಗಳಲ್ಲದೆ, ದಾವಣಗೆರೆ ಜಿಲ್ಲೆಯ ಕೆಲವು ಭಾಗಗಳನ್ನು ಒಳಗೊಂಡಿದ್ದುದಾಗಿ ತಿಳಿದುಬಂದಿದೆ. ಜಗಲೂರು ತಾಲೂಕಿನ ಆಸಗೋಡು ಈ ಹಿಂದೆ ಅಶೋಕ ಪಟ್ಟಣವೆಂದು ಕರೆಯಲ್ಪಡುತ್ತಿತ್ತು. ಇಲ್ಲಿ ಬೌದ್ಧಧರ್ಮವು ವ್ಯಾಪಿಸಿದ್ದುದರ ಸೂಚನೆಗಳು ಸಿಕ್ಕಿವೆ.[೧೮೮] ದಾವಣಗೆರೆ ಸಮೀಪದ ಶ್ಯಾಮನೂರು, ಆಸಗೋಡು, ಬೇತೂರುಗಳಲ್ಲಿ[೧೮೯] ಬೌದ್ಧರಿಗೆ ಸಂಬಂಧಿಸಿದ ಅವಶೇಷಗಳು ದೊರೆತಿವೆ.

ಈ ಮೇಲ್ಕಂಡ ಎಲ್ಲಾ ಆಧಾರಗಳನ್ನು ಒಟ್ಟಾಗಿ ನೋಡಿದಾಗ ದಾವಣಗೆರೆ ಜಿಲ್ಲೆ ಹಲವು ಶತಮಾನಗಳ ಕಾಲ ಮೌರ್ಯರ ಆಳ್ವಿಕೆಗೆ ಒಳಪಟ್ಟು, ಅವರ ಸಾಂಸ್ಕೃತಿಕ ಪರಂಪರೆಯ ಮುನ್ನಡೆಗೆ ಕಾರಣವಾಗಿರುವುದನ್ನು ಮನಗಾಣಬಹುದು.

### ೨.೩.೨. ಶಾತವಾಹನರು

ಮೌರ್ಯ ಸಾಮ್ರಾಜ್ಯ ಪತನದ ನಂತರ ಶಾತವಾಹನರು ದಖ್ಖನ್ ಮತ್ತು ಕರ್ನಾಟಕದ ಭೂಪ್ರದೇಶವನ್ನು ಆಳಿದ್ದಾರೆ. ಕರ್ನಾಟಕದ ಬಹುಭಾಗವನ್ನಾಳಿದ ಮೊಟ್ಟ ಮೊದಲನೆಯ ಪ್ರಮುಖ ರಾಜವಂಶದವರಾದ ಈ ಶಾತವಾಹನರು ತಮ್ಮನ್ನು 'ಕುಂತಳಸ್ವಾಮಿ'ಗಳೆಂದು ಕರೆದುಕೊಂಡದ್ದುಂಟು. ಮೌರ್ಯರಂತೆ ಶಾತವಾಹನರ ಆಳ್ವಿಕೆಗೆ ಸಂಬಂಧಿಸಿದ ಯಾವುದೇ ಪುರಾತತ್ವ ಆಕರಗಳು ಜಿಲ್ಲೆಯಲ್ಲಿ ಈವರೆಗೆ ಕಂಡುಬಂದಿಲ್ಲ. ಆದರೂ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಚಂದ್ರವಳ್ಳಿ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ದೊರೆತಿರುವ ಪುರಾತತ್ವ ಅವಶೇಷಗಳನ್ನು ಆಧರಿಸಿ ಜಿಲ್ಲೆಯಲ್ಲಿ ಅವರ ಆಳ್ವಿಕೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಗಡಿಭಾಗದ ಜಿಲ್ಲೆಯಾದ ಬಳ್ಳಾರಿಯ ಮ್ಯಾಕದೋಣಿಯಲ್ಲಿ ದೊರೆತಿರುವ ಇವರ ಕಾಲದ ಶಾಸನವೊಂದು ಈ ಪ್ರದೇಶವನ್ನು 'ಶಾತವಾಹನೀಹಾರ' ಎಂದು ಉಲ್ಲೇಖಿಸುತ್ತದೆ.[೧೯೦] ಪುಲಮಾಯಿಯ ಈ ಶಾಸನದಿಂದ ಶಾತವಾಹನರ ಕೊನೆಯ ಅರಸರು ತಮ್ಮ ಆಳ್ವಿಕೆಯನ್ನು ಈ ಪ್ರದೇಶದವರೆಗೂ ವಿಸ್ತರಿಸಿದ್ದರೆಂದು ತಿಳಿದುಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿ ಉತ್ಖನನಗಳು ಈ ಭಾಗದಲ್ಲಿ ಶಾತವಾಹನರ ಆಳ್ವಿಕೆಯಿರುವುದನ್ನು ಖಚಿತಪಡಿಸುತ್ತವೆ. ಚಂದ್ರವಳ್ಳಿಯಲ್ಲಿ ಕಂಡುಬರುವ ನಾಣ್ಯ, ಇಟ್ಟಿಗೆ, ಬಣ್ಣದ ಗಾಜಿನ ಬಳೆ, ಕಪ್ಪೆಚಿಪ್ಪು, ಮಣಿಗಳು ಹಾಗೂ ಬ್ರಹ್ಮಗಿರಿ ನೆಲೆಯಲ್ಲಿ ಕಂಡುಬಂದ ನಾಣ್ಯ ಮತ್ತು ಇಟ್ಟಿಗೆಯ ಕಟ್ಟಡಗಳು ಶಾತವಾಹನರ ಕಾಲಕ್ಕೆ ಸೇರಿದವುಗಳೆಂದು ಅಭಿಪ್ರಾಯಪಡಲಾಗಿದೆ.[೧೯೧] ಈ ನೆಲೆಗಳಲ್ಲಿ ದೊರೆತ ರೋಮನ್ ನಾಣ್ಯ ಮತ್ತು ಗುಣಮಟ್ಟದ ಮಡಕೆಗಳು ಪ್ರಾಚೀನ ಕಾಲದಲ್ಲಿಯೇ ಇದ್ದಂತಹ ವಿದೇಶಿ ಸಂಪರ್ಕವನ್ನು ಸಾಬೀತುಪಡಿಸುತ್ತವೆ. ಇದರಿಂದ ದಾವಣಗೆರೆಯನ್ನು ಒಳಗೊಂಡಂತೆ ಈ ಪ್ರದೇಶ ಆ ಕಾಲದಲ್ಲಿಯೇ ರೋಮ್ ಮತ್ತು ಗ್ರೀಕ್‌ರೊಡನೆ ಸಂಪರ್ಕ ಹೊಂದಿರುವುದನ್ನು ಊಹಿಸಬಹುದಾಗಿದೆ.

ಚಿತ್ರದುರ್ಗದ ಚಿಪ್ಪಿನಕೆರೆ[೯೨] ನೆಲೆಯಲ್ಲಿಯೂ ಶಾತವಾಹನ ಕಾಲಕ್ಕೆ ಸೇರಿದ ಸೀಸದ ನಾಣ್ಯಗಳು, ಕಾರ್ಲೇನಿಯನ್, ಅಗೇಟ್‌ನಿಂದ ತಯಾರಿಸಿದ ಮಣಿಗಳು ಮತ್ತು ಬಿಳಿ ಬಣ್ಣದ ಮಣಿಗಳು ದೊರೆತಿವೆ. ಇದರಿಂದಾಗಿ ಚಿಪ್ಪಿನಕೆರೆ ಮತ್ತು ಅದರ ಸುತ್ತಲಿನ ಪ್ರದೇಶವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿರುವುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದಾವಣಗೆರೆಯ ಅಣಜಿಯಲ್ಲಿ[೯೩] ದೊರೆತಿರುವ ಅವಶೇಷಗಳು ಹಾಗೂ ಜಗಲೂರು ತಾಲೂಕಿನ ಆಕನೂರು[೯೪] ಗ್ರಾಮದಲ್ಲಿ ದೊರೆತಿರುವ ಅವರ ಕಾಲದ ಬಿಳಿ ಬಣ್ಣದ ರೇಖಾಚಿತ್ರಗಳನ್ನೊಳಗೊಂಡ ಮಡಕೆಗಳು ದೊರೆತಿವೆ. ಅವುಗಳನ್ನು ಆಧರಿಸಿ ದಾವಣಗೆರೆ ಪರಿಸರವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿರುವುದನ್ನು ಖಚಿತವಾಗಿ ಹೇಳಬಹುದು. ಚಿತ್ರದುರ್ಗ ಜಿಲ್ಲೆ ಶಾತವಾಹನರ ಆಳ್ವಿಕೆಗೆ ಒಳಪಟ್ಟಿದ್ದು ಕ್ರಿ.ಶ.ಸು. ೨೦೦ರ ನಂತರ. ಈ ಜಿಲ್ಲೆಯ ಚಂದ್ರವಳ್ಳಿಯನ್ನು ಅವರು ವಾಸಸ್ಥಾನವನ್ನಾಗಿ ಮಾಡಿಕೊಂಡಿರಬಹುದು. ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತ ಪ್ರಮಾಣವನ್ನು ಗಮನಿಸಿಯೇ ಇತಿಹಾಸಕಾರರು ಚಂದ್ರವಳ್ಳಿ ಅವರ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ಊಹಿಸಿದ್ದಾರೆ.[೯೫]

ಒಟ್ಟಾರೆಯಾಗಿ ದಾವಣಗೆರೆ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆಯನ್ನು ನಿಖರವಾದ ಆಧಾರಗಳಿಂದ ಗುರುತಿಸದೇ ಇದ್ದರೂ ಚಿತ್ರದುರ್ಗ ಮತ್ತು ಬಳ್ಳಾರಿ ಗಡಿಭಾಗದ ಈ ಜಿಲ್ಲೆಗಳಲ್ಲಿ ದೊರೆತಿರುವ ಅವಶೇಷಗಳಿಂದ ಅವರ ಆಳ್ವಿಕೆಯನ್ನು ಗುರುತಿಸಬಹುದು.

### ೨.೩.೩. ಕದಂಬರು

ಕರ್ನಾಟಕ ಚರಿತ್ರೆಯಲ್ಲಿ ಶಾತವಾಹನರ ಅಧಿಪತ್ಯ ಕೊನೆಗೊಂಡ ಮೇಲೆ ಪಲ್ಲವರ ಆಳ್ವಿಕೆ ಆರಂಭಗೊಳ್ಳುತ್ತದೆ. ಮುಂದೆ ಪಲ್ಲವರನ್ನು ಸೋಲಿಸಿ ಈ ಭಾಗದಲ್ಲಿ ಅಧಿಕಾರ ಸ್ಥಾಪಿಸಿದ ಕೀರ್ತಿ ಬನವಾಸಿ ಕದಂಬರಿಗೆ ಸಲ್ಲುತ್ತದೆ. ಕರ್ನಾಟಕವನ್ನಾಳಿದ ಪ್ರಥಮ ಕನ್ನಡ ಮನೆತನ ಇದಾಗಿದೆ. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೩ನೇ ಶತಮಾನದಿಂದ ೭ನೇ ಶತಮಾನದ ಮಧ್ಯದವರೆಗೆ ಸು. ೩೭೫ ವರ್ಷಗಳ ಕಾಲ ಆಳ್ವಿಕೆ ಮಾಡಿದ್ದಾರೆ.[೯೬] ಗೋವೆ, ಹಾನಗಲ್ಲು, ಬೇಲೂರು, ಉಚ್ಚಂಗಿ, ನಾಗರಖಂಡ, ಕರಡಿಕಲ್ಲ, ಕೊಟ್ಟುರು ಕಲಿಂಗ ಬಯಲುನಾಡ ಹಾಗೂ ಬಂಕಾಪುರ ಪ್ರಾಚೀನ ಕದಂಬರ ಹಲವು ಶಾಖೆಗಳಾಗಿವೆ. ಮೂಲ ಕದಂಬರೊಂದಿಗೆ ಸಂಬಂಧ ಕಲ್ಪಿಸುವುದು ಕಷ್ಟಸಾಧ್ಯವಾದರೂ ನಂತರ ಬಂದ ಕದಂಬರು ತಮ್ಮನ್ನು 'ಬನವಾಸಿ ಪುರಾದೀಶ್ವರ'ರೆಂದೇ ಕರೆದುಕೊಂಡಿದ್ದಾರೆ.[೯೭] ಚಿತ್ರದುರ್ಗ ಹತ್ತಿರ ಚಂದ್ರವಳ್ಳಿಯಲ್ಲಿ ದೊರೆತಿರುವ ಮಯೂರವರ್ಮನ ಶಾಸನ ಕದಂಬರ ಆರಂಭದ ಇತಿಹಾಸವನ್ನು ತಿಳಿಸುವಲ್ಲಿ ಅತಿ ಮುಖ್ಯವೆನಿಸಿದೆ.[೯೮] ದಾವಣಗೆರೆ ಕದಂಬರ ಆಳ್ವಿಕೆಯಲ್ಲಿ ವಿಶಿಷ್ಟ ಸ್ಥಾನ ಪಡೆದಿರುವುದು ಇಲ್ಲಿಯ ಶಾಸನಗಳಿಂದ ತಿಳಿಯುತ್ತದೆ.

ತಾಳಗುಂದ ಶಾಸನದಲ್ಲಿ ಶ್ರೀಪರ್ವತದ ಬಳಿ ಪಲ್ಲವರ ಗಡಿ ರಕ್ಷಣಾ ಪಡೆಯನ್ನು ಸೋಲಿಸಿ ಅಲ್ಲಿನ ಘೋರಾರಣ್ಯದಲ್ಲಿ ಠಾಣ್ಯ ಹೂಡಿ, ಪಲ್ಲವರ ಅಧೀನರಾಗಿದ್ದ ಬೃಹದಾಣರು ಇನ್ನೂ ಮುಂತಾದವರಿಂದ ಕಪ್ಪ ಕಾಣಿಕೆಯನ್ನು ಪಡೆದದ್ದು ಅಲ್ಲದೆ, ಪಶ್ಚಿಮ ಸಮುದ್ರದಿಂದ ಪ್ರೇಹಾರದವರೆಗಿನ ಪ್ರದೇಶವನ್ನು ಪಲ್ಲವರಿಂದ ಪಡೆದುಕೊಂಡನೆಂದು ಉಕ್ತವಾಗಿದೆ.[೧೯೯] ಈ ಶಾಸನದಲ್ಲಿನ ಶ್ರೀಪರ್ವತವೆಂಬುದು ಹರಪನಹಳ್ಳಿ ತಾಲೂಕಿನ 'ಉಚ್ಚಂಗಿದುರ್ಗ'ವೆಂದು ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯಪಟ್ಟಿದ್ದಾರೆ.[೨೦೦] ಉಚ್ಚಂಗಿಯ ಅಧಿಪತಿಯಾದ ಕೃಷ್ಣವರ್ಮನು ತನ್ನ ಹಿರಿಯಣ್ಣನ ಮಗ ಮೃಗೇಶನಿಗೆ ವಿರುದ್ಧವಾಗಿ ಪಲ್ಲವರ ಬೆಂಬಲ ಪಡೆದನು. ರಾಜ್ಯದೊಳಗಿನ ಕಲಹಗಳು ರಾಜ್ಯವು ಇಬ್ಭಾಗವಾಗುವಂತೆ ಮಾಡಿತು. ಒಂದು ಭಾಗವು ತಲಕಾಡಿನ ಗಂಗರ ಬೆಂಬಲ ಪಡೆದು ಬನವಾಸಿ ಶಾಖೆ ಆರಂಭಿಸಿತು. ಮತ್ತೊಂದು ಪಲ್ಲವರ ಹಾಗೂ ಪಾರವಿ ಗಂಗರ ಬೆಂಬಲ ಪಡೆದು ಉಚ್ಚಂಗಿ ಶಾಖೆ ಆರಂಭಿಸಿ ಇವರು ಸು. ೧೧೭ ವರ್ಷಗಳವರೆಗೆ ಆಳ್ವಿಕೆ ಮಾಡಿರುವುದು ತಿಳಿದುಬರುತ್ತದೆ.[೨೦೧] ದಾವಣಗೆರೆ ತಾಲೂಕು ಅಣಜಿಯಲ್ಲಿ ದೊರೆತಿರುವ ಶಿವನಂದವರ್ಮನ ಶಾಸನ ಮಹತ್ವದ್ದಾಗಿದೆ. ನೊಣಕ್ಕಸ ಪಲ್ಲವನಿಗೂ, ಕದಂಬ ಕೃಷ್ಣವರ್ಮನಿಗೂ ತುಮುಲ ಯುದ್ಧ ನಡೆದು ಆ ಯುದ್ಧದಲ್ಲಿ ಕೃಷ್ಣವರ್ಮನ ಸೈನ್ಯವು ಸಂಪೂರ್ಣ ಸೋತುಹೋದುದನ್ನು ಈ ಶಾಸನ ವರ್ಣಿಸುತ್ತದೆ. ಸೋತ ಶಿವನಂದವರ್ಮನು ಭಗ್ನಹೃದಯನಾಗಿ, ದರ್ಭಶಯನನಾಗಿ, ಭೋಗವಿರಕ್ತ ಮಾನಸನಾಗಿ ಸ್ವರ್ಗಪ್ರಾಪ್ತನಾದ ವಿಷಯವನ್ನು ಈ ಶಾಸನ ತಿಳಿಸುತ್ತದೆ. ನೊಣಕ್ಕಸ ಪಲ್ಲವನಿಂದ ಪರಾಭವಗೊಂಡ ಕೃಷ್ಣವರ್ಮನು ಶ್ರೀಪರ್ವತದಿಂದ ಆಳುತ್ತಿದ್ದ ಕದಂಬರ ಶಾಖೆಗೆ ಸೇರಿದವನೆಂದು ಹೇಳಲಾಗಿದೆ.[೨೦೨] ದಾವಣಗೆರೆ ತಾಲೂಕು ಕಾಶೀಪುರ ಗ್ರಾಮದಲ್ಲಿ ಮೂರು ಹಲಗೆಯುಳ್ಳ ಸಿಂಹ ಲಾಂಛನದ ರವಿವರ್ಮನ ತಾಮ್ರಶಾಸನ ದೊರೆತಿದೆ.[೨೦೩] ಕುಮಾರವರ್ಮನ ಕಾಲಕ್ಕೆ ಕದಂಬರ ಮೂಲ ಮನೆತನವು ಎರಡು ಭಾಗವಾಗಿ ಇವನು ಉಚ್ಚಂಗಿಯಿಂದ ಆಳಿದ ಮನೆತನದ ಮೂಲ ಪುರುಷನಾಗಿದ್ದನೆಂದು 'ಕದಂಬಕುಲ' ಕರ್ತೃ ಮೊರೇಸ್ ಅವರ ಅಭಿಪ್ರಾಯವಾಗಿದೆ. ಆದರೆ ಬನವಾಸಿಯಿಂದಲೇ ಆಳಿದ ರವಿವರ್ಮನ ತಂದೆ ಮಾಂಧಾತ ಹಾಗೂ ಮಗ ಹರಿವರ್ಮನು ರವಿವರ್ಮನಂತೆ ಉಚ್ಚಂಗಿಯಿಂದಲೂ ಶಾಸನಗಳನ್ನು ಹೊರಡಿಸಿರುವುದನ್ನು ಗಮನಿಸಿದರೆ ಉಚ್ಚಂಗಿಯು ಕದಂಬರ ಪ್ರಾಂತ್ಯದ ಒಂದು ಮುಖ್ಯ ಪಟ್ಟಣವಾಗಿದ್ದು ಮಾಂಧಾತ, ರವಿವರ್ಮ ಮೊದಲಾದವರು ಯುವರಾಜರಾಗಿ ಆಳ್ವಿಕೆ ಮಾಡಿರಬೇಕು.[೨೦೪] ಕದಂಬಳಿಕೆ ಸಾವಿರ ನಾಡಿನ ಮೊದಲ ಆಳ್ವಿಕೆ ಕದಂಬರಿಗೆ ಸಲ್ಲುತ್ತದೆ. ಹರಪನಹಳ್ಳಿ ತಾಲೂಕಿನ 'ಕದಂಬಗೆರೆ'ಯೆಂಬ ಸ್ಥಳವು ಕದಂಬಗಳಿಗೆ ಸಾವಿರನಾಡಿನ ಕೇಂದ್ರ ಸ್ಥಳವಾಗಿದ್ದಿರಬೇಕೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೨೦೫]

ಹರಿಹರದಲ್ಲಿರುವ ಶಾಸನವೊಂದು ಕದಂಬ ವಂಶದ ಪೌರಾಣಿಕ ಹಿನ್ನೆಲೆಯನ್ನು ವರ್ಣಿಸುತ್ತದೆ.[೨೦೬] ಬಳ್ಳೇಶ್ವರದ[೨೦೭] ವೀರಗಲ್ಲು ಶಾಸನ ಬನವಾಸಿ-೧೨೦೦೦ನ್ನು ಆಳುತ್ತಿದ್ದ ಮಾರಸತ್ಯ ಮತ್ತು ಇಂದ್ರನ ಕಾಲದಲ್ಲಿ ಹಾಳಗೌಂಡನು ಹೋರಾಟವೊಂದರಲ್ಲಿ ಸ್ವರ್ಗಸ್ಥನಾದ ಮತ್ತು ಅವನಿಗೆ ಭೂದಾನ ನೀಡಿದ್ದನ್ನು ಉಲ್ಲೇಖಿಸಿದೆ. ಬೆಳಗುತ್ತಿಯ[೨೦೮] ಶಾಸನ ಮಹಾಮಂಡಳೇಶ್ವರ ತೈಲಪನೊಂದಿಗೆ ಬೋಪಣ್ಣ ಎಂಬುವನು ವೆಳವಾಳಿಯಾಗಿರುವುದನ್ನು ತಿಳಿಸುತ್ತದೆ. ಮಲ್ಲಿಗೇನಹಳ್ಳಿ[೨೦೯] ಶಾಸನವು ತೈಲಪನ ಅಧಿಕಾರಿ ದಸರಸನ ವೀರಮರಣವನ್ನು ತಿಳಿಸುತ್ತದೆ. ಮೇಲಿನ ಆಧಾರಗಳಿಂದ ದಾವಣಗೆರೆ ಜಿಲ್ಲೆಯ ಬಹುತೇಕ ಭಾಗಗಳು ಕದಂಬರ ಆಳ್ವಿಕೆಗೆ ಒಳಗಾಗಿರುವುದನ್ನು ಕಾಣಬಹುದು.

## ೨.೩.೪. ಬಾದಾಮಿ ಚಾಲುಕ್ಯರು

ಕದಂಬರ ನಂತರ ಕರ್ನಾಟಕವನ್ನು ಆಳಿದ ಬಲಿಷ್ಠ ರಾಜವಂಶ ಬಾದಾಮಿ ಚಾಲುಕ್ಯರು. ಇವರಲ್ಲಿ ಕಲ್ಯಾಣ ಮತ್ತು ವೆಂಗಿ ಚಾಲುಕ್ಯರು ಎಂಬ ಎರಡು ಶಾಖೆಗಳಿವೆ. ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದ ಈ ರಾಜಮನೆತನವನ್ನು ಬಾದಾಮಿ ಚಾಲುಕ್ಯರೆಂದು ಕರೆಯಲಾಗಿದೆ. ಕ್ರಿ.ಶ. ೬ನೇ ಶತಮಾನದಿಂದ ೮ನೇ ಶತಮಾನದವರೆಗೆ ಆಳಿದ ಇವರು ಇಡೀ ದಕ್ಷಿಣ ಭಾರತದಲ್ಲಷ್ಟೇ ಅಲ್ಲದೆ ಉತ್ತರ ಭಾರತದಲ್ಲಿಯೂ ತಮ್ಮ ರಾಜಕೀಯ ನೆರಳನ್ನು ಹರಡಿದ್ದಾರೆ. ಕದಂಬರನ್ನು ಸಂಪೂರ್ಣ ಪದಚ್ಯುತಿಗೊಳಿಸಿ, ಗಂಗರನ್ನು ತಮ್ಮ ಸಾಮಂತರನ್ನಾಗಿ ಮಾಡಿಕೊಂಡು ಅಖಂಡ ಕರ್ನಾಟಕವನ್ನು ಸು. ೨೦೦ ವರ್ಷಗಳ ಕಾಲ ಆಳ್ವಿಕೆ ಮಾಡಿದ್ದಾರೆ.[೨೧೦]

ಅಧ್ಯಯನ ಪ್ರದೇಶದ ಹರಿಹರದಲ್ಲಿನ ಶಾಸನವೊಂದು ಇವರ ಆಡಳಿತದ ಮೇಲೆ ಬೆಳಕು ಚೆಲ್ಲುತ್ತದೆ. ಈ ವಂಶದ ಒಂದನೇ ವಿಕ್ರಮಾದಿತ್ಯನ ನಂತರ ಅಧಿಕಾರಕ್ಕೆ ಬಂದ ವಿನಯಾದಿತ್ಯನ ಕಾಲದ ಶಾಸನ ಇದಾಗಿದೆ. ಈ ಶಾಸನವು ಬಾದಾಮಿ ಚಾಲುಕ್ಯರ ವಂಶಾವಳಿ ಹಾಗೂ ಅವರ ಮೂಲವನ್ನು ವಿವರಿಸುತ್ತದೆ. ಅಲ್ಲದೆ ಇದು ಒಂದನೆಯ ಪುಲಿಕೇಶಿ ಮಾಡಿದ ಅಶ್ವಮೇಧಯಾಗ, ಎರಡನೆಯ ಪುಲಿಕೇಶಿಯು ಹರ್ಷನನ್ನು ಸೋಲಿಸಿದ ವಿಚಾರ ಹಾಗೂ ಕ್ರಿ.ಶ. ೬೯೪ರಲ್ಲಿ ವಿನಯಾದಿತ್ಯನು ಹರಿಹರದ ಹತ್ತಿರ ಕರಂಜಪತ್ರ ಗ್ರಾಮದಲ್ಲಿ ಸೈನ್ಯವನ್ನು ಬೀಡುಬಿಟ್ಟಾಗ ಹರಿಹರ ದೇವರಿಗೆ ನೀಡಿದ ದಾನ, ಅವನ ರಾಜನೀತಿ, ಪರಾಕ್ರಮ, ರಾಜ್ಯವಿಸ್ತಾರ ಸ್ವರೂಪ, ಬಿರುದಾವಳಿಗಳು ಮತ್ತು ಅವನ ಸಾಮಂತರ ಬಗ್ಗೆ ತಿಳಿಸುತ್ತದೆ. ಮೆದಕೆರೆಯ[೨೧೨] ವಿಜಯಾದಿತ್ಯನ ಶಾಸನದಿಂದ ಅವನು ದಕ್ಷಿಣದ ಮೇಲೆ ವಿಜಯ ಸಾಧಿಸಿದ ನೆನಪಿಗಾಗಿ 'ಚೆ(ಪಿ)ಂಗಿ ಮಂಡಲೇಶ್ವರನೆಂಬ' ಬಿರುದನ್ನು ಧರಿಸಿದ್ದನೆಂದು ಈ ಶಾಸನದಿಂದ ತಿಳಿದುಬರುತ್ತದೆ. ನಲ್ಕುಂದ[೨೧೩] ಗ್ರಾಮದ ಶಾಸನವು ಇಮ್ಮಡಿ ಪುಲಿಕೇಶಿಯ ಅನಂತರದ ಕಾಲದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಅಭಿನವಾದಿತ್ಯನ ಶಾಸನವೆಂದೇ ಪ್ರಸಿದ್ಧವಾದ ಈ ಶಾಸನದಲ್ಲಿ ನಲ್ಕುಂದ

ಗ್ರಾಮವನ್ನು 'ನಲ್ಲಿಕುಡಿ' ಎಂದು ಹೆಸರಿಸಿದೆ. ಅಭಿನವಾದಿತ್ಯನು ತನ್ನನ್ನು ಸತ್ಯಾಶ್ರಯ, ಪರಮೇಶ್ವರ ಹಾಗೂ ಪೃಥ್ವೀವಲ್ಲಭ ಮಹಾರಾಜಾಧಿರಾಜ ಎಂದು ಈ ಶಾಸನದಲ್ಲಿ ಕರೆದುಕೊಂಡಿದ್ದಾನೆ. ಇದರಿಂದಾಗಿ ಈತನು ಪುಲಿಕೇಶಿಯ ನಂತರ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದಂತೆ ತೋರುತ್ತದೆ.

ಮೇಲ್ಕಂಡ ಶಾಸನಗಳ ವಿಶ್ಲೇಷಣೆಯಿಂದಾಗಿ ದಾವಣಗೆರೆ ಜಿಲ್ಲೆ ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿರುವುದು ಕಂಡುಬರುತ್ತದೆ.

**೨.೩.೫. ರಾಷ್ಟ್ರಕೂಟ**

ರಾಷ್ಟ್ರಕೂಟರು ತಮ್ಮ ರಾಜಕೀಯ ಜೀವನವನ್ನು ಬಾದಾಮಿ ಚಾಲುಕ್ಯರ ಮಾಂಡಲಿಕರಾಗಿ ಆರಂಭಿಸಿದ್ದಾರೆ. ದಂತಿದುರ್ಗನು ಬಾದಾಮಿ ಚಾಲುಕ್ಯರ ಆಳ್ವಿಕೆಯನ್ನು ಕಡೆಗಣಿಸಿ ರಾಷ್ಟ್ರಕೂಟರ ಅಧಿಪತ್ಯವನ್ನು ಸ್ಥಾಪಿಸಿದನು. ಇವರ ಪ್ರಧಾನ ಶಾಖೆ ಮಾನ್ಯಖೇಟದಿಂದ(ಮಳಖೇಡ) ಆಳ್ವಿಕೆ ನಡೆಸುತ್ತಿದ್ದುದರಿಂದ ಇವರು 'ಮಾನ್ಯಖೇಟ ರಾಷ್ಟ್ರಕೂಟರು' ಎಂದೇ ಗುರುತಿಸಿಕೊಂಡಿದ್ದಾರೆ. ಚೋಳ, ಗಂಗ ಹಾಗೂ ನೊಳಂಬರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿದ್ದ ಇವರು ಸಾಂಸ್ಕೃತಿಕವಾಗಿ ಪ್ರಮುಖ ಕೊಡುಗೆಗಳನ್ನು ನಮ್ಮ ನಾಡಿಗೆ ನೀಡಿದ್ದಾರೆ. ಕ್ರಿ.ಶ. ಸು. ೭೯೮ ರಿಂದ ೯೮೨ರವರೆಗೆ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ.

ಅಧ್ಯಯನ ಪ್ರದೇಶದ ನೀಲಗುಂದದಲ್ಲಿರುವ[೨೧೪] ಕ್ರಿ.ಶ. ೮೬೬ ಶಾಸನವು ಒಂದನೆಯ ಅಮೋಘವರ್ಷನನ್ನು 'ಅತಿಶಯಧವಳ' ಎಂದು ಉಲ್ಲೇಖಿಸಿದೆ. ಇವನ ಕಾಲದ ಮತ್ತೊಂದು ಶಾಸನ ಮಾದೇನಹಳ್ಳಿ[೨೧೫] ಗ್ರಾಮದಲ್ಲಿದೆ. ಈ ಶಾಸನವು ಮಾದೂರಿನ ವೀರನೊಬ್ಬ ಹಸುಗಳಿಗಾಗಿ ಕಾದಿ ಸ್ವರ್ಗಸ್ಥನಾದಾಗ ನೀಡಿದ ಭೂದಾನವನ್ನು ತಿಳಿಸುತ್ತದೆ. ಕ್ರಿ.ಶ. ೮೮೮ರ ಕಾಡಜ್ಜಿಯ ಶಾಸನವು ಕನ್ನರದೇವನನ್ನು (ಎರಡನೆಯ ಕೃಷ್ಣ) ಉಲ್ಲೇಖಿಸುವುದರೊಂದಿಗೆ ವೇಶ್ಯಾವೃತ್ತಿಯು ಅಂದಿನ ಕಾಲದ ಶ್ರೇಷ್ಠ ಪದ್ಧತಿಯೆಂದು ತಿಳಿಸುತ್ತದೆ.[೨೧೬] ಕನ್ನರದೇವನ ಕಾಲದ ಇನ್ನೊಂದು ಶಾಸನ ಬಸವನಕೋಟೆ ಗ್ರಾಮದಲ್ಲಿದೆ. ಇದೊಂದು ವೀರಗಲ್ಲು ಶಾಸನವಾಗಿದ್ದು ಕುತೂಹಲಕರ ಸಂಗತಿಗಳನ್ನು ಹೇಳುತ್ತದೆ. ಅಕಾಲವರ್ಷನು ರಾಜ್ಯವಾಳುತ್ತಿದ್ದಾಗ, ಕಾಸಿಕಜ್ಜನ ಆಜ್ಞೆಯ ಮೇರೆಗೆ ಸಿರಿಯಣ್ಣನು ಪಳ್ಳಿಯಲ್ಲಿ ಕುದುರೆಯೊಂದನ್ನು ನಾಶ ಮಾಡಿದನು. ಎರೆಯಪ್ಪನೆಂಬುವನು ಪ್ರಾಣತ್ಯಾಗ ಮಾಡಿದನು. ನಾಗವರ್ಮ, ಅಜವಮ್ಮ ಎಂಬುವರು ನೊಳಂಬರ ವಿರುದ್ಧ ಹೋರಾಡಿ ಮಡಿಯುತ್ತಾರೆ. ಇವರ ಸ್ಮಾರಕವಾಗಿ ವೀರಗಲ್ಲನ್ನು ನಿಲ್ಲಿಸಲಾಗಿತ್ತು. ಆದರೆ ನೊಳಂಬರು ಅದನ್ನು ಸುಟ್ಟು ಹಾಕಿದರು. ಆಗ ಮತ್ತೆ ಸ್ಮಾರಕವನ್ನು ಅವರಿಗೆಂದು ನಿರ್ಮಾಣ ಮಾಡಲಾಯಿತು ಎಂಬ ವಿಷಯವನ್ನು ಶಾಸನ ಉಲ್ಲೇಖಿಸುತ್ತದೆ.

ಈ ವಂಶದ ಮೂರನೆಯ ಇಂದ್ರನ ಕಾಲದ ಎರಡು ಶಾಸನಗಳು ಹರಪನಹಳ್ಳಿ ತಾಲೂಕು ಕಡಬಗೆರೆ[೨೧೮] ಗ್ರಾಮದಲ್ಲಿವೆ. ಕ್ರಿ.ಶ. ೯೨೨ರ ಒಂದು ಶಾಸನದಲ್ಲಿ ಇಂದ್ರನ ಮಹಾಸಾಮಂತ ಬಿಜ್ಜನೆಂಬುವವನು ಕೋಗಳಿ-೫೦೦, ಮಾಸವಾಡಿ-೧೪೦ನ್ನು ಆಳುತ್ತಿದ್ದಾಗ

ಕದಂಬ ವಂಶದ ಮುದುದರದೇವಯ್ಯನ ಮಗ ಮಾಳಯ್ಯನು ನೊಳಂಬ ಅಯ್ಯಪದೇವನ ಮಗ ಅಣ್ಣಿಗನು ಪಡುಗಲ್ಲನ್ನು ಮುತ್ತಿದಾಗ ಹೋರಾಡಿ ಮಡಿದಿರುವುದನ್ನು ತಿಳಿಸುತ್ತದೆ. ಇದೇ ಕಾಲದ ಮತ್ತೊಂದು ಶಾಸನವು ಅಯ್ಯಪದೇವನ ಮಗನಾದ ಅಣ್ಣಿಗನು ಪಡುಗಲ್ಲನ್ನು ಮುತ್ತಿದಾಗ ಹೋರಾಡಿ ಸತ್ತಿರುವುದನ್ನು ಉಲ್ಲೇಖಿಸುತ್ತದೆ. ಬಾಗಳಿಯ[೨೧೯] ಕ್ರಿ.ಶ. ಸು. ೧೦ನೇ ಶತಮಾನದ ಶಾಸನವು ಮೂರನೆಯ ಇಂದ್ರ 'ರಟ್ಟಕಂದರ್ಪನೆ' ಎಂಬ ಬಿರುದನ್ನು ಹೊಂದಿದ್ದನೆಂದು ತಿಳಿಸುತ್ತದೆ. ನಂದಿಗುಡಿಯ[೨೨೦] ಕ್ರಿ.ಶ. ೯೩೦ರ ಶಾಸನ ಈ ವಂಶದ ನಾಲ್ಕನೆಯ ಗೋವಿಂದನ ಕಾಲದ್ದಾಗಿದೆ. 'ಅಲ್ಲಿಗ'ನೆಂಬುವನು ಕೀಟ್ಗೆಂಟಿಯಾಗಿ ಮರಣವನ್ನಪ್ಪಿದಾಗ ಅವನಿಗೆಂದು ನೀಡಿದ ಭೂದಾನದ ವಿವರಣೆಯನ್ನು ನೀಡುತ್ತದೆ. 'ಪಾಡಿಗನೊಂಬಾ' ಎಂಬ ವೀರನು ರಾಷ್ಟ್ರಕೂಟರ ದೊರೆ 'ಗೋವಿಂದ'ರವಲ್ಲಭ(ನಾಲ್ಕನೆಯ ಗೋವಿಂದ)ನ ಕಾಲದಲ್ಲಿ ವೀರದಾಳಿಯಲ್ಲಿ ಸತ್ತಾಗ ಅಯ್ಯಪಯ್ಯ ಎಂಬುವವನು ಸತ್ತವನ ಕುಟುಂಬಕ್ಕೆ ಗದ್ದೆ ಮತ್ತು ಹೊಲವನ್ನು ದಾನ ನೀಡಿರುವುದನ್ನು ಕ್ರಿ.ಶ. ೯೩೧-೩೨ರ ಚಿರಸ್ತಹಳ್ಳಿ[೨೨೧] ಗ್ರಾಮದ ಶಾಸನ ಉಲ್ಲೇಖಿಸುತ್ತದೆ. ನಾಲ್ಕನೆಯ ಗೋವಿಂದನ ಕಾಲದ ಮತ್ತೊಂದು ಶಾಸನ ಸೊರಟೂರಿನಲ್ಲಿದೆ.[೨೨೨] ಈ ಶಾಸನವು ಸಿರಿಯಕ್ಕನೆಂಬುವವಳು ವೀರಗಲ್ಲನ್ನು ನಿಲ್ಲಿಸಿದಳೆಂದು ಉಲ್ಲೇಖಿಸಿದೆ.

ಈ ವಂಶದ ಮೂರನೇ ಕೃಷ್ಣನ ನಾಲ್ಕು ಶಾಸನಗಳು ಜಿಲ್ಲೆಯಲ್ಲಿ ಕಂಡುಬಂದಿವೆ. ಕ್ರಿ.ಶ. ೯೪೪-೪೫ರ ಬಾಗಳಿಯ ಶಾಸನವು ದೋವಯ್ಯನೆಂಬುವನು ಊರಿನ ತುರುಗಳ ದಾಳಿಯಲ್ಲಿ ಮಡಿದಿರುವುದನ್ನು ತಿಳಿಸುತ್ತದೆ.[೨೨೩] ಮೂರನೇ ಕೃಷ್ಣನು ನಿಗುಂಬೂರು ಗ್ರಾಮವನ್ನು ತನ್ನ ಹೆಸರಿನಲ್ಲಿ ದಾನ ನೀಡಿದನೆಂದು ಕ್ರಿ.ಶ. ೯೫೧ರ ಹಿರೇಕೋಗಿಲೂರಿನ ತಾಮ್ರಪಟ ಶಾಸನದಿಂದ ತಿಳಿಯುತ್ತದೆ.[೨೨೪] ಕನ್ನರದೇವನ ಸಾಮಂತರಾದ ಕೊಟ್ಟಯ್ಯ ಮತ್ತು ಧೋರಪಯ್ಯ ಎಂಬುವರು ನೀಡಿದ ದಾನದ ವಿವರಗಳನ್ನು ಬಾಗಳಿಯ ಶಾಸನವೊಂದು ನೀಡುತ್ತದೆ.[೨೨೫] ಕ್ರಿ.ಶ. ೯೭೨ರ ಬಾಗಳಿ ಮತ್ತೊಂದು ಶಾಸನವು ಈ ವಂಶದ ಖೊಟ್ಟಿಗದೇವನನ್ನು ಉಲ್ಲೇಖಿಸುತ್ತದೆ.[೨೨೬] ಹಳ್ಳಿಕೆರೆಯ ಕ್ರಿ.ಶ. ೧೦೭೩ರ ಶಾಸನ ಅಸಗರಸನ ಕಾಲದ್ದಾಗಿದೆ. ಈ ಶಾಸನದಿಂದ ಅಸಗರಸನು ಸ್ವಯಂಭೂ ಮಲ್ಲಿಕಾರ್ಜುನ, ಆದಿತ್ಯದೇವರ ದೇವಾಲಯ ಮತ್ತು ಗೋಪುರವನ್ನು ಕಟ್ಟಿಸಿ ಪೂಜಾ ಕಾರ್ಯಗಳಿಗೆ ಭೂದಾನ ಮಾಡಿರುವುದನ್ನು ತಿಳಿಸುತ್ತದೆ.[೨೨೭] ಕ್ರಿ.ಶ. ೯೦೨ರ ಕೊಡಗನೂರು ಶಾಸನ ಈ ವಂಶದ ಎರಡನೆಯ ಕರ್ಕನನ್ನು ಉಲ್ಲೇಖಿಸುತ್ತದೆ.[೨೨೮]

ಈ ಮೇಲಿನ ಶಾಸನಗಳಲ್ಲದೆ ಕೊಗ್ಗನೂರು, ಚದರಗೋಳ, ಕೋಗಲೂರುಗಳಲ್ಲಿ ಇವರ ಕಾಲದ ದೇವಾಲಯಗಳಿವೆ. ಕೆಲವು ಗ್ರಾಮಗಳಲ್ಲಿ ಇವರ ಕಾಲದ ಶಾಸನರಹಿತವಾದ ವೀರಗಲ್ಲುಗಳು ಕಂಡುಬರುತ್ತವೆ. ಈ ಎಲ್ಲಾ ಆಧಾರಗಳಿಂದ ದಾವಣಗೆರೆ ಜಿಲ್ಲೆ ರಾಷ್ಟ್ರಕೂಟರ ಪ್ರಬಲವಾದ ಆಳ್ವಿಕೆಗೆ ಒಳಗಾಗಿರುವುದು ಕಂಡುಬರುತ್ತದೆ.

### ೨.೩.೬. ಕಲ್ಯಾಣ ಚಾಲುಕ್ಯರು

ರಾಷ್ಟ್ರಕೂಟರಿಂದ ಪರಾಜಿತರಾಗಿದ್ದ ಬಾದಾಮಿ ಚಾಲುಕ್ಯ ವಂಶದವರೇ ಮತ್ತೆ ರಾಷ್ಟ್ರಕೂಟರನ್ನು ಸೋಲಿಸಿ ಆಳ್ವಿಕೆ ಮಾಡಿದ್ದಾರೆ. ಕಲ್ಯಾಣವನ್ನು(ಬೀದರ್ ಜಿಲ್ಲೆ) ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದರಿಂದ ಇವರನ್ನು ಕಲ್ಯಾಣ ಚಾಲುಕ್ಯರೆಂದು ಕರೆಯಲಾಗಿದೆ. ಇವರು ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿ ಅದರಲ್ಲೂ ವಿಶೇಷವಾಗಿ ಕರ್ನಾಟಕ ಚರಿತ್ರೆಯಲ್ಲಿ ಮಹತ್ತರ ಪಾತ್ರ ವಹಿಸಿದ್ದಾರೆ.

ಈ ವಂಶದ ಸ್ಥಾಪಕ ಇಮ್ಮಡಿ ತೈಲಪನ ಶಾಸನಗಳು ಅಧ್ಯಯನ ಪ್ರದೇಶದ ಬಾಗಳಿಯಲ್ಲಿ ದೊರೆತಿವೆ. ಕ್ರಿ.ಶ. ೯೮೭ರ ಶಾಸನವು ಆದಿತ್ಯದೇವರಿಗೆ ಬಾಗಳಿಯ ೫೦ ಮಹಾಜನರು ತೋಟವನ್ನು ದತ್ತಿ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ.[೨೨೯] ಕ್ರಿ.ಶ. ೯೯೧ರ ಬಾಗಳಿ ಮತ್ತೊಂದು ಶಾಸನವು ಆಹವಮಲ್ಲ(ಎರಡನೇ ತೈಲಪ) ರಾಷ್ಟ್ರಕೂಟ ದೊರೆ ಕನ್ನರದೇವನು ನಿಗದಿಪಡಿಸಿದ್ದ ಸುಂಕವನ್ನೇ ಬಾಗಳಿಯ ೫೦ ಮಹಾಜನರು ವಿನಂತಿಸಿಕೊಂಡಾಗ ಅದೇ ಸುಂಕವನ್ನು ನಿಗದಿಪಡಿಸಿದ ಮಾಹಿತಿ ಈ ಶಾಸನದಲ್ಲಿದೆ.[೨೩೦] ಕಂದಗಲ್ಲಿನ ಕ್ರಿ.ಶ. ೧೦೦೩ರ ಶಾಸನವು ಐದನೇ ವಿಕ್ರಮಾದಿತ್ಯನ ಕಾಲದಲ್ಲಿ ಕೋಗಳಿ ನಾಡಿನ ಅರಸನ ಸಮಸ್ತ ಪ್ರಧಾನರು ಪ್ರಭಾಚಂದ್ರ ಜಿನಾಲಯಕ್ಕೆ ದತ್ತಿ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ.[೨೩೧] ಕ್ರಿ.ಶ. ೧೦೧೦ರ ಆಸಗೋಡಿನ ಶಾಸನ ದಶವರ್ಮನ ಕಾಲದ್ದಾಗಿದೆ. ಈ ಶಾಸನವು ದಶವರ್ಮನ ಮಗ ಬಣಯುತ ಆಳುತ್ತಿದ್ದಾಗ ಆಸಗೋಡಿನ ಗಾಮಣ್ಣ ಅಸಗಕಾಡಚ ಎಂಬುವನ ಮಗ ಕಾಡವಾಸನೆಂಬುವನು ಬಲಾತ್ಕಾರವಾಗಿ ಕೊಂಡೊಯ್ಯುತ್ತಿದ್ದ ಕಿತ್ತೂರಿನ ಗೋವುಗಳನ್ನು ಬಿಡಿಸಿಕೊಂಡು ಬರಲು ಹೋಗಿ ಹೋರಾಡಿ ಸತ್ತನೆಂದು ತಿಳಿಸುತ್ತದೆ.[೨೩೨] ಈ ಶಾಸನದ ದಶವರ್ಮ ದೊರೆ ಸತ್ಯಾಶ್ರಯನ ಮಗನೆಂದು ಬಿ.ಎಲ್. ರೈಸ್ ಅವರು ಊಹಿಸಿದ್ದಾರೆ. ಐದನೇ ವಿಕ್ರಮಾದಿತ್ಯನು ನೊಳಂಬವಾಡಿ-೩೨೦೦೦, ಕೋಗಳಿ-೫೦೦, ಬಲಕುಂದೆ-೩೦೦, ಕುರುಗೋಡು ಪಟ್ಟಣ ಮತ್ತು ಇತರೆ ಪ್ರದೇಶಗಳನ್ನು 'ಯಿರವ ನೊಳಂಬಾಧಿರಾಜ' ಎಂಬ ಸಾಮಂತ ಅರಸನಿಂದ ಆಳುತ್ತಿದ್ದನು.[೨೩೩] ಕ್ರಿ.ಶ. ೧೦೬೦ರ ಶಾಸನವೊಂದು ಬಾಡದ ನಾರಾಯಣ ದೇವರ ನೈವೇದ್ಯಕ್ಕೆ ದಾನದತ್ತಿ ನೀಡಿದ್ದನ್ನು ತಿಳಿಸುತ್ತದೆ.[೨೩೪] ತ್ರೈಲೋಕ್ಯಮಲ್ಲನ ರಾಣಿ ಹೊಯ್ಸಳ ದೇವಿಯು ತುಂಗಭದ್ರಾ ತೀರದ ಹೊನ್ನಾಳಿಯ ಗಾವುಂಡನಿಗೆ ತೀರ್ಥಕ್ಷೇತ್ರ ಏರ್ಪಡಿಸುವಂತೆ ಸೂಚಿಸಿ, ದಾನ ನೀಡಿರುವುದನ್ನು ಶಾಸನ ಉಲ್ಲೇಖಿಸಿದೆ.[೨೩೪]

ಈ ವಂಶದ ಎರಡನೆಯ ಜಯಸಿಂಹನ ಕಾಲದ ಶಾಸನಗಳು ಜಿಲ್ಲೆಯಲ್ಲಿ ದೊರೆತಿವೆ. ಕ್ರಿ.ಶ. ೧೦೨೮ರಲ್ಲಿ ಕೊಳಹಾಳ್ ಶಾಸನವು ಜಗದೇಕಮಲ್ಲನ ಹೆಸರನ್ನು ಉಲ್ಲೇಖಿಸುತ್ತದೆ. ಬಹುಶಃ ಇದು ಜಯಸಿಂಹನ ಬಿರುದು ಅಥವಾ ಮತ್ತೊಂದು ಹೆಸರು ಜಗದೇಕಮಲ್ಲ ಆಗಿರಬಹುದು.[೨೩೬] ಇದೇ ಜಗದೇಕಮಲ್ಲನ ಹೆಸರನ್ನು ಉಲ್ಲೇಖಿಸುವ ಕ್ರಿ.ಶ. ೧೦೩೬ರ ಮತ್ತೊಂದು ಶಾಸನ ಮುದಹದಡಿ[೨೩೭] ಗ್ರಾಮದಲ್ಲಿದೆ. ಈತನ ಆಳ್ವಿಕೆಯ ಕೊನೆಯ ಕಾಲದ ಶಾಸನ ವಡೇರಹಳ್ಳಿಯಲ್ಲಿದೆ.[೨೩೮]

ಎರಡನೆಯ ಜಯಸಿಂಹನ ಕಾಲದ ಎರಡು ದಾನಶಾಸನಗಳು ಬಾಗಳಿಯಲ್ಲಿವೆ.[೨೩೯] ಕ್ರಿ.ಶ. ೧೦೧೨ರ ಹಿರೆಮಗಳಗೇರಿ ಶಾಸನವು ಮೇಗಣಗೆರೆಯ ವಖ್ಖಾಣಜೀಯರ ಶಿಷ್ಯ ಬ್ರಹ್ಮರಾಸಿಜೀಯರಿಗೆ ದತ್ತಿ ಬಿಟ್ಟಿದ್ದನ್ನು ತಿಳಿಸುತ್ತದೆ. ತಲವಾಗಲು ಗ್ರಾಮದ ಕ್ರಿ.ಶ. ೧೦೩೪ರ ಶಾಸನವು ತಲವಾಗಲು ಭೋಗೇಶ್ವರದೇವರಿಗೆ ಮತ್ತು ಪರಿಚಾರಕರಿಗೆ ಕೆರೆಯ ಕೆಳಗೆ ತೋಟ, ಗದ್ದೆ, ಹೊಲವನ್ನು ದತ್ತಿ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ.[೨೪೦] ಇದೇ ರೀತಿ ವಿವಿಧ ಗ್ರಾಮಗಳನ್ನು ದೇವಸ್ಥಾನಗಳಿಗೆ ದಾನ ನೀಡಿರುವ ಇವನ ಕಾಲದ ಶಾಸನಗಳು ತೆಲಗಿ, ನಿಟ್ಟೂರು, ಮಾನ್ನೆರಮಸಲವಾಡ, ಮುದಿಹದಡಿ, ಕಂಚಿಕೆರೆ, ಉಚ್ಚಂಗಿದುರ್ಗ, ವಡೇರಹಳ್ಳಿ, ಶಿವಪಾದ, ಆವರಗೆರೆ, ಹದಡಿ, ಹಿರೆಬೆನ್ನೂರು, ತುಂಬಿಗೆರೆ ಮುಂತಾದ ಗ್ರಾಮಗಳಲ್ಲಿ ಕಂಡುಬಂದಿವೆ. ಈತನ ಮಗನಾದ ಒಂದನೆಯ ಸೋಮೇಶ್ವರನ ಶಾಸನಗಳೂ ಜಿಲ್ಲೆಯಲ್ಲಿ ದೊರೆತಿವೆ. ಕ್ರಿ.ಶ. ೧೦೪೨ರ ಹದಡಿ ಗ್ರಾಮದ ಶಾಸನ ತ್ರೈಲೋಕ್ಯ ಆಹವಮಲ್ಲನ ಹೆಸರನ್ನು ಉಲ್ಲೇಖಿಸುತ್ತದೆ. ಇದರಿಂದ ಒಂದನೆಯ ಸೋಮೇಶ್ವರನಿಗೆ ತ್ರೈಲೋಕ್ಯ ಆಹವಮಲ್ಲ ಎನ್ನುವ ಬಿರುದುಗಳಿದ್ದುದು ತಿಳಿದುಬರುತ್ತದೆ.

ಕಲ್ಯಾಣ ಚಾಲುಕ್ಯರಲ್ಲೇ ಪ್ರಸಿದ್ಧ ಅರಸನಾದ ಆರನೆಯ ವಿಕ್ರಮಾದಿತ್ಯನು ಕ್ರಿ.ಶ. ೧೦೭೬ರಿಂದ ೧೧೨೬ರವರೆಗೆ ಆಳ್ವಿಕೆ ನಡೆಸಿದ್ದಾನೆ. ಇವನಿಗೆ ವಿಕ್ರಮಾಂಕ, ತ್ರಿಭುವನಮಲ್ಲ ಎಂಬ ಬಿರುದುಗಳಿದ್ದವು. ಸಾಮಂತ ಅರಸರಾಗಿದ್ದ ಉಚ್ಚಂಗಿಯ ಪಾಂಡ್ಯರು ಈತನ ಯುದ್ಧಗಳಿಗೆ ಹೆಚ್ಚು ನೆರವು ನೀಡಿದ್ದಾರೆ. ಕ್ರಿ.ಶ. ೧೦೮೩ರಲ್ಲಿ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿಗೆ ಮಹಾಮಂಡಳೇಶ್ವರನಾಗಿದ್ದನೆಂದು ಹಿರೇವುಡ[೨೪೨] ಗ್ರಾಮದ ಶಾಸನದಿಂದ ತಿಳಿಯುತ್ತದೆ. ದಾವಣಗೆರೆ ತಾಲೂಕಿನ ಬೇತೂರು ಗ್ರಾಮವು ಇವನ ಕಾಲದಲ್ಲಿ ಪ್ರಮುಖ ಆಡಳಿತ ಪ್ರದೇಶವಾಗಿತ್ತೆಂದು ಶಾಸನವೊಂದರಿಂದ ತಿಳಿದುಬರುತ್ತದೆ.[೨೪೩]

ಆರನೆಯ ವಿಕ್ರಮಾದಿತ್ಯನ ನಂತರ ಆಳ್ವಿಕೆ ನಡೆಸಿರುವ ಅವನ ಮಗನಾದ ಮೂರನೇ ಸೋಮೇಶ್ವರನ ಶಾಸನಗಳು ಜಿಲ್ಲೆಯಲ್ಲಿ ದೊರೆತಿವೆ. ದಾವಣಗೆರೆಯ ಶಾಸನವೊಂದು ಮೂರನೇ ಸೋಮೇಶ್ವರನ ಅಧಿಕಾರಿ ವೀರಪಾಂಡ್ಯನನ್ನು ಉಲ್ಲೇಖಿಸುತ್ತದೆ.[೨೪೪] ಕ್ರಿ.ಶ. ೧೧೪೩ರ ಹರಿಹರದ ಶಾಸನ ಎರಡನೆಯ ಜಗದೇಕಮಲ್ಲನನ್ನು ಉಲ್ಲೇಖಿಸುತ್ತದೆ.[೨೪೫] ಇವನು ಚೋಳರನ್ನು ರಾಜ್ಯದಿಂದೋಡಿಸಿದನೆಂದೂ, ಹೊಯ್ಸಳ ದೊರೆ ಒಂದನೆಯ ನರಸಿಂಹನ ಮೇಲೆ ದಾಳಿ ಮಾಡಿದನೆಂದು ವಿವರಿಸುತ್ತದೆ. ಮಾಡಲಗೇರಿಯ ಕ್ರಿ.ಶ. ೧೦೬೧ರ ಶಾಸನವು ಈ ವಂಶದ ಮೂರನೇ ಜಗದೇಕಮಲ್ಲನ ಕುರಿತು ಉಲ್ಲೇಖಿಸುತ್ತದೆ.[೨೪೬] ಅಲ್ಲದೇ ಈಶ್ವರ ದೇವರಿಗೆ ದಾನ ನೀಡಿದ್ದರ ಬಗ್ಗೆ ಮತ್ತು ಗ್ರಾಮಸ್ಥರು ಸೇರಿ ದೇವೇಶ್ವರ ದೇವರನ್ನು ಪ್ರತಿಷ್ಠಾಪನೆ ಮಾಡಿ ಭೂದತ್ತಿಯನ್ನು ನೀಡಿರುವುದನ್ನು ತಿಳಿಸುತ್ತದೆ. ಮೂರನೇ ತೈಲಪನ ಕಾಲದ ಹರಿಹರದ ಶಾಸನವೊಂದು ಚಾಲುಕ್ಯರ ವಂಶಾವಳಿಯ ಬಗ್ಗೆ ಮಾಹಿತಿ ನೀಡುತ್ತದೆ.[೨೪೭] ಸಾಮಂತ ದೊರೆ ಎರಡನೇ ಬಿಜ್ಜಳನು ಕ್ರಿ.ಶ. ೧೧೫೩ರಲ್ಲಿ ಸ್ವತಂತ್ರನಾಗಿ ಚಾಲುಕ್ಯ ದೊರೆ ಮೂರನೇ ತೈಲಪನನ್ನು ಸೋಲಿಸಿ ಕಳಚೂರಿ ವಂಶವನ್ನು ಸ್ಥಾಪಿಸಿದನು.

ಹೀಗೆ ಕಲ್ಯಾಣದ ಚಾಲುಕ್ಯ ಅರಸರ ಹಲವು ಶಾಸನಗಳು ಪ್ರಸ್ತುತ ಪ್ರದೇಶದಲ್ಲಿ ದೊರೆತಿರುವುದರಿಂದ ಅವರ ಪ್ರಬಲವಾದ ಆಡಳಿತ ಜಿಲ್ಲೆಯಲ್ಲಿರುವುದು ಕಂಡುಬರುತ್ತದೆ.

**೨.೩.೭. ಕಲಚೂರಿಗಳು**

ಕಲಚೂರಿಗಳು ಮೂಲತಃ ಮಧ್ಯಭಾರತಕ್ಕೆ ಸೇರಿದವರು. ತಾವು ಯದು ಹಾಗೂ ಸಹಪ್ರಜಿತ್(ಕಾರ್ತವೀರ್ಯ)ನ ವಂಶಕ್ಕೆ ಸೇರಿದವರೆಂದು ಹೇಳಿಕೊಂಡಿರುವ ಇವರು ತಾವು ಹೈಹಯರೆಂದೂ, ಚೇದಿ ಅರಸರೆಂದೂ ತಮ್ಮನ್ನು ಕರೆದುಕೊಂಡಿದ್ದಾರೆ. ಕಲಂಜಾರ ಪುರಾಧೀಶ್ವರ[೨೪೮] ಎಂಬ ಬಿರುದನ್ನು ಹೊಂದಿದ್ದ ಇವರು ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ ಹಾಗೂ ಕಲ್ಯಾಣದ ಚಾಲುಕ್ಯರೊಂದಿಗೆ ರಕ್ತಸಂಬಂಧ ಹೊಂದಿದ್ದರು.

ನೀಲಗುಂದದಲ್ಲಿರುವ[೨೪೯] ಎರಡನೇ ಬಿಜ್ಜಳನ ಕಾಲದ ಕ್ರಿ.ಶ. ೧೧೬೨ರ ಶಾಸನವು ಬಿಜ್ಜಳದೇವನ ಮಹಾಮಂಡಳೇಶ್ವರನಾದ ತ್ರಿಭುವನಮಲ್ಲ ವೀರಪಾಂಡ್ಯದೇವ 'ಕಾಂಚಿಪುರವರಾಧೀಶ್ವರ' ಎಂಬ ಬಿರುದನ್ನು ಧರಿಸಿ, ಕೋಗಳಿ–೫೦೦ ಮತ್ತು ಕದಂಬಗಳಿಗೆ–೧೦೦೦ವನ್ನು ಆಳುತ್ತಿರುತ್ತಾನೆ. ಬಿಜ್ಜಳದೇವನ ಇನ್ನೊಬ್ಬ ದಂಡನಾಯಕ ಕಸಪಯ್ಯನು ಬನವಾಸಿ ಮಂಡಲವನ್ನು ಆಳುತ್ತಿದ್ದ ಬಗ್ಗೆ ಕ್ರಿ.ಶ. ೧೧೬೨ರ ಹರಿಹರದ ಶಾಸನವು ಉಲ್ಲೇಖಿಸುತ್ತದೆ.[೨೫೦] ದುಗ್ಗರಸ ಬಿಜ್ಜಳದೇವ ಮತ್ತೊಬ್ಬ ದಂಡನಾಯಕನಾಗಿದ್ದನೆಂದು ಹರಿಹರದ ೩೩ನೇ ಶಾಸನದಿಂದ ತಿಳಿಯುತ್ತದೆ.[೨೫೧] ಬೆಳಗುತ್ತಿಯ ಕ್ರಿ.ಶ. ೧೧೮೦ರ ಶಾಸನ ಕಳಚೂರಿ ಅರಸ ಸಂಕಮಹದೇವನನ್ನು ಉಲ್ಲೇಖಿಸುತ್ತದೆ.[೨೫೨] ಈ ಶಾಸನ ಸಂಕಮದೇವನ ಮಾಂಡಲಿಕರಾದ ಪಾಂಡದೇವ ಮತ್ತು ಮಲ್ಲಿದೇವರುಗಳು ಸಿಂದ್ ಅರಸ ಈಶ್ವರದೇವನ ಮಕ್ಕಳೆಂದು ತಿಳಿಸುತ್ತದೆ. ಚಿಕ್ಕಯರೆಹಳ್ಳಿಯಲ್ಲಿರುವ ಶಾಸನವೊಂದು ಕಳಚೂರಿಗಳ ಬಗ್ಗೆ ಮಾಹಿತಿ ನೀಡುತ್ತದೆ.[೨೫೩] ಈ ಶಾಸನ ಆಧಾರಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಳಚೂರಿಗಳ ಆಳ್ವಿಕೆಯನ್ನು ದೃಢಪಡಿಸುತ್ತವೆ.

**೨.೩.೮. ಸೇವುಣರು(ಯಾದವರು)**

ಸೇವುಣ ಅಥವಾ ದೇವಗಿರಿಯ ಯಾದವರು ಹೊಯ್ಸಳರ ಸಮಕಾಲೀನರಾಗಿ ಕರ್ನಾಟಕದ ಉತ್ತರ ಭಾಗಗಳನ್ನು ಈಗಿನ ಮಹಾರಾಷ್ಟ್ರದ ದೇವಗಿರಿ(ದೌಲತಾಬಾದ್)ಯಿಂದ ಆಳಿದವರು. ಮುಸ್ಲಿಂ ಬರಹಗಾರರು ಈ ವಂಶವನ್ನು ಯಾದವರೆಂದು ಕರೆದಿದ್ದು, ಫ್ಲೀಟ್, ಭಂಡಾರ್‌ಕರ್ ಮುಂತಾದ ಇತಿಹಾಸಕಾರರು ಸಹ ಅವರನ್ನು ಯಾದವರೆಂದೇ ಕರೆದಿರುವರು. ಸಮಕಾಲೀನ ಅರಸರಾದ ಚಾಲುಕ್ಯ, ಹೊಯ್ಸಳ ಹಾಗೂ ಕಾಕತೀಯರ ಶಾಸನಗಳು ಇವರನ್ನು ಸೇವುಣರೆಂದೇ ಕರೆದಿವೆ. ಸೇವುಣ ಚಂದ್ರ ಎಂಬ ಈ ವಂಶದ ಎರಡನೆಯ ಅರಸನಿಂದಾಗಿ ಈ ವಂಶಕ್ಕೆ ಆ ಹೆಸರು ಬಂದಿದ್ದು, ಸದ್ಗುಣ ಎಂಬ ಸಂಸ್ಕೃತ ಶಬ್ದದ ಪ್ರಾಕೃತರೂಪ ಸೇವುಣ ಇರಬೇಕೆಂದು ವಿದ್ವಾಂಸರಾದ ಶ್ರೀನಿವಾಸ ರಿತ್ತಿಯವರ ಅಭಿಪ್ರಾಯ.[೨೫೪] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸೇವುಣರ ಆಡಳಿತದ ಪ್ರಭಾವವನ್ನು ತಿಳಿಸುವ ಸುಮಾರು ೪೮ ಶಾಸನಗಳು ದೊರೆಯುತ್ತವೆ.[೨೫೫] ಹೆಚ್ಚಿನ ಶಾಸನಗಳು ಸಿಂಘಣ ಮತ್ತು ಅವನ ನಂತರ ಕಾಲದ ಕನ್ನರಮಹದೇವ ಹಾಗೂ ರಾಮಚಂದ್ರದೇವರ ಆಳ್ವಿಕೆ ಕಾಲಕ್ಕೆ ಸಂಬಂಧಿಸಿದ ಶಾಸನಗಳಾಗಿವೆ.

ಎರಡನೇ ಸಿಂಘಣನ ಕಾಲದ ಮಾದನಭಾವಿಯ ಶಾಸನ ಮಹಾಮಂಡಲೇಶ್ವರ ಈಶ್ವರದೇವ ಲಿಂಗಯ್ಯ ಹೆಗಡೆ ಮನವಿ ಮೇರೆಗೆ ಮಲ್ಲಿಕಾರ್ಜುನ ದೇವರು ಮತ್ತು ನಾಲ್ಕು ಬಸದಿಗಳಿಗೆ ಭೂದಾನ ಮಾಡಿರುವುದನ್ನು ತಿಳಿಸುತ್ತದೆ.[೨೫೬] ಸಿಂಘಣನ ಕಾಲದ ಮತ್ತೊಂದು ಶಾಸನ ಬೆಳಗುತ್ತಿಯಲ್ಲಿದೆ. ಈ ಶಾಸನ ಚಿಣ್ಣೆಯ ಸಾಹಣಿಯ ತುರುಗಳನ್ನು ಕೊಂಡೊಯ್ದ ಮಾದನಭಾವಿಯ ಬೇಡನನ್ನು ಬೆನ್ನಟ್ಟಿ ಹೋಗಿ ಅವನೊಂದಿಗೆ ಕಾದಾಡಿ ಮಡಿದಾಗ ಮಹಾಮಂಡಲೇಶ್ವರ ಈಶ್ವರದೇವ ಚಿಣೆಯ ಸಾಹಣಿಯ ತಮ್ಮ ಯಂಕನಿಗೆ 'ಡಿಂಗರಿಗ' ವೃತ್ತಿಯಾಗಿ ಭೂದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೫೭] ಕೋಗಲೂರಿನ ಶಾಸನವು ಸೇವುಣರ ವಂಶಾವಳಿಯನ್ನು ತಿಳಿಸುತ್ತದೆ. ಅಲ್ಲದೇ ಈ ವಂಶದ ಸಾಮಂತ ಚಾವುಂಡರಸನು ಕ್ರಿ.ಶ. ೧೨೬೮ರಲ್ಲಿ ನೊಳಂಬವಾಡಿ ಪ್ರಾಂತ್ಯದಲ್ಲಿನ ಬೇತೂರಿನಲ್ಲಿ ರಾಜ್ಯಪಾಲನಾಗಿದ್ದು, ಇಬ್ಬರು ಮಂತ್ರಿಗಳಿಂದ ಆಳಲ್ಪಡುತ್ತಿದ್ದನೆಂದು ತಿಳಿದುಬರುತ್ತದೆ.[೨೫೮] ಚಾವುಂಡರಸನು ಮುಮ್ಮಡಿ ಸಿಂಘಣನೊಡನೆ ಕುರುಗೋಡಿನ 'ದೊರೆವದೆ' ಎಂಬಲ್ಲಿ ನಡೆದ ಯುದ್ಧದಲ್ಲಿ ಹೋರಾಡಿ ಮಡಿದನೆಂದು, ಆತನ ಶವಸಂಸ್ಕಾರವನ್ನು ಲಿಂಗಾಯತ ಧರ್ಮದ ವಿಧಿ ವಿಧಾನಗಳಂತೆ ಮಾಡಲಾಯಿತೆಂದು ಹಿರೇಕೋಗಲೂರಿನ ಶಾಸನದಿಂದ ತಿಳಿದುಬರುತ್ತದೆ.[೨೫೯]

ಸೇವುಣರ ವಂಶದ ಉಲ್ಲೇಖ ನೀಡುವಂತಹ ಶಾಸನಗಳು ಹರಿಹರ ಮತ್ತು ಭಾನುವಳ್ಳಿಗಳಲ್ಲಿ ದೊರೆತಿವೆ. ಈ ಶಾಸನಗಳಲ್ಲಿ ಕಂಡುಬರುವ ವಂಶವೃಕ್ಷವನ್ನು ನೋಡಿದಾಗ ಭಿಲ್ಲಮನೇ ಈ ವಂಶದ ಮೂಲಪುರುಷ, ಅವನ ಮಗ ಜೈತುಂಗಿ, ಜೈತುಂಗಿ ಮಗನೇ ಸಿಂಘಣ, ಇವನು ಸೇವುಣರಲ್ಲೇ ಅಪ್ರತಿಮ ದೊರೆಯೆಂದು ಅವನ ಸಾಹಸವನ್ನು ಹರಿಹರ ಶಾಸನ ಉಲ್ಲೇಖಿಸುತ್ತದೆ.[೨೬೦] ಸಿಂಘಣನ ಮಗ ಕೃಷ್ಣ ಅಥವಾ ಕಂದರ ಕ್ರಿ.ಶ. ೧೨೪೭ರಿಂದ ೧೨೬೦ರ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಇವನ ಬಗ್ಗೆ ಉಲ್ಲೇಖ ನೀಡುವ ಮೊದಲ ಶಾಸನ ಗಂಗನರಸಿ ಗ್ರಾಮದಲ್ಲಿದೆ.[೨೬೧] ಈತನ ಕಾಲದ ಮತ್ತೊಂದು ಶಾಸನ ಚಿಕ್ಕಬಿದರೆ ಗ್ರಾಮದ ಕಲ್ಲೇಶ್ವರ ದೇವಸ್ಥಾನದಲ್ಲಿದೆ. ಕ್ರಿ.ಶ. ೧೨೫೮ರಲ್ಲಿ ರಚನೆಗೊಂಡಿರುವ ಈ ಶಾಸನವು ನೊಲಂಬವಾಡಿ-೩೨೦೦೦ ಪ್ರದೇಶದ ಬಿಕ್ಕಿಗ-೭೦ರಲ್ಲಿ ತುಂಗಭದ್ರಾ ನದಿಯ ಪೂರ್ವತೀರದ ಬಿದರೆ ಗ್ರಾಮದಲ್ಲಿ ಕಲ್ಲೇಶ್ವರ ದೇವಾಲಯವನ್ನು ನಿರ್ಮಿಸಿ, ದತ್ತಿ ಬಿಟ್ಟ ವಿವರಗಳನ್ನು ನೀಡುತ್ತದೆ.[೨೬೨] ಕನ್ನರದೇವನ ನಂತರ ಆಳ್ವಿಕೆ ನಡೆಸಿದ ಆತನ ಹಿರಿಯ ಸಹೋದರ ಮಹದೇವನ ಶಾಸನಗಳು ಅಣಜಿ ಗ್ರಾಮದಲ್ಲಿ ದೊರೆತಿದ್ದು ಈ ಶಾಸನಗಳಲ್ಲಿ ವಿಠಲದೇವರಸನನ್ನು ಗೂರ್ಜರರಾಯ, ವಾರಣಾಂಕುಶ, ತೆಲುಂಗರಾಯ, ಶಿರಕಮಳನಾಳೋತ್ಪಾಟನಕರ ಪ್ರತಿಜ್ಞಾಪರಸು, ರಾಮ, ಮಾಳವಿಯಮಲ್ಲ, ಭುಜಬಲಭೀಮ ಇತ್ಯಾದಿ ಬಿರುದುಗಳನ್ನು ಉಲ್ಲೇಖಿಸುತ್ತವೆ.[೨೬೩]

ಕ್ರಿ.ಶ. ೧೨೭೧ರಿಂದ ೧೩೦೯ರವರೆಗೆ ಆಳ್ವಿಕೆ ನಡೆಸಿದ ಯಾದವ ರಾಮಚಂದ್ರನು ಸೇವುಣ ಅರಸರಲ್ಲೇ ಪ್ರಮುಖನಾಗಿದ್ದಾನೆ. ಇವನ ಕಾಲದ ಕುರುವದಗಡ್ಡೆ ಶಾಸನವು ಎಡವಟ್ಟಿಯ ಬಳ್ಳರೆ ಕುರುವದ ರಾಮನಾಥದೇವರ ಸ್ಥಾನದಾಚಾರ್ಯ ಬಯಚರಣ ದೇವರಿಗೆ ಸಾಮಂತ

ಕೋಂಮನಾಯ್ಕನು ನೀಡಿದ ದಾನವನ್ನು ತಿಳಿಸುತ್ತದೆ.[೨೬೪] ರಾಮಚಂದ್ರನ ಮತ್ತೊಂದು ಶಾಸನ ಬಳ್ಳೇಶ್ವರದಲ್ಲಿದೆ. ಈ ಶಾಸನ ರಾಮಚಂದ್ರನ ವಂಶಾವಳಿ ಮತ್ತು ತುಂಗಭದ್ರೆಯ ಪಶ್ಚಿಮ ದಡದಲ್ಲಿ ಜಾಲಿವಳೆ ಹತ್ತಿರ ಹೊಯ್ಸಳ ಎರಡನೇ ಬಲ್ಲಾಳನು ತನ್ನ ತಂದೆ ನಾರಸಿಂಗದೇವನ ಹೆಸರಿನಲ್ಲಿ ಶಿವಲಿಂಗ ಸ್ಥಾಪಿಸಿದ್ದರ ಬಗ್ಗೆ ಉಲ್ಲೇಖಿಸುತ್ತದೆ.[೨೬೫] ಚಿಕ್ಕಯರೆಹಳ್ಳಿ[೨೬೬] ಶಾಸನ ರಾಮಚಂದ್ರನು ರಾಮನಾಥ ದೇವರ ನವೀಕರಣಕ್ಕೆ ಸರ್ವಮಾನ್ಯ ಸುಂಕ ವಿಧಿಸಲು ಒಪ್ಪಿಗೆ ನೀಡಿದ್ದನ್ನು ಸೂಚಿಸಿದರೆ, ಚೀಲೂರಿನ ಶಾಸನ ಪರಶುರಾಮ ದೇವರಿಗೆ ೧೦೮ ದೀಪ ಹಾಗೂ ಅರವಟ್ಟಿಗೆ ನಿರ್ಮಿಸಲು ಕೊಟ್ಟ ದಾನದ ವಿವರಗಳನ್ನು ನೀಡುತ್ತವೆ.[೨೬೭] ಕಲ್ಲೇದೇವರಪುರದ ಕ್ರಿ.ಶ. ೧೨೦೧ರ ರಾಮಚಂದ್ರನ ಕಾಲದ ಶಾಸನವು ಈ ಊರಿನಲ್ಲಿದ್ದ ಪ್ರಸಾದಿದೇವ ಎಂಬ ಪ್ರಸಿದ್ಧ ಶೈವಗುರುವೊಬ್ಬನಿಗೆ ರಾಜನ ಸಾಮಂತನಾದ ಹೆಮ್ಮಾಡಿದೇವ ಎಂಬುವನು ರಾಜನಿಗೆ ಪುತ್ರೋತ್ಸವವಾದ ಸಂತೋಷಕ್ಕಾಗಿ ಅನೇಕ ಪ್ರಮುಖರ ಸಮಕ್ಷಮದಲ್ಲಿ ಭೂದತ್ತಿಗಳನ್ನು ನೀಡಿದ್ದನ್ನು ನಿರೂಪಿಸುತ್ತದೆ.[೨೬೮] ಹೆಮ್ಮನ ಬೇತೂರಿನ ಸಿದ್ಧೇಶ್ವರ ದೇವಾಲಯದಲ್ಲಿರುವ ಶಾಸನವೊಂದು ದೇವಾಲಯಕ್ಕೆ ಭೂದಾನ ನೀಡಿದ ವಿವರಗಳನ್ನು ತಿಳಿಸುತ್ತದೆ.[೨೬೯]

ಸೇವುಣರ ಕೊನೆಯ ಅರಸನಾದ ಶಂಕರನಿಗೆ ಸಂಬಂಧಿಸಿದ ಯಾವುದೇ ಶಾಸನಗಳು ಈ ಪ್ರದೇಶದಲ್ಲಿ ಕಂಡುಬಂದಿಲ್ಲ. ಮೇಲ್ಕಂಡ ಶಾಸನಗಳಿಂದ ತಿಳಿಯಬಹುದಾದ ಸಂಗತಿಯೇನೆಂದರೆ ಸೇವುಣರು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಪ್ರಬಲವಾದ ಆಡಳಿತ ನಡೆಸಿರುವುದನ್ನು ಗಮನಿಸಬಹುದು.

### ೨.೩.೯. ಹೊಯ್ಸಳರು

ಕರ್ನಾಟಕದ ದಕ್ಷಿಣ ಭಾಗದಲ್ಲಿ ಗಂಗರ ಅವನತಿಯ ನಂತರ ತುಂಗಭದ್ರೆಯ ದಕ್ಷಿಣದಲ್ಲಿ ಹೊಯ್ಸಳರು ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದರು. ಆ ನಂತರ ಬಹುತೇಕ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯವರೆಗೆ ಹೊಯ್ಸಳರು ಪ್ರಬಲರಾಗಿದ್ದರು ಎಂಬುದನ್ನು ಅವರ ಕಾಲದಲ್ಲಿ ನಿರ್ಮಾಣಗೊಂಡ ಶಾಸನ ದಾಖಲೆಗಳಿಂದ ತಿಳಿಯಬಹುದು. ಕರ್ನಾಟಕದ ಹಲವು ರಾಜಮನೆತನಗಳೊಡನೆ ಆಕ್ರಮಣಕಾರಿ ಯುದ್ಧಗಳನ್ನು ಮಾಡಿದ ಚೋಳರಿಗೆ ಗಂಗವಾಡಿಯೇ ಆಸಕ್ತ ಕ್ಷೇತ್ರವಾಗಿತ್ತು. ಕ್ರಿ.ಶ. ೯೯೮ರ ವೇಳೆಗೆ ಗಂಗವಾಡಿಯ ಬಹುತೇಕ ಪ್ರದೇಶಗಳನ್ನು ಚೋಳರು ವಶಪಡಿಸಿಕೊಂಡ ಸಮಯದಲ್ಲಿ ಬೆಳಕಿಗೆ ಬಂದ ಹೊಯ್ಸಳರು ಕ್ರಿ.ಶ. ೧೧೯೦ರವರೆಗೆ ಕಲ್ಯಾಣ ಚಾಲುಕ್ಯರ ಮಾಂಡಲಿಕರಾಗಿಯೇ ಇದ್ದರು. ೧೧ನೇ ಶತಮಾನದ ಆರಂಭದಿಂದ ಮಾಂಡಲಿಕರಾಗಿ ಆಳಲಾರಂಭಿಸಿದ ಹೊಯ್ಸಳರು ೧೨ನೇ ಶತಮಾನದಲ್ಲಿ ಪರಮಾಧಿಕಾರಿಗಳಾಗಿ ತುಂಗಭದ್ರೆಯ ಉತ್ತರದವರೆಗೂ ಅಧಿಕಾರ ಹೊಂದಿದ್ದರು. ಇವರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅತ್ಯಂತ ಹೆಚ್ಚಿನ ಮಹತ್ವ ನೀಡುವುದರ ಮೂಲಕ ವಿಶಿಷ್ಟ ಕೊಡುಗೆಗಳನ್ನು ಕರ್ನಾಟಕಕ್ಕೆ ನೀಡಿದ್ದಾರೆ.

ಹೊಯ್ಸಳರಿಗೆ ಸಂಬಂಧಿಸಿದ ಸುಮಾರು ೪೪ ಶಾಸನಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿವೆ.[೨೭೦] ಹೆಚ್ಚಿನ ಶಾಸನಗಳು ಈ ವಂಶದ ವಿಷ್ಣುವರ್ಧನ ತರುವಾಯ ಆಡಳಿತ ನಡೆಸಿದ ಅರಸರುಗಳಿಗೆ ಸಂಬಂಧಿಸಿವೆ. ವಿಷ್ಣುವರ್ಧನನ ನಂತರ ಆಳ್ವಿಕೆ ನಡೆಸಿದವನು ಒಂದನೇ ವೀರನರಸಿಂಹ. ಇವನ ಕಾಲದ ಬೇಲಿಮಲ್ಲೂರು ಶಾಸನ ಮಹಾಮಂಡಲೇಶ್ವರ ಈಶ್ವರದೇವರಸನು ಅರಕೆರೆ ನಾಡಿನ ಮೇಲೆ ದಾಳಿಗಾಗಿ ಹೋದಾಗ ವೀರನರಸಿಂಹ ದೇವನ ಸೇನಾಳು ಅಕ್ಕಸಾಲಿಗರ ರಾಮೋಜನ ಮಗ ಕಾಮೋಜನು ಕಾದಾಡಿ ಮಡಿದಿರುವುದನ್ನು ಉಲ್ಲೇಖಿಸುತ್ತದೆ.[೨೭೧] ಒಂದನೇ ವೀರನರಸಿಂಹನ ನಂತರ ಅಧಿಕಾರ ನಡೆಸಿದ ವೀರ ಬಲ್ಲಾಳ(ಎರಡನೇ ಬಲ್ಲಾಳ)ನಿಗೆ ಸಂಬಂಧಿಸಿದ ಶಾಸನಗಳು ಜಿಲ್ಲೆಯಲ್ಲಿ ಕಂಡುಬಂದಿವೆ. ಅರಕೆರೆಯ ಕ್ರಿ.ಶ. ೧೨೦೩ರ ಶಾಸನ ಎರಡನೇ ವೀರಬಲ್ಲಾಳನ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದ್ದು, ಧರ್ಮಾರ್ಥವಾಗಿ ನೀಡಿದ ಭೂದಾನವನ್ನು ತಿಳಿಸುತ್ತದೆ.[೨೭೨] ಕ್ರಿ.ಶ. ೧೨೧೧ರ ಕುಣಿಗಲುಘಟ್ಟ ಶಾಸನ ಆ ಗ್ರಾಮದ ಮಹಾಜನಗಳಿಗೆ ಮರ್ಯಾದೆಗನುಗುಣವಾಗಿ ಆಶ್ರಯ ನೀಡಿದ್ದನ್ನು ಹೇಳುತ್ತದೆ.[೨೭೩] ಕ್ರಿ.ಶ. ೧೧೭೫ರ ಬೆಳಗುತ್ತಿ ಶಾಸನವು ಎರಡನೇ ಬಲ್ಲಾಳನ ಸಾಮಂತ ತೊಂಡಪಿಲ್ಲೆ ದಂಡನಾಯಕ ಬೆಳಗವತ್ತಿ ನಾಡನ್ನು ಆಳುತ್ತಿದ್ದುದನ್ನು ತಿಳಿಸುತ್ತದೆ.[೨೭೪] ಕ್ರಿ.ಶ. ೧೨೦೪ರ ಕುರುವದಗಡ್ಡೆ ಶಾಸನ ವೀರಬಲ್ಲಾಳನನ್ನು ಯಾದವ ಕುಲಾಂಭಳ, ಮಲಪರುಗಳಗಂಡ, ಶನಿವಾರಸಿದ್ಧಿ, ಗಿರಿದುರ್ಗಮಲ್ಲ ಮುಂತಾದ ಬಿರುದುಗಳಿಂದ ವರ್ಣಿಸುತ್ತದೆ.[೨೭೫] ಕ್ರಿ.ಶ. ೧೨೮೫ರ ಚಟ್ನಿಹಳ್ಳಿಯ ಶಾಸನ ಹಲವರ ಸಮ್ಮುಖದಲ್ಲಿ ಎಮ್ಮನಗೌಡ ಚಟ್ನಿಹಳ್ಳಿಯ ಗೌಡುಕೆಯನ್ನು ಚನ್ನನಾಯಕನ ಮಗ ಕಲ್ಲಪ್ಪ ಆತನ ಮಗ ಸಂಕಪ್ಪನಿಗೆ ಉಂಬಳಿ ಸಮೇತ ಕೊಟ್ಟ ದಾನದ ವಿವರಗಳನ್ನು ನೀಡುತ್ತದೆ.[೨೭೬] ಎರಡನೇ ಬಲ್ಲಾಳನ ಹೆಂಡತಿ ಅಭಿನವ ಕೇತಲದೇವಿಯು ಕುಂದವಾಡದಲ್ಲಿ ಪ್ರತಿ ಬುಧವಾರ ಸಂತೆಯನ್ನು ನಡೆಸುವಂತೆ ಅಲ್ಲಿನ ಗೌಡರಿಗೆ ಆದೇಶಿಸಿ ಅದರಿಂದ ಬರುವ ಆದಾಯವನ್ನು ಸೋಮನಾಥ ದೇವರಿಗೆ ದತ್ತಿ ಬಿಟ್ಟಿದ್ದನ್ನು ಕ್ರಿ.ಶ. ೧೨೧೮ರ ಶಾಸನವು ತಿಳಿಸುತ್ತದೆ.[೨೭೭]



ಎರಡನೇ ಬಲ್ಲಾಳನ ತರುವಾಯ ಅವನ ಮಗ ಎರಡನೇ ನರಸಿಂಹನು ಕ್ರಿ.ಶ. ೧೨೨೦ ರಿಂದ ೧೨೩೬ರವರೆಗೆ ಆಳ್ವಿಕೆ ಮಾಡಿದ್ದಾನೆ. ಈತನ ಕಾಲದ ಶಾಸನಗಳು ದಾವಣಗೆರೆ, ಹರಿಹರ, ಹೊನ್ನಾಳಿ ತಾಲೂಕುಗಳಲ್ಲಿ ಕಂಡುಬಂದಿವೆ. ಇವನ ಕಾಲದ ಹರಿಹರದ ಹರಿಹರೇಶ್ವರ ದೇವಾಲಯದ ಶಾಸನವು ಹೊಯ್ಸಳ ವಂಶದ ವೃತ್ತಾಂತ ಮತ್ತು ಇಮ್ಮಡಿ ಬಲ್ಲಾಳನವರೆಗಿನ ಯುದ್ಧ ವಿವರಣೆಗಳನ್ನು ನೀಡುತ್ತದೆ ಹಾಗೂ ಪೊಳಲಾಳ್ವ ದಂಡನಾಥನು ತನ್ನ ರಾಜನಾದ ಎರಡನೇ ವೀರರನರಸಿಂಹನ ಹೆಸರಿನಲ್ಲಿ ನಿರ್ಮಾಣ ಮಾಡಿದ ಹರಿಹರೇಶ್ವರ ದೇವಾಲಯದ ವಿವರಣೆಗಳನ್ನು ಹೊಂದಿದೆ.[೨೭೮] ಕುರುವದಗುಡ್ಡ ಶಾಸನ ನರಸಿಂಹನನ್ನು 'ಚೋಳ ಪ್ರತಿಷ್ಠಾಪನಾಚಾರ್ಯ' ಎಂದು ಹೊಗಳಿದೆ.[೨೭೯] ಈತನ ಮಹಾಪ್ರಧಾನ ಅರಿಮಣ್ಣ ದಣ್ಣಾಯಕ ಸಮಸ್ತ ದೇಶಾಧಿಕಾರಿಯಾಗಿ ಆಳ್ವಿಕೆ ಮಾಡುತ್ತಿದ್ದುದು ಅಣಜಿಗೆರೆ ಶಾಸನದಿಂದ ತಿಳಿಯುತ್ತದೆ.[೨೮೦]

ಎರಡನೇ ನರಸಿಂಹನ ನಂತರ ಅಧಿಕಾರಕ್ಕೆ ಬಂದ ಅವನ ಮಗ ಮೂರನೇ ಸೋಮೇಶ್ವರನ ಶಾಸನವೊಂದು ಜಗಲೂರು ತಾಲೂಕು ಕಲ್ಲೇದೇವರಪುರ ಗ್ರಾಮದಲ್ಲಿದೆ. ಈ ಶಾಸನ ಕಾಳಾಮುಖ ಪಾಶುಪತ ಗುರುವೊಬ್ಬನ ಕಾಲನ್ನು ತೊಳೆದು ಭೂದಾನವಿತ್ತುದನ್ನು ತಿಳಿಸುತ್ತದೆ. ಅಲ್ಲದೇ ಈತನು ಚೋಳ, ಪಾಂಡ್ಯ ರಾಜ್ಯಗಳ ಮೇಲೆ ದಂಡೆತ್ತಿ ಹೋಗಿ ಅವರ ಮೇಲೆ ಬಿದ್ದು ವಿಜಯ ಸಾಧಿಸಿದ್ದಾನೆಂದು ಈ ಶಾಸನ ಉಲ್ಲೇಖಿಸುತ್ತದೆ.[೨೮೧]

ಲೋಕಿಕೆರೆ ಗ್ರಾಮದ ಈಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೨೩೬ರ ಶಾಸನ ಸೋಮೇಶ್ವರನು ಹೊಂದಿದ್ದ ಬಿರುದುಗಳನ್ನು ತಿಳಿಸುತ್ತದೆ.[೨೮೨] ಕ್ರಿ.ಶ. ೧೨೬೮ರ ಹರಿಹರೇಶ್ವರ ದೇವಾಲಯದ ಶಾಸನವು ಸೋಮದಂಡನಾಯಕನ ವಂಶಾವಳಿಯನ್ನು ನೀಡುತ್ತಾ, ದೇವಾಲಯದ ಪೂರ್ವ ದ್ವಾರಮಂಟಪವನ್ನು ಐದು ಹಂತಗಳಲ್ಲಿ ನಿರ್ಮಿಸಿದ ಬಗ್ಗೆ ಮಾಹಿತಿ ನೀಡುತ್ತದೆ.[೨೮೩] ಸೋಮೇಶ್ವರನ ಉತ್ತರಾಧಿಕಾರಿಯಾದ ಮುಮ್ಮಡಿ ನರಸಿಂಹನ ಶಾಸನಗಳು ಅಧ್ಯಯನ ಪ್ರದೇಶದ ಬೆಣ್ಣೆಹಳ್ಳಿ, ಬಾಗಳಿ, ಕುಣಗಲುಘಟ್ಟ ಮುಂತಾದ ಕಡೆ ದೊರೆತಿದ್ದು, ಈತನ ಆಳ್ವಿಕೆಗೆ ಬಗ್ಗೆ ಮಾಹಿತಿ ನೀಡುತ್ತವೆ. ಕ್ರಿ.ಶ. ೧೨೬೮ರ ಶಾಸನವೊಂದು ಸೋಮೇಶ್ವರನ ದಂಡನಾಯಕ ಸೋಮನಾಥನನ್ನು ಗಾಯಿಗೋವಳ, ಗಂಡಪೆಂಡಾರ ಎಂಬ ಬಿರುದುಗಳಿಂದ ವರ್ಣಿಸಿದೆ.[೨೮೪] ಹರಿಹರದ ವೀರಗಲ್ಲು ಶಾಸನ ಈತನ ಮಂತ್ರಿ ಸೋಮದಣ್ಣಾಯಕ ಮತ್ತು ಆತನ ಕಾರ್ಯಗಳನ್ನು ಉಲ್ಲೇಖಿಸುತ್ತದೆ.[೨೮೫] ಮೂರನೇ ಬಲ್ಲಾಳನು ಕ್ರಿ.ಶ. ೧೧೭೭ರಲ್ಲಿ ಪ್ರಯಾಸಮಾನವಾಗಿ ಉಚ್ಚಂಗಿದುರ್ಗದ ಕೋಟೆಯನ್ನು ವಿಜಯ ಪಾಂಡ್ಯನನ್ನು ಸೋಲಿಸುವುದರೊಂದಿಗೆ ವಶಪಡಿಸಿಕೊಂಡನೆಂದು ತಿಳಿಯುತ್ತದೆ.[೨೮೬] ಮುಮ್ಮಡಿ ಬಲ್ಲಾಳನು ತೀರಿಕೊಂಡ ನಂತರ ನಾಲ್ಕನೇ ಬಲ್ಲಾಳನು ಅಧಿಕಾರಕ್ಕೆ ಬಂದರೂ ಈ ವೇಳೆಗಾಗಲೇ ಹೊಯ್ಸಳ ಸಾಮ್ರಾಜ್ಯ ಅವನತಿಯ ಹಾದಿ ಹಿಡಿದಿತ್ತು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹೊಯ್ಸಳರು ಪ್ರಬಲ ಆಡಳಿತವನ್ನು ಹೊಂದಿದ್ದರೆಂಬುದನ್ನು ಮೇಲಿನ ಶಾಸನ ಆಧಾರಗಳಿಂದ ದೃಢವಾಗುತ್ತದೆ.

### ೨.೩.೧೦. ವಿಜಯನಗರದ ಅರಸರು

ಕ್ರಿ.ಶ. ೧೩ನೆಯ ಶತಮಾನದ ಕೊನೆಯ ವರ್ಷಗಳಲ್ಲಿ ದಕ್ಷಿಣ ಭಾರತದ ಮೇಲೆ ಆರಂಭವಾದ ದೆಹಲಿಯ ಖಿಲ್ಜಿ ಸುಲ್ತಾನರ ದಾಳಿ ಬಹಳ ಕಾಲ ಮುಂದುವರಿದಿತ್ತು. ದಕ್ಷಿಣ ಭಾರತದ ರಾಜರ ಅನೈಕಮತ್ಯ, ಶತ್ರುತ್ವ ಮತ್ತು ಆ ಸಂಬಂಧದ ಹೋರಾಟಗಳಿಂದ ಉಂಟಾಗಿದ್ದ ದುರ್ಬಲತೆಯ ಸದುಪಯೋಗ ಪಡೆದ ಖಿಲ್ಜಿ ಸುಲ್ತಾನರು ದೇವಗಿರಿಯಿಂದ ರಾಮೇಶ್ವರದವರೆಗೆ ಸೇವುಣ, ಕಾಕತೀಯ, ಕಂಪಿಲಿ, ಹೊಯ್ಸಳ ಮತ್ತು ಮಧುರೆಯ ರಾಜವಂಶಗಳ ಆಳ್ವಿಕೆಯ ಪ್ರಾಂತ್ಯಗಳನ್ನೆಲ್ಲ ವಶಪಡಿಸಿಕೊಂಡರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಅಸ್ತಿತ್ವಕ್ಕೆ ಬಂದ ಸಾಮ್ರಾಜ್ಯವೇ ವಿಜಯನಗರ ಸಾಮ್ರಾಜ್ಯ. ತುಂಗಭದ್ರಾ ನದಿ ದಡದಲ್ಲಿರುವ ಹಂಪಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕರ್ನಾಟಕದ ಉದ್ದಗಲಕ್ಕೂ ಸಾಮ್ರಾಜ್ಯವನ್ನು ವಿಸ್ತರಿಸಿದರು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈವರೆಗೆ ಪ್ರಕಟಗೊಂಡಿರುವ ಸು. ೮೩ಕ್ಕೂ ಹೆಚ್ಚು ಶಾಸನಗಳು ವಿಜಯನಗರದ ಅರಸರ ಆಡಳಿತದ ಪ್ರಭಾವವನ್ನು ತಿಳಿಸುತ್ತವೆ.

ಒಂದನೇ ಬುಕ್ಕರಾಯನ ಕಾಲದ ಮೂರು ಶಾಸನಗಳು ಹರಿಹರ ತಾಲೂಕಿನಲ್ಲಿ ಕಂಡುಬರುತ್ತವೆ. ಹರಿಹರದ ತಾಮ್ರಶಾಸನವೊಂದು ಶ್ರೀ ಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಧರ್ಮಮೂರ್ತಿ ಎಂಬ ಬಿರುದುಗಳಿಂದ ಬುಕ್ಕರಾಯನನ್ನು ಹೊಗಳಿದೆ ಮತ್ತು ಮಿಟ್ಲಕಟ್ಟೆ ಗ್ರಾಮವನ್ನು ದಾನವಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ.[೨೮೭] ಈ ಶಾಸನ ಹರಿಹರವನ್ನು 'ಹರಿಹರದೇವರಪುರ' ಎಂದು ಉಲ್ಲೇಖಿಸಿದೆ. ಇವನ ಕಾಲದ ಇನ್ನೊಂದು ಶಾಸನ ಹಳ್ಳಿಹಾಳು ಗ್ರಾಮದಲ್ಲಿದೆ. ಬುಕ್ಕರಾಯನ ಮಾಂಡಲಿಕ ಬುವೆಯ ನಾಯಕನ ಮಗ ಯಿಬ್ಬೆಯ ನಾಯಕನು ತನ್ನ ತಂದೆ ದೇವಲೋಕಕ್ಕೆ ಮಡಿದಾಗ ಅವನ ನೆನಪಿಗಾಗಿ ಕೆರೆ ಮತ್ತು ಬಸವೇಶ್ವರ ದೇವಸ್ಥಾನ ಕಟ್ಟಿಸಿ ದಾನ ನೀಡಿರುವುದನ್ನು ತಿಳಿಸುತ್ತದೆ.[೨೮೮] ಕೊಂಡಜ್ಜಿಯ ಒಂದು ಶಾಸನವು ಬುಕ್ಕರಾಯನನ್ನು ವೀರ ಬುಕ್ಕರಾಯ ಎಂದು ಉಲ್ಲೇಖಿಸಿದೆ.[೨೮೯]

ಬುಕ್ಕರಾಯನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ಹರಿಹರನ ಶಾಸನಗಳು ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿವೆ. ಹರಿಹರದ ಹರಿಹರೇಶ್ವರ ದೇವಸ್ಥಾನದ ಬಳಿಯಿರುವ ಶಾಸನವು ಇಮ್ಮಡಿ ಹರಿಹರನ ಮಂತ್ರಿಯಾಗಿದ್ದ ಮುದ್ದಣ್ಣ ದಂಡಾಧೀಶನು ತನ್ನ ರಾಜನಿಗೆ ಒಳಿತಾಗಲಿ ಎಂದು ಉಚ್ಚಂಗಿ ಪ್ರದೇಶದ ಚಿಕ್ಕ ಹದಡಿ ಎಂಬ ಹೆಸರುಳ್ಳ ಗ್ರಾಮವನ್ನು ಮುದ್ದ ದಂಡನಾಯಕಪುರ ಎಂದು ನಾಮಕರಣ ಮಾಡಿ ಅದನ್ನು ೩೧ ವೃತ್ತಿಗಳಾಗಿ ವಿಂಗಡಿಸಿ ದಾನ ನೀಡಿದ್ದನ್ನು ತಿಳಿಸುತ್ತದೆ.[೨೯೦] ಇವನ ಕಾಲದ ಮತ್ತೊಂದು ಶಾಸನ ತುಂಗಭದ್ರಾ ನದಿಯ ಬಲದಂಡೆಯಲ್ಲಿದೆ. ಈ ಶಾಸನವು ಹರಿಹರನನ್ನು ಅಚ್ಯುತ ಶಂಕರನೆಂದು ಉಲ್ಲೇಖಿಸಿದೆ.[೨೯೧] ಕ್ರಿ.ಶ. ೧೨೬೧ರ ತಾಮ್ರಶಾಸನ ಹರಿಹರನು ರಾಮದೇವಯ್ಯ ಮತ್ತು ಆತನ ಮಕ್ಕಳಿಗೆ ಕೊಟ್ಟೂರು ಚಾವಡಿಯ ಶಂಕರಿಪುರ ಗ್ರಾಮವನ್ನು ವೃತ್ತಿಯನ್ನಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ.[೨೯೨] ವಿಜಯನಗರ ಸಾಮ್ರಾಜ್ಯದ ಕೊಟ್ಟೂರು ಚಾವಡಿಗೆ ಇಂದಿನ ದಾವಣಗೆರೆ ಮತ್ತು ಹರಿಹರ ತಾಲೂಕುಗಳು ಸೇರಿದ್ದವೆಂಬ ಅಭಿಪ್ರಾಯವಿದೆ. ಕ್ರಿ.ಶ. ೧೩೭೯ರ ಶಾಸನವೊಂದರಿಂದ ಕುರುವದಲ್ಲಿನ ರಾಮೇಶ್ವರ ದೇವರಿಗೆ ದಾನ ಬಿಟ್ಟಿರುವುದನ್ನು ಮತ್ತು ರಾಮಪುರ ಎಂಬ ಗ್ರಾಮ ಸ್ಥಾಪಿಸಿದನೆಂದು ತಿಳಿದುಬರುತ್ತದೆ.[೨೯೩]

ಹರಿಹರೇಶ್ವರ ದೇವಾಲಯದ ಆವರಣದಲ್ಲಿರುವ ಕ್ರಿ.ಶ. ೧೪೧೦ರ ಒಂದನೇ ದೇವರಾಯನ ಶಾಸನವು ಈತನ ಮಂತ್ರಿಯಾಗಿದ್ದ ಜಗನ್ನಾಥನ ಮಗ ಬುಳ್ಳಪ್ಪನು ಹರಿದ್ರಾ ನದಿಗೆ ಅಣೆಕಟ್ಟನ್ನು ಕಟ್ಟಿಸಿ ಕೃಷಿಗೆ ಪೂರಕವಾದ ಸೌಲಭ್ಯವನ್ನು ಒದಗಿಸಿದನೆಂದು ತಿಳಿಸುತ್ತದೆ.[೨೯೪] ಇದೇ ದೇವಸ್ಥಾನದ ಬಳಿಯ ಮತ್ತೊಂದು ಶಾಸನ ಈ ಅಣೆಕಟ್ಟನ್ನು ಪುನರ್ ನಿರ್ಮಿಸಿದ ವಿವರಗಳನ್ನು ನೀಡುತ್ತದೆ.[೨೯೫]

ಕ್ರಿ.ಶ. ೧೫೦೯ರಿಂದ ೧೫೨೯ರವರೆಗೆ ಆಳ್ವಿಕೆ ಮಾಡಿದ ಈ ವಂಶದ ಪ್ರಖ್ಯಾತ ಅರಸನಾದ ಕೃಷ್ಣದೇವರಾಯನಿಗೆ ಸಂಬಂಧಿಸಿದ ಎಂಟು ಶಾಸನಗಳು ಜಿಲ್ಲೆಯಲ್ಲಿ ಈವರೆಗೆ ಕಂಡುಬಂದಿವೆ. ಕ್ರಿ.ಶ. ೧೫೧೦ರ ಚಿಕ್ಕಗೋಣಿಕೆರೆ ಶಾಸನವು ಕೃಷ್ಣದೇವ ಮಹಾರಾಯರಿಂದ ತಾನು

ಉಂಬಳಿಯಾಗಿ ಪಡೆದ ಚಿಕ್ಕ ಗೋಣಿಕೆರೆ ಎಂಬ ಗ್ರಾಮವನ್ನು ಗಾಜನೂರಿನ ಶಂಖರಿಗೌಡ ಎಂಬುವವನು, ತನ್ನ ತಂದೆ ತಾಯಿಯವರಿಗೆ ಪುಣ್ಯ ಲಭಿಸಲೆಂದು ತಿರುಮಲದೇವಿ ಪಟ್ಟಣದಲ್ಲಿ ನಿವಾಸಿ ಮಠವನ್ನು ಕಟ್ಟಿಸಿ ದಾನ ಕೊಟ್ಟ ವಿಚಾರ ತಿಳಿಸುತ್ತದೆ.[೨೯೬] ತಿರುಮಲದೇವಿ ಪಟ್ಟಣ ಈಗಿನ ಹೊಸಪೇಟೆ ತಾಲೂಕು ಕೆ. ತಿಮ್ಮಲಾಪುರ ಎಂಬ ಅಭಿಪ್ರಾಯವಿದೆ.[೨೯೭] ಕ್ರಿ.ಶ. ೧೫೧೧ರ ಶಾಸನವೊಂದು ಕೃಷ್ಣದೇವರಾಯ ತನ್ನ ಅಧಿಕಾರಿ ಚೆಂಗರಸನಿಗೆ ಕೊಟ್ಟ ದಾನದ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೫೨೯ರ ಒಂದು ಶಾಸನವು ಕೃಷ್ಣದೇವರಾಯನ ಅಧಿಕಾರಿ ತಿಮ್ಮಯ್ಯನು ಕೃಷ್ಣದೇವರಾಯನಿಗೆ ಪುಣ್ಯವಾಗಲೆಂದು ಬಿಳಿಚೋಡು ಗ್ರಾಮದ ರಾಮೇಶ್ವರ ದೇವರಿಗೆ ದಾನ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ.[೨೯೯] ಕ್ರಿ.ಶ. ೧೫೨೬ರ ನಿಬಗೂರು ಶಾಸನವು ದತ್ತಿಬಿಟ್ಟ ವಿವರಗಳನ್ನು ನೀಡುತ್ತದೆ.[೩೦೦] ಮಲೆಬೇನ್ನೂರು[೩೦೧] ಮತ್ತು ಚಟ್ನಿಹಳ್ಳಿಯ[೩೦೨] ಶಾಸನಗಳು ಕೃಷ್ಣದೇವರಾಯನ ಕಾಲದಲ್ಲಿ ದಾನ ನೀಡಿರುವುದನ್ನು ಉಲ್ಲೇಖಿಸುತ್ತವೆ.

ಅಚ್ಯುತ ದೇವರಾಯನ ಕ್ರಿ.ಶ. ೧೫೩೧ರ ಒಂದು ಶಾಸನ ಪಾಂಡ್ಯ ನಾಡಿನ ಉಚ್ಚಂಗಿ ಪ್ರದೇಶದಿಂದ ಪಡೆದ ಬೆಳ್ಳೂಡಿ, ಗಂಗನರಸಿ ಗ್ರಾಮಗಳನ್ನು ವಿಜಯನಗರದ ಅರಸರು ಹರಿಹರ ದೇವರಿಗೆ ಅಮೃತಪಡಿ ನೈವೇದ್ಯಕ್ಕೆ ಅರ್ಪಿಸಿ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೦೩] ಕ್ರಿ.ಶ. ೧೫೩೩ರ ಶಾಸನವು ಅವಸರದ ಚಂದ್ರಶೇಖರಯ್ಯ ತನ್ನ ಮಾವ ಅವಸರದ ದೇವರಸಯ್ಯನ ಹೆಸರಿನಲ್ಲಿ ಹರಿಹರ ದೇವಸ್ಥಾನದ ಉತ್ತರ ಭಾಗದಲ್ಲಿ ದೇವಾಲಯವೊಂದನ್ನು ಕಟ್ಟಿಸಿ ಅದಕ್ಕೆ ದೇಮೇಶ್ವರ ದೇವಾಲಯವೆಂದು ಹೆಸರಿಸಿರುವುದನ್ನು ಶಾಸನ ನಿರೂಪಿಸುತ್ತದೆ.[೩೦೪] ಕ್ರಿ.ಶ. ೧೫೩೪ರ ಶಾಸನದಿಂದ ಅಚ್ಯುತ ಮಲ್ಲಪ್ಪಣ್ಣನು ತನ್ನ ಒಡೆಯ ಅಚ್ಯುತರಾಯರ ನೆನಪಿನಲ್ಲಿ ಹರಿಹರದೇವರಿಗೆ ಕುಂದುವಾಡ ಎಂಬ ಗ್ರಾಮವನ್ನು ದತ್ತಿ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ.[೩೦೫] ಕ್ರಿ.ಶ. ೧೫೩೭ರ ಬಿಳಿಚೋಡು ಶಾಸನದಲ್ಲಿ ಅಚ್ಯುತರಾಯ ಬ್ರಂಹ್ಮಿಶೆಟ್ಟಿ ಮತ್ತು ಇತರೆ ಶೆಟ್ಟಿಗಳಿಗೆ ಕೊಟ್ಟ ದಾನದ ಬಗ್ಗೆ ತಿಳಿಸುತ್ತದೆ.[೩೦೬] ಮುಸವನಕಲ್ಲಹಳ್ಳಿಯ ಕಲ್ಲೇಶ್ವರ ದೇವಸ್ಥಾನದ ಬಳಿಯಿರುವ ಶಾಸನವು ಅಚ್ಯುತನ ಪ್ರಿಯನಾದ ಅಣ್ಣಾಜಿ ಎಂಬುವನು ಲಿಂಗಾಭಟ್ಟನ ಮಗ ಸಿಂಗಾಭಟ್ಟನಿಗೆ ಕಲ್ಲಹಳ್ಳಿ ಗ್ರಾಮವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೩೦೭]

ವಿಜಯನಗರದ ಕೊನೆಯ ಅರಸನ ಸದಾಶಿವರಾಯನ ಹತ್ತು ಶಾಸನಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ. ಬಾಗಳಿ ಶಾಸನವೊಂದು ಸದಾಶಿವರಾಯ ವಿದ್ಯಾನಗರದಲ್ಲಿ ಆಳುತ್ತಿದ್ದಾಗ ರಾಜನಿಯೋಗದ ನಾಯಿಂದರಾದ ಭದ್ರೋಜ, ತಿಮ್ಮೋಜ, ಕೊಂಡೋಜ ಮತ್ತಿತರರಿಗೆ ತೆರಿಗೆ ವಿನಾಯಿತಿ ನೀಡಿರುವುದನ್ನು ತಿಳಿಸುತ್ತದೆ.[೩೦೮] ಮತ್ತೊಂದು ಶಾಸನವು ಮೈದೂರು ಗ್ರಾಮದ ನಾಯಿಂದರಿಗೂ ತೆರಿಗೆ ವಿನಾಯಿತಿ ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೦೯] ತಾವರಕೆರೆ ಗ್ರಾಮದ ಶಾಸನ ರಾಮರಾಜ ಒಡೆಯರು ನಾಯಿಂದ ಕುಳ ತೆರಿಗೆ ಸುಂಕವಾಗಿ ಕೊಟ್ಟಿರುವುದನ್ನು ತಿಳಿಸುತ್ತದೆ.[೩೧೦] ಕ್ರಿ.ಶ. ೧೫೫೭ರ ಕುರುವ ಶಾಸನ ಹೊನ್ನಾಳಿ ಸೀಮೆಯ ನಾಲ್ಕು ಗ್ರಾಮಗಳ ತಳವಾರಿಕೆಯನ್ನು ಬಿಡಿಸಿ ರಾಮೇಶ್ವರ ದೇವರಿಗೆ ದತ್ತಿ ಬಿಟ್ಟಿರುವುದನ್ನು ಸೂಚಿಸುತ್ತದೆ.[೩೧೧]

ಕಾಡಜ್ಜಿ ಶಾಸನವು ಸದಾಶಿವರಾಯನ ಸಾಮಂತನು ತಮ್ಮ ತಂದೆ ಭೈಯಪ್ಪ ನಾಯಕನಿಗೂ, ತಾಯಿ ಕೊಂಡಮ್ಮನಿಗೂ ಪುಣ್ಯವಾಗಲಿ ಎಂದು ಬಿಳಿಚೋಡು ಸೀಮೆ ಒಳಗಣ ಕಾಡಜ್ಜಿ ಗ್ರಾಮವನ್ನು ಶ್ರೀ ಹರಿಹರ ದೇವರ ನೈವೇದ್ಯಕ್ಕಾಗಿ ದಾನ ಕೊಟ್ಟಿರುವುದನ್ನು ಉಲ್ಲೇಖಿಸುತ್ತದೆ.[೩೧೨] ಹರಿಹರದ[೩೧೩] ಕ್ರಿ.ಶ. ೧೫೫೪ ಮತ್ತು ೧೫೬೨ರ ಶಾಸನಗಳು ಕೃಷ್ಣಪುರ,[೩೧೪] ಮುತ್ತಗಿ[೩೧೫] ಹಾಗೂ ಗಂಗನರಸಿ[೩೧೬] ಗ್ರಾಮಗಳ ಶಾಸನಗಳು ಸದಾಶಿವರಾಯನ ಕಾಲದವಾಗಿದ್ದು, ದಾನ ದತ್ತಿ ಮುಂತಾದ ಸಾಮಾಜಿಕ ಕಾರ್ಯಗಳನ್ನು ಕೈಗೊಂಡಿದ್ದರ ಬಗ್ಗೆ ಮಾಹಿತಿ ನೀಡುತ್ತವೆ.

ಹೀಗೆ ವಿಜಯನಗರ ಅರಸರ ಹಲವು ಶಾಸನಗಳು ಜಿಲ್ಲೆಯಲ್ಲಿ ದೊರೆತಿದ್ದು ಅವರ ಆಡಳಿತದ ಮೇಲೆ ಬೆಳಕು ಚೆಲ್ಲುತ್ತವೆ. ಹಾಗೆಯೇ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಪ್ರೋತ್ಸಾಹವನ್ನು ನೀಡಿ ಈ ಭಾಗದಲ್ಲಿ ಹಲವು ದೇವಾಲಯ, ಶಿಲ್ಪಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ.

### ೨.೩.೧೧. ಸಾಮಂತ ಮನೆತನಗಳು

ಒಂದು ನಾಡಿನ ಇತಿಹಾಸದಲ್ಲಿ ಪ್ರಧಾನ ರಾಜವಂಶಗಳಿಗೆ ನೀಡುವ ಮಹತ್ವವನ್ನು ಆಯಾ ಕಾಲದ ಸಾಮಂತ ಮನೆತನಗಳಿಗೂ ಸಲ್ಲಬೇಕಾಗುತ್ತದೆ. ಏಕೆಂದರೆ ಮಾಂಡಲಿಕರ ಆಡಳಿತ ವ್ಯವಸ್ಥೆಯೂ ಚರಿತ್ರೆಯಲ್ಲಿ ಬಹಳ ಮಹತ್ವದ್ದಾಗಿತ್ತು. ಇಂತಹ ಸಣ್ಣ ಮನೆತನಗಳ ಅರಸರು ತಮ್ಮ ಸಾರ್ವಭೌಮರಿಗೆ ನಿಷ್ಠುರರಾಗಿದ್ದು, ಅವರು ದುರ್ಬಲರಾದಾಗ ಸ್ವತಂತ್ರರಾಗಲು ಹವಣಿಸುತ್ತಿದ್ದರು. ಇಲ್ಲವೇ ಅದಕ್ಕಿಂತ ಪ್ರಭಾವಶಾಲಿಯಾದ ಮತ್ತೊಂದು ರಾಜವಂಶಕ್ಕೆ ಅಧೀನರಾಗಿ ಕೆಲವು ಪ್ರದೇಶಗಳಲ್ಲಿ ಆಡಳಿತ ನಡೆಸಿ ತಮ್ಮ ನಿಖರತೆಯನ್ನು ಪ್ರದರ್ಶಿಸುತ್ತಿದ್ದರು. ಇವರು ಸ್ಥಾನಿಕ ಸಂಸ್ಕೃತಿಯನ್ನು ಕಾಪಾಡಿಕೊಂಡು ಸಾಮ್ರಾಟರ ರಾಜಶಕ್ತಿಗೆ ಸ್ಥಿರತೆಯನ್ನು ಒದಗಿಸುತ್ತಿದ್ದರು. ತಮ್ಮ ರಾಜನಿಗಾಗಿ ಸೈನ್ಯಶಕ್ತಿಯನ್ನು ಸಂಘಟಿಸುವ ಭಂಡಾರಗಳಂತ್ತಿದ್ದರು. ದೂರದೃಷ್ಟಿ, ಧೈರ್ಯ ಹಾಗೂ ಶ್ರದ್ಧೆಯಿಂದ ಆಳ್ವಿಕೆ ನಡೆಸಿ, ಕರ್ನಾಟಕದ ಕಲೆ ಮತ್ತು ಸಾಹಿತ್ಯದ ಅಭಿವೃದ್ಧಿಗೂ ಕಾರಣರಾಗಿದ್ದರು. ಸಾಮ್ರಾಜ್ಯವನ್ನು ಕಟ್ಟಿ ಆಳಿದ ಮೌರ್ಯ, ಕದಂಬ, ಗಂಗ, ರಾಷ್ಟ್ರಕೂಟ, ಚಾಳುಕ್ಯ, ಹೊಯ್ಸಳ, ವಿಜಯನಗರ ಮೊದಲಾದ ರಾಜರುಗಳಿಗೆ ಸಹಾಯಕರಾಗಿ, ಸಾಮಂತರಾಗಿ ನಿಂತು ಪ್ರಬಲ ರಾಜವಂಶಗಳಾಗಿ ಬೆಳೆಯುವುದಕ್ಕೆ ಕಾರಣರಾದರು.

ಹೀಗೆ ಸಾಮಂತರಾಗಿ, ಮಾಂಡಲಿಕರಾಗಿ ಜಿಲ್ಲೆಯ ಆಡಳಿತ ನಡೆಸಿದ ಬೆಳಗುತ್ತಿ ಸಿಂದರು, ಉಚ್ಚಂಗಿ ಪಾಂಡ್ಯರು ಮತ್ತು ನೊಳಂಬರು ಪ್ರಮುಖರಾಗಿದ್ದಾರೆ. ಇವರ ಆಡಳಿತ ಮತ್ತು ಕಲೆಯ ಮೇಲೆ ಬೆಳಕು ಚೆಲ್ಲುವ ಹಲವು ಶಾಸನ, ಸ್ಮಾರಕಗಳು ಈ ಪ್ರದೇಶದಲ್ಲಿವೆ. ಅವುಗಳನ್ನು ವಿಶ್ಲೇಷಿಸುವ ಮೂಲಕ ದಾವಣಗೆರೆ ಜಿಲ್ಲೆಯಲ್ಲಿ ಈ ಸಾಮಂತ ಮನೆತನಗಳ ಆಡಳಿತದ ಪ್ರಭಾವವನ್ನು ಕಂಡುಕೊಳ್ಳಬಹುದಾಗಿದೆ.

## ೧೧.೧. ಬೆಳಗುತ್ತಿ ಸಿಂದರು

ಬೆಳಗುತ್ತಿ ಇಂದಿನ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕಿನಲ್ಲಿದೆ. 'ಬೆಳಗವರ್ತಿ' ಅಥವಾ ಬೆಳಗುತ್ತಿ ಎಂಬ ಸ್ಥಳದಲ್ಲಿ ಇವರು ಆಳ್ವಿಕೆ ನಡೆಸಿದ್ದರಿಂದ ಇವರನ್ನು ಬೆಳಗುತ್ತಿ ಸಿಂದರೆಂದು ವಿದ್ವಾಂಸರು ಗುರುತಿಸಿದ್ದಾರೆ. ನಿಡುದೋಳ ಸಿಂದನ ವಂಶಜರ ಒಂದು ಶಾಖೆ ಇಲ್ಲಿ ಆಡಳಿತ ನಡೆಸಿದೆ. ಹಾಗಾಗಿ ನಿಡುದೋಳ ಸಿಂದನೇ ಈ ವಂಶದ ಮೂಲ ಪುರುಷನೆಂದು ಒಪ್ಪಿಕೊಳ್ಳಲಾಗಿದೆ. ಇವರು ತಮ್ಮನ್ನು ಶಾಸನಗಳಲ್ಲಿ 'ಕರಹಾಟಪುರವರಾಧೀಶ್ವರ' ರೆಂದು ಕರೆದುಕೊಂಡಿದ್ದಾರೆ. ಈ ಕರಹಾಟವು ಇಂದಿನ ಮಹಾರಾಷ್ಟ್ರ ರಾಜ್ಯದಲ್ಲಿಯ ಕರ್ಹಾಡ(ಕರಾಡ) ಮೂಲಸ್ಥಳವಾಗಿರಬೇಕು. ಬೆಳಗುತ್ತಿಯ ಒಂದು ಶಾಸನದಲ್ಲಿ ಶಿವ ಮತ್ತು ಸಿಂಧು ಇವರ ಸಂಗದಿಂದ ಒಬ್ಬ ಕುಮಾರನು ಜನಿಸಿದನೆಂದೂ ಅವನೇ ನಿಡುದೋಳ್ ಸಿಂದನೆಂದು ಹೆಸರಾಗಿರುವುದಾಗಿ ಹೇಳಲಾಗಿದೆ.[೩೧೭] ಇದೇ ವಿಷಯವನ್ನು ಹರಿಹರದ ಶಾಸನ ವಿಸ್ತಾರವಾಗಿ ಹೇಳುತ್ತದೆ. ಈ ಶಾಸನದ ಪ್ರಕಾರ ಶಿವ ಮತ್ತು ಸಿಂಧುವಿನ ಸಂಯೋಗದಿಂದ ಹುಟ್ಟಿದ ಕುಮಾರನಿಗೆ 'ಸೈಂಧವ' ಎಂದು ಹೆಸರಿಟ್ಟು ಅವನು ಹುಲಿಯ ಹಾಲನ್ನು ಕುಡಿದು ಶೂರನಾಗಬೇಕೆಂದು ಬಯಸಿ ಶಿವನು ಒಂದು ಹುಲಿಯನ್ನು ಸೃಷ್ಟಿಸಿದನು. ಅದರ ಹಾಲನ್ನು ಕುಡಿದು ಬೆಳೆದ ಇವನು ಮುಂದೆ 'ಮಾಲತಿ ದೇವಿಗೆ' ಯುದ್ಧದಲ್ಲಿ ಸಹಕರಿಸಿ ನಿಡುದೋಳ್ ಸಿಂದನಾದನೆಂದು ತಿಳಿಸುತ್ತದೆ.[೩೧೮]

ಬೆಳಗುತ್ತಿ ಮನೆತನದ ಐತಿಹಾಸಿಕ ವ್ಯಕ್ತಿ ಯಾರು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಚರ್ಚೆ ನಡೆದಿವೆ. ಹೊಳಲ್ಕೆರೆ ತಾಲೂಕಿನ ಗುಂಡೇರಿಯ[೩೧೯] ಶಾಸನದಲ್ಲಿ ಬರುವ ನನ್ನಿಯಸಿಂದ ಎಂಬುವನ ಹೆಸರನ್ನು ಉಲ್ಲೇಖಿಸುತ್ತಾ, ನನ್ನಿಯ ಸಿಂದನೆ ಬೆಳಗುತ್ತಿ ಸಿಂದರ ಮೂಲ ಪುರುಷನೆಂದು ವಿದ್ವಾಂಸರಾದ ದಿನಕರ ದೇಸಾಯಿಯವರು ಅಭಿಪ್ರಾಯಪಟ್ಟಿದ್ದಾರೆ.[೩೨೦] ಆದರೆ ವಿದ್ವಾಂಸರಾದ ಬಿ.ಆರ್. ಗೋಪಾಲ ಅವರು 'ನನ್ನಿಗ' ಅಥವಾ 'ನನ್ನಯ' ಎಂಬುದು ನಂಬಿಗಸ್ಥ ಎಂಬ ಅರ್ಥವನ್ನು ನೀಡುತ್ತಿದ್ದು ಇದರ ಮುಂದೆ 'ಸಿಂದ' ಎಂಬ ಪದ ಬಳಕೆಗೊಂಡಿರುವುದರಿಂದಲೇ ಇವನನ್ನು ಸಿಂದ ವಂಶದಲ್ಲಿ ಸೇರಿದವನೆನ್ನಬಹುದೇ? ಎಂದು ಪ್ರಶ್ನಿಸುತ್ತಾರೆ.[೩೨೧] ಕ್ರಿ.ಶ. ೯೯೨ರ ವಾಸನ ಗ್ರಾಮದ ಶಾಸನವು ಮಹಾಸಾಮಂತ ಮುಳಗುಂದ ಸಿಂದ ಜಾತರಸನ ಹೆಸರನ್ನು ಉಲ್ಲೇಖಿಸುತ್ತದೆ. ಮುಳಗುಂದ ಒಂದು ಗ್ರಾಮವಾಗಿದ್ದು ಪ್ರಸ್ತುತ ಗದಗ ಜಿಲ್ಲೆಯಲ್ಲಿದೆ. ಮುಳಗುಂದ ಸಿಂದ ಎಂದರೆ ಮುಳಗುಂದಕ್ಕೆ ಸೇರಿದ ಅಥವಾ ಮುಳಗುಂದವನ್ನು ಆಳುತ್ತಿದ್ದ ಸಿಂದನು ಎಂದು ಅರ್ಥವಾಗುತ್ತದೆ. ಸಿಂದ ಎಂಬ ಹೆಸರು ಸಿಂಹ ವಂಶಕ್ಕೆ ಅನ್ವಯವಾಗುತ್ತದೆ. ಆದ್ದರಿಂದ ಇವನು ಸಿಂದ ವಂಶದವನೇ ಎಂದು ಹೇಳಲಾಗಿದೆ.[೩೨೨] ಬಾ.ರಾ. ಗೋಪಾಲರವರು ಹರಿಹರ ಶಾಸನದಲ್ಲಿ ಕಾಣಿಸಿಕೊಳ್ಳುವ ಪಿರಿಯ ಚಟ್ಟರಸನನ್ನೆ ಬೆಳಗುತ್ತಿಯ ವಂಶದ ಮೂಲಪುರುಷ ಎಂದಿದ್ದಾರೆ.[೩೨೩]

ನನ್ನಿಯ ಸಿಂದನ ನಂತರ ಬೆಳಗುತ್ತಿ ಸಿಂದ ಮನೆತನದಲ್ಲಿ ಸುಮಾರು ೬೦ ವರ್ಷಗಳ ಇತಿಹಾಸ ಮಸುಕಾಗಿದೆ. ಅಂದರೆ ಸುಮಾರು ನಾಲ್ಕು ತಲೆಮಾರುಗಳ ವಿವರಗಳು ಅಸ್ಪಷ್ಟವಾಗಿವೆ. ಆದ್ದರಿಂದ ಹರಿಹರದ ಶಾಸನದಲ್ಲಿ ಕಾಣಿಸಿಕೊಳ್ಳುವ ಪಿರಿಯಚಟ್ಟರಸನೇ ಬೆಳಗುತ್ತಿ ಸಿಂದ ಮನೆತನದ ಮೂಲಪುರುಷನೆಂಬುದು ನಿರ್ವಿಹಿತವಾಗಿದೆ. ಇವನ ನಂತರ ಆಳ್ವಿಕೆ ನಡೆಸಿದ ಅರಸರ ೩೦ಕ್ಕೂ ಹೆಚ್ಚು ಶಾಸನಗಳು ಜಿಲ್ಲೆಯಲ್ಲಿ ಕಂಡುಬಂದಿದ್ದು, ಹೆಚ್ಚಿನ ಶಾಸನಗಳು ವೀರಗಲ್ಲು ಶಾಸನಗಳಾಗಿರುವುದು ವಿಶೇಷ.

ಒಂದನೇ ಚಟ್ಟರಸನು ಎರಡನೇ ಜಯಸಿಂಹನ ಮಾಂಡಲಿಕರಾಗಿದ್ದ ನೊಳಂಬ ಪಲ್ಲವರ ಅಧೀನರಾಗಿ ಅಧಿಕಾರ ನಡೆಸುತ್ತಿದ್ದನೆಂದು ಹರಿಹರ ಶಾಸನದಿಂದ ತಿಳಿಯುತ್ತದೆ.[೨೪] ಈ ಶಾಸನ ಒಂದನೇ ಚಟ್ಟರಸನನ್ನು ಅತಿ ಪರಾಕ್ರಮಿ, ಅನೇಕ ಶತ್ರು ರಾಜ್ಯಗಳನ್ನು ವಶಪಡಿಸಿಕೊಂಡನೆಂದು ವರ್ಣಿಸುತ್ತದೆ. ಒಂದನೇ ಚಟ್ಟರಸನ ನಂತರ ಮಗ ಜೋಗರಸನು ಆಡಳಿತ ನಡೆಸಿರುವುದನ್ನು ಹರಿಹರ[೨೫] ಮತ್ತು ಬೆಳಗುತ್ತಿ[೨೬] ಶಾಸನಗಳಿಂದ ಗೋಚರವಾಗುತ್ತದೆ. ಮೇದೂರಿನ ಶಾಸನದಲ್ಲಿ ಬರುವ ಅಯ್ಯಣ ಜೋಗ ಮತ್ತು ಒಂದನೇ ಚಟ್ಟರಸನ ಮಗ ಜೋಗರಸನು ಒಂದೇ ಎಂದು ವಿದ್ವಾಂಸರಾದ ಬಿ.ಆರ್. ಗೋಪಾಲ ಅಭಿಪ್ರಾಯಪಡುತ್ತಾರೆ.[೨೭] ಅಯ್ಯಣ ಜೋಗರಸ ಮಾಸುರು-೧೨, ಕುಂದುರು-೧೨, ಕೊಳ್ಳಗನೂರು-೭೦, ಅರಕೆರೆ-೧೨ ಮುಂತಾದ ಭಾಗಗಳನ್ನು ಆಳ್ವಿಕೆ ಮಾಡಿರುವುದನ್ನು ಮೇದೂರಿನ ಶಾಸನ ಉಲ್ಲೇಖಿಸುತ್ತದೆ.[೨೮] ಕ್ರಿ.ಶ. ೧೧೧೭ರ ಗೊಗ್ಗದ ಶಾಸನದಂತೆ ಚಲುಕ್ಯತ್ರಿಭುವನ ಮಲ್ಲದೇವನ ದಂಡನಾಯಕ ಗೋವಿಂದರಸನು ಬನವಾಸಿಯನ್ನು ಆಳುತ್ತಿದ್ದಾಗ, ಮಾಂಡಳಿಕ ಚಟ್ಟರಸನು ಎಡವಟ್ಟು-೭೦, ಆಳುತ್ತಿದ್ದುದನ್ನು ಉಲ್ಲೇಖಿಸಿದೆ.[೨೯] ಒಂದನೇ ಈಶ್ವರ ದೇವರ ಮಗ ಮಾಚರಸನು ಎಡವಟ್ಟು-೭೦, ಅರಕೆರೆ-೧೨ ಮತ್ತು ಬಾಡ-೫೦ನ್ನು ಆಳುತ್ತಿದ್ದನೆಂದು ಶಾಸನವೊಂದರಿಂದ ತಿಳಿಯುತ್ತದೆ.[೩೦] ಒಂದನೇ ಮಲ್ಲಿದೇವನ ಯಾವುದೇ ಅಧಿಕೃತ ಶಾಸನಗಳು ದೊರೆತಿಲ್ಲ. ಆದರೆ ಪರೋಕ್ಷವಾಗಿ ಎರಡನೇ ಈಶ್ವರ ದೇವನ ಹರಿಹರದ ಶಾಸನವು ಇವನ ಬಗ್ಗೆ ಉಲ್ಲೇಖಿಸುತ್ತದೆ. ಎರಡನೇ ಈಶ್ವರದೇವ ರಾಯರಸ ಮತ್ತು ಬೂಚಲದೇವಿಯರ ಮಗನೆಂದು ಹರಿಹರ ಶಾಸನ ಉಲ್ಲೇಖಿಸುತ್ತದೆ.[೩೧] ಕೊಡಮಗ್ಗಿಯ ಕ್ರಿ.ಶ. ೧೧೫೮ರ ಶಾಸನವು ಇವನು ಕಳಚೂರಿ ಬಿಜ್ಜಳನ ಮಹಾಮಂಡಲೇಶ್ವರನಾಗಿ ಎಡವಟ್ಟು-೭೦ನ್ನು ಆಳ್ವಿಕೆ ಮಾಡುತ್ತಿದ್ದನ್ನು ತಿಳಿಸುತ್ತದೆ. ಈತನ ನಂತರ ಅಧಿಕಾರಕ್ಕೆ ಬಂದವನು ಇವನ ಮಗ ಎರಡನೇ ಮಲ್ಲಿದೇವ. ಈತನ ಕಾಲದ ನಾಲ್ಕು ವೀರಗಲ್ಲುಗಳು ಬೆಳಗುತ್ತಿಯಲ್ಲಿ, ಒಂದು ಚಿಕ್ಕಯರೆಹಳ್ಳಿ ಗ್ರಾಮದಲ್ಲಿ ಕಂಡುಬರುತ್ತವೆ.[೩೨] ಇವನ ನಂತರ ಅಧಿಕಾರಕ್ಕೆ ಬಂದ ಮೂರನೇ ಈಶ್ವರ ದೇವನ ಆಳ್ವಿಕೆ ಕಾಲದಲ್ಲಿ ಸೇವುಣ ದೊರೆ ಸಿಂಘಣನು ಬೆಳಗುತ್ತಿಯನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುತ್ತಾನೆ. ಈ ವಂಶದ ಕೊನೆಯ ಅರಸ ಹರಭೀರದೇವನ ಕಾಲದಲ್ಲಿ ಸೇವುಣರ ದಂಡನಾಯಕ ಶ್ರೀಧರನು ಬೆಳಗುತ್ತಿಯನ್ನು ಮುತ್ತಿ ವಶಪಡಿಸಿಕೊಂಡನೆಂದು ಹೇಳಲಾಗುತ್ತದೆ.

ಕ್ರಿ.ಶ. ಸುಮಾರು ೧೦ನೇ ಶತಮಾನದಲ್ಲಿ ಕಾಣಿಸಿಕೊಂಡು ೧೩ನೇ ಶತಮಾನದ ಮಧ್ಯಭಾಗದವರೆಗೆ ಆಳ್ವಿಕೆ ಮಾಡಿದ ಬೆಳಗುತ್ತಿ ಸಿಂದರು ರಾಜಕೀಯ ಆಡಳಿತಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಅವರು ದಾವಣಗೆರೆ ಜಿಲ್ಲೆ ಬೆಳಗುತ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ಮಾಡಿದ್ದರಿಂದ ಜಿಲ್ಲೆಯ ಬಹುಭಾಗವು ಅವರ ಹಿಡಿತದಲ್ಲಿ ಇದ್ದಿರುವುದು ಕಂಡುಬರುತ್ತದೆ.

### ೧೧.೨. ಉಚ್ಚಂಗಿ ಪಾಂಡ್ಯರು

ಸೂರ್ಯವಂಶಕ್ಕೆ ಸೇರಿದವರೆಂದು ಹೇಳಿಕೊಳ್ಳುವ ಉಚ್ಚಂಗಿ ಪಾಂಡ್ಯರು ಪ್ರಮುಖವಾದ ರಾಜವಂಶ. ಅವರು ಮೂಲತಃ ಸಪ್ತ ಕೊಂಕಣಗಳಲ್ಲಿ ಒಂದಾದ 'ಹೈವ'ಯನ್ನು ಶಿಶುಗಲಿ ರಾಜಧಾನಿಯಿಂದ ಆಳುತ್ತಿದ್ದರು. ಕ್ರಿ.ಶ. ೧೧೧೩ರಲ್ಲಿ ಪಾಂಡ್ಯರ ದೊರೆಗಳಲ್ಲೊಬ್ಬನು ತಾನು ಗೋಕರ್ಣಪುರದ ಒಡೆಯನೆಂದೂ, ಕೊಂಕಣಕ್ಷೇತ್ರದ ಸಂರಕ್ಷಕನೆಂದೂ ಹೇಳಿಕೊಂಡಿದ್ದಾನೆ. ಪಶ್ಚಿಮ ಚಾಲುಕ್ಯರ ರಾಜಪುತ್ರ ನರಸಿಂಹನು ಸಪ್ತ ಕೊಂಕಣವನ್ನು ಗೆದ್ದ ಮೇಲೆ ಪಾಂಡ್ಯರು ಉಚ್ಚಂಗಿಗೆ ಹೋದರು(ಹರಪನಹಳ್ಳಿ ತಾಲೂಕಿನ ಒಂದು ಗಿರಿದುರ್ಗ ಇವರ ರಾಜಧಾನಿಯಾಗಿತ್ತೆಂದು ಹೇಳಲಾಗಿದೆ).[೩೩೩] ಈ ಪಾಂಡ್ಯರು ನೊಳಂಬವಾಡಿ ೩೨೦೦೦ರ ನಾಡಿನ ಒಡೆಯರಾಗಿದ್ದರು. ಈ ಮನೆತನದ ಸ್ಥಾಪಕನು ಮಂಗಯ್ಯ ಅಥವಾ ಆದಿತ್ಯದೇವ ಈತನ ಮಗ ಚೇದಿರಾಜ, ಅವನ ಮಗ ಪಾಂಡ್ಯನು ಚೇದಿ ದೊರೆಗಳನ್ನು ಅಧೀನಪಡಿಸಿಕೊಂಡು ಆಳ್ವಿಕೆ ನಡೆಸಿದನು.

ಕ್ರಿ.ಶ. ೧೦೭೯ರ ನೀಲಗುಂದದ ಶಾಸನವೊಂದರ ಪ್ರಕಾರ ಕಲ್ಯಾಣ ಚಾಲುಕ್ಯರ ಸಾಮಂತನಾದ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯನು ಉಳುವ ಮತ್ತು ಕಣಮೆಕಲ್ಲು ನೆಲವೀಡಿನಿಂದ ನೊಳಂಬವಾಡಿ ೩೨೦೦೦ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದನೆಂದು ತಿಳಿದುಬರುತ್ತದೆ.[೩೩೪] ಈತನ ಮೇಲೆ ಬೆಳಕು ಚೆಲ್ಲುವ ಮತ್ತೊಂದು ಶಾಸನ ಬಲ್ಲೂರು ಗ್ರಾಮದಲ್ಲಿದೆ.[೩೩೫] ಚಾಲುಕ್ಯ ತ್ರಿಭುವನಮಲ್ಲನ ಮಾಂಡಲಿಕನಾಗಿ ತ್ರಿಭುವನಮಲ್ಲ ಪಾಂಡ್ಯನು ಕ್ರಿ.ಶ. ೧೦೮೩ರಲ್ಲಿ ನೊಳಂಬವಾಡಿಯನ್ನು ಆಳುತ್ತಿದ್ದನು. ಕ್ರಿ.ಶ. ೧೧೦೧ರಲ್ಲಿ ಬಲ್ಲಕುಂದಿ ಮುನ್ನೂರರ ಒಡೆಯನಾಗಿ ದಾವಣಗೆರೆ ಸಮೀಪದಲ್ಲಿರುವ ಬೆಳತೂರಿನಿಂದ ಆಳುತ್ತಿದ್ದುದು ತಿಳಿದುಬರುತ್ತದೆ.[೩೩೬] ಅನಂತರ ಪಾಂಡ್ಯರ ದೊರೆ ರಾಯ ಪಾಂಡ್ಯನು ಬೆಳತೂರಿನಿಂದ ಆಳ್ವಿಕೆ ಮಾಡುತ್ತಿದ್ದನು. ಈತನ ಮಂತ್ರಿ ಆದಿತ್ಯ ದಂಡನಾಥನ ದಕ್ಷತೆಯನ್ನು ಹೊಗಳುವ ಶಾಸನವೊಂದು ಕುಂದವಾಡ ಗ್ರಾಮದಲ್ಲಿ ದೊರೆತಿದೆ.[೩೩೭] ರಾಯ ಪಾಂಡ್ಯನಿಗೆ ಪಂಡಿತಪಾಂಡ್ಯ, ವೀರಪಾಂಡ್ಯ, ವಿಜಯಪಾಂಡ್ಯ ಅಥವಾ ಕಾಮದೇವ ಎಂಬ ಮಕ್ಕಳಿದ್ದರು. ಇವರಲ್ಲಿ ವೀರಪಾಂಡ್ಯನು ಉಚ್ಚಂಗಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಡಳಿತ ನಡೆಸಿದನು. ಆಸ್ತಪನಹಳ್ಳಿ ಗ್ರಾಮದ ಎರಡು ಶಾಸನಗಳು ಮಲ್ಲಿಕಾರ್ಜುನ ದೇವರಿಗೆ ಮತ್ತು ಸೋಮೇಶ್ವರ ದೇವರಿಗೆ ವೀರಪಾಂಡ್ಯ ದತ್ತಿ ಬಿಟ್ಟಿರುವುದನ್ನು ತಿಳಿಸುತ್ತವೆ.[೩೩೮] ಕ್ರಿ.ಶ. ೧೧೪೬ರ ಚಟ್ನಿಹಳ್ಳಿ ಒಂದು ಶಾಸನ ವೀರಪಾಂಡ್ಯನ ದಂಡನಾಯಕ ಮಾಕೆರೆಯಲ್ಲಿ ದೇವಸ್ಥಾನ ಕಟ್ಟಿಸಿ, ಅಲ್ಲಿಯ ಸೋಮೇಶ್ವರ

ದೇವರಿಗೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ.[೩೩೯] ಗಂಗನರಸಿಯ ಇವನ ಕಾಲದ ಮತ್ತೊಂದು ಶಾಸನ ವೀರಪಾಂಡ್ಯನು ಅರಸೀಕೆರೆಯ ಕಲ್ಲೇಶ್ವರ ದೇವರಿಗೆ ಭೂಮಿ ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೪೦]

ವೀರಪಾಂಡ್ಯನ ನಂತರ ಅಧಿಕಾರಕ್ಕೆ ಬಂದ ವಿಜಯಪಾಂಡ್ಯ ಅಥವಾ ಕಾಮದೇವನಿಗೆ ಉಚ್ಚಂಗಿಯೇ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಈತನು ಕ್ರಿ.ಶ. ೧೧೪೮ರಿಂದ ೧೧೮೭ರವರೆಗೆ ನೊಳಂಬವಾಡಿ ಪ್ರಾಂತ್ಯದಿಂದ ಉಚ್ಚಂಗಿಯನ್ನು ಆಳಿದನು. ಕ್ರಿ.ಶ. ೧೧೭೧ರಲ್ಲಿ ಹರಿಹರದ ಈಗಿನ ಬೆಳ್ಳೂಡಿ ಗ್ರಾಮವನ್ನು ಕೂಡಲೂರಿನ ಹರಿಹರೇಶ್ವರ ದೇವರಿಗೆ ವಿಜಯಪಾಂಡ್ಯನು ದಾನ ನೀಡಿರುವುದು ದಾವಣಗೆರೆಯ ಶಾಸನವೊಂದರಿಂದ ತಿಳಿದುಬರುತ್ತದೆ.[೩೪೧] ಚದುರುಗೋಳದ ಕಲ್ಲೇಶ್ವರ ದೇವಸ್ಥಾನ ಬಳಿಯಿರುವ ಕ್ರಿ.ಶ. ೧೧೬೮ರ ಶಾಸನವು ವಿಜಯಪಾಂಡ್ಯನ ಸಾಮಂತರಾದ ಸೋವಿದೇವ ನಾಯಕ, ಬಮ್ಮದೇವ ನಾಯಕ ಎಂಬುವರು ಶ್ರೀ ವೀರಪಾಂಡ್ಯ ಚತುರ್ವೇದಿ ಮಂಗಲ ಚಿಂತೇರಿಯ ಅಗ್ರಹಾರದಲ್ಲಿ ಶೈವ ದೇವಾಲಯವೊಂದಕ್ಕೆ ನೀರಾವರಿ ಗದ್ದೆ ಭೂಮಿಯನ್ನು ದಾನ ನೀಡಿರುವುದು ತಿಳಿಯುತ್ತದೆ.[೩೪೨] ವಿಜಯಪಾಂಡ್ಯನು ರಾಯಪಾಂಡ್ಯ ದೊರೆಯ ಮೂರನೇ ಮಗನೆಂದು ಉಲ್ಲೇಖಿಸುವ ಶಾಸನ ಲೋಕೀಕೆರೆಯಲ್ಲಿದೆ.[೩೪೩] ಚಾಲುಕ್ಯರ ಒಂದನೇ ಪ್ರತಾಪ ಚಕ್ರವರ್ತಿ ಜಗದೇಕಮಲ್ಲನ ಮಹಾಮಂಡಲೇಶ್ವರನಾದ ಉಚ್ಚಂಗಿ ಪಾಂಡ್ಯರ ವಿಜಯ ಪಾಂಡ್ಯ ಒಬ್ಬನಲ್ಲ, ಇಬ್ಬರು ಎಂದು ಉಲ್ಲೇಖಿಸುವ ಶಾಸನ ಬೇತೂರಿನಲ್ಲಿದೆ.[೩೪೪]

ಈ ವಂಶದ ವಿಜಯಪಾಂಡ್ಯ ಆಳ್ವಿಕೆ ನಡೆಸುತ್ತಿರುವಾಗ ಕ್ರಿ.ಶ. ೧೧೭೭ರಲ್ಲಿ ಹೊಯ್ಸಳ ಮೂರನೇ ಬಲ್ಲಾಳನು ಪ್ರಯಾಸದಿಂದ ಹೋರಾಡಿ ಉಚ್ಚಂಗಿದುರ್ಗ ಕೋಟೆಯನ್ನು ವಶಪಡಿಸಿಕೊಂಡು 'ಗಿರಿದುರ್ಗಮಲ್ಲ' ಎಂಬ ಬಿರುದನ್ನು ಧರಿಸಿದನು.[೩೪೫] ಹೀಗೆ ಉಚ್ಚಂಗಿ ಪಾಂಡ್ಯದ ಅರಸರು ದಾವಣಗೆರೆ ಪರಿಸರದಲ್ಲೇ ಪ್ರಬಲ ಆಡಳಿತ ನಡೆಸಿರುವುದು ಕಂಡುಬರುತ್ತದೆ.

### ೧೧.೩. ನೊಳಂಬರು

ಆಗ್ನೇಯ ಕರ್ನಾಟಕ ಭಾಗದಲ್ಲಿ ಸುಮಾರು ಕ್ರಿ.ಶ. ೭೫೦ರಿಂದ ೧೦೫೪ರವರೆಗೆ ಆಳಿದ ಸಾಮಂತ ರಾಜವಂಶ. ಕರ್ನಾಟಕದ ಇತಿಹಾಸದಲ್ಲಿ ಮೂರು ಶತಮಾನಗಳ ಕಾಲ ಆಡಳಿತ ನಡೆಸಿದ ಹಿರಿಯ ಸಾಮಂತ ಮನೆತನಗಳ ಪೈಕಿ ನೊಳಂಬ ಪಲ್ಲವರ ಮನೆತನವೂ ಒಂದು. ಬಾಣರು, ರಾಷ್ಟ್ರಕೂಟ, ತಲಕಾಡಿನ ಗಂಗರು, ಪಲ್ಲವರು, ವೆಂಗಿಯ ಚಾಲುಕ್ಯ, ಮೈದುಂಬರ ಮೊದಲಾದ ದಕ್ಷಿಣ ಭಾರತದ ರಾಜಮನೆತನಗಳ ಜೊತೆ ನಿಕಟ ಸಂಬಂಧ ಹೊಂದಿದ್ದರು. ತಲಕಾಡಿನ ಪಶ್ಚಿಮ ಗಂಗರ ಆಶ್ರಿತರಾಗಿ ಇವರು ತಮ್ಮ ಆಳ್ವಿಕೆಯನ್ನು ಆರಂಭಿಸಿದರು. ನೊಳಂಬರ ರಾಜಧಾನಿ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲೂಕಿನ ಇಂದಿನ ಹೇಮಾವತಿ(ಪ್ರಾಚೀನ ಹೆಂಜೇರು). ಇವರು ಹತ್ತನೇ ಶತಮಾನದ ವೇಳೆಗೆ ಪ್ರಬಲರಾಗಿ ನೊಳಂಬವಾಡಿ-೩೨೦೦೦ ಎಂಬ ವಿಶಾಲ ಪ್ರಾಂತ್ಯದ ಅಧಿಪತಿಗಳಾದರು. ಈ ಪ್ರಾಂತ್ಯ

ಮುಖ್ಯವಾಗಿ ಇಂದಿನ ಕೋಲಾರ, ತುಮಕೂರು, ಚಿತ್ರದುರ್ಗ, ಬೆಂಗಳೂರು, ಬಳ್ಳಾರಿ, ಅನಂತಪುರ, ಧರ್ಮಪುರಿ ಮೊದಲಾದ ಜಿಲ್ಲೆಗಳ ಭಾಗಗಳನ್ನೊಳಗೊಂಡಿತ್ತು. ವಾಸ್ತು ಶಿಲ್ಪಕಲೆಯನ್ನು ಪ್ರೋತ್ಸಾಹಿಸಿ ಬೆಳೆಸಿದ ಇವರು ನೊಳಂಬ ಕಲಾಶೈಲಿಯೆಂಬ ವಿಶಿಷ್ಟ ವಾಸ್ತುಶಿಲ್ಪ ಸಂಪ್ರದಾಯದ ಉದಯಕ್ಕೆ ಕಾರಣರಾದರು.

ದಾವಣಗೆರೆ ತಾಲೂಕು ಅಣಿಜಿಯಲ್ಲಿ ದೊರೆಯುವ ಶಾಸನವೇ ನೊಳಂಬರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಾಸನವಾಗಿದೆ.[೩೪೬] ಈ ಶಾಸನದ ಕಾಲ ಕ್ರಿ.ಶ. ೪೫೦ ಆಗಿದ್ದು, ಇದು ನೊಳಂಬ ಪಲ್ಲವ ನನಕ್ಕಸರಾಜನು ಕೃಷ್ಣವರ್ಮ ರಾಜನ ಸೈನ್ಯವನ್ನು ಪರಾಭವಗೊಳಿಸಿದನೆಂದು ಉಲ್ಲೇಖಿಸಿದೆ. ಮುಷ್ಟೂರಿನ ಕ್ರಿ.ಶ. ೯೨೦ರ ಶಾಸನವು ನೊಳಂಬಾಧಿರಾಜ ಅಯ್ಯಪ್ಪದೇವನು ನೊಳಂಬವಾಡಿ ೩೨೦೦೦ದ ನಾಡನ್ನೂ, ಅವನ ಅಧೀನನಾಗಿ ಅಣ್ಣಯ್ಯ ಎಂಬುವನು ಈ ಪ್ರದೇಶವನ್ನು ಆಳುತ್ತಿದ್ದಾಗ, ಹಾಳಾಗಿದ್ದ ಮುಟ್ಟುವುರದ (ಮುಷ್ಟೂರು) ದೇವಾಲಯವನ್ನು ಜೀರ್ಣೋದ್ಧಾರ ಮಾಡಿರುವುದನ್ನು ತಿಳಿಸುತ್ತದೆ.[೩೪೭] ಕ್ರಿ.ಶ. ೯೯೪ರ ಶಾಸನವೊಂದು ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿದೇವ ದದಿರ್ವಾಳಿಗೆ-೧೦೦೦, ಬಲ್ಲಕುಂದ-೩೦೦ ಪ್ರಾಂತ್ಯಗಳನ್ನು ಆಳುತ್ತಿದ್ದಾಗ, ನೆರಳಗುಂಡಿಯ ಒಡೆಯ ಹಿಟ್ಟುಮಯ್ಯನು ಮಲ್ಲಿಕಾರ್ಜುನ ದೇವರಿಗೆ ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ.[೩೪೮] ಕ್ರಿ.ಶ. ೧೦೧೮ರ ಬಾಗಳಿಯ ಎರಡು ಶಾಸನಗಳು ಜಗದೇಕಮಲ್ಲ ನೊಳಂಬ ಉದಯಾದಿತ್ಯನು ಗಂಗವಾಡಿ-೯೬೦೦೦, ಕದಂಬಗಳಿಗೆ-೧೦೦೦, ಕೋಗಳಿ-೫೦೦, ಮಾಸವಾಡಿ-೧೪೦, ಬಲ್ಲಕುಂದೆ-೩೦೦, ಕುದಿಹರವಿ-೭೦, ಎಡತೊರೆ-೨೦೦೦ ಪ್ರಾಂತ್ಯಗಳನ್ನು ಕಂಪ್ಲಿಯಿಂದ ಆಳುತ್ತಿದ್ದನೆಂದು ತಿಳಿಸುತ್ತವೆ.[೩೪೯] ನಿಟ್ಟೂರಿನ ಒಂದು ಶಾಸನ ನೊಳಂಬಪಲ್ಲವ ಪೆರ್ಮಾಡಿ ದೇವನ ಕಾಲದಲ್ಲಿ ಕದಂಬಗಳಿಗೆ-೧೦೦೦ ಆಳುತ್ತಿದ್ದ ಅವನ ನಾಡಗಾವುಂಡ ಬಲ್ಲಯ್ಯ ಕ್ರಿ.ಶ. ೧೦೨೫ರಲ್ಲಿ ಅಲ್ಲಿಯ ಬಲ್ಲೇಶ್ವರ ದೇವರಿಗೆ ಬಿಟ್ಟ ಭೂದಾನದ ವಿವರಗಳನ್ನು ಉಲ್ಲೇಖಿಸಿದೆ.[೩೫೦] ಕ್ರಿ.ಶ. ೧೦೪೭ರ ಹಿರೇಕೋಗಲೂರು ಶಾಸನವು ಚಾಲುಕ್ಯ ತ್ರೈಲೋಕ್ಯಮಲ್ಲನ ಮಾಂಡಲಿಕನಾಗಿ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿ ಆಳುತ್ತಿದ್ದನೆಂದು ತಿಳಿಸುತ್ತದೆ.[೩೫೧]

ಕ್ರಿ.ಶ. ೧೦೪೨ರ ಅವರಗೆರೆಯ ಶಾಸನ ಜಗದೇಕಮಲ್ಲ ಇಮ್ಮಡಿ ನೊಳಂಬಪಲ್ಲವ ಪೆರ್ಮಾಡಿಯು ಚಾಲುಕ್ಯರ ಸಾಮಂತನಾಗಿ ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ. ಇವನ ಕಾಲದ ಹದಡಿ ಶಾಸನ ಬ್ರಹ್ಮೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟಿರುವುದನ್ನು ತಿಳಿಯುತ್ತದೆ.[೩೫೨] ಅರಕೆರೆಯ ಕ್ರಿ.ಶ. ೧೦೪೭ರ ಶಾಸನದಿಂದ ತ್ರೈಲೋಕಮಲ್ಲ ನನ್ನಿನೊಳಂಬನ ಒಡೆಯ ಕೇಶವಯ್ಯನು ನಾಗೇಶ್ವರ ದೇವರಿಗೆ ನೀಡಿದ ಭೂದಾನದ ಮಾಹಿತಿ ತಿಳಿಯುತ್ತದೆ.[೩೫೩] ಕ್ರಿ.ಶ. ೧೦೪೨ರ ವಡ್ಡನಹಾಳು ಶಾಸನ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವನು ಹಲವು ಪ್ರಾಂತ್ಯಗಳನ್ನು ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ.[೩೫೪] ಆಸಗೋಡು ಶಂಭುಲಿಂಗ ದೇವಾಲಯದ ಬಳಿ ಇರುವ

ಕ್ರಿ.ಶ. ೧೦೫೪ರ ಶಾಸನವು ಪಲ್ಲವ ಕುಲವೈಭವ ನರಸಿಂಘದೇವನು ಚಾಲುಕ್ಯ ತ್ರೈಲೋಕ್ಯಮಲ್ಲ (೧ನೇ ಸೋಮೇಶ್ವರ)ನ ಕಾಲದಲ್ಲಿ ಉಚ್ಚಂಗಿ–೩೦ ಪ್ರಾಂತ್ಯಗಳನ್ನು ಆಳುತ್ತಿದ್ದನೆಂದು ತಿಳಿಸುತ್ತದೆ.[೩೫೫] ಕ್ರಿ.ಶ. ೧೧೬೦ರ ವಾಸನದ ತ್ರುಟಿತ ಶಾಸನವೊಂದು ನೊಳಂಬ ರಾಜನೊಬ್ಬನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ.

ಮೇಲಿನ ಶಾಸನಗಳ ವಿಶ್ಲೇಷಣೆಯಿಂದಾಗಿ ನೊಳಂಬರು ದಾವಣಗೆರೆ ಜಿಲ್ಲೆಯ ಬಹುಭಾಗದಲ್ಲಿ ಆಡಳಿತ ನಡೆಸಿರುವುದು ದೃಢಗೊಳ್ಳುತ್ತದೆ.

### ೨.೩.೧೨ ಪಾಳೆಯಗಾರರು

ಕರ್ನಾಟಕದಲ್ಲಿ ಆಡಳಿತ ನಡೆಸಿದ ಸಣ್ಣಪುಟ್ಟ ರಾಜಮನೆತನಗಳು ನಾಡಿನ ಇತಿಹಾಸ ಸಂಸ್ಕೃತಿಗಳನ್ನು ಸಂಪನ್ನಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ದೊಡ್ಡ ರಾಜರ ಅಸ್ತಿತ್ವ ಇಂಥ ಪುಟ್ಟ ರಾಜವಂಶಗಳ ತಳಹದಿಯ ಮೇಲೆ ಭದ್ರವಾಗಿತ್ತು. ಆಗಾಗ್ಗೆ ಸಂಭವಿಸಿದ ಕೆಲವು ಚಾರಿತ್ರಿಕ ಘಟನೆಗಳಿಂದ ಚಿಕ್ಕ ಪ್ರದೇಶಗಳಲ್ಲಿ ಒಡೆತನವನ್ನು ನಡೆಸುತ್ತಿದ್ದ ನಾಯಕರಿಗೆ ಸಾಮಂತರು, ದೇಸಾಯರು, ಪಾಳೆಯಗಾರರು ಎಂದು ಕರೆಯಲಾಗಿದೆ. ಕ್ರಿ.ಶ. ೧೩ನೆಯ ಶತಮಾನದ ಅಂತ್ಯದವರೆಗೂ ಕೆಲವು ಸಣ್ಣ ಮನೆತನಗಳು ತಮ್ಮ ಪ್ರದೇಶಗಳ ಮೇಲೆ ಆಂತರಿಕ ಆಡಳಿತಕ್ಕೆ ಹವಣಿಸುತ್ತಿದ್ದರು. ಕ್ರಿ.ಶ. ೧೪ನೆಯ ಶತಮಾನದ ಆದಿ ಭಾಗದಲ್ಲಿ ನಡೆದ ಮುಸಲ್ಮಾನ ಅರಸರ ದಾಳಿಗಳಿಂದ ಇಲ್ಲಿನ ರಾಜಕೀಯ ವ್ಯವಸ್ಥೆಯಲ್ಲಿ ಬದಲಾವಣೆ ಆರಂಭವಾಯಿತು. ಅರವೀಡು ಮನೆತನದ ಪತನಾನಂತರ ವಿಜಯನಗರ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದ ಪಾಳೆಯಗಾರರೆಲ್ಲರೂ ಸ್ವತಂತ್ರರಾದರು. ಈವರೆಗೆ ನಡೆದಿರುವ ಅಧ್ಯಯನಗಳಿಂದಾಗಿ ಅಂತಹ ಪಾಳೆಯಗಾರರ ಸಂಖ್ಯೆ ೭೭ಕ್ಕೂ ಹೆಚ್ಚು.[೩೫೬] ಅವರು ಆಳುತ್ತಿದ್ದ ಭೂ ವಿಸ್ತಾರ, ಸಂಪತ್ತು, ಸೈನ್ಯ, ಶಕ್ತಿಯಾಧಾರಿತವಾಗಿತ್ತು. ಪಾಳೆಯ ಎಂಬ ಪದ ದಂಡು, ಸೈನ್ಯ, ಸೇನಾ, ವಿಭಾಗ, ಶಿಬಿರ, ಠಾಣ್ಯ ಎಂಬ ಅರ್ಥವನ್ನು ಸೂಚಿಸುತ್ತದೆ.[೩೫೭] ಇಂತಹ ಹಲವಾರು ಪಾಳೆಯಗಾರರು ತಮ್ಮ ಪ್ರದೇಶಗಳ ಸುತ್ತ ರಕ್ಷಣೆಗಾಗಿ ಕೋಟೆಗಳನ್ನು ನಿರ್ಮಿಸಿದರು. ಹಲವು ದೇವಾಲಯ, ಕೆರೆಕಟ್ಟೆ, ಬಾವಿಗಳನ್ನು ನಿರ್ಮಿಸಿ ಸಾಮಾಜಿಕ ಸೇವಾ ಕಾರ್ಯಗಳಿಂದಾಗಿಯೂ ಅವರು ಹೆಸರಾಗಿದ್ದಾರೆ.

### ೧೨.೧ ಚಿತ್ರದುರ್ಗ ಪಾಳೆಯಗಾರರು

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಸಂಸ್ಥಾನಗಳಲ್ಲಿ ಚಿತ್ರದುರ್ಗದ ಪಾಳೆಯಗಾರರು ಪ್ರಮುಖರಾಗಿದ್ದಾರೆ. ಇವರು ಚಿತ್ರದುರ್ಗದ ನಾಯಕರು ಎಂದೇ ಖ್ಯಾತರಾಗಿದ್ದಾರೆ. ಚಿತ್ರದುರ್ಗವನ್ನು ಕೇಂದ್ರವಾಗಿರಿಸಿಕೊಂಡು ಸುಮಾರು ಹನ್ನೊಂದು ಮಂದಿ ಅರಸರು ಕ್ರಿ.ಶ. ಸು. ೧೫೬೫ರಿಂದ ೧೭೭೯ರವರೆಗೆ ಒಟ್ಟು ಇನ್ನೂರ ಹನ್ನೊಂದು ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ. 'ವಾಲ್ಮೀಕಿ ಗೋತ್ರದ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ' ಎಂಬ

ಅಭಿದಾನವನ್ನು ತಮ್ಮ ಹೆಸರುಗಳೊಡನೆ ಧರಿಸಿಕೊಂಡದ್ದು ಅವರ ಶಾಸನಗಳಿಂದ ವ್ಯಕ್ತವಾಗುತ್ತದೆ.[೩೫೮] ಮತ್ತಿ ತಿಮ್ಮಣ್ಣನಾಯಕ ಈ ವಂಶದ ಮೂಲ ಪುರುಷ. ಸ್ವಶಕ್ತಿಯಿಂದ ಒಂದು ಸಣ್ಣ ಪಾಳೆಯಪಟ್ಟನ್ನು ಸ್ಥಾಪಿಸಿ ಚಿತ್ರದುರ್ಗದ ಪಾಳೆಯಗಾರರ ರಾಜಕೀಯ ಚರಿತ್ರೆ ಆರಂಭಿಸಿದನು. ಇವನು ಹರಪನಹಳ್ಳಿ ಪಾಳೆಯಗಾರರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿಕೊಂಡಿದ್ದು ಕಂಡುಬರುತ್ತದೆ.[೩೫೯] ಇವರ ಆಳ್ವಿಕೆಯನ್ನು ದೃಢಪಡಿಸುವ ೧೭ ಶಾಸನಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿವೆ.

ಕ್ರಿ.ಶ. ೧೫೭೬ರ ರೆಡ್ಡಿಹಳ್ಳಿ ಶಾಸನ ಈ ವಂಶದ ಕಸ್ತೂರಿ ರಂಗಪ್ಪನಾಯಕನ ದಳವಾಯಿಯಾದ ಭರಮಪ್ಪನವರು ಜಗಲೂರಿನ ವಿರಕ್ತಮಠಕ್ಕೆ ಒಂದು ಗ್ರಾಮವನ್ನು ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೬೦] ಕಸ್ತೂರಿ ರಂಗಪ್ಪನಾಯಕ ಕಣಗುಕುಪ್ಪೆಯ ದಳವಾಯಿಯಾದ ಚಿನ್ನಯ್ಯ, ಪಾರುಪತ್ಯಗಾರ ತಿಮ್ಮಪ್ಪ ಹಾಗೂ ಉರುವಕೊಂಡೆ ಬೊಮ್ಮಯ್ಯರಿಗೆ ಸೊಕ್ಕೆ ಬಂಟನಹಳ್ಳಿ, ಅಂಗುಟ, ಬೆಂಚೆಲ, ಕ್ಷುಮಾಪುರ, ಕೃಷ್ಣಾಪುರ ಎಂಬ ಐದು ಗ್ರಾಮಗಳ ಮಧ್ಯದಲ್ಲಿನ ಭೂಮಿಯನ್ನು ಉಂಬಳಿಯಾಗಿ ನೀಡಿದ್ದನ್ನು ಕ್ರಿ.ಶ. ೧೬೫೫ರ ಮೆದಕೇರಿಪುರ ಶಾಸನದಿಂದ ತಿಳಿದುಬರುತ್ತದೆ.[೩೬೧] ಕ್ರಿ.ಶ. ೧೬೭೨ರ ಭರಮಸಮುದ್ರದ ಶಾಸನವು ಈ ವಂಶದ ಇಮ್ಮಡಿ ಮದಕರಿನಾಯಕನು ಭರಮಸಮುದ್ರದಲ್ಲಿ ಕೋಟೆಯನ್ನು ಕಟ್ಟಿಸಿ, ಗಳ್ಳೆಲೋರ ಚಿಂದಲಯ್ಯನಿಗೆ ಕೋಟೆಯ ಅಧಿಕಾರವನ್ನು ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೬೨] ಹಿರಿಯ ತಿಮ್ಮಣ್ಣನಾಯಕನ ಕಾಲದ ಕ್ರಿ.ಶ. ೧೬೭೪ರ ಶಾಸನವೊಂದು ಚಿಕ್ಕ ಕೋಗಿಲೂರುನಲ್ಲಿದೆ.[೩೬೩] ಈ ಶಾಸನವು ಬೋಳೆಯ ಕಾಮಣ್ಣನಾಯಕನ ಮೊಮ್ಮಕ್ಕಳು ಮತ್ತು ಹಿರಿಯ ತಿಮ್ಮಣ್ಣನಾಯಕರು ಚಿಕ್ಕಕೋಗಿಲೂರನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೬೮೧ರಲ್ಲಿ ಕಸ್ತೂರಿ ಚಿಕ್ಕಣ್ಣನಾಯಕ ತಿರುವೆಂಗಳಚಾರ್ಯರಿಗೆ ಹಾಲವರ್ತಿ ಗ್ರಾಮವನ್ನು ದಾನವಾಗಿ ನೀಡಿರುವುದು ತಿಳಿದುಬರುತ್ತದೆ.[೩೬೪] ಇವನ ಕಾಲದ ಮತ್ತೊಂದು ಶಾಸನ ಸಿದ್ಧಮ್ಮನಹಳ್ಳಿ ಗ್ರಾಮದಲ್ಲಿದೆ.[೩೬೫] ಈ ಶಾಸನವು ಪಾರುಪತ್ಯಗಾರನಾದ ಬೂತೈನ ವೀರಣ್ಣನು ತನ್ನ ಹೆಂಡತಿ ಸಿದ್ಧವ್ವಳ ಹೆಸರಿನಲ್ಲಿ ಸಿದ್ಧಾಪುರ ಗ್ರಾಮವನ್ನು ನಿರ್ಮಿಸಿರುವುದು ಮತ್ತು ಈ ಗ್ರಾಮದಲ್ಲಿ ದೇವಾಲಯವನ್ನು ಕಟ್ಟಿದ ಮಂಚಾಲ ಬಸವಯ್ಯನಿಗೆ ಹೊಲವನ್ನು ದಾನವಾಗಿ ಕೊಟ್ಟಿರುವುದನ್ನು ದಾಖಲಿಸಿದೆ.

ಮೊರಡಿ ಗ್ರಾಮದ ಕ್ರಿ.ಶ. ೧೬೮೯ರ ಶಾಸನವು ಭರಮಣ್ಣನಾಯಕನು ನೀಡಿದ ದಾನದ ವಿಷಯವನ್ನು ಉಲ್ಲೇಖಿಸುತ್ತದೆ.[೩೬೬] ಇವನ ಕಾಲದ ಮತ್ತೊಂದು ಶಾಸನ ನೀರ್ಥಡಿ ಗ್ರಾಮದಲ್ಲಿದೆ.[೩೬೭] ನೀರತಡಿಯ ನರಸಿಂಹ ದೇವಸ್ಥಾನವನ್ನು ದಿಲ್ಲಿಯ ಬಾದಶಹಾನ ಸೈನ್ಯ ದೇವಸ್ಥಾನ ಮತ್ತು ದೇವರ ವಿಗ್ರಹವನ್ನು ಹಾಳು ಮಾಡಿದ್ದರಿಂದ ಆ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿ, ನೈವೇದ್ಯ ಮತ್ತು ನಂದಾದೀಪಕ್ಕೆ ಭರಮಸಾಗರ ಸೀಮೆಯ ಯೆಂಮೆಹಟ್ಟಿ ಎಂಬ ಗ್ರಾಮವನ್ನು ದಾನ ನೀಡಿರುವುದನ್ನು ಶಾಸನ ವಿವರಿಸುತ್ತದೆ. ಈತನ

ಕಾಲದ ತಾಮ್ರಶಾಸನವೊಂದು ದಾವಣಗೆರೆಯಲ್ಲಿ ದೊರೆತಿದೆ.[೩೬೮] ಕ್ರಿ.ಶ. ೧೭೦೮ರ ಕೋಲುಕುಂಟೆ ಶಾಸನ ಭರಮಣ್ಣನಾಯಕನು ತಮ್ಮ ಹಿರಿಯರಿಗೆ ಪುಣ್ಯ ಸುಕೃತವಾಗಬೇಕೆಂದು ಹೊನ್ನಾಳಿ ಸಿಂಗಣ್ಣಜೋಯಿಸರ ಪುತ್ರರಾದ ಕಾಸೀವಾಸಿಗಳಾದ ನಾರಾಯಣಭಟ್ಟ, ಶಂಕರಭಟ್ಟ ಹಾಗೂ ಶಿವಭಟ್ಟ ಎಂಬ ಈ ಮೂರು ವರ್ಗದವರಿಗೆ ಕೊಡಗನೂರು ಸೀಮೆಯ ಕೋಲುಕುಂಟೆಯೆಂಬ ಗ್ರಾಮವನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೬೯] ಇದೇ ರೀತಿ ತಮ್ಮ ಹಿರಿಯರಿಗೆ ಪುಣ್ಯವಾಗಲೆಂದು ದಾನದ ಉಲ್ಲೇಖ ನೀಡುವ ಇನ್ನೊಂದು ಶಾಸನ ಗಂಡಮುಕ್ತೇನಹಳ್ಳಿಯಲ್ಲಿದೆ.[೩೭೦] ಲಕ್ಷ್ಮೀಪತಿಯ ಪುತ್ರನಾದ ಬೊಕಸ್ತ ನಾರಾಯಣಪ್ಪನಿಗೆ ಗಂಡಮುಕ್ತೇನಹಳ್ಳಿ ಗ್ರಾಮ ನೀಡಿದನೆಂದು ಶಾಸನ ತಿಳಿಸುತ್ತದೆ. ಈ ಗ್ರಾಮಗಳಲ್ಲದೆ ಕಲ್ಲೇನಹಳ್ಳಿ, ಬೂದಿಹಾಳು, ಮಲ್ಲೇನಹಳ್ಳಿ, ಕಸವನಹಳ್ಳಿನ್ನು ಭರಮಣ್ಣನಾಯಕ ತನ್ನ ಕಾಲದಲ್ಲಿ ದತ್ತಿ ಬಿಟ್ಟಿರುವುದು ತಿಳಿದುಬರುತ್ತದೆ.[೩೭೧]

ಮೈಸೂರಿನ ಹೈದರ್ ಅಲಿ ಚಿತ್ರದುರ್ಗ ಕೋಟೆಯನ್ನು ವಶಪಡಿಸಿಕೊಳ್ಳುವ ಮಹದಾಸೆಯಿಂದ ಹರಪನಹಳ್ಳಿ, ಜರಿಮಲೆ ಮತ್ತು ರಾಯದುರ್ಗದ ಪಾಳೆಯಗಾರರ ನೆರವಿನೊಂದಿಗೆ ಕ್ರಿ.ಶ. ೧೭೭೯ರಲ್ಲಿ ಎರಡನೇ ಬಾರಿ ಮುತ್ತಿಗೆ ಹಾಕಿ ಹಿರೇ ಮದಕರಿ ನಾಯಕನನ್ನು ಸೆರೆ ಹಿಡಿದು ಚಿತ್ರದುರ್ಗ ಸಂಸ್ಥಾನವನ್ನು ವಶಪಡಿಸಿಕೊಂಡನು.[೩೭೨]

### ೧೨.೨. ಹರಪನಹಳ್ಳಿ ಪಾಳೆಯಗಾರರು

ಚಿತ್ರದುರ್ಗ ಪಾಳೆಯಗಾರರ ಸಮಕಾಲೀನರಾಗಿ ಹರಪನಹಳ್ಳಿ ಪಾಳೆಯಗಾರರು ಆಳ್ವಿಕೆ ಮಾಡಿದ್ದಾರೆ. ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕನ್ನೇ ಕೇಂದ್ರ ಸ್ಥಾನವಾಗಿ ಮಾಡಿಕೊಂಡು ಆಡಳಿತ ನಡೆಸಿರುವ ಈ ವಂಶದ ಮೂಲಪುರುಷ ದಾದಯ್ಯ ನಾಯಕ. ವಿಜಯನಗರ ಪತನಾನಂತರ ಈತನು ತನ್ನ ಅನುಯಾಯಿಗಳ ಬೆಂಬಲ ಪಡೆದು ಬಾಗಳಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವನ್ನು ಆಳಲಾರಂಭಿಸಿದನು. ಜಾತಿಯಲ್ಲಿ ಬೇಡರಾಗಿದ್ದ ಇವರು ಅನಂತರ ವೀರಶೈವ ಧರ್ಮವನ್ನು ಸ್ವೀಕರಿಸಿದರೆಂದು ತಿಳಿಯುತ್ತದೆ.[೩೭೩]

ದಾದಯ್ಯನ ಸಂಬಂಧಿ ಜಕ್ಕಣ್ಣ ನಾಯಕ ಚಿತ್ರದುರ್ಗದ ಪಾಳೆಯಗಾರನಾಗಿದ್ದ. ನೆರೆಯ ಪಾಳೆಯಗಾರನಾಗಿದ್ದ ಕೆಂಗಣ್ಣನಾಯಕ ಈತನ ಮೇಲೆ ಯುದ್ಧಕ್ಕೆ ಬಂದಾಗ ಜಕ್ಕಣ್ಣ ನಾಯಕ ದಾದಯ್ಯನ ಸಹಾಯವನ್ನು ಕೋರಿದ. ದಾದಯ್ಯನು ಕೆಂಗಣ್ಣನಾಯಕನನ್ನು ಎದುರಿಸಿ ಸೋಲಿಸಿದ. ಉಪಕೃತನಾದ ಜಕ್ಕಣ್ಣ ನಾಯಕ ತನ್ನ ಮಗಳು ಹೊನ್ನಾಯಿ ನಾಯಿಕಿಯನ್ನು ದಾದಯ್ಯನಿಗೆ ಕೊಟ್ಟು ಮದುವೆ ಮಾಡಿದ್ದನಲ್ಲದೆ ಚಿತ್ರದುರ್ಗ ಪ್ರಾಂತ್ಯದ ಸ್ವಲ್ಪ ಭಾಗ ಮತ್ತು ಉಚ್ಚಂಗಿ ದುರ್ಗವನ್ನು ಬಳುವಳಿಯಾಗಿ ಕೊಟ್ಟನು. ಕೆಲಕಾಲ ನಂತರ ದಾದಯ್ಯ ನಾಯಕನಿಗೂ, ಜಕ್ಕಣ್ಣ ನಾಯಕನಿಗೂ ವಿರಸ ಉಂಟಾಗಿ ಯುದ್ಧ ನಡೆಯಿತು. ಆ ಸಮಯದಲ್ಲಿ ಹೊನ್ನಾಯಿ ತಂದೆಯ ಕಡೆ ತನ್ನ ಬಲವನ್ನು ವ್ಯಕ್ತಪಡಿಸಿದಳು. ಇದರಿಂದ ದಾದಯ್ಯ ಆಕೆಯನ್ನು ಉಚ್ಚಂಗಿದುರ್ಗದ ಶಿಖರದ ಮೇಲಿಂದ ಕೆಳಗಿರುವ ಕೆರೆಗೆ ತಳ್ಳಿ ಕೊಂದನೆಂಬುದು ಕಥೆ. ಈಗಲೂ ಆ ಕೆರೆಗೆ ಹೊನ್ನಾಯಿಕೆರೆ ಎಂದೇ ಕರೆಯಲಾಗುತ್ತಿದೆ.[೩೭೪]

ದಾದಯ್ಯನ ನಂತರ ರಂಗನಾಯಕ, ಬರ್ಮಣ್ಣನಾಯಕ, ಓಬಣ್ಣನಾಯಕ, ವೀರನಾಯಕ, ಮುಮ್ಮಡಿ ನಾಯಕ, ಬಸವಂತನಾಯಕ, ಮರಿಕೊಟ್ರಪ್ಪ ನಾಯಕ ಎಂಬ ಪ್ರಮುಖ ನಾಯಕರು ಈ ವಂಶದಲ್ಲಿ ಆಳಿದ್ದಾರೆ. ಈ ಸಂತತಿಯಲ್ಲಿ ಒಟ್ಟು ೧೫ ಪುರುಷರು, ಒಬ್ಬ ಮಹಿಳೆ ಸೇರಿದಂತೆ ೧೬ ಮಂದಿ ಸುಮಾರು ಎರಡು ಶತಮಾನಕ್ಕೂ ಹೆಚ್ಚು ಕಾಲ ಹರಪನಹಳ್ಳಿ ಪ್ರದೇಶವನ್ನು ಆಳ್ವಿಕೆ ಮಾಡಿದ್ದಾರೆ.

ಇವರ ಆಡಳಿತದ ಬಗ್ಗೆ ತಿಳಿಸುವ ಶಾಸನಗಳು ಹರಪನಹಳ್ಳಿ ಸುತ್ತಮುತ್ತಲಿನ ಗ್ರಾಮಗಳಲ್ಲಿ ಕಂಡುಬಂದಿವೆ. ಕ್ರಿ.ಶ. ೧೬೫೧ರ ನಿಚ್ಚವನಹಳ್ಳಿ ಶಾಸನದಿಂದ ರಾಜಮಾನ್ಯರಾದ ಸುಬೇದಾರ ರಂಗಪ್ಪನವರು ರಾಜ್ಯಕ್ಕೆ ಆದಾಯ ಬರುವಂತೆ ಮಾಡಿ, ಉಳಿದ ಅರಸರೊಂದಿಗೆ ಬಾಗಳಿ ಸಂಸ್ಥಾನವು ಉತ್ತಮ ಸಂಬಂಧವುಂಟಾಗುವಂತೆ ಮಾಡಿದ್ದರಿಂದ ಬಾಗಳಿ ಬಸಪ್ಪನಾಯಕನು ಗಡಿ ನಿಚ್ಚಾಪುರ ಗ್ರಾಮವನ್ನು ದಾನವಾಗಿ ನೀಡಿರುವುದು ತಿಳಿದುಬರುತ್ತದೆ.[೩೭೫] ಬಸಪ್ಪನಾಯಕನ ಕಾಲದ ಮತ್ತೊಂದು ಶಾಸನ ಕಸವನಹಳ್ಳಿಯಲ್ಲಿದೆ. ಪುರವರ್ಗವು ಹಾಳು ಬಿದ್ದುದನ್ನು ಜೀರ್ಣೋದ್ಧಾರ ಮಾಡಿದ ಗಿರಿಮಲ್ಲಪ್ಪನ ಮೊಮ್ಮಗ ಹಾಗೂ ಬಸವಯ್ಯನ ಮಗನಾದ ತಿರುಕಪ್ಪನಿಗೆ ಭೂದಾನ ಮಾಡಿದ ವಿಷಯವನ್ನು ಶಾಸನ ಉಲ್ಲೇಖಿಸುತ್ತದೆ.[೩೭೬] ಅರಸಿಕೆರೆ ಒಂದು ಶಾಸನವು ಬಸಪ್ಪನಾಯಕ ಗಿರಿಮಲ್ಲಣ್ಣನ ಮಗ ಬಸವಯ್ಯನಿಗೆ ಭೂದಾನ ನೀಡಿದನೆಂದು ತಿಳಿಸುತ್ತದೆ.[೩೭೭] ಈ ವಂಶದ ಓಬಯ್ಯ ನಾಯಕ ಮೈದೂರಿನಲ್ಲಿ ಧರ್ಮದ ಯಾತ ಮತ್ತು ಕಲ್ಲುದೋಣಿ ಮಾಡಿಸಿದನೆಂದು ಇದೇ ಗ್ರಾಮದ ಶಾಸನದಿಂದ ತಿಳಿಯುತ್ತದೆ.[೩೭೮]

ಇವರಿಗೆ ಸಂಬಂಧಿಸಿದ ಕೆಲವೇ ಶಾಸನಾಧಾರಗಳು ಇದ್ದರೂ, ಸುಮಾರು ೨೦೦ಕ್ಕೂ ಹೆಚ್ಚು ವರ್ಷಗಳ ಕಾಲ ಹರಪನಹಳ್ಳಿ ಪಾಳೆಯಗಾರರ ಈ ಪ್ರದೇಶದಲ್ಲಿ ಆಡಳಿತ ನಡೆಸಿದ್ದಾರೆ. ಕೋಟೆ, ದೇವಾಲಯ, ಕೆರೆಕಟ್ಟೆ ಮುಂತಾದ ಜನಪರ ಕಾರ್ಯಗಳನ್ನು ಮಾಡುವ ಮೂಲಕ ತಮ್ಮದೇ ಆದ ಆಡಳಿತಾತ್ಮಕ ಕೊಡುಗೆಗಳನ್ನು ಈ ಪ್ರದೇಶಕ್ಕೆ ನೀಡಿದ್ದಾರೆ.

### ೧೨.೩. ಸಂತೆಬೇನ್ನೂರು ಪಾಳೆಯಗಾರರು

ದಾವಣಗೆರೆ ಜಿಲ್ಲೆ ಚೆನ್ನಗಿರಿ ತಾಲೂಕಿನ ಸಂತೆಬೇನ್ನೂರು ಎಂಬಲ್ಲಿ ಪಾಳೆಯಪಟ್ಟು ಕಟ್ಟಿ ಆಳಿದವರು ಸಂತೆಬೇನ್ನೂರು ನಾಯಕರು. ಚೆನ್ನಗಿರಿ ತಾಲೂಕಿನ ಬಸವಪಟ್ಟಣ, ಸಂತೆಬೇನ್ನೂರು ಹಾಗೂ ಚಿಕ್ಕಮಗಳೂರು ಜಿಲ್ಲೆ ತರೀಕೆರೆ ಪ್ರದೇಶಗಳಲ್ಲಿ ಆಡಳಿತ ನಡೆಸಿದ ಈ ವಂಶಕ್ಕೆ ಬಸವಪಟ್ಟಣ, ಸಂತೆಬೇನ್ನೂರು ಮತ್ತು ತರೀಕೆರೆ ಪಾಳೆಯಗಾರರೆಂದೂ ಕರೆಯುತ್ತಾರೆ. ಈ ಮೂರು ಪ್ರದೇಶದಲ್ಲಿ ಆಡಳಿತ ನಡೆಸಿದವರು ಒಂದೇ ವಂಶದವರಾಗಿದ್ದಾರೆ. ಇವರ ಆಳ್ವಿಕೆ ಮೊದಲು ಬಸವಪಟ್ಟಣದಿಂದ ಆರಂಭಗೊಂಡು ನಂತರ ಸಂತೆಬೇನ್ನೂರಿನಲ್ಲಿ ವಿಜಯನಗರ ಅರಸರ ಅಧೀನರಾಗಿ ನಂತರ ಸ್ವತಂತ್ರವಾಗಿ ಆಡಳಿತ ನಡೆಸಿದ್ದಾರೆ. ಮುಂದೆ ತರೀಕೆರೆಗೆ ಹೋಗಿ ನೆಲೆ ನಿಂತು ಅಲ್ಲಿಯೂ ತಾವು ಸಂತೆಬೇನ್ನೂರು ನಾಯಕರೆಂದು ಹೇಳಿಕೊಂಡು ಆಡಳಿತ ಮಾಡಿದ್ದಾರೆ.[೩೭೯]

ಈ ವಂಶದ ಮೂಲಪುರುಷ ವಿಜಯನಗರದಿಂದ ಬಂದ ಧೂಮರಾಜ. ಈತ ಧೂಮನಬೆಟ್ಟ ಎಂಬಲ್ಲಿ ನೆಲೆಸಿದನೆಂಬ ಪ್ರತೀತಿ. ಇವನಿಗೆ ಇಬ್ಬರು ಗಂಡುಮಕ್ಕಳು. ಕೊಂಗಣನಾಯಕ ಮತ್ತು ರಾಮಪ್ಪನಾಯಕ. ಕೊಂಗಣನಾಯಕ ಅಧಿಕಾರಕ್ಕೆ ಬಂದ ಮೇಲೆ ಬಸವಪಟ್ಟಣದಲ್ಲಿ ಕೋಟೆಯನ್ನು ಕಟ್ಟಿ ಅನಂತಪುರದಿಂದ ಮಾಯಕೊಂಡ ಮತ್ತು ಹರಿಹರದಿಂದ ತರೀಕೆರೆವರೆಗಿನ ವಿಸ್ತಾರವಾದ ಪ್ರದೇಶವನ್ನು ವಶಪಡಿಸಿಕೊಂಡನು.[೩೮೦] ಇವನ ನಂತರ ಹನುಮಪ್ಪನಾಯಕ, ಎರಡನೇ ಹನುಮಪ್ಪನಾಯಕ, ಹುಚ್ಚು ಹನುಮಪ್ಪನಾಯಕ, ಕೆಂಗಾಹನುಮಪ್ಪನಾಯಕ ಮುಂತಾದ ನಾಯಕರು ಈ ವಂಶದಲ್ಲಿ ಆಳ್ವಿಕೆ ನಡೆಸಿದ್ದಾರೆ.

ಇವರ ಕಾಲದ ೧೩ ಶಾಸನಗಳು ಜಿಲ್ಲೆಯಲ್ಲಿ ಕಂಡುಬಂದಿವೆ. ಕ್ರಿ.ಶ. ೧೫೫೬ರ ಹಿರೇಮಾಡಾಳು ಶಾಸನವು ಹನುಮಪ್ಪನಾಯಕನು ದಾದಾಜಿರಾಯನಿಗೆ ಹಿರೇಮಾಡಹಾಳ ಗ್ರಾಮವನ್ನು ಇನಾಮಾಗಿ ನೀಡಿದ ಹಾಗೂ ಗೋದಾನ, ಭೂದಾನ ಮತ್ತು ಸುವರ್ಣದಾನಗಳನ್ನು ನೀಡಿರುವುದನ್ನು ಉಲ್ಲೇಖಿಸುತ್ತದೆ.[೩೮೧] ಇವನ ಕಾಲದ ಇನ್ನೊಂದು ಶಾಸನ ಇದೇ ಗ್ರಾಮದಲ್ಲಿದೆ. ಕ್ರಿ.ಶ. ೧೫೫೬ರ ಈ ಶಾಸನ ಹನುಮಪ್ಪನಾಯಕನು ಹಿರೇಮಾಡಹಾಳ ಗ್ರಾಮದಲ್ಲಿ ತುಂಗಭದ್ರೆಯ ಬಳಿ ಶಿವಲಿಂಗ ದೇವಸ್ಥಾನವನ್ನು ಸ್ಥಾಪನೆ ಮಾಡಿ, ತಮ್ಮ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು ಗೋದಾನ ಹಾಗೂ ಭೂದಾನ ಮಾಡಿದ್ದನ್ನು ತಿಳಿಸುತ್ತದೆ.[೩೮೨] ಈ ವಂಶದ ಪಿಲ್ಲಪ್ಪನಾಯಕನ ಶಾಸನವೊಂದು ಚಿಕ್ಕಗಂಗೂರಿನಲ್ಲಿದೆ. ಕ್ರಿ.ಶ. ೧೫೬೨ರ ಶಾಸನವು ಚಿಕ್ಕಗಂಗೂರಿನ ಗೌಡಯ್ಯನ ತಲೆಯನ್ನು ದಿಲಾವರನೆಂಬುವನು ಕಡೆದಾಗ ಅವನ ಮಕ್ಕಳಿಗೆ ನೆತ್ತರು ಕೊಡುಗೆಯಾಗಿ ಚಿಕ್ಕಗಂಗೂರಿನಲ್ಲಿ ಎರೆಹೊಲ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ.[೩೮೩] ಈ ವಂಶದ ಪಿಲ್ಲಪ್ಪನಾಯಕನ ಕಾಲದ ಧಾರ್ಮಿಕ ಶಾಸನವೊಂದು ಕಸಭೆ ಗ್ರಾಮದಲ್ಲಿದೆ.[೩೮೪]

ಈ ವಂಶದ ಕೆಂಗಪ್ಪನಾಯಕರು ಡೊಂಬರ ಕೆಂಗಪ್ಪನಿಗೆ ಕೊಟ್ಟ ಊರು ಎಂಬ ವಿಷಯವನ್ನು ಕ್ರಿ.ಶ. ೧೫೬೫ರ ಗೊಪ್ಪೇನಹಳ್ಳಿಯ ಶಾಸನ ಉಲ್ಲೇಖಿಸುತ್ತದೆ. ಇಮ್ಮಡಿ ಹನುಮಪ್ಪನಾಯಕನ ಕಾರ್ಯಕರ್ತರಾದ ಅಡಗೆರೆಯ ಮಲ್ಲಣ್ಣನು ವಡೇರಹಳ್ಳಿಯ ಕೆಂಡದ ದೇವರಿಗೆ ಕೊಟ್ಟ ದಾನವನ್ನು ದಾಖಲಿಸುತ್ತದೆ.[೩೮೫] ಹನುಮಪ್ಪನಾಯಕರ ಕಾರ್ಯಕರ್ತನಾದ ಮಯಿಕೊಂಡದ ನಾಯಕನು ವೀರೇಶ್ವರ ದೇವರ ಅಮೃತಪಡಿಗೆ ಬುಳ್ಳಾಪುರದ ಗ್ರಾಮವನ್ನು ನೀಡಿರುವುದನ್ನು ಕ್ರಿ.ಶ. ೧೫೮೧ರ ಶಾಸನವೊಂದು ಉಲ್ಲೇಖಿಸುತ್ತದೆ.[೩೮೬] ಕೆಂಗಪ್ಪನಾಯಕರ ಆದೇಶದ ಮೇರೆಗೆ ತ್ಯಾವಣಿಗೆ ಗ್ರಾಮದ ಗೌಡ ಸಿದ್ದಪ್ಪನಾಯಕ, ಹೊನ್ನನಾಯಕರು ರಣದುಲ್ಲಾಖಾನನ ವಿರುದ್ಧ ಯುದ್ಧ ಮಾಡಿರುವುದು ತಿಳಿಯುತ್ತದೆ.[೩೮೭] ಕ್ರಿ.ಶ. ೧೬೦೧ರ ಒಂದು ಶಾಸನವು ಈ ವಂಶದ ಮುಮ್ಮಡಿ ಹನುಮಪ್ಪನಾಯಕರು ಮತ್ತು ಸಿಂಹದ ಮಲ್ಲಿಭಟ್ಟ ಉಪಾಧ್ಯಾಯರ ಮಕ್ಕಳು ನಿಂಗಣ್ಣಭಟ್ಟರಿಗೆ ಹೊಸಹಳ್ಳಿಯಲ್ಲಿ ಕೊಟ್ಟ ಭೂದಾನವನ್ನು ತಿಳಿಸುತ್ತದೆ.[೩೮೮]

ಹನುಮಪ್ಪನಾಯಕನು ಸಿದ್ಧಲಿಂಗ ದೇವರ[೩೯] ಮಠಕ್ಕೆ ಹಾಗೂ ಮಹಂತಮಠಕ್ಕೆ[೪೦] ನೀಡಿದ ದಾನದ ವಿಷಯ ಶಾಸನಗಳಿಂದ ತಿಳಿದುಬರುತ್ತದೆ. ಹನುಮಪ್ಪನಾಯಕರ ಮತ್ತೊಂದು ಶಾಸನ ಹಿರೇಮಾಡಾಳು ಗ್ರಾಮದಲ್ಲಿದೆ. ಈ ಶಾಸನವು ಶಿವಲಿಂಗವನ್ನು ಪ್ರತಿಷ್ಠಾಪಿಸಿದ ಹಾಗೂ ದೇವಸ್ಥಾನವೊಂದನ್ನು ಜೀರ್ಣೋದ್ಧಾರ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೪೧] ಮುಮ್ಮಡಿ ಹನುಮಪ್ಪನಾಯಕರು ಭಟ್ಟರ ವೆಂಕಟಯ್ಯನಿಗೆ ಮಂಟರುಗಟ್ಟ ಅಗ್ರಹಾರ ಗ್ರಾಮವನ್ನು ದಾನವಾಗಿ ನೀಡಿರುವುದು ಶಾಸನದಿಂದ ತಿಳಿದುಬರುತ್ತದೆ.[೪೨] ಈ ವಂಶದ ಚಿಕ್ಕ ಹನುಮಪ್ಪ ನಾಯಕರಿಗೆ ಹುಲಿ ಹೋರಾಟದಲ್ಲಿ ಶೌರ್ಯದ ಕಾರಣ ಬಿಜಾಪುರದ ಸುಲ್ತಾನರು 'ಶರ್ಜಾ' ಎಂಬ ಬಿರುದು ನೀಡಿರುವುದು ತಾಮ್ರ ಶಾಸನವೊಂದರಿಂದ ತಿಳಿಯುತ್ತದೆ.[೪೩]

ಈ ಮೇಲಿನ ಶಾಸನಗಳನ್ನು ಅವಲೋಕಿಸಿದಾಗ ಸಂತೆಬೇನ್ನೂರು ನಾಯಕರು ವಿಜಯನಗರ ಮತ್ತು ಬಿಜಾಪುರ ಸುಲ್ತಾನರ ಸಾಮಂತರಾಗಿ ನಂತರ ಸ್ವತಂತ್ರವಾಗಿ ದಾವಣಗೆರೆ ಜಿಲ್ಲೆಯ ಬಹುಭಾಗದ ಪ್ರದೇಶಗಳಲ್ಲಿ ಆಡಳಿತ ನಡೆಸಿರುವುದು ಕಂಡುಬರುತ್ತದೆ.

### ೧೨.೪. ಕಣಕುಪ್ಪೆ ಪಾಳೆಯಗಾರರು

ಕಣಕುಪ್ಪೆ ಜಗಲೂರು ತಾಲೂಕಿನಲ್ಲಿ ಕಂಡುಬರುವ ಗ್ರಾಮ. ಇಲ್ಲಿ ಇತಿಹಾಸ ಪ್ರಸಿದ್ಧವಾದ ಕೋಟೆ ಇದ್ದು, ಕಣಕುಪ್ಪೆ ಕೋಟೆ ಎಂದೇ ಹೆಸರು ಪಡೆದಿದೆ. ಕಣಕುಪ್ಪೆ ಎಂದು ಈ ಗ್ರಾಮಕ್ಕೆ ಹೆಸರು ಬರಲು ಒಂದು ಐತಿಹ್ಯವಿದೆ. ಈ ಹಿಂದೆ ಗುಡ್ಡದಲ್ಲಿ ಪಾಳೆಯಗಾರ ಕೊಮಾರಪ್ಪ ನಾಯಕರು ಕೋಟೆ ನಿರ್ಮಿಸಲು ಮಣ್ಣು ಅಗೆಯುವಾಗ ಶಂಖವೊಂದು ಕಾಣಿಸಿಕೊಂಡಿತು. ಕೊಮಾರಪ್ಪನಾಯಕ ಚಿತ್ರದುರ್ಗದ ತಿಮ್ಮಪ್ಪ ಜೋಯಿಸರನ್ನು ಕರೆಯಿಸಿಕೊಂಡು ಶಂಖಕ್ಕೆ ಪೂಜೆ ನೆರವೇರಿಸಿ, ಜೋಯಿಸರಿಂದ ಆ ಶಂಖದ ಬಗ್ಗೆ ವಿಚಾರಣೆ ಮಾಡಿದಾಗ, ತಿಮ್ಮಪ್ಪ ಜೋಯಿಸರು ಗುಡ್ಡದ ಪರಿಸರ ಮತ್ತು ಗವಿಗಳನ್ನು ನೋಡಿ ಇಲ್ಲಿ ಈ ಹಿಂದೆ ಕಣ್ವ ಋಷಿಗಳು ನೆಲೆಸಿದ ಸ್ಥಳವಾಗಿದೆ ಎಂದಿದ್ದರು. ಆಗಿನಿಂದ ಈ ಗುಡ್ಡಕ್ಕೆ 'ಕಣ್ವರಕುಪ್ಪೆ' ಎಂದು ಹೆಸರಿಟ್ಟರು. ಇದು ಕಾಲಾನಂತರ ಕಣಕುಪ್ಪೆಯಾಯಿತೆಂದು ಪ್ರತೀತಿ ಇದೆ.

ಈ ಸಂತತಿಯ ಪಾಳೆಯಗಾರರು ಚಿತ್ರದುರ್ಗದ ಪಾಳೆಯಗಾರರಿಂದ ನೇಮಿಸಲ್ಪಟ್ಟು ಆಡಳಿತ ನಡೆಸಿದವರಾಗಿದ್ದಾರೆ. ಚಿತ್ರದುರ್ಗದ ಕೋಟೆಯೊಳಗಿನ ಕಲಹಗಳಿಂದಾಗಿ ಚಿಕ್ಕನಾಯಕ ತಂದೆ ಕೊಮಾರಪ್ಪನಾಯಕರು ಹರಪನಹಳ್ಳಿಗೆ ಓಡಿಹೋಗಿ ಅಲ್ಲಿಂದ ಬಂದು ಕಣಕುಪ್ಪೆಯಲ್ಲಿ ನೆಲೆಸಿದರು. ನ್ಯಾಯಯುತವಾಗಿ ಸಿಂಹಾಸನಕ್ಕೆ ಹಕ್ಕುದಾರನಾಗಿದ್ದ ಚಿಕ್ಕಣ್ಣನಾಯಕನನ್ನು ದಳವಾಯಿ ದೇಸಣ್ಣ ಮತ್ತು ರಂಗಪ್ಪ ಇಬ್ಬರು ಹೋಗಿ ಕಣಕುಪ್ಪೆಯಿಂದ ಚಿಕ್ಕಣ್ಣನಾಯಕನನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಬಂದು ಕ್ರಿಶ. ೧೬೭೬ರಲ್ಲಿ ಸಿದ್ಧೇಶ್ವರ ದೇವಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿದರು.[೪೪] ಚಿಕ್ಕಣ್ಣನಾಯಕ ಚಿತ್ರದುರ್ಗದಲ್ಲಿ ಪಟ್ಟವೇರಿದಾಗ ಕಣಕುಪ್ಪೆಯನ್ನು ನೋಡಿಕೊಳ್ಳಲು ಅವನ ತಂದೆ ಕೊಮಾರಪ್ಪನಾಯಕನನ್ನು ನೇಮಿಸಲಾಗಿದೆ.[೪೫] ಚಿಕ್ಕಣ್ಣನಾಯಕನ ಆಳ್ವಿಕೆ ನಂತರ

ಚಿತ್ರದುರ್ಗದಲ್ಲಿ ಭರಮಪ್ಪನಾಯಕ ಪಟ್ಟವೇರಿದನು. ಈತನ ಆಳ್ವಿಕೆ ಕಾಲದಲ್ಲಿ ಕಾಟನಾಯಕನನ್ನು ಕಣಕುಪ್ಪೆಗೆ ನೇಮಕ ಮಾಡಿದ.[೩೯೬] ಈತನ ಕಾಲದಲ್ಲಿ ಕಾಟನಾಯಕನ ಕೆರೆ, ತಂದೆ ಹೆಸರಿನಲ್ಲಿ ಜಯಣ್ಣನಾಯಕನ ಕೆರೆಗಳನ್ನು ಕಣಕುಪ್ಪೆ ಪರಿಸರದಲ್ಲಿ ಕಟ್ಟಿದ್ದಾನೆ. ಕಾಟನಾಯಕನ ನಂತರ ಕ್ರಿ.ಶ. ೧೬೯೧ರಲ್ಲಿ ಚಿಕ್ಕಭರಮಪ್ಪನಾಯಕನನ್ನು ಚಿತ್ರದುರ್ಗದ ಅರಸರು ನೇಮಿಸಿದ್ದಾರೆ. ಭರಮಪ್ಪನಾಯಕನಿಗೆ ಕಿವಿ ಕೇಳಿಸದೆ ಇರುವುದರಿಂದ ಮತ್ತು ಅಸಮರ್ಥನೆಂದು ತಿಳಿದು ಕೆಲವೇ ವರ್ಷಗಳಲ್ಲಿ ಆತನನ್ನು ಹೊಸದುರ್ಗ ಸೀಮೆಗೆ ಕಳುಹಿಸಿಕೊಡಲಾಗಿದೆ. ನಂತರ ಕಿರಿಯ ಜಂಪಣ್ಣನಾಯಕನಿಗೆ ಕಣಕುಪ್ಪೆ ಪಾಳೆಯಪಟ್ಟಿಗೆ ಅಧಿಕಾರ ವಹಿಸಿಕೊಡಲಾಗಿದೆ. ಈತನು ಪ್ರಬಲ ದೊರೆಯಾಗಿದ್ದು ಚಿನ್ನಹಗರಿ ನದಿ ಪರಿಸರದಲ್ಲಿ ಇವನ ಹೆಸರಿನಲ್ಲಿ ಜನಪದ ಹಾಡುಗಳು ಇಂದಿಗೂ ಜೀವಂತವಾಗಿರುವುದನ್ನು ಕಾಣುತ್ತೇವೆ.[೩೯೭]

ಕಣಕುಪ್ಪೆಯಲ್ಲಿ ಕಿರಿಯ ಜಂಪಣ್ಣನಾಯಕನಿದ್ದಾಗ ಚಿತ್ರದುರ್ಗದ ಕೋಟೆಗೆ ಹೈದರನು ಮುತ್ತಿಗೆ ಹಾಕಿದನು. ಈ ಕೋಟೆ ಹೈದರನ ವಶವಾದಾಗ ಠಾಣ್ಯವಾಗಿ ರೂಪಿತವಾಯಿತು. ಕಾಲಾನಂತರದಲ್ಲಿ ಕಂಪನಿ ಸರ್ಕಾರ ಟಿಪ್ಪುವಿನ ಮೇಲೆ ದಾಳಿ ಮಾಡಿ ಬೆಂಗಳೂರು ಪ್ರದೇಶವನ್ನು ವಶಪಡಿಸಿಕೊಂಡು ಮರಾಠರಿಗೆ ಬಿಟ್ಟುಕೊಟ್ಟರು. ಮರಾಠರ ಪರಶುರಾಮಭಾವ ಸರದಾರನ ಸೈನ್ಯ ಬೆಂಗಳೂರಿನಿಂದ ನೇರವಾಗಿ ಕಣಕುಪ್ಪೆ ಪಾಳೇಪಟ್ಟಿಗೆ ಬಂದಿತು. ಆಗ ಈ ಪ್ರದೇಶವು ಕೃಷ್ಣಜಿ ಠಾಣ್ಯ ಆಯಿತು. ಪುನಃ ಟಿಪ್ಪುಸುಲ್ತಾನ್ ಬ್ರಿಟಿಷರನ್ನು ಸೋಲಿಸಿ ಕಣಕುಪ್ಪೆ ಪ್ರದೇಶವನ್ನು ಮರಳಿ ಪಡೆದನು. ಅಂತಿಮವಾಗಿ ಬ್ರಿಟಿಷರು ಟಿಪ್ಪುವನ್ನು ಸೋಲಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡಾಗ ಈ ಕಣಕುಪ್ಪೆ ಪಾಳೆಯಪಟ್ಟನ್ನು ಬ್ರಿಟಿಷ್ ಕಂಪನಿ ಸರ್ಕಾರ ಮೈಸೂರು ಅರಸರಿಗೆ ಬಿಟ್ಟುಕೊಟ್ಟಿತು.[೩೯೮]

### ೧೨.೫. ಬಿಳಿಚೋಡು ಪಾಳೆಯಗಾರರು

ಬಿಳಿಚೋಡು ಇತಿಹಾಸ ಪ್ರಸಿದ್ಧ ಗ್ರಾಮ. ಈ ಪರಿಸರದಲ್ಲಿ ಅಶೋಕ ಮಹಾಶಯ ಕೆಲದಿನಗಳು ತಂಗಿದ್ದನೆಂದು ವಿದ್ವಾಂಸರ ಅಭಿಪ್ರಾಯ. ಬಿಳಿಚೋಡು ಪಾಳೆಯಗಾರರೂ ಸಹ ಚಿತ್ರದುರ್ಗದ ಪಾಳೆಯಗಾರರ ಅಧೀನದಲ್ಲಿ ಆಡಳಿತ ನಡೆಸಿದ್ದಾರೆ. ಚಿತ್ರದುರ್ಗದ ದಳವಾಯಿ ಮುದ್ದಣ್ಣನ ಉಪಟಳದಿಂದ ಮತ್ತಿ ಪಾಳೆಯಗಾರರ ಸಂತತಿ ಕೊನೆಗೊಂಡು, ಬಿಳಿಚೋಡು ಸಂತತಿ ಪ್ರಾರಂಭವಾಗಲು ಕಾರಣವಾಗಿದೆ. ವಿಜಯನಗರ ಕಾಲದಲ್ಲಿ ಬಿಳಿಚೋಡು ಕೊಟ್ಟೂರು ಚಾವಡಿಯ ಉಚ್ಚಂಗಿವೆಂಠೆಗೆ ಸೇರಿತ್ತೆಂದು ತಿಳಿದುಬರುತ್ತದೆ.[೩೯೯] ಬುಳ್ಳನಾಯಕ ಮತ್ತು ಆತನ ಮಕ್ಕಳಾದ ಚಿಕ್ಕಹನುಮನಾಯಕ ಹಾಗೂ ಓಬಣ್ಣನಾಯಕ ಇವರುಗಳಿಂದ ಈ ಮನೆತನ ಬೆಳೆದಿದೆ.[೪೦೦] ಬಿಳಿಚೋಡು ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕನ ಕಾಲದಲ್ಲಿ ಹೆಚ್ಚು ಪ್ರಸಿದ್ಧಿ ಪಡೆದಿರುವುದು ಕಂಡುಬರುತ್ತದೆ. ಚಿತ್ರದುರ್ಗದ ಇತರೆ ನಾಯಕರುಗಳಾದ ಭರಮಪ್ಪನಾಯಕ, ಹಿರೇ ಮದಕರಿನಾಯಕ, ಭರಮಣ್ಣನಾಯಕ ಮತ್ತು ಕೊನೆ ಮದಕರಿ ನಾಯಕರ ಕಾಲದಲ್ಲಿ ಆಡಳಿತಕ್ಕೆ ಒಳಗಾಗಿದೆ.

### ೧೨.೬. ಉಚ್ಚಂಗಿದುರ್ಗದ ಪಾಳೆಯಗಾರರು

ಉಚ್ಚಂಗಿದುರ್ಗ ಪ್ರದೇಶವು ಪಲ್ಲವ ಮತ್ತು ಕದಂಬರ ಕಾಲದಿಂದಲೂ ಇತಿಹಾಸ ಪ್ರಸಿದ್ಧಿ ಪಡೆದಿದೆ. ದಾದಯ್ಯನಾಯಕ ಹರಪನಹಳ್ಳಿ ಪ್ರದೇಶವನ್ನು ಆಳ್ವಿಕೆ ಮಾಡುವುದಕ್ಕೂ ಮೊದಲೇ ಉಚ್ಚಂಗಿದುರ್ಗದಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿದ್ದನೆಂದು ತಿಳಿದುಬರುತ್ತದೆ. ಈ ಭಾಗದ ಕೆಲವು ಐತಿಹ್ಯಗಳೂ ಇದಕ್ಕೆ ಪುಷ್ಟಿ ನೀಡುತ್ತವೆ. ಆದ್ದರಿಂದಾಗಿ ದಾದಯ್ಯನಾಯಕನೆ ಉಚ್ಚಂಗಿದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರ ಸಂತತಿಗಳ ಉಗಮಕ್ಕೆ ಕಾರಣನಾಗಿರುವನೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ದಾದಯ್ಯನಾಯಕನ ಮಗನಾದ ರಂಗಣ್ಣನಾಯಕ ಕ್ರಿ.ಶ. ೧೫೫೩ರಿಂದ ೧೬೧೬ರವರೆಗೆ ಆಳ್ವಿಕೆ ಮಾಡಿದ್ದಾನೆ. ಹರಪನಹಳ್ಳಿ ಪಾಳೇಪಟ್ಟಿಗೆ ಅರಸನಾದ ಇವನು ಉಚ್ಚಂಗಿದುರ್ಗ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದನು.[೪೦೧]

ಹೀಗೆ ದಾದಯ್ಯನಾಯಕನಿಂದ ಸ್ಥಾಪಿತವಾದ ಉಚ್ಚಂಗಿದುರ್ಗದ ಪಾಳೆಯಪಟ್ಟು, ಅನಂತರ ಹಲವು ಪಾಳೆಯಗಾರರ ಆಡಳಿತಕ್ಕೆ ಒಳಗಾಗಿರುವುದನ್ನು ಕಾಣುತ್ತೇವೆ. ಈ ಪಾಳೆಯಗಾರರು ಆಡಳಿತ ನಡೆಸಿದ ಪ್ರದೇಶಗಳಲ್ಲಿ ಹಲವು ಸ್ಮಾರಕಗಳು ಇಂದಿಗೂ ಕಂಡುಬರುತ್ತಿದ್ದು, ಅವರ ಚರಿತ್ರೆಯನ್ನು ಸಾರುತ್ತ ನಿಂತಿವೆ.

ವಿಜಯನಗರ ಸಾಮ್ರಾಜ್ಯ ಪತನಾನಂತರ ಚಿತ್ರದುರ್ಗ ಪಾಳೆಯಗಾರರನ್ನು ಒಳಗೊಂಡಂತೆ, ಹಲವು ಸಣ್ಣ ಪುಟ್ಟ ಪಾಳೆಯಪಟ್ಟುಗಳು ತಲೆ ಎತ್ತಿದವು. ಪಾಳೆಯಗಾರರ ಶೌರ್ಯ, ಧೈರ್ಯ ಹಾಗೂ ಸಾಹಸಗಳು ಶತ್ರುವಿನಲ್ಲಿ ನಡುಕವನ್ನುಂಟುಮಾಡಿಸುತ್ತಿದ್ದುದು ದಿಟ. ಇವರು ಕೈಗೊಂಡ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಗಳು ಪ್ರಜಾಹಿತವಾಗಿದ್ದವು. ಕ್ರಿ.ಶ. ೧೭೭೯ರಲ್ಲಿ ಮದಕರಿನಾಯಕನಿಗೂ ಮತ್ತು ಹೈದರನಿಗೂ ಘನಘೋರ ಯುದ್ಧ ನಡೆದು ಚಿತ್ರದುರ್ಗ ಸಂಸ್ಥಾನ ಪತನಗೊಂಡಿತು. ಮದಕರಿನಾಯಕ ಸೆರೆ ಸಿಕ್ಕು ಮರಣ ಹೊಂದಿದಾಗ ಚಿತ್ರದುರ್ಗವು ಹೈದರನಿಗೆ ವಶವಾಯಿತು. ಆ ಪರಿಣಾಮವಾಗಿ ದಾವಣಗೆರೆ ಜಿಲ್ಲೆಯು ಹೈದರನ ಅಧೀನಕ್ಕೆ ಒಳಗಾಯಿತು. ಮುಂದೆ ಟಿಪ್ಪು, ಬ್ರಿಟಿಷ್ ಸರ್ಕಾರದ ಕಂಪನಿ ಹಾಗೂ ಮೈಸೂರು ಒಡೆಯರ ಆಳ್ವಿಕೆಗೂ ಕಾರಣವಾಗಿದೆ.

ಒಟ್ಟಿನಲ್ಲಿ ಪ್ರಸ್ತುತ ಪ್ರದೇಶದ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗಿ ಚಿತ್ರದುರ್ಗದ ಪಾಳೆಯಗಾರರ ಆಳ್ವಿಕೆಯವರೆಗೂ ನಿರಂತರವಾಗಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಂದ ಕೂಡಿದ ಬಹು ವೈಶಿಷ್ಟ್ಯತೆಯನ್ನು ಪಡೆದ ಕಾಲವನ್ನು ಪ್ರಕಟಗೊಂಡಿರುವ ಶಾಸನಾಧಾರಗಳ ಹಿನ್ನೆಲೆಯಲ್ಲಿ ಸಂಯೋಜಿಸುವ ಪ್ರಯತ್ನ ಮಾಡಲಾಗಿದೆ. ಪಾಳೆಯಗಾರರ ಪತನಾ ನಂತರವೂ ಈ ಪ್ರದೇಶವು ಮೈಸೂರು ಸಂಸ್ಥಾನದಲ್ಲಿ ಮುಂದುವರಿದು ತನ್ನ ಸಾಂಸ್ಕೃತಿಕ ಕುರುಹುಗಳನ್ನು ಉಳಿಸಿಕೊಂಡು ಬಂದಿರುವುದನ್ನು ಗಮನಿಸಬಹುದು.

**ಅಡಿಟಿಪ್ಪಣಿಗಳು**

೧. ತಿಪ್ಪೇಸ್ವಾಮಿ ಹೆಚ್., ೨೦೦೦, ದಾವಣಗೆರೆ ಜಿಲ್ಲೆಯ ದೇವಾಲಯಗಳು(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೮.

೨. ರಾಜಶೇಖರಪ್ಪ ಬಿ., ೨೦೦೧, ಇತಿಹಾಸ ಕಥನ, ಪು. ೧೯೨.

೩. ಗಿರಿಜ ಟಿ., ೨೦೦೧, ದಾವಣಗೆರೆ: ಇದು ನಮ್ಮ ಜಿಲ್ಲೆ, ಪು. ೨೯.

೪. ರಾಜಶೇಖರಪ್ಪ ಬಿ., ೨೦೦೧, ಪೂರ್ವೋಕ್ತ, ಪು. ೧೯೩.

೫. ಅದೇ, ಪು. ೧೯೩.

೬. ಗಿರಿಜ ಟಿ., ೧೯೮೫, ದಾವಣಗೆರೆ ದರ್ಶಿನಿ, ಪು. ೫.

೭. ಗಿರಿಜ ಟಿ., ೧೯೯೧, ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪು. ೪೮೮.

೮. ರಾಜಶೇಖರಪ್ಪ ಬಿ., ೨೦೦೧, ಪೂರ್ವೋಕ್ತ, ಪು. ೧೯೫-೧೯೬.

೯. ಬುರುಡೆಕಟ್ಟೆ ಮಂಜಪ್ಪ(ಸಂ), ೨೦೧೨, ದಾವಣಗೆರೆ ತಾಲ್ಲೂಕಿನ ಪ್ರಾಚೀನ ಇತಿಹಾಸ, ಬಾತಿಯ ಬೆಳಗು ಸ್ಮರಣೆ ಸಂಚಿಕೆ, ಪು. ೧೩.

೧೦. ಎ.ಕ.ಸಂ. ೧೧, ದಾವಣಗೆರೆ, ಶಾ.ಸಂ.೩, ಆನೆಕೊಂಡ.

೧೧. ಈಶ್ವರಪ್ಪ ಎಂ.ಜಿ., ೧೯೯೨, ದವನಸಿರಿ, ಪು. ೬೦.

೧೨. ರಾಜಶೇಖರಪ್ಪ ಬಿ., ೨೦೦೧, ಪೂರ್ವೋಕ್ತ, ಪು. ೧೯೪.

೧೩. ಎ.ಕ.ಸಂ. ೭,(ಮೈ.ವಿ.ವಿ. ಪ್ರಕಟಣೆ), ನಾಗಮಂಗಲ, ಶಾ.ಸಂ. ೬೧.

೧೪. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೭.

೧೫. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ೨೦೧೭, ದಾವಣಗೆರೆ ಜಿಲ್ಲೆ: ಇತಿಹಾಸದ ಇನ್ನಷ್ಟು ಹೆಜ್ಜೆಗಳು, ಪು. ೧.

೧೬. ಜನತಾವಾಣಿ ದಿನಪತ್ರಿಕೆ ವರದಿ, ದಾವಣಗೆರೆ, ೧೫.೧೦.೨೦೧೧, ಪು. ೧.

೧೭. ತಿಪ್ಪೇಸ್ವಾಮಿ ಎಸ್., ೨೦೦೪, ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೮.

೧೮. ಗಿರಿಜ ಟಿ., ೧೯೮೫, ಪೂರ್ವೋಕ್ತ, ಪು. ೪

೧೯. ನಾ. ಕೊಟ್ರೇಶ್ ಉತ್ತಂಗಿ, ೨೦೦೪, ಹೊನ್ನೆಲೆಗಳು, ಪು. ೧-೨ ಮತ್ತು ಸುರೇಶ್ ಬಿ., ೨೦೦೯, ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪು. ೧೧.

೨೦. ಇಕ್ಬಾಲ್ ಅಹಮದ್ ಕೆ.ಆರ್., ೨೦೦೦, ಚನ್ನಗಿರಿ ದರ್ಶನ ಭಾಗ-೨, ಪು. ೨.

೨೧. ಮಂಜನಾಯ್ಕ ಆರ್., ೨೦೧೬, ಚನ್ನಗಿರಿ ತಾಲೂಕಿನ ಪುರಾತತ್ವ ಅವಶೇಷಗಳು, ಪು. ೧೧.

೨೨. ಕೊಟ್ರೇಶ್ ಎಂ., ೨೦೧೦, ಹರಪನಹಳ್ಳಿ ತಾಲೂಕಿನ ರಕ್ಷಣಾ ಸ್ಮಾರಕಗಳು, ಪು. ೧.

೨೩. ಸದಾಶಿವಪ್ಪ ಶ್ಯಾಗಲೆ ಬಿ.ಎಂ.(ಪ್ರ.ಸಂ), ೨೦೧೦, ದಾವಣಗೆರೆ ಜಿಲ್ಲೆ ಒಂದು ಪಕ್ಷಿನೋಟ, ಪು. ೩.

೨೪. ನಾ. ಕೊಟ್ರೇಶ್ ಉತ್ತಂಗಿ, ೨೦೧೩, ಹರಿಹರದೆಳೆಗಳು, ಪು. ೪.

೨೫. ಬಳ್ಳೇಕೆರೆ ಹನುಮಂತಪ್ಪ, ೨೦೦೨, ಹರಿಹರ ತಾಲೂಕು ದರ್ಶಿನಿ, ಪು. ೧.

೨೬. ಸೋಮಶೇಖರ್ ಎಸ್.ವೈ.(ಸಂ), ೨೦೧೦, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೪, ಜಗಲೂರು, ಪು. ೧.

೨೭. ಮಂಜುನಾಥ ಹ. ಪಾಟೀಲ, ೨೦೦೨, ದಾವಣಗೆರೆ ಜಿಲ್ಲೆ ಶಾಸನಗಳು: ಒಂದು ಸಾಂಸ್ಕೃತಿಕ ಅಧ್ಯಯನ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೦.

೨೮. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೯.

೨೯. ಗಿರಿಜ ಟಿ., ೨೦೦೧, ಪೂರ್ವೋಕ್ತ, ಪು. ೭

೩೦. ಇಕ್ಬಾಲ್ ಅಹಮದ್ ಕೆ.ಆರ್., ೨೦೦೦, ಪೂರ್ವೋಕ್ತ, ಪು. ೧೩.

೩೧. ಅದೇ, ಪು. ೧೪.

೩೨. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೯.

೩೩. ಮಂಜುನಾಥ ಹ. ಪಾಟೀಲ, ೨೦೦೨, ಪೂರ್ವೋಕ್ತ, ಪು. ೧೦.

೩೪. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೧೧.

೩೫. ಸೋಮಶೇಖರ್ ಎಸ್.ವೈ.(ಸಂ), ೨೦೧೦, ಪೂರ್ವೋಕ್ತ, ಪು. ೨.

೩೬. ದಾವಣಗೆರೆ ಜಿಲ್ಲೆ ಅಂಕಿ ಅಂಶಗಳ ನೋಟ, ೨೦೦೯.

೩೭. ಇಕ್ಬಾಲ್ ಅಹಮದ್ ಕೆ.ಆರ್., ೨೦೦೦, ಪೂರ್ವೋಕ್ತ, ಪು. ೧೭.

೩೮. ರಮೇಶ ಹೆಚ್., ೨೦೧೭, ಹರಿಹರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೬.

೩೯. ಗಿರಿಜ ಟಿ., ೨೦೦೧, ಪೂರ್ವೋಕ್ತ, ಪು. ೪.

೪೦. ಕನ್ನಡ ವಿಷಯ ವಿಶ್ವಕೋಶ ಸಂ-೨, ಕರ್ನಾಟಕ, ಪು. ೨.

೪೧. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೧೦.

೪೨. ಅದೇ, ಪು. ೧೦.

೪೩. ಇಕ್ಬಾಲ್ ಅಹಮದ್ ಕೆ.ಆರ್., ೨೦೦೦, ಪೂರ್ವೋಕ್ತ, ಪು. ೩.

೪೪. ಸೋಮಶೇಖರ್ ಎಸ್.ವೈ.(ಸಂ), ೨೦೧೦, ಪೂರ್ವೋಕ್ತ, ಪು. ೨.

೪೫. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೧೦

೪೬. ಸತ್ಯನ್ ಬಿ.ಎನ್., ೧೯೭೫, ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್, ಪು. ೧೪.

೪೭. ಸುರೇಶ್ ಬಿ., ೨೦೦೯, ಪೂರ್ವೋಕ್ತ, ಪು. ೭.

೪೮. ಸತ್ಯನ್ ಬಿ.ಎನ್., ೧೯೭೫, ಪೂರ್ವೋಕ್ತ, ಪು. ೧೪.

೪೯. ಶಿವಮೊಗ್ಗ ಜಿಲ್ಲೆ ಗೆಜೆಟಿಯರ್, ೧೯೭೫, ಪು. ೧೨.

೫೦. ನಾ. ಕೊಟ್ರೇಶ್ ಉತ್ತಂಗಿ, ೨೦೦೪, ಪೂರ್ವೋಕ್ತ, ಪು. ೪, ೭೭.

೫೧. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೧೧ ಮತ್ತು ಸದಾಶಿವಪ್ಪ ಶ್ಯಾಗಲೆ ಬಿ.ಎಂ.(ಪ್ರ.ಸಂ)., ೨೦೧೦, ಪೂರ್ವೋಕ್ತ, ಪು. ೩.

೫೨. ಇಕ್ಬಾಲ್ ಅಹಮದ್ ಕೆ.ಆರ್., ೨೦೦೦, ಪೂರ್ವೋಕ್ತ, ಪು. ೩.

೫೩. ಸತ್ಯನ್ ಬಿ.ಎನ್., ೧೯೭೫, ಪೂರ್ವೋಕ್ತ, ಪು. ೧೫.

೫೪. ಅದೇ, ಪು. ೧೫.

೫೫. ಇಕ್ಬಾಲ್ ಅಹಮದ್ ಕೆ.ಆರ್., ೨೦೦೦, ಪೂರ್ವೋಕ್ತ, ಪು. ೩.

೫೬. ವೆಂಕಟರಾಮಪ್ಪ ಕೆ.ಎಸ್. ಮತ್ತು ಲಕ್ಷ್ಮೀನಾರಾಯಣ ಕೆ., ದಾವಣಗೆರೆ ನಗರದ ಪ್ರಾಕೃತಿಕ ಪರಿಸರ, ಪು. ೨೯-೩೦.

೫೭. ಮಂಜುನಾಥ ಹ, ಪಾಟಾಲ, ೨೦೦೨, ಪೂರ್ವೋಕ್ತ, ಪು. ೧೧.

೫೮. ಕುಮಾರ ಬಿ.ಪಿ., ೨೦೦೭, ದಾವಣಗೆರೆ ಹತ್ತಿ ಗಿರಿಣಿ ಕಾರ್ಮಿಕ ಚಳುವಳಿಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೪೫, ೫೩.

೫೯. ಶಿವರಾಮ ಕಾರಂತ, ೧೯೬೯, ನಾಗರಿಕತೆಯ ಹೊಸ್ತಿಲಲ್ಲಿ, ಪು. ೪೯.

೬೦. ಸುಂದರ ಅ.(ಸಂ.ಸಂ)., ೨೦೧೮, ಕರ್ನಾಟಕ ಚರಿತ್ರೆ ಸಂ-೧, ಪು. ೧೨೫.

೬೧. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕ ಪುರಾತತ್ವ ನೆಲೆಗಳು, ಪು. ೪.

೬೨. ಸುಂದರ ಅ.(ಸಂ.ಸಂ)., ೨೦೧೮, ಪೂರ್ವೋಕ್ತ, ಪು. ೧೦೨.

೬೩. ಅದೇ, ಪು. ೧೦೨.

೬೪. Sheshadri M., 1956, The stone using cultures of prechistoric and protohistoric, P. 21.

೬೫. I.A.R., 1981-82, P. 94.

೬೬. Poonacha K.P., 1990, Archaeology of Malnad Region(Unpublished Thesis), P. 32.

೬೭. ಅದೇ, ಪು. ೩೨.

೬೮. ಪತ್ರಿಕೆ ವರದಿ, ಪ್ರಜಾವಾಣಿ, ದಿನಾಂಕ ೧೦.೭.೨೦೧೭, ಸೋಮಶೇಖರ್ ಎಸ್.ವೈ., ಸಂಗೇನಹಳ್ಳಿ: ಶಿಲಾಯುಗದ ಚಿತ್ರ, ಆಯುಧ ಪತ್ತೆ.

೬೯. ಸುಂದರ ಅ.(ಸಂ.ಸಂ)., ೨೦೧೮, ಪೂರ್ವೋಕ್ತ, ಪು. ೧೪೨.

೭೦. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೧೨.

೭೧. ನಂಜುಂಡಸ್ವಾಮಿ ಬಿ., ೨೦೦೨, ಕಲ್ಪಸಿರಿ, ಪು. ೪೧.

೭೨. ಸುಂದರ ಅ. (ಸಂ.ಸಂ)., ೨೦೧೮, ಪೂರ್ವೋಕ್ತ, ಪು. ೩೩೪-೩೩೫.

೭೩. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೨೩.

೭೪. ಅದೇ, ಪು. ೩೨.

೭೫. ಅದೇ, ಪು. ೨೪.

೭೬. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೧೩.

೭೭. ಸುಂದರ ಅ., ೧೯೭೧, ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕ ಪ್ರಾಗೈತಿಹಾಸ, ಪು. ೪೩-೪೪.

೭೮. ಸುಂದರ ಅ.(ಸಂ.ಸಂ)., ೨೦೧೮, ಪೂರ್ವೋಕ್ತ, ಪು. ೧೫೩.

೭೯. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೨೪.

೮೦. Sonavane V.H., 1986, the first excavated Mesolithic Rock Shelter of gujrath, Sharna R.K. (Edt), Indian Archaeology New prospectives, P. 61.

೮೧. Saali S.A., 1996, The Asper Paleolithic and Mesolithic cultures of Maharastra, P. 89.

೮೨. ಶಿವತಾರಕ್ ಕೆ.ಬಿ., ೧೯೯೯, ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು: ಒಂದು ಸಾಂಸ್ಕೃತಿಕ ಅಧ್ಯಯನ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೯೬.

೮೩. Sankalia H.D., 1987, Mesolithic and Pre-mesolithic Industries from Excavation at Saganakallu Bellary, P. 1-14.

೮೪. ಸುಂದರ ಅ.(ಸಂ.ಸಂ)., ೨೦೧೮, ಪೂರ್ವೋಕ್ತ, ಪು. ೧೬೦.

೮೫. ಸುಂದರ ಅ., ೧೯೭೧, ಪೂರ್ವೋಕ್ತ, ಪು. ೪೯-೫೦.

೮೬. Foote R.B., 1914, India Preheistoric and Protohistoric Antiquities, P. 17.

೮೭. I.A.R, 1981-82, P. 94

೮೮. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೭.

೮೯. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೨೮.

೯೦. ಅದೇ, ಪು. ೨೯.

೯೧. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೬.

೯೨. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೨೨.

೯೩. ಅದೇ, ಪು. ೩೨.

೯೪. ಅದೇ, ಪು. ೧೯.

೯೫. ಅದೇ, ಪು. ೨೯.

೯೬. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೫.

೯೭. ಅದೇ, ಪು. ೩೪೦-೩೪೧.

೯೮. ಸುಂದರ ಅ., ೧೯೯೩, ಶಿವಮೊಗ್ಗ ಪ್ರದೇಶದಲ್ಲಿಯ ಮಹತ್ವದ ಪ್ರಾಗಿತಿಹಾಸದ ಸಾಂಸ್ಕೃತಿಕ ಕುರುಹುಗಳು, ವಜ್ರಪಥ, ಪು. ೧೫೦-೧೬೩.

೯೯. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೧೮.

೧೦೦. ಅದೇ, ಪು. ೧೮.

೧೦೧. ಡೆಕ್ಕನ್ ಹೆರಾಲ್ಡ್ ಪತ್ರಿಕಾ ವರದಿ, ೨೦೦೧, ಶಿವತಾರಕ್ ಕೆ.ಬಿ.

೧೦೨. ರಮೇಶ್ ಹೆಚ್., ೨೦೧೭, ಪೂರ್ವೋಕ್ತ, ಪು. ೨೦.

೧೦೩. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೨.

೧೦೪. ವಾಸುದೇವ ಬಡಿಗೇರ, ೧೯೯೮, ಬಳ್ಳಾರಿ-ಕೊಪ್ಪಳ ಜಿಲ್ಲೆಗಳ ಕೆಲವು ಪುರಾತತ್ವ ಅವಶೇಷಗಳು, ಇ.ದ.ಸಂ. ೧೩, ಪು. ೧೮.

೧೦೫. ಗೋಪಾಲ ಬಾ.ರಾ., ೧೯೭೧, ಕರ್ನಾಟಕದಲ್ಲಿ ನವಶಿಲಾಯುಗ, ಪು. ೨೨.

೧೦೬. ಅಂಬಳಿಕೆ ಹಿರಿಯಣ್ಣ(ಪ್ರ.ಸಂ)., ೨೦೦೯, ಕನ್ನಡ ವಿಷಯ ವಿಶ್ವಕೋಶ: ಇತಿಹಾಸ ಮತ್ತು ಪುರಾತತ್ವ, ಪು. ೫೨೩.

೧೦೭. ಗೋಪಾಲ ಬಾ.ರಾ., ೧೯೭೧, ಪೂರ್ವೋಕ್ತ, ಪು. ೨೩.

೧೦೮. Krishnaswamy V.D., The Neolithic patran of India, Ancient India Vol-16, P. 26.

೧೦೯. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೧೫-೧೬.

೧೧೦. ಅದೇ, ಪು. ೩೩೬.

೧೧೧. ಅದೇ, ಪು. ೩೩೭-೩೩೮.

೧೧೨. Foote R.B., ೧೯೧೪, ಪೂರ್ವೋಕ್ತ, ಪು. ೧೭.

೧೧೩. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೧೮.

೧೧೪. ಅದೇ, ಪು. ೧೯.

೧೧೫. ಅದೇ, ಪು. ೨೫.

೧೧೬. ಅದೇ, ಪು. ೨೨.

೧೧೭. ಅದೇ, ಪು. ೧೮.

೧೧೮. ಅದೇ, ಪು. ೧೮.

೧೧೯. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೨.

೧೨೦. I.A.R, 1977-78, P. 25

೧೨೧. ರಮೇಶ್ ಹೆಚ್., ೨೦೧೭, ಪೂರ್ವೋಕ್ತ, ಪು. ೨೨.

೧೨೨. ಅದೇ, ಪು. ೨೨.

೧೨೩. ಅದೇ, ಪು. ೨೩.

೧೨೪. ವಾಸುದೇವ ಬಡಿಗೇರ, ೧೯೯೮, ಪೂರ್ವೋಕ್ತ, ಪು. ೧೭-೨೦.

೧೨೫. ಕೊಟ್ರೇಶ್ ಎಂ., ೨೦೦೬, ನೂತನ ಶಿಲಾಯುಗದ ನೆಲೆ ಗಡಿಗುಡಾಳ್, ಇ.ಸ.ಸಂ. ೨೧, ಪು. ೨೨.

೧೨೬. ಸೋಮಶೇಖರ್ ಎಸ್.ವೈ.(ಸಂ)., ೨೦೧೦, ಪೂರ್ವೋಕ್ತ, ಪು. ೩.

೧೨೭. ಅದೇ, ಪು. ೩.

೧೨೮. ಅದೇ, ಪು. ೨.

೧೨೯. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೧೫.

೧೩೦. ಸಿದ್ದಪ್ಪ ಜಿ., ೨೦೧೦, ಜಗಲೂರು ತಾಲೂಕು: ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೨೬.

೧೩೧. ಸೋಮಶೇಖರ್ ಎಸ್.ವೈ.(ಸಂ)., ೨೦೧೦, ಪೂರ್ವೋಕ್ತ, ಪು. ೩.

೧೩೨. ಅದೇ, ಪು. ೩.

೧೩೩. ಸಿದ್ದಪ್ಪ ಜಿ., ೨೦೧೦, ಪೂರ್ವೋಕ್ತ, ಪು. ೨೬.

೧೩೪. ಅದೇ, ಪು. ೨೬.

೧೩೫. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೧೮.

೧೩೬. Childe V. Gordon, 1948, Megaliths Ancient India, Vol-4, P. 5

೧೩೭. Gururaja Rao B.K., 1972, The Megalithic culture in South India, P. 44.

೧೩೮. ಸುಂದರ ಅ., ೨೦೧೮, ಪೂರ್ವೋಕ್ತ, ಪು. ೨೨೦.

೧೩೯. ಅದೇ, ಪು. ೨೨೫.

೧೪೦. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೫.

೧೪೧. ಸುಂದರ ಅ., ೧೯೯೪, ಪೂರ್ವೋಕ್ತ, ಪು. ೧೫೦–೧೬೩.

೧೪೨. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೬.

೧೪೩. ಅದೇ, ಪು. ೩೩೮.

೧೪೪. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೧೮.

೧೪೫. ಅದೇ, ಪು. ೧೮.

೧೪೬. ಕ್ಷೇತ್ರಕಾರ್ಯದಲ್ಲಿ ಕಪ್ಪು–ಕೆಂಪು ವರ್ಣದ ಮಡಕೆ ಚೂರುಗಳು ದೊರೆತಿವೆ.

೧೪೭. Subharao B., 1949, Prehistoric and Early Historic Bellary(Un published Thesis), P. 108.

೧೪೮. Sundara A., 1975, Early Chamber Tombs of South India, P. 44.

೧೪೯. ವಾಸುದೇವ ಬಡಿಗೇರ, ೧೯೯೮, ಪೂರ್ವೋಕ್ತ, ಪು. ೧೭-೨೦.

೧೫೦. ಕ್ಷೇತ್ರಕಾರ್ಯದಲ್ಲಿ ಕಪ್ಪು-ಕೆಂಪು ವರ್ಣದ ಮಡಕೆ ಚೂರುಗಳು ದೊರೆತಿವೆ.

೧೫೧. ಸೋಮಶೇಖರ್ ಎಸ್.ವೈ., ೧೯೯೭, ಆಕನೂರು ಗ್ರಾಮದ ಬಳಿ ಆದಿ ಇತಿಹಾಸದ ಕುರುಹುಗಳು, ಇ.ದ.ಸಂ.-೧೨. ಪು. ೧೩-೧೪.

೧೫೨. ಸೋಮಶೇಖರ್ ಎಸ್.ವೈ.(ಸಂ)., ೨೦೧೦, ಪೂರ್ವೋಕ್ತ, ಪು. ೫.

೧೫೩. ಕ್ಷೇತ್ರಕಾರ್ಯದಲ್ಲಿ ಕಪ್ಪು-ಕೆಂಪು ವರ್ಣದ ಮಡಕೆ ಚೂರುಗಳು ಮತ್ತು ಕಬ್ಬಿಣದ ಕಿಟ್ಟುಗಳು ಕಂಡುಬಂದಿವೆ.

೧೫೪. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೧.

೧೫೫. ರಮೇಶ್ ಹೆಚ್., ೨೦೧೭, ಪೂರ್ವೋಕ್ತ, ಪು. ೨೬.

೧೫೬. I.A.R, 1981-82, P. 94

೧೫೭. ಅದೇ, ಪು. ೯೪.

೧೫೮. ಪೂಣಚ್ಚ ಕೆ.ಪಿ., ೧೯೯೦, ಪೂರ್ವೋಕ್ತ, ಪು. ೨೩.

೧೫೯. ಅದೇ, ಪು. ೩೧.

೧೬೦. ಅದೇ, ಪು. ೩೦.

೧೬೧. ಅದೇ, ಪು. ೨೩.

೧೬೨. I.A.R, 1981-82, P. 94

೧೬೩. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೩೩೯.

೧೬೪. ಅದೇ, ಪು. ೩೪೧.

೧೬೫. ಕ್ಷೇತ್ರಕಾರ್ಯದಲ್ಲಿ ಕಲ್ಲುವೃತ್ತ ಸಮಾಧಿ ಹಾಗೂ ಕಪ್ಪು ಮತ್ತು ಕೆಂಪು ವರ್ಣದ ಮಡಕೆ ಚೂರುಗಳನ್ನು ಗುರುತಿಸಲಾಗಿದೆ.

೧೬೬. ಕ್ಷೇತ್ರಕಾರ್ಯದ ಗ್ರಾಮದಲ್ಲಿ ಕಂಡುಬಂದ ನಿಲಸುಗಲ್ಲು.

೧೬೭. ಮಂಜಣ್ಣ ಪಿ.ಬಿ., ೨೦೧೫, ಜಗಲೂರು ತಾ. ಗುಹೇಶ್ವರ ಗುಡ್ಡದ ಬಳಿ ಕಬ್ಬಿಣಯುಗದ ಬೃಹತ್ ಶಿಲಾಗೋರಿ ನೆಲೆಯ ಹೊಸ ಶೋಧ, ಇ.ದ.ಸಂ-೩೦, ಪು. ೭.

೧೬೮. ಸೋಮಶೇಖರ್ ಎಸ್.ವೈ. (ಸಂ)., ೨೦೧೦, ಪೂರ್ವೋಕ್ತ, ಪು. ೧೬.

೧೬೯. ಅದೇ, ಪು. ೫.

೧೭೦. ತಿಪ್ಪೇಸ್ವಾಮಿ ಹೆಚ್., ೨೦೦೦, ಪೂರ್ವೋಕ್ತ, ಪು. ೧೬.

೧೭೧. ಅದೇ, ಪು. ೧೬.

೧೭೨. Foote R.B., ೧೯೧೪, ಪೂರ್ವೋಕ್ತ, ಪು. ೨೯.

೧೭೩. ಬುರುಡೀಕಟ್ಟೆ ಮಂಜಪ್ಪ., ೨೦೦೯, ದೊಡ್ಡಬಾತಿಯ ಬೃಹತ್ ಶಿಲಾಯುಗದ ಕುಳಿಭರಿತ ಶಿಲಾಸಮಾಧಿಗಳು, ಇ.ದ.ಸಂ.೨೪, ಪು. ೭.

೧೭೪. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪು. ೨೧.

೧೭೫. I.A.R, 1981-82, P. 94

೧೭೬. ಕ್ಷೇತ್ರಕಾರ್ಯದಲ್ಲಿ ಕಬ್ಬಿಣದ ಕಿಟ್ಟುಗಳು ದೊರೆತಿವೆ.

೧೭೭. ಸೋಮಶೇಖರ್ ಎಸ್.ವೈ.(ಸಂ)., ೨೦೧೦, ಪೂರ್ವೋಕ್ತ, ಪು. ೫.

೧೭೮. ಸಿದ್ದಪ್ಪ ಜಿ., ೨೦೧೦, ಪೂರ್ವೋಕ್ತ, ಪು. ೨೮-೩೦.

೧೭೯. I.A.R, 1977-78, P. 25

೧೮೦. ರಮೇಶ್ ಹೆಚ್., ೨೦೧೭, ಪೂರ್ವೋಕ್ತ, ಪು. ೨೮-೨೯.

೧೮೧. ಕ್ಷೇತ್ರಕಾರ್ಯದಲ್ಲಿ ಕಬ್ಬಿಣದ ಕಿಟ್ಟುಗಳು ದೊರೆತಿವೆ.

೧೮೨. I.A.R, 1983-84, P. 40

೧೮೩. ಮಹದೇವ ಸಿ., ೨೦೧೫, ಕನ್ನಡ ಗಾದೆಗಳಲ್ಲಿ ನಂದರ ನಾಣ್ಯ, ಇ.ದ.ಸಂ-೩೦, ಪು. ೪೦೩.

೧೮೪. ಶ್ರೀನಿವಾಸ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ (ಸಂ), ೧೯೭೬, ಚಂದ್ರವಳ್ಳಿ, ಪು.೧.

೧೮೫. ಕರ್ನಾಟಕದ ಪರಂಪರೆ ಸಂ-೧, ೨೦೧೪, ಪು. ೧೧೬.

೧೮೬. ಶ್ರೀನಿವಾಸ್ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ (ಸಂ)., ೧೯೭೬, ಪೂರ್ವೋಕ್ತ, ಪು. ೨.

೧೮೭. ಸುಂದರ ಅ.(ಸಂ.ಸಂ.), ೨೦೧೮, ಪೂರ್ವೋಕ್ತ, ಪು. ೨೮೬.

೧೮೮. ಶ್ರೀನಿವಾಸ್ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ(ಸಂ)., ೧೯೭೬, ಪೂರ್ವೋಕ್ತ, ಪು.೨.

೧೮೯. ಗಿರಿಜ ಟಿ., ೧೯೯೧, ಪೂರ್ವೋಕ್ತ, ಪು. ೫೬೨, ೫೭೨, ೫೭೩.

೧೯೦. ಸೂರ್ಯನಾಥ ಕಾಮತ್, ೨೦೧೫, ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು. ೧೯.

೧೯೧. ಕೃಷ್ಣ ಎಂ.ಎಚ್., ೧೯೮೩, ಕರ್ನಾಟಕದ ಪೂರ್ವ ಚರಿತ್ರೆ, ಪು. ೨೭-೨೮.

೧೯೨. ಪಿಳ್ಳೈ ಕೆ.ಕೆ., ದಕ್ಷಿಣ ಭಾರತದ ಇತಿಹಾಸ, ಪು. ೪೭.

೧೯೩. ಗಿರಿಜ ಟಿ. ಮತ್ತು ಶೋಭ ಹೆಚ್.ಜಿ.,(ಸಂ)., ಕರ್ಪೂರ ಸ್ಮರಣ ಸಂಚಿಕೆ, ಪು. ೩೬.

೧೯೪. ಸೋಮಶೇಖರ್ ಎಸ್.ವೈ., ೧೯೯೭, ಆಕನೂರು ಗ್ರಾಮದ ಬಳಿ ಇತಿಹಾಸ ಕಾಲದ ಕುರುಹುಗಳು, ಇ.ದ.ಸಂ.-೧೨, ಪು. ೧೧೩.

೧೯೫. ಶ್ರೀನಿವಾಸ್ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ(ಸಂ)., ೧೯೭೬, ಪೂರ್ವೋಕ್ತ, ಪು. ೯-೧೦.

೧೯೬. ಶ್ರೀನಿವಾಸ ಮೂರ್ತಿ ಹೆಚ್.ವಿ., ರಾಮಕೃಷ್ಣ ಆರ್., ೧೯೯೫, ಸಮಗ್ರ ಕರ್ನಾಟಕ ಚರಿತ್ರೆ, ಪು. ೪೭.

೧೯೭. ಚೆನ್ನಕ್ಕ ಎಲಿಗಾರ, ೧೯೯೧, ಬಂಕಾಪುರದ ಕದಂಬರು, ಸಂಶೋಧನೆ, ಲಕ್ಷ್ಮಣ್ ತೆಲಗಾವಿ (ಸಂ), ಪು. ೭೭೪.

೧೯೮. M.A.R, 1926, P. 50

೧೯೯. ಎ.ಕ.ಸಂ-೭, ಶಿಕಾರಿಪುರ, ಶಾ.ಸಂ. ೧೭೬.

೨೦೦. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ. (ಸಂ), ೧೯೯೫, ಹುಲ್ಲೂರು ಶ್ರೀನಿವಾಸ ಜೋಯಿಸ-ಐತಿಹಾಸಿಕ ಲೇಖನಗಳು, ಪು. ೩೨೯.

೨೦೧. ಕೊಟ್ರೇಶ್ ಎಂ., ೨೦೧೦, ಪೂರ್ವೋಕ್ತ, ಪು. ೭-೮.

೨೦೨. ಎ.ಕ.ಸಂ.-೧೧, ದಾವಣಗೆರೆ, ಶಾ.ಸಂ. ೧೬೧, ಅಣಜಿ.

೨೦೩. M.A.R, 1993, P. 33 ಮತ್ತು ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ (ಸಂ), ೧೯೭೬, ಪೂರ್ವೋಕ್ತ, ಪು. ೧೪.

೨೦೪. Gopal B.R., 1985, Corpus of Kadamba Inscriptions, P. 42.

೨೦೫. Krishnamurti M.V., The Nolambus, P. 196.

೨೦೬. ಶಂಕರನಾರಾಯಣರಾವ್ ಹೆಚ್.ಎಂ., ೧೯೭೬, ಶ್ರೀ ಹರಿಹರ ದೇವಾಲಯ, ಪು. ೧೯.

೨೦೭. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೧೩, ಬಲ್ಲೇಶ್ವರ.

೨೦೮. ಅದೇ, ಶಾ.ಸಂ. ೪೭, ಬೆಳಗುತ್ತಿ.

೨೦೯. M.A.R, 1947, ಹೊನ್ನಾಳಿ, ಶಾ.ಸಂ. ೬೮.

೨೧೦. ಸುಂದರ ಅ.(ಸಂ.ಸಂ.), ೨೦೧೮, ಪೂರ್ವೋಕ್ತ, ಪು. ೪೩೫.

೨೧೧. ಎ.ಕ.ಸಂ.-೧೧, ದಾವಣಗೆರೆ, ಶಾ.ಸಂ. ೬೬, ಹರಿಹರ

೨೧೨. ಎ.ಕ.ಸಂ-೭, ಚನ್ನಗಿರಿ, ಶಾ.ಸಂ. ೧೮, ಮೆದಕೆರೆ.

೨೧೩. ಸುರೇಶ್ ಬಿ., ೨೦೦೯, ಪೂರ್ವೋಕ್ತ, ಪು. ೧೯-೨೦.

೨೧೪. ಗಂಗಾನಾಯಕ್ ಕೆ.ಎನ್.,(ಪ್ರಸಂ.), ೨೦೧೧, ರಾಷ್ಟ್ರಕೂಟರ ಶಾಸನಗಳು, ಸಂ-೧, ಪು. ೨೪೫.

೨೧೫. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೧೩, ಮಾದೇನಹಳ್ಳಿ..

೨೧೬. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೭, ಕಾಡಜ್ಜಿ.

೨೧೭. ಅದೇ, ಜಗಲೂರು, ಶಾ.ಸಂ. ೧೯, ಬಸವನಕೋಟೆ.

೨೧೮. ಕ.ವಿ.ಶಾ.ಸಂ-೧, ೧೯೯೮, ಹರಪನಹಳ್ಳಿ, ಶಾ.ಸಂ. ೫೦, ಕಡಬಗೆರೆ.

೨೧೯. ಗಂಗಾನಾಯಕ್ ಕೆ.ಎನ್., (ಪ್ರಸಂ), ೨೦೧೧, ಪೂರ್ವೋಕ್ತ, ಪು. ೪೩೫.

೨೨೦. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೧೯, ನಂದಿಗುಡಿ.

೨೨೧. ಕ.ವಿ.ಶಾ.ಸಂ-೧, ೧೯೯೮, ಹರಪನಹಳ್ಳಿ, ಶಾ.ಸಂ. ೫೩, ಚಿರಸ್ತಹಳ್ಳಿ.

೨೨೨. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೨೬೧, ಸೊರಟೂರು.

೨೨೩. ಗಂಗಾನಾಯಕ್ ಕೆ.ಎನ್.,(ಪ್ರಸಂ), ೨೦೧೧, ಪೂರ್ವೋಕ್ತ, ಪು. ೫೧೮.

೨೨೪. ಅದೇ, ಪು. ೫೪೯.

೨೨೫. ಅದೇ, ಪು. ೫೬೨.

೨೨೬. ಕ.ವಿ.ಶಾ.ಸಂ-೧, ೧೯೯೭, ಹರಪನಹಳ್ಳಿ, ಶಾ.ಸಂ. ೧೨೫, ಬಾಗಳಿ.

೨೨೭. ರಾಘವೇಂದ್ರಚಾರಿ ಕೆ.ಎಂ., ೨೦೧೪, ಹರಪನಹಳ್ಳಿ ತಾಲೂಕು ಹಳ್ಳಿಕೆರೆ ರಾಷ್ಟ್ರಕೂಟರ ಅಸಗನ ಶಾಸನ, ಇ.ದ.ಸಂ-೨೯, ಪು. ೨೪.

೨೨೮. ಎ.ಕ.ಸಂ-೧೧, ಜಗಲೂರು, ಶಾ.ಸಂ. ೧೨೫, ಕೊಡಗನೂರು.

೨೨೯. ಗಂಗಾನಾಯಕ್ ಕೆ.ಎನ್.,(ಪ್ರಸಂ), ೨೦೧೧, ಕ.ಚಾ.ಶಾ.ಸಂ-೧, ಪು. ೩೨.

೨೩೦. ಅದೇ, ಪು. ೪೪.

೨೩೧. ಅದೇ, ಪು. ೧೨೯.

೨೩೨. ಎ.ಕ.ಸಂ–೧೧, ಜಗಲೂರು, ಶಾ.ಸಂ. ೧೩, ಆಸಗೋಡು.

೨೩೩. S.I.I.-9, ಭಾಗ–೧, ಹರಪನಹಳ್ಳಿ, ಪು. ೭೫–೭೬.

೨೩೪. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೧೪೦, ಬಾಡ.

೨೩೫. ಎ.ಕ.ಸಂ–೭, ಹೊನ್ನಾಳಿ, ಶಾ.ಸಂ. ೧.

೨೩೬. ಸುರೇಶ್ ಬಿ., ೨೦೦೯, ಪೂರ್ವೋಕ್ತ, ಪು.೨೨.

೨೩೭. ಎ.ಕ.ಸಂ–೧೧, ದಾವಣಗೆರೆ ಶಾ.ಸಂ. ೧೨೬, ಮುದಹದಡಿ.

೨೩೮. ಅದೇ, ಶಾ.ಸಂ. ೧೫೯, ಮಡೇರಹಳ್ಳಿ.

೨೩೯. ಗಂಗಾನಾಯಕ್ ಕೆ.ಎನ್.(ಪ್ರಸಂ), ೨೦೧೧, ಪೂರ್ವೋಕ್ತ, ಕ.ಚಾ.ಶಾ.ಸಂ. ಪು. ೧೮೭–೧೮೯.

೨೪೦. ಅದೇ, ಪು. ೩೧೪.

೨೪೧. ಅದೇ, ಶಾ.ಸಂ. ೨೮೪, ೩೦೫, ೩೩೦, ೩೪೧, ೩೫೮, ೩೭೧, ೩೮೬, ೩೯೧, ೩೯೬, ೪೦೬.

೨೪೨. ಎ.ಕ.ಸಂ–೭, ಚನ್ನಗಿರಿ, ಶಾ.ಸಂ. ೩೩, ಹಿರೇಉಡ.

೨೪೩. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೧೪, ಬೇತೂರು.

೨೪೪. ಅದೇ, ಶಾ.ಸಂ. ೪, ಆನೆಕೊಂಡ.

೨೪೫. ಅದೇ, ಶಾ.ಸಂ. ೬೧, ಹರಿಹರ.

೨೪೬. ವಾಸುದೇವ ಬಡಿಗೇರ, ೧೯೯೮, ಪೂರ್ವೋಕ್ತ, ಪು. ೧೮.

೨೪೭. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೩೫, ಹರಿಹರ.

೨೪೮. ಸೂರ್ಯನಾಥ ಕಾಮತ್, ೨೦೧೫, ಪೂರ್ವೋಕ್ತ, ಪು. ೯೬.

೨೪೯. ಕ.ವಿ.ವಿ. ಶಾ.ಸಂ.೧, ೧೯೯೮, ಹರಪನಹಳ್ಳಿ, ಶಾ.ಸಂ. ೭೯, ನೀಲಗುಂದ.

೨೫೦. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೪೨, ಹರಿಹರ.

೨೫೧. ಅದೇ, ಶಾ.ಸಂ. ೩೩, ಹರಿಹರ.

೨೫೨. ಎ.ಕ.ಸಂ–೭, ಹೊನ್ನಾಳಿ, ಶಾ.ಸಂ. ೫೦, ಬೆಳಗುತ್ತಿ.

೨೫೩. ಅದೇ, ಹೊನ್ನಾಳಿ, ಶಾ.ಸಂ. ೨೫, ಚಿಕ್ಕಯರೆಹಳ್ಳಿ.

೨೫೪. ಸೂರ್ಯನಾಥ ಕಾಮತ್, ೨೦೧೫, ಪೂರ್ವೋಕ್ತ, ಪು. ೧೨೫.

೨೫೫. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೧೦, ದಾವಣಗೆರೆ ಜಿಲ್ಲೆ: ಇತಿಹಾಸದ ಕೆಲವು ಹೆಜ್ಜೆಗಳು, ಪು. ೧೮.

೨೫೬. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೨೦, ಮಾದನಬಾವಿ.

೨೫೭. ಅದೇ, ಶಾ.ಸಂ. ೪೮, ಬೆಳಗುತ್ತಿ.

೨೫೮. ಅದೇ, ಚನ್ನಗಿರಿ, ಶಾ.ಸಂ. ೨೨, ಕೋಗಲೂರು.

೨೫೯. ಅದೇ, ಶಾ.ಸಂ. ೨೪, ಹಿರೇಕೋಗಲೂರು.

೨೬೦. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೭೦, ಹರಿಹರ.

೨೬೧. ಅದೇ, ಶಾ.ಸಂ. ೪೮, ಗಂಗನರಸಿ.

೨೬೨. ಅದೇ, ಶಾ.ಸಂ. ೧೦೩, ಚಿಕ್ಕಬಿದರೆ.

೨೬೩. ಅದೇ, ಶಾ.ಸಂ. ೧೬೨, ೧೬೩, ಅಣಜಿ.

೨೬೪. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೧೨, ಕುರುವದಗಡ್ಡೆ.

೨೬೫. ಅದೇ, ಶಾ.ಸಂ. ೧೭, ಬಳ್ಳೇಶ್ವರ.

೨೬೬. ಅದೇ, ಶಾ.ಸಂ. ೨೯, ಚಿಕ್ಕಯರೆಹಳ್ಳಿ.

೨೬೭. ಅದೇ, ಶಾ.ಸಂ. ೧೮, ಚೀಲೂರು.

೨೬೮. ರಾಜಶೇಖರಪ್ಪ ಬಿ., ೨೦೧೧, ಪೂರ್ವೋಕ್ತ, ಪು. ೧೩೫.

೨೬೯. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೭೧, ಹೆಮ್ಮನಬೇತೂರು.

೨೭೦. ಸಂತೇಬೆನ್ನೂರು ಸುಮತೀಂದ್ರನಾಡಿಗ್, ೨೦೧೦, ಪೂರ್ವೋಕ್ತ, ಪು. ೨೨-೨೩.

೨೭೧. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೯೮, ಬೇಲಿಮಲ್ಲೂರು.

೨೭೨. ಅದೇ, ಶಾ.ಸಂ. ೧೦೮, ಅರಕೆರೆ.

೨೭೩. ಅದೇ, ಶಾ.ಸಂ. ೯೧, ಕುಣಿಗಲುಘಟ್ಟ.

೨೭೪. ಅದೇ, ಶಾ.ಸಂ. ೪೫, ಬೆಳಗುತ್ತಿ.

೨೭೫. ಅದೇ, ಶಾ.ಸಂ. ೭, ಕುರುವದಗಡ್ಡೆ.

೨೭೬. ಅದೇ, ಶಾ.ಸಂ. ೭೬, ಚಟ್ನಿಹಳ್ಳಿ.

೨೭೭. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೧೦೫, ಕುಂದವಾಡ.

೨೭೮. ಅದೇ, ಶಾ.ಸಂ. ೨೫, ಹರಿಹರ.

೨೭೯. ಎ.ಕ.ಸಂ–೭, ಹೊನ್ನಾಳಿ, ಶಾ.ಸಂ. ೮, ಕುರುವದಗಡ್ಡೆ.

೨೮೦. S.I.I.-9, ಭಾಗ–೧, ಅಣಜಿಗೆರೆ, ಶಾ.ಸಂ. ೩೩೯.

೨೮೧. ರಾಜಶೇಖರಪ್ಪ ಬಿ., ೨೦೦೧, ಪೂರ್ವೋಕ್ತ, ಪು. ೧೩೬.

೨೮೨. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೧೨೯, ಲೋಕಿಕೆರೆ.

೨೮೩. ಅದೇ, ಶಾ.ಸಂ. ೩೬, ಹರಿಹರ.

೨೮೪. ಅದೇ, ಶಾ.ಸಂ. ೨೫, ಹದಡಿ.

೨೮೫ ಅದೇ, ಶಾ.ಸಂ. ೨೮, ಹರಿಹರ.

೨೮೬. ಕೊಟ್ರೇಶ್ ಎಂ., ೨೦೧೦, ಪೂರ್ವೋಕ್ತ, ಪು. ೯.

೨೮೭. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೬೭, ಹರಿಹರ.

೨೮೮. ಅದೇ, ಶಾ.ಸಂ. ೧೨೦, ಹಳ್ಳಿಹಾಳು.

೨೮೯. ಅದೇ, ಶಾ.ಸಂ. ೭೮, ಕೊಂಡಜ್ಜಿ.

೨೯೦. ಅದೇ, ಶಾ.ಸಂ. ೩೪, ಹರಿಹರ.

೨೯೧. ಶಂಕರನಾರಾಯಣರಾವ್ ಎಚ್.ಎಂ., ೧೯೮೨, ಶ್ರೀ ಹರಿಹರ ದೇವಾಲಯ, ಪು. ೩೪೪–೩೪೬.

೨೯೨. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೬೮, ಹರಿಹರ.

೨೯೩. ಎ.ಕ.ಸಂ–೭, ಹೊನ್ನಾಳಿ, ಶಾ.ಸಂ. ೬೮, ನ್ಯಾಮತಿ.

೨೯೪. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೨೩, ಹರಿಹರ.

೨೯೫. ಅದೇ, ಶಾ.ಸಂ. ೨೯, ಹರಿಹರ.

೨೯೬. ಎ.ಕ.ಸಂ–೭, ಹೊನ್ನಾಳಿ, ಶಾ.ಸಂ. ೧೦೧, ಚಿಕ್ಕಗೋಣಿಗೆರೆ.

೨೯೭. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೧೭, ದಾವಣಗೆರೆ ಜಿಲ್ಲೆ: ಇತಿಹಾಸದ ಇನ್ನಷ್ಟು ಹೆಜ್ಜೆಗಳು, ಪು. ೪೫.

೨೯೮. ಎ.ಕ.ಸಂ–೧೧, ಜಗಲೂರು, ಶಾ.ಸಂ. ೭, ಬಿಳಿಚೋಡು.

೨೯೯. ಅದೇ, ಶಾ.ಸಂ.೧, ಬಿಳಿಚೋಡು.

೩೦೦. ಅದೇ, ಶಾ.ಸಂ. ೪೧, ನಿಬಗೂರು.

೩೦೧. ಅದೇ, ದಾವಣಗೆರೆ, ಶಾ.ಸಂ. ೧೦೬, ಮಲೆಬೆನ್ನೂರು.

೩೦೨. ಕ.ವಿ.ಶಾ.ಸಂ.೧, ೧೯೯೮, ಹರಪನಹಳ್ಳಿ, ಶಾ.ಸಂ. ೩, ಚಟ್ನಿಹಳ್ಳಿ.

೩೦೩. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೩೧, ಹರಿಹರ.

೩೦೪. ಅದೇ, ಶಾ.ಸಂ. ೨೮, ಹರಿಹರ.

೩೦೫. ಅದೇ, ಶಾ.ಸಂ. ೩೦, ಹರಿಹರ.

೩೦೬. ಅದೇ, ಜಗಲೂರು, ಶಾ.ಸಂ. ೪, ಬಿಳಿಚೋಡು.

೩೦೭. ಕ.ವಿ.ಶಾ.ಸಂ.೧, ೧೯೯೮, ಹರಪನಹಳ್ಳಿ, ಶಾ.ಸಂ. ೨೧೪, ಮುಸುವನಕಲ್ಲಹಳ್ಳಿ.

೩೦೮. ಅದೇ, ಶಾ.ಸಂ. ೧೮೫, ಬಾಗಳಿ.

೩೦೯. ಅದೇ, ಶಾ.ಸಂ. ೧೯೪, ಮೈದೂರು.

೩೧೦. ಎ.ಕ.ಸಂ–೭, ಚನ್ನಗಿರಿ, ಶಾ.ಸಂ. ೨೬, ತಾವರೆಕೆರೆ.

೩೧೧. ಅದೇ, ಹೊನ್ನಾಳಿ, ಶಾ.ಸಂ. ೯, ಕುರುವದಗಡ್ಡೆ.

೩೧೨. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೮, ಕಾಡಜ್ಜಿ.

೩೧೩. ಅದೇ, ಶಾ.ಸಂ. ೨೨, ೨೦, ಹರಿಹರ.

೩೧೪. ಅದೇ, ಜಗಲೂರು, ಶಾ.ಸಂ. ೨೪, ಕೃಷ್ಣಾಪುರ.

೩೧೫. ಕ.ವಿ.ಶಾ.ಸಂ.೧, ೧೯೯೮, ಹರಪನಹಳ್ಳಿ, ಶಾ.ಸಂ. ೧೮೬, ಮುತ್ತಗಿ.

೩೧೬. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೮೩, ಗಂಗನರಸಿ.

೩೧೭. ಎ.ಕ.ಸಂ–೭, ಹೊನ್ನಾಳಿ, ಶಾ.ಸಂ. ೫೦, ಬೆಳಗುತ್ತಿ.

೩೧೮. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೪೩, ಹರಿಹರ.

೩೧೯. ಅದೇ, ಹೊಳಲ್ಕೆರೆ, ಶಾ.ಸಂ. ೨೩, ಗುಂಡೇರಿ.

೩೨೦. Dinakar Desai, Mahamandaleswaras Under The Chalukyas of Kalyana, P. 9.

೩೨೧. ಗೋಪಾಲ ಬಿ.ಆರ್., ಬೆಳಗುತ್ತಿ ಸಿಂದರು, ಪು. ೭೩.

೩೨೨. ದೀಪಕ್ ಆಲೂರ, ೨೦೧೨, ಸಿಂದ ಮನೆತನಗಳ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು.

೩೨೩. Gopal B.R., 1981, Minor Dynasties of Karnataka, P. 97.

೩೨೪. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೪೩, ಹರಿಹರ.

೩೨೫. ಅದೇ, ಶಾ.ಸಂ. ೪೩, ಹರಿಹರ.

೩೨೬. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೫೦, ಬೆಳಗುತ್ತಿ.

೩೨೭. ಗೋಪಾಲ್ ಬಿ.ಆರ್. ೧೯೮೧, ಪೂರ್ವೋಕ್ತ, ಪು. ೯೭.

೩೨೮. ರಾಜಾರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್(ಸಂ)., ೨೦೦೧, ಮಲೆಕರ್ನಾಟಕದ ಅರಸುಮನೆತನಗಳು, ಪು. ೧೧೩.

೩೨೯. ಎ.ಕ.ಸಂ-೭, ಶಿಕಾರಿಪುರ, ಶಾ.ಸಂ. ೩೬, ಗೊಗ್ಗ.

೩೩೦. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ೨೦೦೯, ಪೂರ್ವೋಕ್ತ, ಪು. ೨೨೦.

೩೩೧. ಎ.ಕ.ಸಂ.-೧೧, ದಾವಣಗೆರೆ, ಶಾ.ಸಂ. ೪೩, ಹರಿಹರ.

೩೩೨. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೩೭, ೩೮, ೪, ೫೧, ೨೮, ಬೆಳಗುತ್ತಿ, ಚಿಕ್ಕಯರೆಹಳ್ಳಿ.

೩೩೩. ಕರ್ನಾಟಕದ ಪರಂಪರೆ ಸಂ-೧, ೨೦೧೪, ಪು. ೪೮೭.

೩೩೪. ಅಂಬಳಿಕೆ ಹಿರಿಯಣ್ಣ (ಪ್ರ.ಸಂ.), ೨೦೦೯, ಪೂರ್ವೋಕ್ತ, ಪು. ೨೧೬.

೩೩೫. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೧೨, ದಾವಣಗೆರೆ ಜಿಲ್ಲೆಯ ಬಲ್ಲೂರು ಗ್ರಾಮದಲ್ಲಿ ದೊರೆತ ಉಚ್ಚಂಗಿ ಪಾಂಡ್ಯರ ಒಂದು ಶಿಲಾಶಾಸನ, ಇ.ದ.ಸಂ-೨೭, ಪು. ೬೯.

೩೩೬. ಕರ್ನಾಟಕದ ಪರಂಪರೆ ಸಂ-೧, ೨೦೧೪, ಪು. ೪೮೭.

೩೩೭. ಬುರುಡೀಕಟ್ಟೆ ಮಂಜಪ್ಪ, ೨೦೧೩, ಕುಂದವಾಡದ ಉಚ್ಚಂಗಿ ಪಾಂಡ್ಯರ ಕಾಲದ ಅಪ್ರಕಟಿತ ಶಾಸನ, ಇ.ದ.ಸಂ-೨೮, ಪು. ೩೪.

೩೩೮. ಎ.ಕ.ಸಂ-೭, ಚನ್ನಗಿರಿ, ಶಾ.ಸಂ. ೩೮, ೩೯, ಆಸ್ತನಹಳ್ಳಿ.

೩೩೯. ಕ.ವಿ.ಶಾ.ಸಂ.೧, ೧೯೯೮, ಹರಪನಹಳ್ಳಿ, ಶಾ.ಸಂ. ೧, ಚಟ್ನಿಹಳ್ಳಿ.

೩೪೦. ಎ.ಕ.ಸಂ.-೧೧, ದಾವಣಗೆರೆ, ಶಾ.ಸಂ. ೮೫, ಗಂಗನರಸಿ.

೩೪೧. ಅದೇ, ಶಾ.ಸಂ. ೩೭, ಹರಿಹರ.

೩೪೨. ಅದೇ, ಜಗಲೂರು, ಶಾ.ಸಂ. ೮, ಚದುರಗೋಳ.

೩೪೩. ರಾಜಶೇಖರಪ್ಪ ಬಿ., ೨೦೧೧, ಲೋಕಿಕೆರೆಯಲ್ಲಿ ದೊರೆತ ಉಚ್ಚಂಗಿ ಪಾಂಡ್ಯರ ಕಾಲದ ಹೊಸ ಶಾಸನ, ಇ.ದ.ಸಂ. ೨೬, ಪು. ೨೦೪.

೩೪೪. ಬುರುಡೇಕಟ್ಟೆ ಮಂಜಪ್ಪ, ೨೦೧೪, ದಾವಣಗೆರೆ ತಾಲೂಕು ಬೇತೂರಿನ ವಿಜಯ ಪಾಂಡ್ಯದೇವನ ಅಪ್ರಕಟಿತ ಶಾಸನ, ಇ.ದ.ಸಂ-೨೯, ಪು. ೨೬.

೩೪೫. ಪಾಟೀಲ್ ಸಿ.ಎಸ್., ೧೯೯೪, ಉಚ್ಚಂಗಿದುರ್ಗ, ಪು. ೩೮-೩೯.

೩೪೬. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೬೧, ಅಣಜಿ.

೩೪೭. ಅದೇ, ಜಗಲೂರು, ಶಾ.ಸಂ. ೨೯, ಮುಷ್ಟೂರು.

೩೪೮. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೧೯, ನೆರಳೆಗುಂಡಿ.

೩೪೯. ಕ.ವಿ.ಶಾ.ಸಂ.೧, ೧೯೯೮, ಹರಪನಹಳ್ಳಿ, ಶಾ.ಸಂ.೯೭, ೧೨೭, ಬಾಗಳಿ.

೩೫೦. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೭೧, ನಿಟ್ಟೂರು.

೩೫೧. ರಾಜಶೇಖರಪ್ಪ ಬಿ., ೨೦೦೨, ಹಿರೇಕೋಗಲೂರಿನ ಅಪ್ರಕಟಿತ ಶಾಸನಗಳು, ಇ.ದ.ಸಂ. ೧೭, ಪು. ೫೦.

೩೫೨. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೯, ೧೨೬, ಅವರಗೆರೆ, ಹದಡಿ.

೩೫೩. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೧೦೭, ಅರಕೆರೆ.

೩೫೪. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೨೦, ವಡ್ಡನಹಾಳು.

೩೫೫. ಅದೇ, ಜಗಲೂರು, ಶಾ.ಸಂ. ೧೦, ಆಸಗೋಡು.

೩೫೬. ಲಕ್ಷ್ಮಣ್ ತೆಲಗಾವಿ, ೨೦೧೦, ಎಪ್ಪತ್ತೇಳು ಪಾಳೆಯಗಾರರು, ಪು. ೧೨-೧೪.

೩೫೭. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.) ೨೦೦೯, ಪೂರ್ವೋಕ್ತ, ಪು. ೫೮೯.

೩೫೮. ಲಕ್ಷ್ಮಣ್ ತೆಲಗಾವಿ, ೧೯೯೨, ಚಿತ್ರದುರ್ಗ ನಾಯಕ ಅರಸರ ರಾಜಕೀಯ ಚಿತ್ರ, ದವನಸಿರಿ, ಈಶ್ವರಪ್ಪ ಎಂ.ಜಿ.(ಸಂ), ಪು. ೭೫.

೩೫೯. ಲಕ್ಷ್ಮಣ್ ತೆಲಗಾವಿ, ೨೦೦೦, ಚಿತ್ರದುರ್ಗ ಮತ್ತು ಹರಪನಹಳ್ಳಿ ನಾಯಕ ಅರಸರ ಸಂಬಂಧ-ಕೆಲವು ಸಮಸ್ಯೆಗಳು, ಇ.ದ.ಸಂ-೧೫, ಪು. ೨೭೧.

೩೬೦. ಎ.ಕ.ಸಂ.–೧೧, ಜಗಲೂರು, ಶಾ.ಸಂ. ೪೫, ರೆಡ್ಡಿಹಳ್ಳಿ.

೩೬೧. ಅದೇ, ಶಾ.ಸಂ. ೨೩, ಮೆದಕೆರಿಪುರ.

೩೬೨. ಅದೇ, ಶಾ.ಸಂ. ೩೬, ಭರಮಸಮುದ್ರ.

೩೬೩. ಎ.ಕ.ಸಂ–೭, ಚನ್ನಗಿರಿ, ಶಾ.ಸಂ. ೨೭, ಚಿಕ್ಕಕೋಗಿಲೂರು.

೩೬೪. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೧೬೦, ಹಾಲುವರ್ತಿ.

೩೬೫. ಅದೇ, ಜಗಲೂರು, ಶಾ.ಸಂ. ೩೭, ಸಿದ್ದಮ್ಮನಹಳ್ಳಿ.

೩೬೬. ಎ.ಕ.ಸಂ–೭, ಚನ್ನಗಿರಿ, ಶಾ.ಸಂ. ೨೦, ಮೊರಡಿ.

೩೬೭. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೧೬೪, ನೀರ್ಥಡಿ.

೩೬೮. ಗಂಗಾನಾಯಕ್ ಕೆ.ಎನ್.(ಪ್ರಸಂ), ೨೦೧೨, ಪಾಳೆಯಗಾರರ ಶಾಸನಗಳು, ಸಂಪುಟ–೧, ಪು. ೫೫.

೩೬೯. ಎ.ಕ.ಸಂ–೧೧, ದಾವಣಗೆರೆ, ಶಾ.ಸಂ. ೧೩೧, ಕೋಲುಕುಂಟೆ.

೩೭೦. ಅದೇ, ಶಾ.ಸಂ. ೧೩೦, ಗಂಡಮಕ್ತೇನಹಳ್ಳಿ.

೩೭೧. ಗಂಗಾನಾಯಕ್ ಕೆ.ಎನ್.(ಪ್ರಸಂ), ೨೦೧೨, ಪೂರ್ವೋಕ್ತ, ಪು. ೬೪, ೬೬, ೭೦, ೭೩, ೮೦.

೩೭೨. ಸತ್ಯನ್ ಬಿ.ಎನ್., ೧೯೭೫, ಚಿತ್ರದುರ್ಗ ಜಿಲ್ಲೆ ಗೆಜೆಟಿಯರ್, ಪು. ೫೭–೫೮.

೩೭೩. ಅಂಬಳಿಕೆ ಹಿರಿಯಣ್ಣ (ಪ್ರಸಂ), ೨೦೦೯, ಪೂರ್ವೋಕ್ತ, ಪು. ೫೯೪.

೩೭೪. ಅದೇ, ಪು. ೫೯೪.

೩೭೫. ಕ.ವಿ.ಶಾ.ಸಂ.–೧, ೧೯೯೮, ಹರಪನಹಳ್ಳಿ, ಶಾ.ಸಂ. ೨೩೧, ನಿಚ್ಚವನಹಳ್ಳಿ.

೩೭೬. ಅದೇ, ಶಾ.ಸಂ. ೨೧೨, ಕಸವನಹಳ್ಳಿ.

೩೭೭. ಅದೇ, ಶಾ.ಸಂ. ೨೧೫, ಅರಸೀಕೆರೆ.

೩೭೮. ಅದೇ, ಶಾ.ಸಂ. ೧೯೨, ಮೈದೂರು.

೩೭೯. Rice B.L., 1986, Mysore and Coorg From The Inscriptions, P. 161-162.

೩೮೦. ಅಂಬಳಿಕೆ ಹಿರಿಯಣ್ಣ(ಪ್ರಸಂ), ೨೦೦೯, ಪೂರ್ವೋಕ್ತ, ಪು. ೫೯೩.

೩೮೧. ಎ.ಕ.ಸಂ–೭, ಚನ್ನಗಿರಿ, ಶಾ.ಸಂ. ೪೮, ಹಿರೇಮಾಡಾಳು.

೩೮೨. ಅದೇ, ಶಾ.ಸಂ. ೪೯, ಹಿರೇಮಾಡಾಳು.

೩೮೩. ಅದೇ, ಶಾ.ಸಂ. ೬೯, ಚಿಕ್ಕಗಂಗೂರು.

೩೮೪. ಅದೇ, ಶಾ.ಸಂ. ೬೨, ಕಸಬೆ.

೩೮೫. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೫೮, ವಡೇರಹಳ್ಳಿ.

೩೮೬. ಅದೇ, ಶಾ.ಸಂ. ೧೪೪, ಬುಳ್ಳಾಪುರ.

೩೮೭. ಗಂಗಾನಾಯಕ್ ಕೆ.ಎನ್.(ಪ್ರಸಂ), ೨೦೧೨, ಪೂರ್ವೋಕ್ತ, ಪು.೧೧೮.

೩೮೮. ಎ.ಕ.ಸಂ-೭, ಚನ್ನಗಿರಿ, ಶಾ.ಸಂ. ೪೨, ಹೊಸಹಳ್ಳಿ.

೩೮೯. ಅದೇ, ಶಾ.ಸಂ. ೨೫, ಹಿರೆಕೋಗಿಲೂರು.

೩೯೦. ಅದೇ, ಶಾ.ಸಂ. ೬೩, ಅಣ್ಣಾಪುರ.

೩೯೧. ಅದೇ, ಶಾ.ಸಂ. ೪೭, ಹಿರೇಮಾಡಾಳು.

೩೯೨. ಅದೇ, ಶಾ.ಸಂ. ೩೫, ಮಂಟರುಗಟ್ಟ.

೩೯೩. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೫, ಸಂತೆಬೆನ್ನೂರು ನಾಯಕರ ಒಂದು ತಾಮ್ರ ಶಾಸನ, ಇ.ದ.ಸಂ-೨೦, ಪು. ೧೫೫.

೩೯೪. ವೆಂಕಟೇಶಯ್ಯ ಎಂ.ಜಿ., ೧೯೭೦, ಚಿತ್ರದುರ್ಗದ ಪಾಳೆಯಗಾರರು, ಪು. ೨೫.

೩೯೫. ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕದ ಕೈಫಿಯತ್ತುಗಳು, ಪು. ೨೪.

೩೯೬. ಅದೇ, ಪು. ೩೦.

೩೯೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಪು. ೧೨೯.

೩೯೮. ಕಲಬುರ್ಗಿ ಎಂ.ಎಂ., ೧೯೯೪, ಪೂರ್ವೋಕ್ತ, ಪು. ೩೧.

೩೯೯. ಗಿರಿಜ ಟಿ., ೨೦೦೧, ಪೂರ್ವೋಕ್ತ, ಪು. ೬೪೯.

೪೦೦. ಸೋಮಶೇಖರ್ ಎಸ್.ವೈ.(ಸಂ)., ೨೦೧೦, ಪೂರ್ವೋಕ್ತ, ಪು. ೮೧.

೪೦೧. ಸದಾಶಿವಪ್ಪ ಕುಂ.ಬಾ., ೨೦೦೬, ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪು. ೩೨.

## ಅಧ್ಯಾಯ: ಮೂರು

# ಸ್ಮಾರಕ ಶಿಲ್ಪಗಳ ಇತಿಹಾಸ

೩.೧. ಸ್ಮಾರಕ ಶಿಲ್ಪಗಳ ಸ್ವರೂಪ

೩.೨. ಸ್ಮಾರಕ ಶಿಲ್ಪದ ಬೆಳವಣಿಗೆ

೩.೩. ಸ್ಮಾರಕ ಶಿಲ್ಪಗಳ ನಿರ್ಮಾತೃಗಳು

೩.೪. ಸ್ಮಾರಕ ಶಿಲ್ಪಗಳಲ್ಲಿ ಸ್ವರ್ಗದ ಚಿತ್ರಣ

೩.೫. ಸ್ಮಾರಕ ಶಿಲ್ಪಗಳ ಲಕ್ಷಣಗಳು ಅಥವಾ ವಿನ್ಯಾಸಕ್ರಮ

# ಅಧ್ಯಾಯ: ಮೂರು

## ಸ್ಮಾರಕ ಶಿಲ್ಪಗಳ ಇತಿಹಾಸ

ಪ್ರಾಗಿತಿಹಾಸದ ಮಾನವನು ಶಿಲಾಶ್ರಯ ಮತ್ತು ಬಂಡೆಗಳ ಮೇಲೆ ಗೀಚಿದ ಅಥವಾ ಚಿತ್ರಿಸಿದ ಚಿತ್ರಗಳು ಅವನ ಬದುಕಿನ ಸ್ವರೂಪವನ್ನು ಪರಿಚಯಿಸುತ್ತವೆ. ಅವನು ಬೇಟೆಯಾಡುತ್ತಿದ್ದ ವಿಧಾನ, ಸಂತೋಷವನ್ನು ಹಂಚಿಕೊಳ್ಳಲು ರೂಪಿಸುತ್ತಿದ್ದ ಕುಣಿತ ಇತ್ಯಾದಿ ವಿವರಗಳನ್ನು ಆ ಕಾಲದ ಚಾರಿತ್ರಿಕ ಸಂಗತಿಗಳನ್ನು ವಿವರಿಸುತ್ತಿದ್ದ ದಾಖಲೆಗಳಾಗಿ ಉಳಿದುಬಂದಿವೆ. ಈ ಸಂಗತಿಗಳನ್ನು ಹಲವಾರು ಆಧಾರಗಳಿಂದ ಮನಗಾಣಬಹುದಾಗಿದೆ. ಅಂಥ ಆಕರಗಳಿಂದಲೇ ಇತಿಹಾಸವನ್ನು ಕಟ್ಟುವ ಕೆಲಸ ಸಾಧ್ಯವಾಗುತ್ತದೆ. ಇಲ್ಲಿ ಅಕ್ಷರಗಳು ಇರುವುದಿಲ್ಲವಾದರೂ, ಚಿತ್ರಗಳೇ ಅಕ್ಷರಗಳ ಕೆಲಸವನ್ನು ಮಾಡುತ್ತವೆ. ಬೃಹತ್ ಶಿಲಾಯುಗ ಕಾಲದ ಸಮಾಧಿಗಳು, ಅದಕ್ಕೂ ಪೂರ್ವದ ರೇಖಾಚಿತ್ರಗಳು ಮತ್ತು ವರ್ಣಚಿತ್ರಗಳು ನಮ್ಮ ಪೂರ್ವಿಕರ ಬದುಕಿನ ಭಾಗಗಳನ್ನು ಸದಾ ನೆನಪಿಡಲು ಆಧಾರಮೂಲ ಆಕರ ಅಥವಾ ಅವುಗಳು ಸ್ಮಾರಕಗಳಾಗಿವೆಂದು ಪರಿಗಣಿತವಾಗಿವೆ. ಆದರೆ ಅವುಗಳು ನಿರ್ದಿಷ್ಟ ಉದ್ದೇಶದಿಂದ ರಚನೆಗೊಂಡವುಗಳಲ್ಲ. ಸಹಜ ಜೀವನದ ಭಾಗವಾಗಿ ಅವು ನಿರ್ಮಾಣಗೊಂಡಿವೆ ಎಂಬ ಕಾರಣದಿಂದ ಸ್ಮಾರಕಗಳ ಪಟ್ಟಿಯಿಂದ ದೂರವಿರಬೇಕೆಂದು ಅಭಿಪ್ರಾಯಿಸಲಾಗಿದೆ.[೧]

ರಾಜರು, ಮೇಲ್ವರ್ಗದ ಅಧಿಕಾರಿಗಳು ಮತ್ಯಾರದೋ ನೆನಪಿಗಾಗಿ ಅಥವಾ ನಿರ್ದಿಷ್ಟ ಉದ್ದೇಶದಿಂದ ನಿರ್ಮಾಣವಾದ ಬೋಧಿವೃಕ್ಷ, ಬೌದ್ಧಸ್ತೂಪ, ಅಶೋಕಸ್ತಂಭ, ಗೋಲಗುಂಬಜ್, ತಾಜ್‌ಮಹಲ್, ಜಲಿಯನ್ ವಾಲಾಬಾಗ್ ಮುಂತಾದವು ಸ್ಮಾರಕಗಳೆನಿಸಿಕೊಂಡರೂ ಒಬ್ಬ ವ್ಯಕ್ತಿಯ ಮರಣದ ನಂತರ ಅವನ ಅಥವಾ ಅವಳ ನೆನಪಿಗಾಗಿ ನಿರ್ಮಿಸಿದ್ದು ಸ್ಮಾರಕವೆನಿಸಿಕೊಳ್ಳುತ್ತವೆ ಎಂಬುವುದನ್ನು ಸಾಮಾನ್ಯವಾಗಿ ಗ್ರಹಿಸಿಕೊಳ್ಳಬೇಕಿದೆ.[೨] ಹೀಗಾಗಿ ಸ್ಮಾರಕ ಎಂಬ ಪದಕ್ಕೆ ವಿಶಾಲವಾದ ಅರ್ಥವನ್ನು ಕಲ್ಪಿಸಿಕೊಂಡರೂ ಅವುಗಳಿಗೇ ಆದ ನಿರ್ದಿಷ್ಟ ಉದ್ದೇಶಗಳಿರುತ್ತವೆ ಎಂಬ ಸಂಗತಿಗಳನ್ನು ಅಲ್ಲಗಳೆಯಲಾಗದು.

ಗತಿಸಿಹೋದ ಮಾನವನನ್ನು ಸಮಾಧಿ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೇ, ಮಡಿದವನ ಸ್ಮರಣೆ ಬರುವಂತೆಯೋ, ಕೆಲವಾರು ಸಂಕೇತಗಳನ್ನೋ, ಗುರುತುಗಳನ್ನೋ ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು

ಸಾಮಾನ್ಯವಾಗಿ ಆಯಾ ದೇಶಗಳಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರತಿಷ್ಠೆಗಳನ್ನನುಸರಿಸಿಯೇ ಬೆಳೆದಿವೆ. ವೇದಗಳಲ್ಲಿ ಉಲ್ಲೇಖಗೊಂಡಿರುವ 'ಪಿತೃಮೇಧ' ಎಂಬ ವಿಧಿಯಲ್ಲಿ ಸತ್ತವನನ್ನು ಸಂಸ್ಕರಿಸಿದ ಸ್ಥಳದಲ್ಲಿ ಅವನ ನೆನಪಿಗಾಗಿ ನೆಡುವ ಅಥವಾ ಕೆತ್ತಿಸುವ ವಿವರಗಳೆಂಬ ಸಂಗತಿಗಳ ಕುರಿತು ದಾಖಲೆಗೊಂಡಿರುವ ಮಾಹಿತಿ ದೊರೆಯುತ್ತದೆ. ಇಲ್ಲಿ ಅಂತ್ಯ ಸಂಸ್ಕಾರವಾದ ಹಲವಾರು ತಿಂಗಳುಗಳು ಅಥವಾ ಕೆಲವಾರು ವರ್ಷಗಳ ನಂತರ ಈ ಸ್ಮಾರಕವನ್ನು ಮಾಡಬೇಕೆಂದು ಹೇಳಿದೆ. ಮೃತಾತ್ಮರಿಗೆ ಸ್ಮಾರಕವನ್ನು ನೆಡುವುದರ ಪ್ರಸ್ತಾಪ ಶತಪಥ ಬ್ರಾಹ್ಮಣದಲ್ಲಿ ಉಲ್ಲೇಖಗೊಂಡಿರುವುದು. ಕೌರವಾಗಮದಲ್ಲಿ ಇಡೀ ಒಂದು ಅಧ್ಯಾಯವೇ ಸ್ಮಾರಕಶಿಲೆಗಳ ಬಗ್ಗೆ ವಿವರಿಸುತ್ತದೆ. ಇವುಗಳಲ್ಲದೆ ಕಾಮಿಕ, ಕಾರಣ, ಕಿರಣ, ಚಿಂತ್ಯಾ, ದೀಪ್ತ, ಮಕುಟ, ಮಾತಗಂ ಪರಮೇಶ್ವರ, ಯೋಗಜ ಮೊದಲಾದ ಆಗಮಗಳು ಸ್ಮಾರಕಗಳ ಬಗೆಗೆ ಪ್ರಸ್ತಾಪ ಮಾಡುತ್ತವೆ. ಕೆಲವು ಕಡೆಗಳಲ್ಲಿ ಸ್ಮಾರಕವನ್ನು ಸಮಾಧಿ ಲಿಂಗಸ್ಥಾಪನ ಎಂಬುದಾಗಿ ಸಂಬೋಧಿಸಿರುವುದುಂಟು.[೩]

ಮಧ್ಯಭಾರತದ ಮಾರಿಯಾ ಜನಾಂಗದ ಅಂತ್ಯ ಸಂಸ್ಕಾರದಲ್ಲಿ ಸ್ಮಾರಕ ಕಲ್ಲುಗಳನ್ನು ನೆಡುವುದೇ ಮುಖ್ಯವಾದ ಆಚರಣೆ ಎಂಬ ವಿವರಗಳು ಬೆಳೆದುಬಂದಿರುವುದನ್ನು ಗಮನಿಸಬಹುದಾಗಿದೆ. ಮಣಿಪುರದ ನಾಗ ಜನಾಂಗದವರು ತಮ್ಮ ವಂಶದ ಹಿರಿಯರ ನೆನಪಿಗಾಗಿ ಸಾಲು ಸಾಲಾಗಿ, ದುಂಡಾಗಿ, ಲಾಳಾಕಾರವಾಗಿ ಸ್ಮಾರಕಶಿಲೆಗಳನ್ನು ನೆಡುವ ಸಂಪ್ರದಾಯವನ್ನು ರೂಢಿಸಿಕೊಂಡಿದ್ದಾರೆ. ಭಿಲ್ಲ ಜನಾಂಗದವರು ತಮ್ಮ ಮುಖ್ಯಸ್ಥನು ವಿಧಿವಶವಾದ ನಂತರ ಅವನ ನೆನಪಿನಲ್ಲಿ ದೇವಸ್ಥಾನ ಕಟ್ಟುವುದರ ಮೂಲಕ ಅವನ್ನೇ ಸ್ಮಾರಕವಾಗಿ ಮಾಡುತ್ತಾರೆ. ಗೊಂಡ ಜನಾಂಗದವರು ಮೃತಾತ್ಮರ ಪ್ರೇತಗಳು ಶಾಶ್ವತವಾಗಿ ಇರಲು, ಅಲ್ಲಿ ರಕ್ಷಣೆ ಪಡೆಯಲು ಸ್ಮಾರಕಶಿಲೆಗಳನ್ನು ನಿರ್ಮಿಸುತ್ತಾರೆ.[೪] ಈ ರೀತಿ ಸ್ಮಾರಕಗಳನ್ನು ಸ್ಥಾಪಿಸುವ ಪದ್ಧತಿ ಮತ್ತು ಶವಸಂಸ್ಕಾರದ ರೀತಿಗಳು ಕಾಲಾನುಕ್ರಮದಲ್ಲಿ ಹಲವಾರು ಬದಲಾವಣೆಗಳಿಗೆ ಒಳಗಾಗುತ್ತಾ ಹೊಸ ರೂಪ ಪಡೆಯುತ್ತಾ ಬೆಳೆದು ಬಂದವು ಎಂಬುದನ್ನು ಐತಿಹಾಸಿಕ ಪರಿಪೇಕ್ಷೆಯಲ್ಲಿ ವಿವೇಚಿಸುವ ಹಲವಾರು ಪ್ರಯತ್ನಗಳಾಗಿದ್ದುಂಟು. ಪ್ರಾಗೈತಿಹಾಸಿಕ ಕಾಲದಿಂದ ಹಲವಾರು ಜನಾಂಗಗಳು ತಮ್ಮದೇ ಆದ ನಂಬಿಕೆ, ಧರ್ಮ ಮತ್ತು ಸನ್ನಿವೇಶಗಳೊಂದಿಗೆ ಬೆಳೆದುಬಂದವು ಎಂಬುದನ್ನು ಸ್ಥೂಲವಾಗಿ ಗಮನಿಸಬಹುದು.

ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ, ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು, ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ವಾಸ್ತವ ಇತಿಹಾಸ[೫] ಎಂಬ ವಿದ್ವಾಂಸರ ಅಭಿಪ್ರಾಯಕ್ಕೆ ಸಾಕ್ಷಿಯಾಗಿ ವೀರಗಲ್ಲು, ಮಾಸ್ತಿಗಲ್ಲು, ನಿಸಿದಿಗಲ್ಲು ಸ್ಮಾರಕಗಳು ನಾಡಿನಾದ್ಯಂತ ಕಂಡುಬರುತ್ತವೆ. ತನ್ನ ಒಡೆಯನಿಗಾಗಿ, ಸಮಾಜದ ಹಿತದೃಷ್ಟಿಯಿಂದ ಯುದ್ಧವನ್ನು ಧೈರ್ಯದಿಂದ ಎದುರಿಸಿ, ಅಂತೆಯೇ ಸಾವನ್ನು ಸ್ವಾಗತಿಸಿ ಮಡಿದ ವೀರನಿಗೆ, ಇಡೀ ಕಾಲಘಟ್ಟದ ಮತ್ತು

ಪ್ರದೇಶದ ಜನತೆ ವೀರನಿಗೆ ಉಪಕೃತರಾಗಿ ಇಂಥ ಸ್ಮಾರಕಗಳನ್ನು ನೆಟ್ಟಿದ್ದಾರೆ. ಅವುಗಳು ರಾಜರ, ರಾಜಕುಟುಂಬದವರ ಇತಿಹಾಸವನ್ನು ಸಾರಿ ಹೇಳುವುದಕ್ಕಿಂತಲೂ, ಜನಸಾಮಾನ್ಯರ ಇತಿಹಾಸವನ್ನು ಸಾರಿ ಹೇಳುತ್ತವೆ. ಮಾಸ್ತಿಕಲ್ಲುಗಳ ಮೂಲಕ ಅಭಿವ್ಯಕ್ತಗೊಳ್ಳುವ ಇತಿಹಾಸವು ಆ ಹೊತ್ತಿನ ಸಾಮಾಜಿಕ ಇತಿಹಾಸವಾಗಿ ಮುಖ್ಯವಾಗುತ್ತದೆ. ವೀರ, ಮಹಾಸತಿಯರು ಮಾತ್ರವಲ್ಲದೆ ಸನ್ಯಸನ, ಸಲ್ಲೇಖನ ಇತ್ಯಾದಿ ಧಾರ್ಮಿಕ ವಿಧಿವಿಧಾನಗಳ ಮೂಲಕ ಸಾವನ್ನು ಪಡೆದವರಿಗೂ ಸ್ಮಾರಕಗಳನ್ನು ನೆಡಲಾಗಿದೆ. ಅವುಗಳು ಸಹ ಸಾಮಾಜಿಕ ಇತಿಹಾಸವನ್ನು ಪ್ರಚುರಪಡಿಸುವ ಸ್ಮಾರಕಗಳಾಗಿ ಕಂಡುಬರುತ್ತವೆ.[೬] ಒಟ್ಟಾರೆಯಾಗಿ ಹೇಳುವುದಾದರೆ ಪ್ರತಿಷ್ಠಾಪಿತವಾದ ದೇವರು, ದೇವರ ನೆಲೆಯಾದ ದೇವಾಲಯ, ಅರಮನೆ ಹಾಗೂ ದೊಡ್ಡವರ ಸಮಾಧಿಗಳು ಮೇಲ್ವರ್ಗದವರನ್ನು ಸ್ಮರಣೆಗೆ ತಂದರೆ, ವೀರಗಲ್ಲು, ಮಾಸ್ತಿಗಲ್ಲು, ನಿಸಿದಿ ಮತ್ತು ಆತ್ಮಬಲಿದಾನ ಸ್ಮಾರಕಗಳು ಮಧ್ಯಮ ಮತ್ತು ಕೆಳವರ್ಗದವರ ನೆನಪನ್ನು ಸ್ಮರಣೆಗೆ ತರುತ್ತವೆ. ಅಲ್ಲದೇ ಅವರು ಸದಾಕಾಲ ಇತಿಹಾಸದ ಭಾಗವಾಗಿ ಇರುವಂತೆ ಸ್ಥಾಪಿತಗೊಂಡಿದ್ದಾರೆ.

### ೩.೧. ಸ್ಮಾರಕ ಶಿಲ್ಪಗಳ ಸ್ವರೂಪ

'ಸ್ಮಾರಕ' ಎಂಬ ಶಬ್ದವು 'ಸ್ಮೃ'(ಸ್ಮರಿಸು) ಎಂಬ ಧಾತುವಿನ 'ಣಿಜಂತ' ರೂಪವಾಗಿದೆ. ಅಂದರೆ ಯಾವುದು ಸ್ಮರಣೆಗೆ ಬರುವಂತೆ ಮಾಡಲ್ಪಡುತ್ತದೆಯೋ ಅದನ್ನು 'ಸ್ಮಾರಕ' ಎನ್ನಬಹುದಾಗಿದೆ. 'ಸ್ಮಾರಕಶಿಲ್ಪ' ಎಂಬ ಪದವು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗಿಲ್ಲ. ಅದರ ವ್ಯಾಪ್ತಿ ದೊಡ್ಡದಿದೆ. ಸ್ಮಾರಕಶಿಲ್ಪ ಎಂದರೆ ಒಂದು ಮಾಧ್ಯಮದ ಮೂಲಕ ಉದ್ದ ಅಗಲ ಮತ್ತು ದಪ್ಪವನ್ನು ತೋರಿಸುವ ಆಕೃತಿ ಎನ್ನುವ ಅಭಿಪ್ರಾಯಗಳುಂಟು. ಈ ಆಕೃತಿ ಕಲ್ಲಿನದಾಗಿರಬಹುದು ಅಥವಾ ಮರದ ಕೆತ್ತನೆ ಇರಬಹುದು. ಒಂದು ಮಹತ್ವದ ಘಟನೆಯ ಅಥವಾ ವ್ಯಕ್ತಿಯ ಜ್ಞಾಪಕಾರ್ಥವಾಗಿ ಸ್ಥಾಪಿಸಿದ ಕಂಬ, ಕಟ್ಟಡ ಮೊದಲಾದವು ಎಂಬ ಅರ್ಥವಿವರಣೆ ಕನ್ನಡ ನಿಘಂಟಿನಲ್ಲಿದೆ.[೭] ಹೀಗೆ ಸ್ಮಾರಕ ಎಂಬ ಪದಕ್ಕೆ ವಿಶಾಲ ಅರ್ಥವ್ಯಾಪ್ತಿ ಇದ್ದರೂ, ಹೋರಾಟದಲ್ಲಿ ಮಡಿದ ವೀರ ಹಾಗೂ ಸತಿ ಹೋದ ಮಹಿಳೆಯರಿಗಾಗಿ ನಿರ್ಮಿಸಿದ ಶಿಲೆಗಳನ್ನು ಸ್ಮಾರಕವೆಂದು ಸ್ಥೂಲವಾಗಿ ವಿದ್ವಾಂಸರು ಪರಿಗಣಿಸಿದ್ದಾರೆ.

'ಶಿಲ್ಪ' ಎಂಬ ಶಬ್ದವು ಅತ್ಯಂತ ಪ್ರಾಚೀನ ಪದವಾಗಿದೆ. ಅದನ್ನು ವಿವಿಧ ಕಾಲಘಟ್ಟಗಳಲ್ಲಿ ಭಿನ್ನ ರೀತಿಯಲ್ಲಿ ಅರ್ಥೈಸಿರುವುದು ಕಂಡುಬರುತ್ತದೆ. 'ಶಿಲ್ಪ' ಶಬ್ದವು ಶೀಲ ಸಮಾಧ್ ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಸಮಾಧಿ ಎಂಬ ಅರ್ಥವುಳ್ಳ ಕೀಲಧಾತುವು ತಪಸ್ಸನ್ನು ಸೂಚಿಸುತ್ತದೆ. ತಪಸ್ಸಿನ ಪ್ರಭಾವದಿಂದ ನಿರ್ವಹಿಸಲ್ಪಡುವಂತಹದು ಶಿಲ್ಪ ಎಂಬುದರ ಅರ್ಥವಾಗಿದೆ.[೮] ಕನ್ನಡ ನಿಘಂಟಿನಲ್ಲಿ ಕಟ್ಟಡ, ಸೇತುವೆ ನಿರ್ಮಾಣ ಹಾಗೂ ವಾಸ್ತುಕಲೆ ಎಂಬ ಅರ್ಥವಿವರಣೆ ಶಿಲ್ಪಕ್ಕಿದೆ.[೯] ಸಂಸ್ಕೃತದ ಪ್ರಾಚೀನ ಗ್ರಂಥಗಳಲ್ಲಿ 'ಶಿಲ್ಪ' ಶಬ್ದವನ್ನು ಕಲಾಕೌಶಲ ಅಂಬ ಅರ್ಥದಲ್ಲಿ ಬಳಸಲಾಗಿದೆ.[೧೦] ಪ್ರಸಿದ್ಧವಾದ ಅರವತ್ತನಾಲ್ಕು ಕಲೆಗಳಿಗೆಲ್ಲ 'ಶಿಲ್ಪ' ಎನ್ನುವ ಹೆಸರೇ

ಅನ್ವಯವಾಗುತ್ತಿತ್ತು ಎಂಬ ಅಭಿಪ್ರಾಯ ವಿದ್ವಾಂಸರುಗಳದ್ದಾಗಿದೆ. ಮುಂದೆ ಈ ಪದದ ವ್ಯಾಪ್ತಿ ಪರಿಮಿತಿಗೊಂಡು 'ವಾಸ್ತುಶಿಲ್ಪ' ಎಂದರೆ ಕಟ್ಟಡಗಳ ನಿರ್ಮಾಣ (Architectrue) ಮತ್ತು 'ಶಿಲ್ಪ' ಎಂದರೆ ಮೂರ್ತಿಗಳ(Sculpture) ನಿರ್ಮಾಣ ಎಂಬ ಅರ್ಥಗಳಲ್ಲಿ ರೂಢಿಗತವಾಯಿತು.[೧೧] ವಾಸ್ತವಿಕ ಇಲ್ಲವೇ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ರೂಪಿಸುವ ಕಲೆಯನ್ನು ಶಿಲ್ಪ ಎಂದು ಸಾಮಾನ್ಯವಾಗಿ ಅರ್ಥೈಸಲಾಗಿದೆ.[೧೨]

ಭಾರತೀಯ ಶಿಲ್ಪವು ಧಾರ್ಮಿಕ ಪ್ರೇರಣೆ ಮತ್ತು ಪ್ರಭಾವಗಳಿಂದ ಮೂಡಿಬಂದಿದ್ದಾಗಿದೆ. ಅದಕ್ಕೆ ಮಡಿ, ಮೈಲಿಗೆಗಳು ಹೆಚ್ಚು. ಸ್ಮಾರಕಶಿಲ್ಪಗಳಾದರೆ ಅದು ಸಾಮಾನ್ಯ ಜನರ ಸ್ವತ್ತು, ಜನರ ಬದುಕಿನೊಂದಿಗೆ ಬೆಳೆದುಬಂದಿದೆ.[೧೩] ಹಾಗಾಗಿ ಶಿಲ್ಪ ಎಂಬುದು ಕೇವಲ ದೇವರ ವಿಗ್ರಹಗಳನ್ನು ಕೆತ್ತುವ ಜಡವಸ್ತುಗಳ ಬಾಹ್ಯರೂಪವನ್ನು ಕೊಡುವ ಕಲೆಯೆಂದು ಅಭಿಪ್ರಾಯಪಡಲಾಗಿದೆ. ಪ್ರಾಚೀನ ಕಾಲದಲ್ಲಿ ಶಿಲ್ಪವು ಸಾಮಾಜಿಕ, ಧಾರ್ಮಿಕ ಜೀವನವನ್ನು ಬಿಂಬಿಸುವ ಮತ್ತು ಸಾಮಾನ್ಯ ಜನರಿಗೆ ತಿಳಿಸುವ ಒಂದು ಮಾಧ್ಯಮವಾಗಿರುವುದು ಕಂಡುಬರುತ್ತದೆ. ಶಿಲ್ಪ ಮತ್ತು ಸ್ಮಾರಕಶಿಲ್ಪಗಳು ಒಂದೇಯಾದರೂ, ಶಾಸ್ತ್ರೀಯ ಹಿನ್ನೆಲೆಯ ಶಿಲ್ಪಗಳ ಉದ್ದೇಶವೇ ಬೇರೆ ಮತ್ತು ಸ್ಮಾರಕಶಿಲ್ಪಗಳ ಉದ್ದೇಶವೇ ಬೇರೆಯಾಗಿರುತ್ತದೆ. ಇಲ್ಲಿ ಸ್ಮಾರಕ ಶಿಲ್ಪಗಳು ಸಾಮಾಜಿಕ ಹಿನ್ನೆಲೆಯೊಂದಿಗೆ ನಿರ್ಮಾಣಗೊಂಡಿರುತ್ತವೆ.

ಸ್ಮಾರಕಶಿಲ್ಪಗಳು ಉಬ್ಬುಶಿಲ್ಪಗಳಲ್ಲಿ ಒಂದು ಪ್ರಕಾರವಾಗಿದೆ. ಭಾರತೀಯ ಶಿಲ್ಪಶಾಸ್ತ್ರದಲ್ಲಿ ಉಬ್ಬುಶಿಲ್ಪವು ಮಹತ್ವದ ಸ್ಥಾನ ಪಡೆದಿರುವುದು. ಪ್ರಮುಖವಾಗಿ ದೇವಾಲಯಗಳು ಹಾಗೂ ಬಿಡಿಶಿಲ್ಪಗಳ ಭಾಗಗಳಲ್ಲಿ ವಿವಿಧ ರೀತಿಯ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳಾದ ಮಾನಸಾರ, ಮಯಮತ, ಅಂಶಮದ್ಭೇದಾಗಮ, ಶಿಲ್ಪಸಂಗ್ರಹ ಮೊದಲಾದವುಗಳು 'ಉಬ್ಬುಶಿಲ್ಪ'ದ ರಚನೆ ಬಗ್ಗೆ ಏನನ್ನೂ ಉಲ್ಲೇಖಿಸುವುದಿಲ್ಲ. ಕಾರಣ ಅವು ಉಬ್ಬುಶಿಲ್ಪವನ್ನು ಶಿಲ್ಪದಿಂದ ಅಥವಾ 'ದುಂಡುಶಿಲ್ಪ'ದಿಂದ ಬೇರ್ಪಡಿಸಿರಲಿಲ್ಲ.[೧೪] ಕಾರಣ ಅವುಗಳ ಗಮನವೆಲ್ಲ ಕೇಂದ್ರೀಕೃತವಾಗಿದ್ದುದು ದೇವಾನುದೇವತೆಗಳ ಮೇಲೆಯೆ. ಶಿವ, ವಿಷ್ಣು, ಗಣಪತಿ ಮೊದಲಾದ ದೇವತೆಗಳ ಎತ್ತರ, ದಪ್ಪ, ಅಗಲ, ಕಿರೀಟದ ಪ್ರಮಾಣ, ಅವರು ನಿಂತ ಭಂಗಿ, ಹಿಡಿದಿರುವ ಆಯುಧಗಳು, ಧರಿಸಿರುವ ಉಡುಗೆಗಳು, ಅವರ ವಾಹನ ಮುಂತಾದವುಗಳ ಲಕ್ಷಣಗಳನ್ನು ಬಹಳ ವಿವರವಾಗಿ ತಿಳಿಸುತ್ತವೆ.

ದೇವಾಲಯ ಹಾಗೂ ಶಿಲ್ಪಗಳ ಕುರಿತು ವಸಾಹತುಶಾಹಿ ಕಾಲಘಟ್ಟದಲ್ಲಿ ಅಂಶಿಕ ಅಧ್ಯಯನಗಳು ರೂಪುಗೊಂಡಿದ್ದರೂ ಸ್ಪಷ್ಟತೆಯನ್ನು ಪಡೆದಿದ್ದು ಮಾತ್ರ ಇಪ್ಪತ್ತನೆಯ ಶತಮಾನದ ಮಧ್ಯ ಭಾಗದಲ್ಲಿಯೇ ಎಂಬುದು ಮುಖ್ಯ. ವಿದ್ವಾಂಸರಾದ ಕೆ. ಶಿವರಾಮ ಕಾರಂತರು 'ಉಬ್ಬುಶಿಲ್ಪ'ಗಳ ಕುರಿತು ಕರ್ನಾಟಕದಲ್ಲಿ ಅಧ್ಯಯನ ಮಾಡಿದ ಪ್ರಮುಖರಲ್ಲಿ ಮೊದಲಿಗರಾಗಿದ್ದಾರೆಂಬ ಅಭಿಪ್ರಾಯಗಳುಂಟು. ಅವರು ಬರೆದ ಭಾರತೀಯ ಶಿಲ್ಪ, ಚಿತ್ರಶಿಲ್ಪ

ವಾಸ್ತುಕಲೆಗಳು, ಕಲಾಪ್ರಪಂಚ ಕೃತಿಗಳಲ್ಲಿ ಆ ಕುರಿತು ಪ್ರಸ್ತಾಪಿಸಿದ್ದಾರೆ. 'ಜ್ಞಾನಗಂಗೋತ್ರಿ' ಸಂಪುಟ ಹಾಗೂ 'ಕಲಾಕೋಶ' ಕೃತಿಗಳಲ್ಲಿಯೂ ಉಬ್ಬುಶಿಲ್ಪದ ಅಲ್ಪಪ್ರಮಾಣದ ವಿವರಗಳು ದೊರೆಯುತ್ತವೆ. ಅವುಗಳಲ್ಲದೆ ಸಂಶೋಧಕರಾದ ಡಿ.ವಿ. ಪರಮಶಿವಮೂರ್ತಿ ಅವರು 'ಕನ್ನಡ ಶಾಸನಶಿಲ್ಪ' ಎಂಬ ಕೃತಿಯಲ್ಲಿ ಉಬ್ಬುಶಿಲ್ಪದ ಬಗ್ಗೆ ಒಂದು ಸ್ಪಷ್ಟ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಿದ್ದಾರೆ ಎಂಬ ವಿವರವನ್ನು ಪರಿಗಣಿಸಬಹುದು.

ಶಿಲ್ಪ ಅಥವಾ ದುಂಡುಶಿಲ್ಪವು ಒಂದು ಸ್ವತಂತ್ರವಾದ ರಚನೆಯಾಗಿದ್ದು, ಅದಕ್ಕೆ ತನ್ನದೇ ಆದ ಮಗ್ಗುಲುಗಳು ಇರುತ್ತವೆ. ಇದು ನಾಲ್ಕೂ ದಿಕ್ಕಿನಿಂದಲೂ ಕೆತ್ತಲ್ಪಟ್ಟಿರುತ್ತದೆ. ಯಾವ ಬದಿಯಲ್ಲಿ ಬೇಕಾದರೂ ನಿಂತು ವಿವಿಧ ಮುಖಗಳನ್ನು ನೋಡಬಹುದು ಹಾಗೂ ಯಾವ ಕಡೆಗೆ ಬೇಕಾದರೂ ತಿರುಗಿಸಿ ನೋಡಬಹುದು. ಇದನ್ನೇ 'ದುಂಡುಶಿಲ್ಪ' ಅಥವಾ 'ಪೂರ್ಣಶಿಲ್ಪ' ಎಂದು ಗುರುತಿಸಲಾಗಿದೆ.[೧೫] ಆದರೆ ಉಬ್ಬುಶಿಲ್ಪಕ್ಕೆ ಸ್ವತಂತ್ರವಾದ ಮಗ್ಗುಲು ಇರುವುದಿಲ್ಲ. ಇದು ಹಿನ್ನೆಲೆಯೊಂದಿಗೆ ಅಂಟಿಕೊಂಡಿರುತ್ತದೆ. ಇದನ್ನು ಎದುರಿನಲ್ಲಿ ನಿಂತು ನೋಡಬಹುದೇ ಹೊರತು ದುಂಡುಶಿಲ್ಪವನ್ನು ನೋಡುವಂತೆ ಯಾವ ಬದಿಯಿಂದಲಾದರೂ ನೋಡಲು ಸಾಧ್ಯವಿಲ್ಲ.[೧೬] ದುಂಡುಶಿಲ್ಪವು ಹಲವಾರು ಮಿತಿಗಳನ್ನೊಳಗೊಂಡಿದೆ. ಇದರಲ್ಲಿ ಯಾವುದಾದರೂ ಒಂದು ಘಟನೆಯನ್ನು ಮಾತ್ರ ನಿರೂಪಿಸಬಹುದು. ಅಂದರೆ ನಿಂತ, ಕುಳಿತ ಅಥವಾ ಮಲಗಿದಂತೆ ಕಾಣುವ ವಿಗ್ರಹಗಳನ್ನು ಕೆತ್ತಬಹುದು. ಅವುಗಳಿಗೆ ಸಂಬಂಧಿಸಿದ ಇತರೆ ವಿವರಗಳನ್ನು ಕೆತ್ತಲು ಸಾಧ್ಯವಿಲ್ಲ. ಆದರೆ ಉಬ್ಬುಶಿಲ್ಪದಲ್ಲಿ ಹೋರಾಟದ ವಿವಿಧ ಸನ್ನಿವೇಶಗಳನ್ನು ಚಿತ್ರಿಸಬಹುದು. ಅಂದರೆ ವೀರನ ಜೊತೆ ಅವನ ಪರಿವಾರ, ವೈರಿ ಪಡೆ ಮುಂತಾದ ದೃಶ್ಯಗಳನ್ನು ಚಿತ್ರಿಸಲು ಅವಕಾಶವಿರುತ್ತದೆ.[೧೭] ಹೋರಾಟದ ಹಂತ, ಸ್ವರ್ಗಾರೋಹಣ ಹಂತ ಮತ್ತು ಸ್ವರ್ಗದ ಹಂತಗಳನ್ನು ಒಂದೇ ಶಿಲೆಯಲ್ಲಿ ತೋರಿಸಲು ಸಾಧ್ಯವಾಗಿದೆ. ಈ ರೀತಿ ಕೆತ್ತನೆ ದುಂಡುಶಿಲ್ಪದಲ್ಲಿ ಸಾಧ್ಯವಿಲ್ಲ. ಶಿಲ್ಪ ಮೂಲತಃ ಮನಸ್ಸಿನಿಂದ ಹುಟ್ಟಿ ಧಾರ್ಮಿಕ ಚೌಕಟ್ಟಿನಲ್ಲಿ ಬೆಳೆದಿದೆ. ಅದು ಹೆಚ್ಚಾಗಿ ಭಕ್ತಿಯನ್ನು ಉದ್ದೀಪನಗೊಳಿಸುತ್ತದೆ. ಸ್ಮಾರಕಶಿಲ್ಪವು ಸಾಮಾಜಿಕ ಕಳಕಳಿಯಿಂದ ಹುಟ್ಟಿರುವಂಥದ್ದು. ಅದು ಮೊದಲಿಗೆ ಸಾಂಸ್ಕೃತಿಕ ಆಕರವಾಗಿದ್ದು ನಂತರ ಕಲಾಮಾಧ್ಯಮವಾಗಿ ಬೆಳೆದು ಬಂದಿತು ಎಂದು ಅಭಿಪ್ರಾಯಿಸಬಹುದು.

ಸ್ಮಾರಕಶಿಲ್ಪವು ಎರಡು ವಿಧವಾಗಿ ಬೆಳೆದುಬಂದಿದೆ. ಮೊದಲನೆಯದು ಶಾಸನ ರೂಪ, ಎರಡನೆಯದು ಉಬ್ಬುಶಿಲ್ಪ ರೂಪದಲ್ಲಿ. ಸ್ಮಾರಕಶಿಲ್ಪ ರೂಪ ತಾಳಲು ಮುಖ್ಯ ಕಾರಣ ಪ್ರತಿಯೊಬ್ಬರಿಗೂ ವಿಷಯ ತಿಳಿಯಲಿ ಎಂಬ ದೃಷ್ಟಿಕೋನ ಒಳಗೊಂಡಿದೆಯೆಂದು ಹೇಳಬಹುದು. ಮರಣ ಸ್ಮಾರಕಗಳು ಕೇವಲ ಶಿಲ್ಪ ಇಲ್ಲವೆ, ಕೇವಲ ಶಾಸನಗಳಾಗಿರಬಹುದಾದರೂ ಸಾಕ್ಷರ–ನಿರಕ್ಷರರಿಗೂ ವೇದ್ಯವಾಗಲೆಂದು ಕೆಲವು ಸಲ ಎರಡನ್ನು ಒಳಗೊಂಡಿರುತ್ತವೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೮] ಸಾಮಾನ್ಯ ಜನರು ಶಿಲ್ಪದ ಉದ್ದೇಶವನ್ನು ಅರಿಯಲಿ ಎಂಬ ಕಾರಣದಿಂದ ಸ್ಮಾರಕ ನೆಡುವವರು ಅಥವಾ ಶಿಲ್ಪಿಗಳು ಶಾಸನದ ಜೊತೆಗೆ ಶಿಲ್ಪವನ್ನು ನೆಡುವ ಸಂಪ್ರದಾಯ

ಬೆಳೆಸಿದರು ಎನ್ನಲಾಗಿದೆ. ಶಿಲ್ಪಗಳಿಗೆ ನಿಜವಾಗಿಯೂ ಸವಾಲಾಗಿ ನಿಂತದ್ದು ಸ್ಮಾರಕಶಿಲ್ಪಗಳು, ವೀರನ ತ್ಯಾಗ, ಬಲಿದಾನ, ಮಹಾಸತಿಯರ ಆದರ್ಶ ಗುಣ, ಸನ್ಯಾಸಿಗಳ ಪಾರಮಾರ್ಥಿಕ ಗುಣಗಳನ್ನು ಎಲ್ಲರಿಗೂ ಅರಿವಾಗುವಂತೆ ಚಿತ್ರಿಸಬೇಕಾಗಿತ್ತು. ಅನಕ್ಷರಸ್ಥರಿಗೂ ಸುಲಭವಾಗಿ ಅರ್ಥವಾಗುತ್ತಿದ್ದುದು ಈ ಸ್ಮಾರಕಶಿಲ್ಪಗಳು. ಹೀಗಾಗಿ ಸ್ಮಾರಕ ಶಿಲೆಗಳಲ್ಲಿ ಶಿಲ್ಪ ವಿಕಸನ ಹೊಂದಿದ ಹಾಗೆ, ದಾನ ಶಾಸನಗಳಲ್ಲಿ ವಿಕಸನ ಹೊಂದಲಿಲ್ಲ ಎನ್ನುವ ಅಭಿಪ್ರಾಯಗಳಿವೆ.

ಬಹುತೇಕ ಗ್ರಾಮಗಳಲ್ಲಿ ಸ್ಮಾರಕ ಶಿಲ್ಪಗಳನ್ನು ಗುರುತಿಸುವುದು ಅದರ ಮೇಲಿನ ಚಿತ್ರಗಳಿಂದಾಗಿಯೇ ಹೊರತು, ಅದರಲ್ಲಿನ ಬರಹದಿಂದಲ್ಲ. ಬರಹ ಮಾತ್ರವಿರುವ ಸ್ಮಾರಕ ಶಿಲ್ಪಗಳನ್ನು ವೀರಗಲ್ಲು, ಮಾಸ್ತಿಗಲ್ಲು ಎಂದು ಕರೆಯದೆ, ಲಿಪಿಕಲ್ಲು ಅಥವಾ ಅಕ್ಷರದ ಕಲ್ಲು ಎಂದೇ ಗುರುತಿಸುತ್ತಾರೆ. ಇಂಥ ಪ್ರಮುಖ ಅಂಶಗಳಿಂದಲೇ ನಾವು ತಿಳಿಯಬಹುದಾದ ಸಂಗತಿ ಏನಂದರೆ ಶಿಲ್ಪಗಳು ಬರಹದ ಜೊತೆಯಲ್ಲಿ ಶಿಲ್ಪಕ್ಕೂ ಏಕೆ ಪ್ರಾಮುಖ್ಯತೆ ನೀಡಿದರೆಂಬುದನ್ನು ತಿಳಿಯಬಹುದು. ಅಕ್ಷರ ತಿಳಿಯದವರೂ ಸಹ ಶಿಲ್ಪವನ್ನು ನೋಡಿ, ತ್ಯಾಗ-ಬಲಿದಾನ ಮಾಡಿದವರ ಉದಾತ್ತ ಮನಸ್ಸನ್ನು ಅರ್ಥ ಮಾಡಿಕೊಳ್ಳಲಿ, ಅದರಲ್ಲಿ ವ್ಯಕ್ತವಾಗುವ ಮೌಲ್ಯಗಳನ್ನು ಅರಿಯಲಿ ಎಂಬುದು ಮುಖ್ಯ ಉದ್ದೇಶವಾಗಿತ್ತು.[೧೯] ಹೀಗೆ ವಿವಿಧ ಸಾಮಾಜಿಕ ಕಾರ್ಯಗಳಿಗಾಗಿ ಹೋರಾಡಿ ಮಡಿದ ವ್ಯಕ್ತಿಗಳ ಮೇಲಿದ್ದ ಪ್ರೀತಿ ಅಭಿಮಾನವನ್ನು ಜನಸಮುದಾಯ ಈ ರೀತಿ ಶಿಲ್ಪದ ಮುಖಾಂತರ ವ್ಯಕ್ತಪಡಿಸುವುದನ್ನು ನಾವು ಕಾಣುತ್ತೇವೆ. ಒಟ್ಟಿನಲ್ಲಿ ಹೇಳುವುದಾದರೆ ಜೀವನ ಮೌಲ್ಯಗಳನ್ನು ನಂಬಿ, ಅದಕ್ಕಾಗಿ ಪ್ರಾಣ ತೆತ್ತ ವೀರರನ್ನು ಈ ಸ್ಮಾರಕಗಳಲ್ಲಿ ಒಡಮೂಡಿಸಲಾಯಿತೆಂದು ಸ್ಪಷ್ಟವಾಗಿ ಹೇಳಬಹುದು. ಹಾಗಾಗಿ ಸ್ಮಾರಕಶಿಲ್ಪಗಳು ಮೂಲತಃ ದಾಖಲೆ, ವ್ಯಕ್ತಿಯ ಗುಣಗಾನಗಳಾಗಿದ್ದರೂ ಪ್ರಾಚೀನ ಮೌಲ್ಯಗಳನ್ನು ಪ್ರಚುರಗೊಳಿಸುವ[೨೦] ಸ್ಮಾರಕಗಳಾಗಿ ನಿಂತಿರುವುದನ್ನು ಮನಗಾಣಬಹುದು.

### ೩.೨. ಸ್ಮಾರಕ ಶಿಲ್ಪದ ಬೆಳವಣಿಗೆ

ಸ್ಮಾರಕಶಿಲ್ಪದ ಬೆಳವಣಿಗೆಗೆ ಸುಮಾರು ಒಂದುವರೆ ಸಹಸ್ರ ವರ್ಷಗಳ ಇತಿಹಾಸವಿದೆ. ಇಷ್ಟು ದೀರ್ಘವಾದ ಅವಧಿಯಲ್ಲಿ ಸ್ಮಾರಕಶಿಲ್ಪವು ನಾನಾ ಅವಸ್ಥೆಗಳನ್ನು ಪಡೆದಿದ್ದು, ಧರ್ಮ, ರಾಜಕೀಯ ಮತ್ತು ಸಂಸ್ಕೃತಿಯ ಬೆಂಬಲದೊಂದಿಗೆ ಬೆಳೆದುಬಂದಿದೆ. ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಅರಸುಮನೆತನಗಳ ಕಾಲದಲ್ಲಿ ಹಲವಾರು ಪ್ರಭಾವಗಳನ್ನೊಳಗೊಂಡ ಸ್ಮಾರಕಶಿಲ್ಪಗಳ ರಚನೆಗಳು ಬದಲಾವಣೆ ಮತ್ತು ಅವನತಿ ಹೊಂದಿದ್ದರೂ ಅವು ಆಯಾ ಕಾಲದಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಕೂಡ ಮೆರೆದಿವೆ ಎಂದರೆ ತಪ್ಪಾಗಲಾರದು. ಇದಕ್ಕೆ ಕಾರಣ ವೀರಗಲ್ಲುಗಳನ್ನು ಮಾಡುತ್ತಿದ್ದ ಶಿಲ್ಪಿಗಳು. ಅವರು ತಮ್ಮ ಕಾಲದ ವಾಸ್ತು ಮತ್ತು ಮೂರ್ತಿಶಿಲ್ಪದ ರಚನೆಯ ಜೊತೆಯಲ್ಲಿಯೇ ಸ್ಮಾರಕ ಶಿಲ್ಪ ಪ್ರಕಾರವನ್ನು ಬೆಳೆಸಿದರು.[೨೧] ಇದರಿಂದಾಗಿ ವಿವಿಧ ಅರಸುಮನೆತನಗಳ ಅವಧಿಯಲ್ಲಿ ಸ್ಮಾರಕಶಿಲ್ಪಗಳು ಅಗಣಿತ ಸಂಖ್ಯೆಯಲ್ಲಿ ನಿರ್ಮಿಸಲ್ಪಟ್ಟವು. ಅಂಥ ಐತಿಹಾಸಿಕತೆಯಲ್ಲಿ ಹೇಗೆ ಪ್ರಾಮುಖ್ಯತೆ ಪಡೆದವು ಹಾಗೂ ತಮ್ಮ ಸ್ವರೂಪದಲ್ಲಿ ಏನೆಲ್ಲಾ ಬದಲಾವಣೆಗಳನ್ನು ಪಡೆದುಕೊಂಡವು ಎಂಬುದನ್ನು ಪ್ರಸ್ತುತ ಸಂದರ್ಭದಲ್ಲಿ ನಿರೂಪಿಸುವ ಪ್ರಯತ್ನವನ್ನು ಈ ವಿವರಗಳಲ್ಲಿ ಮಾಡಲಾಗಿದೆ.

ಕರ್ನಾಟಕ ಇತಿಹಾಸದ ಆರಂಭ ಕಾಲದ ಕೆಲವು ಶಿಲ್ಪಗಳು ಮತ್ತು ಶಾಸನಸಹಿತ ಇರುವ ಶಿಲ್ಪಗಳು ಸ್ಮಾರಕಗಳೇ ಆಗಿರುವುದನ್ನು ಗುರುತಿಸಲಾಗಿದೆ. ಸನ್ನತಿಯಲ್ಲಿನ ಶಿಲ್ಪಗಳು ಸ್ತೂಪದ ಅಲಂಕಾರಕ್ಕೆ ಬಳಸಿದ್ದವುಗಳಾಗಿವೆ. ಇಲ್ಲಿಯೇ ದೊರೆತ ಮತ್ತೊಂದು ಪ್ರಮುಖ ಶಿಲ್ಪಗಳ ಗುಂಪನ್ನು ಸ್ಮಾರಕಶಿಲ್ಪಗಳೆಂದೇ ನಿರ್ಧರಿಸಲಾಗಿದೆ. ಆ ಕಾಲದ ಸ್ಮಾರಕಶಿಲ್ಪಗಳ ಬೆಳವಣಿಗೆಯು ಅಂದಿನ ಧಾರ್ಮಿಕ, ಸಾಮಾಜಿಕ ಹಾಗೂ ನಂಬಿಕೆಗಳ ಚೌಕಟ್ಟಿನಲ್ಲಿ ಬೆಳೆದುಬಂದಿವೆ ಎಂದು ಅಭಿಪ್ರಾಯಿಸಬಹುದು. ಇಲ್ಲಿರುವ ಸ್ಮಾರಕಶಿಲ್ಪಗಳಲ್ಲಿ ರಚನೆಗೊಂಡ ಆಕೃತಿಗಳು ಬಹುತೇಕವಾಗಿ ದಾನಿಗಳ ಶಿಲ್ಪಗಳೇ ಆಗಿವೆ. ಸಾಮಾನ್ಯವಾಗಿ ಇವರು ಕಾಲವಾದ ಮೇಲೆ ಅವರ ಸ್ಮರಣೆಗಾಗಿ ಈ ಶಿಲ್ಪಗಳನ್ನು ರಚಿಸಲಾಗಿದೆ. ವ್ಯಾಪಾರಸ್ಥರೆಂದು ತೋರಿಸುವ ಉದ್ದೇಶದಿಂದ ಅವರ ಎತ್ತಿನ ಗಾಡಿ, ಕುದುರೆ ಇತ್ಯಾದಿಗಳನ್ನು ಸಾಂಕೇತಿಕವಾಗಿ ತೋರಿಸಲಾಗಿರುತ್ತದೆ.[೨೨]

ಈ ತರಹದ ಶಿಲ್ಪಗಳ ಬೆಳವಣಿಗೆಯನ್ನು ಶಾತವಾಹನರ ಕಾಲದಲ್ಲಿಯೂ ಕೂಡಾ ಗುರುತಿಸಬಹುದು. ಅವರ ಕಾಲದ ಶಿಲ್ಪಸಹಿತ ಶಾಸನವೊಂದು ಸನ್ನತಿ ಬಳಿಯ ಬೆಳ್ವಾಡಗಿ ಎಂಬಲ್ಲಿ ದೊರೆತಿದ್ದು, ಆ ಶಿಲ್ಪದ ಕುರಿತು ವಿಶೇಷ ಅಧ್ಯಯನ ಮಾಡಿರುವ ವಿದ್ವಾಂಸರಾದ ಕೆ.ವಿ. ರಮೇಶ್ ಅವರು ಲಿಪಿಶಾಸ್ತ್ರದ ದೃಷ್ಟಿಯಿಂದ ಇದರ ಕಾಲವನ್ನು ಕ್ರಿ.ಶ. ೩ನೇ ಶತಮಾನದೆಂದು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈ ಶಾಸನವು ಕರ್ನಾಟಕದ ಮಟ್ಟಿಗೆ ಪ್ರಾಚೀನವಾದ ಸ್ಮಾರಕ ಶಾಸನವಾಗಿದೆ ಎಂಬುದು ಸಹ ಅವರ ಪ್ರಬಲ ಅಭಿಪ್ರಾಯವಾಗಿದೆ.[೨೩] ಶಿಲ್ಪವನ್ನು ಗಮನಿಸಿ ಅಭಿಪ್ರಾಯಪಟ್ಟಿರುವ ವಿದ್ವಾಂಸರು ಬ್ರಾಹ್ಮೀ ಲಿಪಿಯ ಪ್ರಾಕೃತ ಶಾಸನವು ಕಲಕನ 'ಛಾಯಾಪಡಿಮೆ'ಯನ್ನು ಉಲ್ಲೇಖಿಸಿದೆಯೆಂದು ಹೇಳುತ್ತಾರೆ. ಅಲ್ಲದೇ ಒಂದು ಸಾಲಿನ ಈ ಶಾಸನದ ಕೆಳಗೆ ಗಾಡಿಯನ್ನೆಳೆಯುತ್ತಿರುವ ಎರಡೆತ್ತಿನ ಚಿತ್ರಣವಿದೆ. ಒಂದು ಎತ್ತಿನ ಹೆಗಲ ಮೇಲೆ ನೊಗವಿದೆ. ಇನ್ನೊಂದು ಎತ್ತು ಬದಿಯಲ್ಲಿ ಸುಮ್ಮನೆ ನಿಂತಿದೆ. ಅದರ ಹೆಗಲ ಮೇಲೆ ನೊಗವಿಲ್ಲ. ಈ ಚಿತ್ರಣವು ಪ್ರವಾಸದ ಮೇಲಿದ್ದ ಕಲಕನು ದಾರಿಯಲ್ಲಿ ಸಾವಿಗೀಡಾದನೆಂಬುದನ್ನು ಸೂಚಿಸುತ್ತದೆ ಎಂದುಕೊಳ್ಳಬಹುದು[೨೪] ಎಂಬುದು ವಿದ್ವಾಂಸರಾದ ಕೆ.ವಿ. ರಮೇಶ್ ಅವರ ಅಭಿಪ್ರಾಯವಾಗಿದೆ. ಆದ್ದರಿಂದ ಈ ಸ್ಮಾರಕ ಶಿಲ್ಪವು ಒಬ್ಬ ವ್ಯಕ್ತಿಯ ಸಾವಿನ ನೆನಪಿಗಾಗಿ ಉಳಿದಿರುವ ಸ್ಮಾರಕ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ ಎಂಬುದು ಬಹುತೇಕರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಸನ್ನತಿಯುಲ್ಲಿರುವ ಗೌತಮಿಪುತ್ರ ಶಾತಕರ್ಣಿಯು ಸ್ಮಾರಕವೊಂದು ಕಥಾ ನಿರೂಪಣೆಯನ್ನೊಳಗೊಂಡ ಪ್ರಮುಖ ಶಿಲ್ಪವಾಗಿದೆ. ತ್ರುಟಿತಗೊಂಡಿರುವ ಈ ಸ್ಮಾರಕದ ಪಟ್ಟಿಕೆಯಲ್ಲಿರುವ ಶಾಸನ ಶಾತಕರ್ಣಿಯ ಯುದ್ಧದ ವರ್ಣನೆ ಮತ್ತು ಅವನು ಜಯಸಿದ ಪ್ರದೇಶಗಳನ್ನು ಉಲ್ಲೇಖಿಸುತ್ತದೆ.[೨೫] ಕ್ರಿ.ಶ. ೨ನೇ ಶತಮಾನದ ಸಿವಸಿರಿ ಪುಳಮಾವಿ ಶಾಸನ, ಬನವಾಸಿಯ ಕ್ರಿ.ಶ. ೩ನೇ ಶತಮಾನದ ನಾಗಶಿಲಾ ಶಾಸನ, ಕಲ್ಬುರ್ಗಿ ಜಿಲ್ಲೆಯ ಬೆಳ್ವಾಡಗಿ

ಗ್ರಾಮದ ಕಲಕನ ಶಾಸನ ಹಾಗೂ ಸನ್ನತಿಯಲ್ಲಿರುವ ಶಾಸನಗಳು ಕದಂಬರ ಶಾಸನಗಳಿಗೆ ಪ್ರೇರಣೆ ನೀಡಿವೆ.[೨೬] ಆದರೂ ಸ್ಮಾರಕಶಿಲ್ಪದ ಬೆಳವಣಿಗೆ ಶಾತವಾಹನ ಕಾಲದಲ್ಲಿ ಅಷ್ಟಾಗಿ ಬೆಳವಣಿಗೆ ಹೊಂದಲಿಲ್ಲವೆಂದು ಅಭಿಪ್ರಾಯಪಡಲಾಗಿದೆ. ಆದರೆ ಸ್ಮಾರಕ ಶಾಸನ ಹಾಕಿಸುವ ಆರಂಭಿಕ ಹಂತ ಇದಾಗಿದೆ ಎಂಬುದನ್ನು ಅರಿತು ಒಪ್ಪಬೇಕಾಗಿದೆ.

ಕದಂಬರ ಕಾಲಕ್ಕೆ ಸೇರಿದ ಹಲ್ಮಿಡಿ ಶಾಸನವು ಸ್ಮಾರಕಶಿಲ್ಪವಾಗಿದೆ ಎಂಬ ಅಭಿಪ್ರಾಯ ವಿದ್ವಾಂಸ ವಲಯದಲ್ಲುಂಟು.[೨೭] ಇದು ವೀರರ ಸಾವು ಮತ್ತು ಅವರ ಹೋರಾಟದ ಘಟನೆಯನ್ನು ನೆನಪಿಸುತ್ತದೆ. ಆದರೂ ಕದಂಬರ ಕಾಲದಲ್ಲಿ ರೂಢಿಯಲ್ಲಿದ್ದ ಶಾಸನಶಿಲ್ಪದ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಶಾತವಾಹನರ ಅವಧಿಯಲ್ಲಿ ಅರಳಲು ಪ್ರಾರಂಭಿಸಿದ ಸ್ಮಾರಕಶಿಲ್ಪಕಲೆಯು ಕದಂಬರ ಕಾಲದಲ್ಲಿ ಅಷ್ಟಾಗಿ ಬೆಳವಣಿಗೆ ಹೊಂದಿಲ್ಲವೆಂಬ ಅಭಿಪ್ರಾಯಕ್ಕೆ ಬರಲಾಗಿದೆ. ಕೆಲವು ವಿದ್ವಾಂಸರು ಇದಕ್ಕೆ ಹಲವು ಕಾರಣಗಳನ್ನು ನೀಡಿದ್ದಾರೆ. ಮೊದಲನೆಯದಾಗಿ ಶಾಸನ ನೆಡುವ ಕ್ರಿಯೆ ಅವರ ಕಾಲದಲ್ಲಿ ಇನ್ನೂ ಸಾರ್ವತ್ರಿಕ ಸ್ವರೂಪ ಪಡೆಯದೇ ಇದ್ದದ್ದು, ಅರಮನೆಯಿಂದ ಪ್ರಕಟಗೊಂಡು ನಿರ್ಮಾಣವಾದ ಶಾಸನಗಳಲ್ಲಿ ವಿಷಯವನ್ನು ಹೇಳುವುದೇ ಮುಖ್ಯವಾಯಿತು ಹೊರತು ಆ ಶಿಲ್ಪಗಳ ಮೇಲಿದ್ದ ಚಿತ್ರಗಳಲ್ಲ ಎಂಬುದು. ಅಲ್ಲದೇ ಶಾಸನಗಳು ತಮ್ಮ ಅರ್ಥವ್ಯಾಪ್ತಿಯ ಮಿತಿಯಲ್ಲೇ ಪ್ರಕಟಗೊಂಡವು. ಎರಡನೆಯದಾಗಿ ಶಾಸನಗಳೂ ಕಲೆಯ ಮಾಧ್ಯಮವಾಗಬಲ್ಲವು ಎಂಬ ಅರಿವು ಇನ್ನೂ ಅವರಿಗೆ ಉಂಟಾಗದೇ ಇದ್ದದ್ದು,[೨೮] ಇಂಥ ಪ್ರಮುಖ ಕಾರಣಗಳಿಂದಾಗಿಯೇ ಕದಂಬರ ಕಾಲದಲ್ಲಿ ಸ್ಮಾರಕಶಿಲ್ಪದ ವಿಕಸನ ಹೊಂದದೇ ಹೋಯಿತೆಂಬ ಅಭಿಪ್ರಾಯಗಳು ವ್ಯಕ್ತವಾಗಿರುವುದುಂಟು.

ಬಾದಾಮಿ ಚಾಲುಕ್ಯರು ವಾಸ್ತುಶಿಲ್ಪದಲ್ಲಿ ಹೊಸ ಹೊಸ ಪ್ರಯೋಗಗಳನ್ನು ನಡೆಸಿ ಯಶಸ್ವಿಯಾದಂತೆ, ಸ್ಮಾರಕಶಿಲ್ಪದ ಬೆಳವಣಿಗೆಯಲ್ಲಿ ಯಶಸ್ವಿಯಾಗಲಿಲ್ಲ ಎಂಬ ಅಭಿಪ್ರಾಯಗಳಿವೆ. ಬಾದಾಮಿ ಚಾಲುಕ್ಯರ ಸೈನ್ಯ 'ಕರ್ನಾಟಕ ಬಲ' ಎಂದು ಇತಿಹಾಸಪ್ರಸಿದ್ಧವಾಗಿದ್ದು[೨೯] ಅವರು ಗೆದ್ದ ಯುದ್ಧಗಳು ಹಲವು. ಇದು ಚಾಲುಕ್ಯ ವೀರರ ಸಂಖ್ಯೆ ಬಲು ದೊಡ್ಡದೆಂಬುದನ್ನು ಸೂಚಿಸುತ್ತಿದ್ದರೂ ಅವರ ಸ್ಮಾರಕಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಿಲ್ಲ. ಆದರೂ ಕೆಲವು ವೀರಗಲ್ಲುಗಳು ಐಹೊಳೆ, ಪಟ್ಟದಕಲ್ಲುಗಳಲ್ಲಿ ದೊರೆಯುತ್ತವೆ. ಸಾಮಾನ್ಯವಾಗಿ ವೀರಗಲ್ಲುಗಳನ್ನು ನಿರ್ಮಿಸಲು ಬಿಳಿ ಬಳಪದ ಕಲ್ಲನ್ನು ಆಯ್ದುಕೊಂಡಿದ್ದಾರೆ.[೩೦] ಆ ಅವಧಿಯಲ್ಲಿ ಎರಡು ಅಥವಾ ಮೂರು ಹಂತಗಳಲ್ಲಿ ಸ್ಮಾರಕಶಿಲ್ಪಗಳನ್ನು ನಿರ್ಮಿಸಲಾಗಿದೆ. ಪಟ್ಟದಕಲ್ಲಿನ ಒಂದು ಸ್ಮಾರಕದಲ್ಲಿ ವೀರನು ಅಪ್ಸರೆಯರೊಡನೆ ಸ್ವರ್ಗಕ್ಕೆ ಹಾರುತ್ತಿರುವಂತೆ ಕೆತ್ತಲಾಗಿದೆ. ಇಂಥ ಸಂಪ್ರದಾಯ ಬಾದಾಮಿ ಚಾಲುಕ್ಯರ ಕಾಲದಿಂದಲೇ ಆರಂಭಗೊಂಡಂತೆ ತೋರುತ್ತದೆ. ಈ ರೀತಿಯ ಹಾರುವ ಶೈಲಿಯ ಶಿಲ್ಪ ಬಾದಾಮಿಯಲ್ಲಿರುವ ಗುಹೆಗಳ ಭಿತ್ತಿ ಚಿತ್ರಗಳಲ್ಲಿ ಕಂಡುಬರುತ್ತವೆಯೆಂದು ವಿದ್ವಾಂಸರ ಅಭಿಪ್ರಾಯಗಳಾಗಿವೆ. ಅವರ ಕಾಲದ ಸ್ಮಾರಕ ಶಿಲ್ಪಗಳ ಮತ್ತೊಂದು ವಿಶೇಷ ಲಕ್ಷಣವೆಂದರೆ ವೀರರನ್ನು ಸದೃಢವಾಗಿರುವಂತೆ ಮತ್ತು ತಲೆಗೆ ಸುಂದರವಾದ

ಕಿರೀಟಗಳನ್ನು ಧರಿಸಿರುವಂತೆ ಚಿತ್ರಿಸಿರುವುದು.[೩೧] ಇವರ ಕಾಲದ ಬಹುತೇಕ ಸ್ಮಾರಕಶಿಲ್ಪಗಳು ಹೆಚ್ಚು ಸವೆದಿರುವುದರಿಂದ ಅಸ್ಪಷ್ಟಗೊಂಡು ಶೈಲಿಯ ದೃಷ್ಟಿಯಿಂದ ಸಪ್ಪೆಯಾಗಿ ಕಂಡುಬರುತ್ತವೆ.

ರಾಷ್ಟ್ರಕೂಟ ಕಾಲದ ಸ್ಮಾರಕಶಿಲ್ಪದ ಬೆಳವಣಿಗೆಯೂ ಬಾದಾಮಿ ಚಾಲುಕ್ಯರಿಗಿಂತಲೂ ಒಂದು ಹೆಜ್ಜೆ ಮುಂದುವರಿದಿದೆ. ಆ ಮೂಲಕ ಸ್ಮಾರಕ ಶಿಲ್ಪದ ಬೆಳವಣಿಗೆಗೆ ಮತ್ತೊಂದು ಪ್ರೇರಣೆ ಸಿಕ್ಕಿತು ಎಂಬ ಅಭಿಪ್ರಾಯವುಂಟು. ಆಶ್ಚರ್ಯಕರ ರೀತಿಯಲ್ಲಿ ಬೆಳವಣಿಗೆಯನ್ನು ಪಡೆದು ವಿನ್ಯಾಸದಲ್ಲಿ ಹೊಸತನವನ್ನು ಪಡೆದುಕೊಂಡಿತು. ಸ್ಮಾರಕಶಿಲ್ಪಗಳ ನಿರ್ಮಾಣಕ್ಕೆ ಕಪ್ಪು ಬಳಪದ ಶಿಲೆಯನ್ನೇ[೩೨] ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಈ ಕಾಲದ ಸ್ಮಾರಕಶಿಲ್ಪಗಳ ಮೇಲೆ ಬಾದಾಮಿ ಚಾಲುಕ್ಯರ ಶಿಲ್ಪಶೈಲಿಯ ದಟ್ಟವಾದ ಪ್ರಭಾವ ಬೀರಿದೆಯೆಂದು ಅಭಿಪ್ರಾಯಿಸಲಾಗಿದೆ. ರಾಷ್ಟ್ರಕೂಟರ ಬಹುತೇಕ ವೀರಗಲ್ಲುಗಳಲ್ಲಿ ವೀರನು ಆಕಾಶದಲ್ಲಿ ಮೋಡಗಳ ನಡುವೆ ಸ್ವರ್ಗಾರೋಹಣ ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ಈ ರೀತಿಯ ಚಿತ್ರಣ ಬಾದಾಮಿಯ ಒಂದನೇ ಗುಹೆಯ ಮೇಲ್ಭಾವಣಿಯಲ್ಲಿ ಕಾಣುತ್ತೇವೆ. ಇಲ್ಲಿ ಗಂಧರ್ವ ದಂಪತಿಗಳು ಮೋಡದ ನಡುವೆ ಹಾರುತ್ತಿರುವ ಚಿತ್ರಣವಿದೆ. ಇದೇ ಚಿತ್ರಣದ ಪ್ರಭಾವವನ್ನು ರಾಷ್ಟ್ರಕೂಟ ಸ್ಮಾರಕಶಿಲ್ಪಗಳಲ್ಲಿ ಕೂಡಾ ಕಾಣುತ್ತೇವೆಯೆಂದು ಕೆಲವು ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ. ಇವರ ಕಾಲದ ಸ್ಮಾರಕಶಿಲ್ಪಗಳ ಮತ್ತೊಂದು ವೈಶಿಷ್ಟ್ಯವೆಂದರೆ ಗಾತ್ರದಲ್ಲಿ ಬೃಹದಾಕಾರವನ್ನು ಪಡೆದಿರುವುದು. ಅವು ಸುಮಾರು ೧೪ ಅಡಿ ಎತ್ತರ, ೪ ಅಡಿ ಅಗಲವಾಗಿಯೂ ಮತ್ತು ಒಂದೂವರೆ ಅಡಿ ದಪ್ಪವಾಗಿಯೂ ಇರುತ್ತವೆ. ಬೃಹತ್ ಗಾತ್ರದಲ್ಲಿದ್ದರೂ ಸಹ ಶಿಲ್ಪದ ವಿವರಗಳನ್ನು, ಅವು ವ್ಯಕ್ತಪಡಿಸುವ ಭಾವನೆಗಳನ್ನು ಶಿಲ್ಪಿಯೂ ಸಮರ್ಥವಾಗಿ ಕಂಡರಿಸಿದ್ದಾನೆಂದು ಹೇಳಬಹುದು.

ಹೋರಾಟದ ಹಂತದಲ್ಲಿ ವೀರ ಹಾಗೂ ಎದುರಾಳಿಯ ಜೊತೆಗೆ ಸೈನಿಕರ ಸಂಖ್ಯೆ ಹೆಚ್ಚಾಗಿರುತ್ತದೆ. ಸ್ವರ್ಗಾರೋಹಣದಲ್ಲಿ ಅಪ್ಸರೆಯರು ಮತ್ತು ವಾದ್ಯಕಾರರ ಸಂಖ್ಯೆಯೂ ಹೆಚ್ಚಾಗಿರುತ್ತದೆ. ವೀರನು ಅಪ್ಸರೆಯರ ಹೆಗಲ ಮೇಲೆ ಎರಡೂ ಕೈಗಳನ್ನು ಹಾಕಿಕೊಂಡು ಆಕಾಶದಲ್ಲಿ ಮೋಡಗಳ ನಡುವೆ ಸ್ವರ್ಗಾರೋಹಣ ಮಾಡುವ ದೃಶ್ಯ ಮುಂದಿನ ಕಾಲಘಟ್ಟದ ಸ್ಮಾರಕಶಿಲ್ಪಗಳಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ.[೩೩] ಅಲ್ಲದೇ ಆ ಕಾಲದಲ್ಲಿ ನಿರ್ಮಾಣವಾದ ಬಹುತೇಕ ಸ್ಮಾರಕಶಿಲ್ಪಗಳ ಮೇಲ್ಭಾಗದಲ್ಲಿ ಸ್ವರ್ಗದ ಚಿತ್ರಣವನ್ನು ದೇವಾಲಯದಂತೆ ರೂಪಿಸಲಾಗಿರುತ್ತದೆ. ಈ ದೃಶ್ಯವು ರಾಷ್ಟ್ರಕೂಟರೇ ನಿರ್ಮಿಸಿದ ಕೈಲಾಸನಾಥ ದೇವಾಲಯವನ್ನು ಹೋಲುತ್ತದೆ ಎಂಬ ಅಭಿಪ್ರಾಯಗಳನ್ನು ದಾಖಲಿಸಲಾಗಿದೆ.[೩೪] ರಾಷ್ಟ್ರಕೂಟ ಸ್ಮಾರಕಶಿಲ್ಪಗಳ ಮತ್ತೊಂದು ವಿಶೇಷತೆಯೆಂದರೆ ಅರಸೊತ್ತಿಗೆಯ ಲಾಂಛನವಾದ ನೇಗಿಲನ್ನು ಚಿತ್ರಿಸಿರುವುದು.

ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ರಾಷ್ಟ್ರಕೂಟರ ಸ್ಮಾರಕಶಿಲ್ಪಗಳು ವಿಶೇಷ ಸಂಖ್ಯೆಯಲ್ಲಿ ಕಂಡುಬಂದಿವೆ. ಬಹುತೇಕ ಶಿಲ್ಪಗಳಲ್ಲಿ ಹೋರಾಟದ ದೃಶ್ಯ, ಸಾವು ಪ್ರಾಪ್ತಿಯಾದ ವೀರನನ್ನು

ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರಣ ಮತ್ತು ಮಡಿದ ವೀರನು ಸ್ವರ್ಗಲೋಕದಲ್ಲಿ ತಂಗಿರುವ ದೃಶ್ಯಗಳನ್ನು ಸಾಮಾನ್ಯವಾಗಿ ಕಾಣುತ್ತೇವೆ. ಕೆಲವು ಸ್ಮಾರಕಶಿಲ್ಪಗಳ ಕೆಳಹಂತದಲ್ಲಿ ವೀರನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಕಿರೀಟ ಅಥವಾ ಯಜ್ಞೋಪವೀತ ಧರಿಸಿದ ವೀರನ ಕೈಗಳಲ್ಲಿ ಸಾಮಾನ್ಯವಾಗಿ ಕಡುಗತ್ತಿ, ಗುರಾಣಿ, ಕತ್ತಿ, ಭರ್ಚಿ, ಬಿಲ್ಲುಗಳನ್ನು ಹಿಡಿದಿರುವುದನ್ನು ಗಮನಿಸಬಹುದು. ಇದೇ ಹಂತದಲ್ಲಿ ಕಾಲ್ದಳ, ಅಶ್ವದಳಗಳಿರುವುದು ಸಾಮಾನ್ಯ. ಆದರೆ ಅಪರೂಪಕ್ಕೆ ಕೆಲವು ಸ್ಮಾರಕಗಳಲ್ಲಿ ಗಜದಳದ ಸೈನ್ಯಪಡೆಯನ್ನು ಕಾಣುತ್ತೇವೆ. ಕೆಲವೊಂದು ಸ್ಮಾರಕಶಿಲ್ಪಗಳಲ್ಲಿ ಹೋರಾಟದ ದೃಶ್ಯವನ್ನು ಎರಡು ಹಂತಗಳಲ್ಲಿ ಚಿತ್ರಿಸಲಾಗಿದೆ. ಹೊನ್ನಾಳಿ ತಾಲೂಕು ಸೊರಟೂರು ಗ್ರಾಮದ ಒಂದು ಸ್ಮಾರಕದಲ್ಲಿ ಇಬ್ಬರು ವೀರರು ಹೋರಾಡುವುದು, ಸ್ವರ್ಗಕ್ಕೆ ತೆರಳುವ ಹಾಗೂ ಸ್ವರ್ಗಲೋಕದಲ್ಲಿ ಇರುವುದನ್ನು ಒಂದೇ ಶಿಲ್ಪದಲ್ಲಿ ಪ್ರತ್ಯೇಕವಾಗಿಯೇ ಚಿತ್ರಿಸಿರುವುದು ಅಪರೂಪದ್ದೆನಿಸಿದೆ. ಎರಡನೆಯ ಹಂತದಲ್ಲಿ ಮಡಿದ ವೀರನನ್ನು ಅಪ್ಸರೆಯರು ಅವನ ಕೈಗಳನ್ನು ತಮ್ಮ ಹೆಗಲ ಮೇಲೆ ಹಾಕಿಕೊಂಡು ಆಕಾಶದಲ್ಲಿ ಹಾರುತ್ತಿರುವುದು ಹಲವು ಸ್ಮಾರಕಶಿಲ್ಪಗಳಲ್ಲಿ ಸಾಮಾನ್ಯವಾಗಿದೆ. ಈ ಹಂತದಲ್ಲಿ ಗಂಧರ್ವರು ಢಕ್ಕೆ, ಡಮರುಗ ಮುಂತಾದ ಸಂಗೀತ ವಾದ್ಯಗಳ ನೃತ್ಯದೊಂದಿಗೆ ವೀರನನ್ನು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವನ್ನು ಮನಮುಟ್ಟುವಂತೆ ಚಿತ್ರಿಸಲಾಗಿದೆ. ಅವರು ಆಕಾಶದಲ್ಲಿ ಹಾರುತ್ತಿರುವುದನ್ನು ಆಕಾಶದಲ್ಲಿ ಮೋಡಗಳು ಚಲಿಸುತ್ತಿರುವಂತೆ ತೋರಿಸಲಾಗಿದೆ. ಇಬ್ಬರು ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುವುದು ಸಾಮಾನ್ಯ. ಆದರೆ ಇಲ್ಲಿ ದೊರೆತಿರುವ ಕೆಲವೊಂದು ಸ್ಮಾರಕಗಳಲ್ಲಿ ಏಳು ಮಂದಿಗಿಂತ ಹೆಚ್ಚು ಅಪ್ಸರೆಯರು ವೀರನೊಂದಿಗೆ ಸ್ವರ್ಗಾರೋಹಣ ಮಾಡುವ ದೃಶ್ಯಗಳನ್ನು ಕಾಣುತ್ತೇವೆ. ಮೂರನೆಯ ಹಂತದಲ್ಲಿ ಮಡಿದ ,ವೀರನು ಸ್ವರ್ಗದಲ್ಲಿ ಆಸೀನನಾಗಿರುವುದು ಸಾಮಾನ್ಯವಾಗಿದೆ. ಅರೆಗಂಬಗಳಿಂದ ಕೂಡಿದ ದೇವಾಲಯದ ಮಾದರಿಯ ಮಂಟಪದೊಳಗೆ ವೀರನು ಸವ್ಯ ಲಲಿತಾಸನದಲ್ಲಿ ಕಮಲ ಹಿಡಿದು ವೇದಿಕೆ ಅಥವಾ ಸಿಂಹಾಸನದ ಮೇಲೆ ಕುಳಿತಿರುವ ದೃಶ್ಯ ಹಲವು ಶಿಲ್ಪಗಳಲ್ಲಿ ಸಾಮಾನ್ಯವಾಗಿ ಮೂಡಿಬಂದಿರುವುದನ್ನು ಗಮನಿಸಬಹುದು. ಅಪರೂಪವಾಗಿ ಕೆಲವು ಸ್ಮಾರಕಗಳಲ್ಲಿ ಆತನ ಒಂದು ಕೈಯನ್ನು ಆಶೀರ್ವಾದ ಭಂಗಿಯಲ್ಲಿ ತೋರಿಸಲಾಗಿದೆ. ವೀರನ ಎರಡು ಬದಿಗಳಲ್ಲಿ ಇಬ್ಬರು ಅಥವಾ ನಾಲ್ವರು ಅಪ್ಸರೆಯರು ಚಾಮರಗಳನ್ನು ಹಿಡಿದಿರುವುದನ್ನು ಚಿತ್ರಿಸಲಾಗಿದೆ. 'ಪಗೋಡ' ಮಾದರಿಯ ಶಿಖರ ಹಾಗೂ 'ಶಾಲಾ' ಮಾದರಿಯ ವಿಮಾನಗಳು ಈ ಹಂತದ ಮೇಲ್ಭಾಗದಲ್ಲಿ ಕಂಡುಬರುತ್ತವೆ.

ಗಂಗರ ಕಾಲದ ಸ್ಮಾರಕಶಿಲ್ಪಗಳ ರಚನೆಯಲ್ಲಿ ಒಂದು ನಿಶ್ಚಿತವಾದ ಕ್ರಮವಿಲ್ಲ. ಅಲ್ಲದೆ ಅವರು ಸ್ಮಾರಕಶಿಲ್ಪಗಳ ನಿರ್ಮಾಣಕ್ಕೆ ಬಳಸಿರುವ ಶಿಲೆಯೂ ಒರಟಾಗಿರುತ್ತದೆ ಹಾಗೂ ಆ ಶಿಲೆಗಳು ಇಂತಹದ್ದೇ ಆಕಾರದಲ್ಲಿರಬೇಕು ಎಂಬ ನಿಯಮಗಳನ್ನು ಪಾಲಿಸಿಲ್ಲ. ಅವರು ಸ್ಮಾರಕ ಶಿಲ್ಪಕ್ಕೆ ಒಂದು ಆಕಾರವನ್ನು ಕೊಡುವುದರ ಬದಲು ಕಲ್ಲಿನ ಮೂಲ ಆಕಾರಕ್ಕೆ ಹೊಂದುವ ಹಾಗೆ ಶಿಲ್ಪವನ್ನು ಬಿಡಿಸುವ ಪ್ರಯತ್ನ ಮಾಡಿದ್ದಾರೆ.[೩೫] ಗಂಗರು ಅಗಲವಾದ ಚಪ್ಪಡಿಕಲ್ಲಿನ

ಮೇಲೆ ಬಿಡಿಸಿರುವ ಶಿಲ್ಪಗಳು ಬಹುತೇಕ ಏಕವ್ಯಕ್ತಿ ಪ್ರಧಾನವಾಗಿವೆ. ಅಂದರೆ ವೀರನೊಬ್ಬ ಖಡ್ಗ ಅಥವಾ ಬಿಲ್ಲನ್ನು ಹಿಡಿದಿರುವಂತೆಯೋ, ತಲೆಯ ಕೂದಲನ್ನು ನೆತ್ತಿಯ ಮೇಲೆ ದುಂಡಾಗಿ ಗಂಟು ಹಾಕಿದ್ದು, ಆ ಗಂಟನ್ನು ಬಟ್ಟೆಯ ಪಟ್ಟಿಯಿಂದ ಬಿಗಿದುಕೊಂಡಿರುವಂತೆ ಬಿಡಿಸಿರುತ್ತಾರೆ. ಅಲ್ಲದೆ ವೀರನಿಗೆ ಮೊಣಕಾಲು, ನಡು, ಕತ್ತು, ತಲೆಯ ಬಳಿ ಬಾಣಗಳು ನಾಟಿರುವಂತೆ ಕಂಡರಿಸಲಾಗಿರುತ್ತದೆ.[೩೬] ಗಂಗರ ಸ್ಮಾರಕಗಳ ಮತ್ತೊಂದು ವಿಶೇಷತೆಯೆಂದರೆ ನಾಯಿ ಚಿತ್ರಣವಿರುವುದು. ಹುಲಿ ಅಥವಾ ಹಂದಿ ಬೇಟೆಗಳಲ್ಲಿ ವೀರನಿಗೆ ನೆರವಾಗಿರುವ ನಾಯಿ ಸ್ಮಾರಕಗಳು ವಿಶೇಷವಾಗಿ ಅವರ ಕಾಲದಲ್ಲಿ ಕಂಡುಬಂದಿವೆ.[೩೭] ಇವರ ಕಾಲದ ಆತ್ಮಬಲಿ ಸ್ಮಾರಕಗಳಲ್ಲಿ ವೀರನೊಬ್ಬನನ್ನೇ ಚಿತ್ರಿಸಲಾಗಿರುತ್ತದೆ.[೩೮] ಬೇರೆ ಯಾವುದೇ ಚಿತ್ರಣಕ್ಕೆ ಆಸ್ಪದ ನೀಡಿರುವುದಿಲ್ಲ. ಬಾದಾಮಿ ಚಾಲುಕ್ಯ, ರಾಷ್ಟ್ರಕೂಟರ ಸ್ಮಾರಕಶಿಲ್ಪಗಳ ಲಕ್ಷಣದ ಪ್ರಭಾವ ಗಂಗರ ಸ್ಮಾರಕಶಿಲ್ಪಗಳ ಮೇಲೆ ಆಗಿದೆಯೆಂಬ ಅಭಿಪ್ರಾಯ ವಿದ್ವಾಂಸರ ವಲಯದಲ್ಲಿದೆ. ವೀರನ ಹೋರಾಟದ ಚಿತ್ರಣದೊಂದಿಗೆ ಅವನು ಮರಣ ಹೊಂದಿರುವುದನ್ನು ಸೂಚಿಸುವ ಸ್ವರ್ಗದ ಕಲ್ಪನೆ ಅವರ ಕಾಲದ ಸ್ಮಾರಕಶಿಲ್ಪಗಳ ಒಂದು ಮೂಲೆಯಲ್ಲಿ ಬಿಡಿಸಲಾಗಿರುತ್ತದೆ.

ಗಂಗರು ಸ್ಮಾರಕಶಿಲ್ಪಗಳ ನಿರ್ಮಾಣ ಪರಂಪರೆಗೆ ನಾಂದಿ ಹಾಡಿದರೆಂಬ ಅಭಿಪ್ರಾಯಗಳನ್ನು ಕೆಲವು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಇದಕ್ಕೆ ಅವರು ನೀಡುವ ಕಾರಣಗಳು ಹೀಗಿವೆ. ಮೊದಲನೆಯ ಕಾರಣ ಗಂಗರು 'ಗಂಗವಾಡಿ ತೊಂಬತ್ತಾರು ಸಾವಿರ' ಪ್ರಾಂತ್ಯದ ಅಧಿಪತಿಗಳಾಗಿದ್ದರೆಂಬ ವಿಷಯ ಅವರ ಶಾಸನಗಳಿಂದಲೇ ತಿಳಿದುಬರುತ್ತದೆ. ಈ ಗಂಗವಾಡಿ ತೊಂಬತ್ತಾರು ಸಾವಿರ ಪ್ರದೇಶದಲ್ಲಿ ಮೊದಲ ಹಂತದ ಪ್ರಾಚೀನ ವೀರಗಲ್ಲುಗಳು ಕಂಡುಬರುತ್ತವೆಂದು ಹೇಳಲಾದ ಜಿಲ್ಲೆಗಳು ಅಂತರ್ಗತವಾಗಿದ್ದವು. ಮೊದಲ ಹಂತದ ವೀರಗಲ್ಲುಗಳು ದೊರೆಯುವ ಸ್ಥಳ ಗಂಗವಾಡಿ ತೊಂಬತ್ತಾರು ಸಾವಿರ ಪ್ರಾಂತ್ಯದ ಭಾಗವೇ ಆಗಿತ್ತೆಂಬ ಕಾರಣದ ಹಿನ್ನೆಲೆಯಲ್ಲಿ ಇಂಥ ಅಭಿಪ್ರಾಯಗಳನ್ನು ತಾಳಲಾಗಿದೆ.[೩೯] ಎರಡನೆಯ ಕಾರಣ ಹೀಗಿದೆ. ಗಂಗರ ಸಮಕಾಲೀನರಾಗಿ ಉದಯಿಸಿದ ಕದಂಬರ ಕಾಲದಲ್ಲಿನ ಹಲ್ಮಿಡಿ ಶಾಸನವು ಯುದ್ಧದ ಶಾಬ್ದಿಕ ವಿವರಗಳನ್ನು ನೀಡುತ್ತದೆಯೇ ವಿನಃ ಚಿತ್ರಿತ ವಿವರಗಳನ್ನು ನೀಡುವುದಿಲ್ಲ. ಬಾದಾಮಿ ಚಾಲುಕ್ಯರ ಕಾಲದಲ್ಲಿದ್ದಿರಬಹುದಾದ ಪ್ರಾಚೀನ ವೀರಗಲ್ಲುಗಳು ಬಹುಶಃ ಕಾಲನ ಸವೆತಕ್ಕೆ ಸಿಕ್ಕಿ ಹಾಳಾಗಿರಬಹುದು. ಇದಕ್ಕೆ ಕಾರಣ ಅವರು ಬಳಸಿದ ಶಿಲೆ; ಮುಖ್ಯವಾಗಿ ಮರಳುಗಲ್ಲು. ದೊರೆತಿರುವ ಚಾಲುಕ್ಯರ ಕಾಲದ ವೀರಗಲ್ಲು ಕ್ರಿ.ಶ. ೭-ನೇಯ ಶತಮಾನದ್ದು. ಹೀಗಾಗಿ ವೀರಗಲ್ಲು ನೆಡಿಸುವ ಪದ್ಧತಿ ಗಂಗರಿಂದ ಪ್ರಾರಂಭವಾಗಿರಬೇಕೆಂದು ಮತ್ತೊಬ್ಬ ವಿದ್ವಾಂಸರ ಅಭಿಪ್ರಾಯವಾಗಿದೆ.[೪೦] ಬಾದಾಮಿ ಚಾಲುಕ್ಯರ ಸ್ಮಾರಕಶಿಲ್ಪಗಳ ಸ್ಪಷ್ಟ ಆಧಾರಗಳು ದೊರೆಯುವವರೆಗೂ ಈ ವಿದ್ವಾಂಸರುಗಳ ಅಭಿಪ್ರಾಯಕ್ಕೆ ಜೀವಂತಿಕೆ ಇರುತ್ತದೆ ಎನ್ನಬಹುದು.

ಗಂಗರ ಸ್ಮಾರಕಶಿಲ್ಪಗಳಿಗೆ ಹೋಲಿಸಿದರೆ ರಾಷ್ಟ್ರಕೂಟರ ಸ್ಮಾರಕ ಶಿಲ್ಪವು ಮುಂದುವರಿದ ಶೈಲಿಯಾಗಿರುವುದು ಕಂಡುಬರುತ್ತದೆ. ಗಂಗರ ವೀರಗಲ್ಲುಗಳಲ್ಲಿ ಕುಶಲತೆಯನ್ನು ಕಾಣದೇ ಹೋದರೂ, ಶಿಲ್ಪಿಯು ತಾನು ತಿಳಿಯಬಯಸುವುದನ್ನು ಶಿಲ್ಪದ ಮೂಲಕ ಸರಳವಾಗಿ ನಿರೂಪಿಸುವಲ್ಲಿ ಯಶಸ್ವಿಯಾಗಿದ್ದಾನೆ. ತುಂಬಾ ವಿವರಗಳನ್ನು ನೀಡದೇ ಹೋದರೂ ಅಗತ್ಯವಾದ ಅಂಶಗಳನ್ನು ಸಾಂಕೇತಿಕವಾಗಿ ನಿರೂಪಿಸುವ ಕೌಶಲ್ಯವನ್ನು ತೋರಿದ್ದಾನೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಗಂಗರ ಕಾಲದವುಗಳೆಂದು ಊಹಿಸಬಹುದಾದ ಸ್ಮಾರಕ ಶಿಲ್ಪಗಳು ಚನ್ನಗಿರಿ ತಾಲೂಕಿನ ಮಾವಿನಕಟ್ಟೆ, ಬೊಮ್ಮನಹಳ್ಳಿ, ಕೆಂಚಿಗನಹಾಳ್, ದಾವಣಗೆರೆ ತಾಲೂಕಿನ ಮಾಯಕೊಂಡ, ಹರಪನಹಳ್ಳಿ ತಾಲೂಕಿನ ಯಡಿಹಳ್ಳಿ ಮತ್ತು ಜಗಳೂರು ತಾಲೂಕಿನ ಬಿಸ್ತವಳ್ಳಿ ಗ್ರಾಮಗಳಲ್ಲಿ ಕಂಡುಬರುತ್ತವೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಆರಂಭದ ಸ್ಮಾರಕಶಿಲ್ಪಗಳಿಗೆ ಬಿಳಿಯ ಬಳಪದ ಶಿಲೆಯನ್ನು ಉಪಯೋಗಿಸಿದ್ದಾರೆ. ಅವರ ಕಾಲದಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಕಪ್ಪು ಶಿಲೆಯ ಬಳಕೆ ಹೆಚ್ಚಾದಂತೆ ಸ್ಮಾರಕಶಿಲ್ಪಗಳ ನಿರ್ಮಾಣಕ್ಕೂ ಅದೇ ಶಿಲೆಯನ್ನು ಬಳಸಲಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಹಾಗಾಗಿ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಬಹುಸಂಖ್ಯೆಯಲ್ಲಿರುವ ವೀರಗಲ್ಲು, ಮಾಸ್ತಿಗಲ್ಲು, ನಿಸಿದಿಗಲ್ಲುಗಳು ಕಪ್ಪು ಶಿಲೆಯಲ್ಲಿಯೇ ನಿರ್ಮಾಣ ಮಾಡಲ್ಪಟ್ಟಿವೆ.[೪೧] ಕಪ್ಪು ಬಳಪದ ಶಿಲೆ ಸೂಕ್ಷ್ಮವಾದ ವಿವರಗಳನ್ನು ಬಿಡಿಸುವುದಕ್ಕೆ ಸಹಾಯಕವಾಗಿರುವುದರಿಂದ ಶಿಲ್ಪಗಳು ತಮ್ಮ ಕುಸುರಿ ಕಲೆಯ ಪ್ರದರ್ಶನಕ್ಕಾಗಿ ಆ ಶಿಲೆಯನ್ನು ಬಳಸಲು ಆರಂಭಿಸಿದರೆಂದು ತೋರುತ್ತದೆ.

ಕಲ್ಯಾಣದ ಚಾಲುಕ್ಯ ಹಾಗೂ ಕಲಚೂರಿಗಳ ಕಾಲದ ಸ್ಮಾರಕಶಿಲ್ಪಗಳು ಬಹುತೇಕವಾಗಿ ಒಂದೇ ರೀತಿಯಲ್ಲಿರುತ್ತವೆ. ಇವರ ಅವಧಿಯಲ್ಲಿ ಸ್ಮಾರಕ ನೆಡುವ ಪದ್ಧತಿ ಸರ್ವವ್ಯಾಪಿಯಾಗಿ ಜನಸಾಮಾನ್ಯರೂ ಶಿಲ್ಪಗಳನ್ನು ಹಾಕಿಸುವುದಕ್ಕೆ ಮುಂದಾದರು. ಸಹಜವಾಗಿ ಹೆಚ್ಚಿನ ಸಂಖ್ಯೆಯ ಸ್ಮಾರಕಶಿಲ್ಪಗಳು ಇವರ ಅವಧಿಯಲ್ಲಿ ಕಂಡುಬರುತ್ತವೆ. ಸಮಾಜದಲ್ಲಿದ್ದ ವಿವಿಧ ಪದ್ಧತಿಗಳು ಈ ಕಾಲದ ಸ್ಮಾರಕಗಳಲ್ಲಿ ಕಾಣಿಸಿಕೊಂಡಿವೆ. ಈ ಅವಧಿಯಲ್ಲಿ ಶೈವಧರ್ಮ ಪ್ರಬಲವಾಗಿರುವುದರಿಂದ ಆ ಧರ್ಮದ ಸಂಕೇತಗಳಾದ ನಂದಿ, ಶಿವಲಿಂಗಗಳು ಸಹಜವಾಗಿ ಸ್ಮಾರಕಶಿಲ್ಪಗಳ ಮೇಲ್ಭಾಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಂಡವು.[೪೨] ಸ್ಮಾರಕಶಿಲ್ಪಗಳಲ್ಲಿ ಪ್ರತಿ ಹಂತಹಂತಗಳಲ್ಲಿಯೂ ವಿಷಯ ನಿರೂಪಣಾ ಪದ್ಧತಿ ಬೆಳೆದು ಘಟನೆಯ ಚಿತ್ರಣಕ್ಕೆ ಇನ್ನೂ ಹೆಚ್ಚಿನ ನೈಜತೆಯನ್ನು ತರಲು ಆ ಕಾಲದ ಶಿಲ್ಪಿಗಳು ಪ್ರಯತ್ನಿಸಿದರೆಂದು ಅಧ್ಯಯನಕಾರರು ಅಭಿಪ್ರಾಯಿಸಿರುವುದುಂಟು. ಒಂದೊಂದು ಶಿಲ್ಪಕ್ಕೂ ಒಂದೊಂದು ಸೂತ್ರವನ್ನು ಅನುಸರಿಸಿದ್ದಾರೆ. ಮುಖ್ಯವಾಗಿ ತುರುಗೋಳ್ ಸ್ಮಾರಕಶಿಲ್ಪಗಳ ಹೋರಾಟದ ಹಂತದಲ್ಲಿ ವೀರನ ಹಿಂಭಾಗದಲ್ಲಿ ತುರುಗಳನ್ನು ಕಡ್ಡಾಯವಾಗಿ ಚಿತ್ರಿಸಿರುವುದು. ಇದರಿಂದ ಶಾಸನವಿರದಿದ್ದರೂ ಅದರ ಶಿಲ್ಪದ ಆಧಾರದಿಂದ ಅದನ್ನು ತುರುಗೋಳ್ ಸ್ಮಾರಕವೆಂದು ಗುರುತಿಸಲು ಸುಲಭವಾಗಿದೆ. ಈ ಕಾಲದ ಸ್ಮಾರಕಶಿಲ್ಪಗಳ

ಮತ್ತೊಂದು ವಿಶಿಷ್ಟ ಲಕ್ಷಣವೆಂದರೆ ಶಿಲ್ಪದಲ್ಲಿ ವೀರನೊಂದಿಗೆ ಅನ್ಯ ವಿವರಗಳಿಗೂ ಆದ್ಯತೆ ನೀಡಿರುವುದು. ಅಂದರೆ ಸ್ಮಾರಕಗಳಲ್ಲಿ ವೀರನಿಗೆ ನೀಡಿದಷ್ಟೇ ಪ್ರಾಧಾನ್ಯತೆಯನ್ನು ವೈರಿಗಳಿಗೂ ನೀಡಿದರು. ಸೈನಿಕರು, ಮಹಾಸತಿಯರನ್ನು ವೀರನಿಗೆ ಸರಿಸಮಾನವಾಗಿ ಚಿತ್ರಿಸುವ ಪರಿಪಾಟ ಆರಂಭವಾಯಿತೆಂಬುದು ತಜ್ಞರ ಅಭಿಪ್ರಾಯವಾಗಿದೆ. ಇವರ ಕಾಲದ ಸಿಡಿತಲೆ ಸ್ಮಾರಕದಲ್ಲಿಯೂ ವೀರನಿಗೆ ಮಾತ್ರವೇ ಮಹತ್ವ ನೀಡದೆ, ಅವನೊಂದಿಗೆ ತಲೆ ಕಡಿಯುವವ ಮತ್ತು ವಾದ್ಯಕಾರರ ಚಿತ್ರಣಗಳಿಗೂ ಅವಕಾಶ ನೀಡಲಾಗಿದೆ.[೪೩] ದಾವಣಗೆರೆ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಸ್ಮಾರಕಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುದನ್ನು ಗುರುತಿಸಲಾಗಿದೆ. ಚಾಲುಕ್ಯ, ಸೇವುಣ, ಹೊಯ್ಸಳ ಹಾಗೂ ಬೆಳಗುತ್ತಿ ಸಿಂಧರ ನಡುವಿನ ನಿರಂತರವಾದ ಘರ್ಷಣೆಗಳಿಗೆ ಈ ಪ್ರದೇಶವು ನಿರ್ಣಾಯಕ ಯುದ್ಧಭೂಮಿಯಾಗಿದ್ದರಿಂದ ಸಹಜವಾಗಿ ಚಾಲುಕ್ಯರಿಗೆ ಸಂಬಂಧಿಸಿದ ಹಲವು ಸ್ಮಾರಕ ಶಿಲ್ಪಗಳು ಈ ಪರಿಸರದಲ್ಲಿ ಕಂಡುಬರಲು ಪ್ರಮುಖ ಕಾರಣಗಳಾಗಿವೆಯೆಂದು ಅರ್ಥೈಸಬಹುದು. ಮುಂದಿನ ಅಧ್ಯಾಯಗಳಲ್ಲಿ ಅವುಗಳ ಬಗ್ಗೆ ದೀರ್ಘವಾಗಿ ವಿಶ್ಲೇಷಿಸಲಾಗಿದೆ.

ಕಲ್ಯಾಣ ಚಾಲುಕ್ಯರ ನಂತರ ಸ್ಮಾರಕಶಿಲ್ಪಗಳ ಬೆಳವಣಿಗೆಯೂ ಹೊಯ್ಸಳರ ಕಾಲದಲ್ಲಿಯೂ ವ್ಯವಸ್ಥಿತವಾಗಿಯೇ ಮುಂದುವರಿದಿದೆ. ಹೊಯ್ಸಳರು ಸ್ಮಾರಕಶಿಲ್ಪಗಳ ನಿರ್ಮಾಣಕ್ಕೆ ಬಿಳಿ ಮತ್ತು ಕಪ್ಪು ಬಳಪದ ಎರಡು ಮಾದರಿಯ ಶಿಲೆಯನ್ನು ಬಳಸಿದ್ದಾರೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಚಾಲುಕ್ಯ ಹಾಗೂ ಕಲಚೂರಿಗಳ ಕಾಲದಲ್ಲಿ ಬೆಳೆದ ಸ್ಮಾರಕಶಿಲ್ಪದ ಕಲೆಗಾರಿಕೆ ಹೊಯ್ಸಳ ಕಾಲಕ್ಕೆ ಇನ್ನೂ ಹೆಚ್ಚಿನ ಪ್ರಮಾಣದ ಸೂಕ್ಷ್ಮತೆಯ ಪರಾಕಾಷ್ಠೆಯನ್ನು ಮುಟ್ಟಿತು. ಅವರ ಕಾಲದ ದೇವಾಲಯಗಳಲ್ಲಿನ ಶಿಲ್ಪಗಳಂತೆಯೇ, ಸ್ಮಾರಕಶಿಲ್ಪಗಳೂ ಸಹ ಸೂಕ್ಷ್ಮ ಕೆತ್ತನೆಗಳಿಂದ ನಿರ್ಮಾಣವಾಗತೊಡಗಿದವು. ಉಡುಪು ಮತ್ತು ಆಭರಣಗಳು, ಕೇಶ ಶೃಂಗಾರ, ಭಾವ-ಭಂಗಿಗಳು ಶಿಲ್ಪದಲ್ಲಿ ಪ್ರಧಾನ ಸ್ಥಾನ ಪಡೆದವು. ಗಾಂಭೀರ್ಯತೆಗಿಂತಲೂ ಸೂಕ್ಷ್ಮ ಕಲೆಗಾರಿಕೆಗೆ ಹೆಚ್ಚಿನ ಮಹತ್ವ ನೀಡಲಾಯಿತು. ಹೊಯ್ಸಳರ ದೇವಾಲಯಗಳಲ್ಲಿ ಮಾತ್ರವಲ್ಲದೆ, ಅವರ ಕಾಲದ ಸ್ಮಾರಕಶಿಲ್ಪಗಳಲ್ಲಿಯೂ ರಾಜಲಾಂಛನವಾದ ಹುಲಿಯನ್ನು ಕೊಲ್ಲುತ್ತಿರುವ ಸಳನ ಚಿತ್ರವಿರುವ ಸ್ಮಾರಕಗಳೂ ಕಂಡುಬರುವುದಾಗಿ ವಿದ್ವಾಂಸರೊಬ್ಬರು ಅಭಿಪ್ರಾಯಿಸಿದ್ದಾರೆ.[೪೪] ಹೊಯ್ಸಳರ ಸ್ಮಾರಕಶಿಲ್ಪಗಳ ಮತ್ತೊಂದು ವಿಶೇಷವಾದ ಲಕ್ಷಣವೆಂದರೆ, ವೀರಗಲ್ಲುಗಳ ಅಲಂಕಾರಿಕ ಲಾಂಛನವಾಗಿ ಯಾಳಿಯ(ಸಿಂಹ ಮುಖ)ನ್ನು ವಿಶೇಷವಾಗಿ ಚಿತ್ರಿಸಲಾಗಿರುತ್ತದೆ.[೪೫] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕೇಂದ್ರಿಕೃತಗೊಂಡಿರುವ ಹೊನ್ನಾಳಿ ತಾಲೂಕಿನ ಸಾಸಿವೆಹಳ್ಳಿ, ಬೇಲಿಮಲ್ಲೂರು, ಅರಕೆರೆ, ಹನಗವಾಡಿ, ಚನ್ನಗಿರಿ ತಾಲೂಕಿನ ಬಿಲ್ಲಹಳ್ಳಿ, ಕಂಚಿಗನಹಳ್ಳಿ, ಹರಪನಹಳ್ಳಿ ತಾಲೂಕಿನ ಚಿಗಟೇರಿ ಹಾಗೂ ಹರಿಹರ ತಾಲೂಕಿನ ಹಿರೇಹಾಲಿವಾಣ ಮೊದಲಾದ ಗ್ರಾಮಗಳಲ್ಲಿ ಹೊಯ್ಸಳರ ಸ್ಮಾರಕಶಿಲ್ಪಗಳು ಕಂಡುಬರುವುದನ್ನು ಗುರುತಿಸಲಾಗಿದೆ.

ಹೊಯ್ಸಳರ ನಂತರ ಈ ಪ್ರದೇಶದಲ್ಲಿ ವ್ಯಾಪಾಕವಾಗಿ ಆಳ್ವಿಕೆ ಮಾಡಿದ ಬೆಳಗುತ್ತಿ ಸಿಂದರ ಕಾಲದಲ್ಲಿಯೂ ಕೂಡಾ ಸ್ಮಾರಕಶಿಲ್ಪದ ಬೆಳವಣಿಗೆ ಈ ಭಾಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಘಟಿಸಿತೆಂದು ಅಭಿಪ್ರಾಯಿಸಬಹುದು. ಕ್ರಿ.ಶ. ೧೨-೧೩ನೇ ಶತಮಾನಗಳ ಕಾಲ ಕರ್ನಾಟಕದ ಇತಿಹಾಸದಲ್ಲಿ ಒಂದು ರೀತಿಯ ಆಡಳಿತದ ಸಂಘರ್ಷದ ಕಾಲವಾಗಿತ್ತೆಂದು ಹೇಳಬಹುದು. ಬಲಾಢ್ಯ ಸಾಮ್ರಾಜ್ಯವನ್ನು ಕಟ್ಟಿ ಮೂರು ಶತಮಾನಗಳ ಕಾಲ ಆಳಿದ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯಕ್ಕೆ ಆಘಾತ ಒದಗಿದ ಕಾಲ ಅದಾಗಿತ್ತು. ಅಧಿಕಾರಕ್ಕಾಗಿ, ರಾಜ್ಯ ವಿಸ್ತರಣೆಗಾಗಿ ಸೇವುಣ-ಹೊಯ್ಸಳರ ನಡುವೆ ಚಾಲುಕ್ಯರ ಮಾಂಡಲಿಕರಾಗಿದ್ದ ಬೆಳಗುತ್ತಿಯ ಸಿಂದರು ನುಗ್ಗಾದರು.[೬೬] ಈ ಕಥೆಯನ್ನು ಹೇಳುವ ಹಲವಾರು ಸ್ಮಾರಕಶಿಲ್ಪಗಳು ಹೊನ್ನಾಳಿ ತಾಲೂಕಿನ ಬೆಳಗುತ್ತಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕಂಡುಬಂದಿರುವುದನ್ನು ಪರಿಶೀಲಿಸಲಾಗಿದೆ.

ಸಿಂದರ ಕಾಲದ ಸ್ಮಾರಕಶಿಲ್ಪಗಳ ಮೇಲೆ ಚಾಲುಕ್ಯ ಶಿಲ್ಪ ಲಕ್ಷಣಗಳ ದಟ್ಟವಾದ ಪ್ರಭಾವವನ್ನು ಕಾಣುತ್ತೇವೆ. ಸೂಕ್ಷ್ಮತೆಗೂ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿ ಘಟನೆಯ ಸಂಪೂರ್ಣ ಚಿತ್ರಣವನ್ನು ಸ್ಮಾರಕಶಿಲ್ಪಗಳಲ್ಲಿ ನಿರೂಪಿಸುವ ಪ್ರಯತ್ನ ಅವರ ಕಾಲದಲ್ಲಿ ನಡೆದಿದೆ. ವಿಶೇಷವಾಗಿ ಕಪ್ಪು ಮತ್ತು ಕೆಂಪು ಬಳಪದ ಶಿಲೆಯನ್ನು ಸ್ಮಾರಕಶಿಲ್ಪಗಳ ನಿರ್ಮಾಣಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಹೋರಾಟದ ಚಿತ್ರಣವನ್ನು ಬೃಹದಾಕಾರದ ಶಿಲೆಯಲ್ಲಿ ಐದರಿಂದ ಆರು ಹಂತಗಳಲ್ಲಿ ಕಂಡರಣೆ ಮಾಡಿರುವುದನ್ನು ಗುರುತಿಸಬಹುದು. ಉಡುಪು, ಆಭರಣ, ಕೇಶ ಶೃಂಗಾರ, ಭಾವ-ಭಂಗಿಗಳಿಗೆ ಪ್ರಾಧಾನ್ಯತೆ ನೀಡಿರುವುದು ಅವರ ಶಿಲ್ಪಗಳಲ್ಲಿ ಗೋಚರವಾಗುತ್ತದೆ. ಸಿಂದರ ಕಾಲದ ಹೆಚ್ಚಿನ ಸ್ಮಾರಕ ಶಿಲ್ಪಗಳು ತುರುಗೋಳ್ ಶಿಲ್ಪಗಳಾಗಿವೆ ಹಾಗೂ ಪ್ರತಿಯೊಂದು ಸ್ಮಾರಕವನ್ನು ಶಾಸನ ಉಲ್ಲೇಖದೊಂದಿಗೆ ನಿರೂಪಿಸಿರುವುದು ವಿಶೇಷವೆನಿಸಿದೆ. ಇವರ ಆಡಳಿತದ ಕೇಂದ್ರವಾದ ಬೆಳಗುತ್ತಿ ಮತ್ತು ಅದರ ಸುತ್ತಲಿನ ಗ್ರಾಮಗಳಲ್ಲಿ ಸಿಂದರ ಸ್ಮಾರಕ ಶಿಲ್ಪಗಳು ಕಂಡುಬಂದಿದ್ದು, ಅವುಗಳ ಕುರಿತು ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ವಿಜಯನಗರ ಅರಸರ ಕಾಲದಲ್ಲಿ ಹೊಯ್ಸಳರಿಂದ ಹೆಚ್ಚು ಪ್ರಾಧಾನ್ಯತೆ ಪಡೆದಿದ್ದ ಸೂಕ್ಷ್ಮ ಶೈಲಿಯು ಬದಲಾವಣೆಗೊಂಡಿತು. ಅವರ ಕಾಲದಲ್ಲಿ ವಾಸ್ತು ಮತ್ತು ಮೂರ್ತಿಶಿಲ್ಪಗಳಲ್ಲಿ ಕಾಣುವ ಹಠಾತ್ತನೆಯ ಬದಲಾವಣೆಯನ್ನು ಸ್ಮಾರಕಶಿಲ್ಪಗಳಲ್ಲಿಯೂ ಕಾಣಬಹುದಾಗಿದೆ. ಒರಟಾದ ಶಿಲೆಯ ಉಪಯೋಗ ಪ್ರಧಾನಗೊಂಡು, ಶಿಲ್ಪವನ್ನು ಸೂಕ್ಷ್ಮವಾಗಿ ಚಿತ್ರಿಸುವ ಗೋಜಿಗೆ ಹೋಗದೆ ಸ್ಥೂಲವಾಗಿ ಚಿತ್ರಿಸುವ ವಿಧಾನ ಬೆಳೆಯಿತು.[೬೭] ಹಿಂದಿನ ಸಂಪ್ರದಾಯದಂತೆ ಘಟನೆಯನ್ನು ಹಂತಹಂತವಾಗಿ ನಿರೂಪಿಸುವ ತಂತ್ರವನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿಲ್ಲ. ವಿಜಯನಗರ ಮತ್ತು ಗಂಗರ ಕಾಲದ ಸ್ಮಾರಕ ಶಿಲ್ಪಗಳು ಮೇಲುನೋಟಕ್ಕೆ ಒಂದೇ ರೀತಿ ಕಂಡುಬರುತ್ತವೆ. ಅವುಗಳಿಗಿರುವ ಮುಖ್ಯ ವ್ಯತ್ಯಾಸವೆಂದರೆ ವಿಜಯನಗರದ ಸ್ಮಾರಕಗಳಲ್ಲಿ ವೀರನನ್ನು ಆಲೀಢಾ ಭಂಗಿಯಲ್ಲಿ ಬಿಡಿಸಲಾಗಿರುವುದಿಲ್ಲ. ಸ್ಮಾರಕಗಳು ಗಿಡ್ಡವಾಗಿರುತ್ತವೆ ಮತ್ತು ಮೇಲ್ಭಾಗದಲ್ಲಿ ಧಾರ್ಮಿಕ

ಸಂಕೇತಗಳಾದ ಸೂರ್ಯ, ಚಂದ್ರ, ಶಿವಲಿಂಗ, ನಂದಿ, ಶಂಖ, ಚಕ್ರ, ಪದ್ಮಗಳನ್ನು ಹೊಂದಿರುತ್ತವೆ. ಮತ್ತೊಂದು ಸೂಕ್ಷ್ಮವಾದ ವ್ಯತ್ಯಾಸವೆಂದರೆ ವೀರನ ಉಡುಪುಗಳಲ್ಲಿ ಗಂಗರ ಕಾಲದ ಸ್ಮಾರಕಶಿಲ್ಪಗಳಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುವ ಬಾಕು ಆಯುಧ ವಿಜಯನಗರ ಸ್ಮಾರಕಶಿಲ್ಪಗಳಲ್ಲಿ ಕಂಡುಬರುವುದಿಲ್ಲ. ಬದಲಾಗಿ ವೀರನ ಸೊಂಟದಲ್ಲಿ ಕಿರುಗತ್ತಿ ಇರುತ್ತದೆ ಹಾಗೂ ಒಂದೇ ಶಿಲ್ಪ ಇಬ್ಬರು ಅಥವಾ ಮೂವರ ಸ್ಮಾರಕವಾಗಿರುವುದುಂಟು.[೪೮]

ವೀರನೊಂದಿಗೆ ಆತನ ಹೆಂಡತಿಯು ಸಹಗಮನಗೊಂಡಿದ್ದರೆ ಆ ವಿವರಗಳಿಗೂ ಸ್ಮಾರಕದಲ್ಲಿ ಅವಕಾಶ ಮಾಡಿಕೊಡಲಾಗಿದೆ. ವೀರನ ಎಡಭಾಗಕ್ಕೆ ತನ್ನ ಕೈಯೆತ್ತಿ ಮಹಿಳೆ ನಿಂತಿರುತ್ತಾಳೆ. ಕೆಲವು ಸ್ಮಾರಕಗಳಲ್ಲಿ ವೀರ ಮತ್ತು ಆತನ ಸತಿ ಇಬ್ಬರೂ ಕೈ ಜೋಡಿಸಿ ನಿಂತಿರುತ್ತಾರೆ. ವಿಜಯನಗರ ಕಾಲದ ಬಹುಪಾಲು ಸ್ಮಾರಕಗಳ ಮೇಲೆ ಅಂದರೆ ಶಿಲ್ಪದ ನಡುವೆ ಎರಡು ಕಡೆ ಎರಡು ರಂಧ್ರಗಳನ್ನು ಮಾಡಿರುವುದು ಕಂಡುಬರುವುದೆಂದೂ ಅದಕ್ಕೆ ಕಾರಣವು ಕೂಡಾ ಅಸ್ಪಷ್ಟವೆಂದು ವಿದ್ವಾಂಸರಾದ ಆರ್. ಶೇಷಶಾಸ್ತ್ರಿ ಅವರು ಅಭಿಪ್ರಾಯಪಟ್ಟಿದ್ದಾರೆ.[೪೯] ಆದರೆ ಇಂಥ ಕಾರಣಗಳಿಗೆ ಪ್ರಾಯಶಃ ಬೃಹದಾಕಾರದ ಹಾಗೂ ಭಾರವಾದ ಸ್ಮಾರಕಶಿಲ್ಪಗಳನ್ನು ಎತ್ತಿ ಸಾಗಿಸಲು ಅನುಕೂಲಕರವಾಗಿರುವುದಲ್ಲದೆ ಹೂ ಮಾಲೆಯನ್ನು ಹಾಕಲು ಮಾಡಿರಬಹುದೆಂದು ಮತ್ತೊಬ್ಬ ವಿದ್ವಾಂಸರು ಅಭಿಪ್ರಾಯಿಸಿದ್ದಾರೆ.[೫೦] ಈ ವಿದ್ವಾಂಸರ ಅಭಿಪ್ರಾಯವೇ ಸರಿಯೆಂದು ತೋರುತ್ತದೆ. ವಿಜಯನಗರ ಆಡಳಿತದ ಅಂತಿಮ ಕಾಲ ಘಟ್ಟದಲ್ಲಿ ಕೆಲವು ಕಡೆಗಳಲ್ಲಿ ಬಂದೂಕು ಹಿಡಿದ ವೀರರ ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ವಿಜಯನಗರೋತ್ತರ ಕಾಲದ ಹಲವು ಸ್ಮಾರಕಶಿಲ್ಪಗಳ ಮೇಲ್ಭಾಗದಲ್ಲಿ ಸಿಂಹಲಲಾಟವನ್ನು ಬಿಡಿಸುವ ಸಂಪ್ರದಾಯ ಕಂಡುಬರುತ್ತದೆ. ದಾವಣಗೆರೆ ಜಿಲ್ಲೆಯ ಬಹುತೇಕ ಗ್ರಾಮಗಳಲ್ಲಿ ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಅಂಥ ಶಿಲ್ಪಗಳ ಕುರಿತು ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

### ೩.೩. ಸ್ಮಾರಕ ಶಿಲ್ಪಗಳ ನಿರ್ಮಾತೃಗಳು

ವೀರರ ನೆನಪಿಗೆ ಸ್ಮಾರಕಶಿಲ್ಪಗಳನ್ನು ನಿರ್ಮಿಸಿದವರಲ್ಲಿ ಹೆಚ್ಚಿನ ಪಾಲು ವೀರನ ಕುಟುಂಬದವರು ಮತ್ತು ಸಂಬಂಧಿಕರೆಂದು ತೋರುತ್ತದೆ. ಅಲ್ಲದೇ ವೀರರ ಪತ್ನಿಯರು, ಮಕ್ಕಳು, ಸೋದರ-ಸೋದರಿಯರು, ತಂದೆ-ತಾಯಿ ಹಾಗೂ ಇತರೆ ಸಂಬಂಧಿಕರು ಕೂಡಾ ಇಂಥ ಕಾರ್ಯಗಳಲ್ಲಿ ಭಾಗಿಯಾಗಿರುವ ನಿದರ್ಶನಗಳಿವೆಯೆಂಬ ವಿವರಗಳು ವ್ಯಕ್ತವಾಗಿವೆ.[೫೧] ಕನ್ನಡ ನಾಡಿನಲ್ಲಿ ಪ್ರಾಚೀನ ಕಾಲದಿಂದ ವಿಜಯನಗರೋತ್ತರ ಅವಧಿಯವರೆಗಿನ ಕಾಲದಲ್ಲಿ ನಿರ್ಮಾಣಗೊಂಡಿರುವ ಅಥವಾ ಕಂಡುಬಂದ ಸ್ಮಾರಕಶಿಲ್ಪಗಳಲ್ಲಿನ ಪಾಠವು ಸತ್ತ ವ್ಯಕ್ತಿಗೂ ಮತ್ತು ಸ್ಮಾರಕವನ್ನು ನೆಟ್ಟಿರುವ ವ್ಯಕ್ತಿಗಳಿಗೂ ಇದ್ದ ಸಂಬಂಧಗಳನ್ನೇ ಹೆಚ್ಚಾಗಿ ತಿಳಿಯಪಡಿಸಿವೆಯೆಂದು ಅಭಿಪ್ರಾಯಿಸಿದರೆ ತಪ್ಪಾಗಲಾರದು. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಈ ಪ್ರದೇಶದಲ್ಲಿ ಕಂಡುಬಂದಿರುವ ಸ್ಮಾರಕಶಿಲ್ಪಗಳೂ ಕೂಡಾ ಈ ರೀತಿಯ

ಮಾಹಿತಿಗಳನ್ನೇ ನೀಡುತ್ತವೆ. ಅಂಥ ವಿವರಗಳನ್ನೆಲ್ಲ ಮುಂದಿನ ಅಧ್ಯಾಯಗಳ ವಿವರಗಳಲ್ಲಿ ವಿಶ್ಲೇಷಿಸಿ ಅರ್ಥೈಸುವ ಪ್ರಯತ್ನ ಮಾಡಲಾಗಿದೆ.

ಯುದ್ಧದಲ್ಲಿ ಮಡಿದ ತನ್ನ ತಂದೆಗೆ ಸ್ಮಾರಕಶಿಲ್ಪವನ್ನು ಆತನ ಮಕ್ಕಳು ಹಾಕಿಸಿರುವ ನಿದರ್ಶನಗಳು ದೊರೆತಿವೆ. ಹಿಂದೂ ಅಂತ್ಯ ಸಂಸ್ಕಾರ ವಿಧಿಗಳನ್ನು ಪರಿಶೀಲನೆ ಮಾಡಿದಾಗ, ಸತ್ತ ಪ್ರತಿ ವ್ಯಕ್ತಿಗೆ ತುಂಬ ಹತ್ತಿರದ ಸಂಬಂಧಿಯಾದ ಆತನ ಮಗನು ಕರ್ಮಗಳನ್ನು ಮಾಡುತ್ತಾನೆ. ಅಂಥ ರೂಢಿ ಸಂಪ್ರದಾಯಗಳು ಇಂದಿಗೂ ಉಳಿದುಕೊಂಡು ಬಂದಿರುವುದನ್ನು ಗಮನಿಸಬಹುದು. ಮಗನಾದವನು ತನ್ನ ತಂದೆಗೆ ಅಂತ್ಯಕ್ರಿಯೆಗಳನ್ನು ಸಾಂಗವಾಗಿ ಮಾಡುವುದು ಮಗನ ಕರ್ತವ್ಯವೆಂಬ ನಂಬಿಕೆ ಉಳಿದುಕೊಂಡು ಬಂದಿರುವುದು. ಇಂಥ ಭಾವನಾತ್ಮಕ ವಿವರಗಳನ್ನು ಸ್ಮಾರಕ ಶಿಲ್ಪಗಳ ಪಾಠದಲ್ಲಿಯೂ ದಾಖಲಿಸಲಾಗಿದೆ. ಉದಾಹರಣೆಗಾಗಿ ಹೇಳುವುದಾದರೆ ಚೀಲಯ್ಯ ಎಂಬುವನು ತುರುಕಾಳಗದಲ್ಲಿ ಮಡಿದಾಗ 'ಸುಪುತ್ರ ಕುಲದೀಪಕನು ಗೋತ್ರಚಿನ್ತಾಮಣಿ'ಯೂ ಆದ ಮತ್ತಲದಾಸಯ್ಯನು ತನ್ನ ತಂದೆಗೆ ಸ್ಮಾರಕಶಿಲ್ಪವನ್ನು ನಿಲ್ಲಿಸುತ್ತಾನೆ.[೫೨] ಚೀಲಯ್ಯ ತುರುಗಾಳಗದಲ್ಲಿ ಸತ್ತಾಗ, 'ಸುಪುತ್ರ ಕುಲದೀಪಕನು ಗೋತ್ರಚಿಂನ್ತಾಣಿಯುಮಷ್ಟೆ' ಬೀರಯನು ತಂದೆಗಾಗಿ ಸ್ಮಾರಕ ನಿಲ್ಲಿಸಿದ್ದಾನೆ.[೫೩] ಪುಣೋಜಣ ಎಂಬುವನು ಕಾಳಗವೊಂದರಲ್ಲಿ ಮಡಿದಾಗ ಅವನ ಮಗ ಶಿವಕುಮಾರ ಚಿಕ್ಕೇಶನು ಸ್ಮಾರಕ ನಿರ್ಮಿಸುತ್ತಾನೆ.[೫೪] ಭೂಮಾದಶೆಟ್ಟಿ ಮತ್ತು ಆತನ ಮಗ ನಾದಿಯಣ್ಣ ಹೋರಾಟದಲ್ಲಿ ಸತ್ತಾಗ, ಭೂಮಾದಶೆಟ್ಟಿಯ ಮಕ್ಕಳಾದ ಬರ್ಮಯ್ಯ ಮತ್ತು ನಾಗಯ್ಯ ಸ್ಮಾರಕವನ್ನು ನಿರ್ಮಿಸಿದ್ದಾರೆ.[೫೫]

ಹೋರಾಟದಲ್ಲಿ ಮಡಿದ ತಮ್ಮ ಮಕ್ಕಳಿಗೆ ತಂದೆ ಮತ್ತು ತಾಯಿಯರು ಸ್ಮಾರಕಗಳನ್ನು ಹಾಕಿಸಿರುವ ನಿದರ್ಶನಗಳೂ ಕಂಡುಬರುತ್ತವೆ. ತನ್ನ ಮಗನಾದ ಚೆನ್ನಪ್ಪನೆಂಬುವನು ಯುದ್ಧದಲ್ಲಿ ಸತ್ತಾಗ ಆತನ ತಂದೆಯು, 'ತಂನ್ನ ಮಗ ಚೆಂನಪ್ಪನ ಹೆಸರಿನಲ್ಲಿ ವೀರಸ್ತಂಭ'ವನ್ನು ನಿಲ್ಲಿಸುತ್ತಾನೆ.[೫೬] ರಾಣಿಗಮಲ್ಲನು ಹೋರಾಟವೊಂದರಲ್ಲಿ ಮಡಿದಾಗ ಅವರಬ್ಬೆ(ತಾಯಿ) ಸ್ಮಾರಕ ನೆಟ್ಟಿರುವುದು ತಿಳಿಯುತ್ತದೆ.[೫೭] ಸತ್ತ ವ್ಯಕ್ತಿಗೆ ಅಂತ್ಯಸಂಸ್ಕಾರಗಳನ್ನು ಮಾಡುವಲ್ಲಿ ಸತ್ತ ವ್ಯಕ್ತಿ ತಮ್ಮನಿಗೂ ಅಧಿಕಾರವಿದೆ. ತನ್ನ ಚಿಕ್ಕಪ್ಪ ಮತ್ತು ಚಿಕ್ಕಮ್ಮನವರು ಸತ್ತಾಗ 'ಓತನದ ಹರಿಯಗವುಡನ ತಂಮ ಬಯಚಗಉಡನ ಮಗ ಕೇತಗಉಡ ಕಲ್ಲನೆತ್ತಿಸಿ ಪ್ರತಿಷ್ಠೆ' ಮಾಡಿದ ವಿಷಯ ವೀರಗಲ್ಲೊಂದರ ಪಾಠದಿಂದ ತಿಳಿಯುತ್ತದೆ.[೫೮] ಬಂಮ್ಮಯ ಎಂಬುವನು ಯುದ್ಧದಲ್ಲಿ ಮಡಿದಾಗ 'ತಂಮ ಎರೆಯಮನು ಬೀರಗಲ ನಿಲಿಸಿ ಪ್ರತಿಪಾಲಿಸಿದ'ನೆಂದು ಸ್ಮಾರಕವೊಂದು ಉಲ್ಲೇಖಿಸುತ್ತದೆ.[೫೯] ಬಟರಿಜ ಎಂಬುವನು ಹೋರಾಟದಲ್ಲಿ ಸತ್ತಾಗ ಆತನ 'ತಂಮ ಕಲ್ಲಿಯಮಿಟಗ ಅಕ್ಕಸಾಲಿಸಂಕೋಜ ನಿಲಿಸಿದ' ಎಂಬ ವಿಷಯ ಗೊತ್ತಾಗುತ್ತದೆ.[೬೦]

ಹೋರಾಟದಲ್ಲಿ ಮಡಿದ ವೀರರಿಗೆ ಅವನ ಸಂಬಂಧಿಗಳು ಸ್ಮಾರಕವನ್ನು ನೆಟ್ಟಿರುವ ಉದಾಹರಣೆಗಳಿವೆ. ಕರಿಯ ತೈಲನ ಭಾವ ಕರಿಯಚೌಡನು ಮರಣ ಹೊಂದಿದಾಗ ಆತನ

'ನಂಟ(ಸಂಬಂಧಿ) ಸಾತೆಯನಾಯಕ ಬೀರಕಲ್ಲ ನಿಲ್ಲಿಸಿದರಂ' ಎನ್ನುವ ವಿಷಯ ಸ್ಮಾರಕ ಶಿಲ್ಪದ ಪಾಠದಿಂದ ತಿಳಿದುಬರುತ್ತದೆ.[೬೧] ರಾಜ್ಯ ಅಥವಾ ಸ್ಥಳೀಯ ಸರ್ಕಾರಗಳು ಅಥವಾ ಸ್ಥಳೀಯ ಅಧಿಕಾರಿಗಳು ಸ್ಮಾರಕಶಿಲ್ಪಗಳನ್ನು ಸ್ಥಾಪಿಸುವಲ್ಲಿ ನೇರವಾಗಿ ಪಾತ್ರ ವಹಿಸಿರುವುದು ಅಪರೂಪವಾಗಿದೆ. ಮಹಾಮಂಡಳೇಶ್ವರ ತೈಲಪದೇವನು ಮರಣಿಸಿದಾಗ ಬೊಪ್ಪಣನು ವೇಳೇವಾಳಿಯಾಗಿ ಪ್ರಾಣತ್ಯಾಗ ಮಾಡಿದನು. ಆಗ ವಾಮದೇವ ಪಂಡಿತರು ಮತ್ತು ಸಮಸ್ತ ಗೌಡರು(ಊರಿನವರು) ಸೇರಿ ಬೊಪ್ಪಣನ ನೆನಪಿಗಾಗಿ ಸ್ಮಾರಕಶಿಲ್ಪವನ್ನು ನೆಟ್ಟರೆಂದು ಶಾಸನ ಪಾಠವೊಂದರಿಂದ ತಿಳಿಯುತ್ತದೆ.[೬೨] ಓಸನದ ಸೂಳೆಯ ಕಾಳೆಯ ಮಕ್ಕಳಾದ ಹಡವಳ ಬೆನಮಯ, ಚಂಡಮಯ, ಕರಿಯ ಮತ್ತು ಬಾಳ ಎನ್ನುವರು ಹೋರಾಟವೊಂದರಲ್ಲಿ ಮಡಿದಾಗ ಪ್ರಭಾವ ಸಂವತ್ಸರ ಮಾಘ ಬಹುಳ-೫ ಸೋಮವಾರದಂದು ಅವರ ನೆನಪಿಗಾಗಿ ಸ್ಮಾರಕ ಶಿಲ್ಪವನ್ನು ನಿರ್ಮಿಸಲಾಗಿದೆ.[೬೩] ಈ ಕಾರ್ಯದಲ್ಲಿ ಸಮಸ್ತ ವೂರೊಡೆಯರು ಭಾಗವಹಿಸಿದರೆಂದು ತೋರುತ್ತದೆ. ನಾಗಯನಾಯ್ಕ ಎಂಬುವನು ತುರುಗಾಳಗದಲ್ಲಿ ಮಡಿದಾಗ ಆತನ ವೀರತನಕ್ಕೆ ಮೆಚ್ಚಿ ನೆಲ್ಕುದುರೆಯ ಸಮಸ್ತ ವೂರೊಡೆಯರು ಜೆಯ ದೇವದಂಣಾಯಕ ಸಮಸ್ತ ಪ್ರಜೆಗಳು ಕಲ್ಲನೆಟ್ಟರೆಂದು ಶಾಸನವೊಂದು ಉಲ್ಲೇಖಿಸುತ್ತದೆ.[೬೪]

## ೩.೪. ಸ್ಮಾರಕ ಶಿಲ್ಪಗಳಲ್ಲಿ ಸ್ವರ್ಗದ ಚಿತ್ರಣ

### ೩.೪.೧. ವೀರಸ್ವರ್ಗಕ್ಕೆ ಪ್ರಯಾಣ ಮತ್ತು ಸ್ವರ್ಗದ ಕಲ್ಪನೆ

'ಸ್ವರ್ಗ' ಎಂದರೆ ದೇವತೆಗಳು, ಪುಣ್ಯವಂತರು ವಾಸ ಮಾಡುವ ಲೋಕವೆನ್ನಲಾಗುತ್ತದೆ. ವೇದಗಳ ಕಾಲದಿಂದಲೂ ಸ್ವರ್ಗದ ಕಲ್ಪನೆ ಅಸ್ತಿತ್ವದಲ್ಲಿದೆ.[೬೫] 'ವೀರಸ್ವರ್ಗ' ಎಂದರೆ ವೀರರು ಅವರ ತ್ಯಾಗಕ್ಕೆ ಪ್ರತಿಯಾಗಿ ಪಡೆಯುವ ಪ್ರತಿಫಲವೆಂದು ಬಿಂಬಿಸಲಾಗಿದೆ. ಈ ವೀರಸ್ವರ್ಗ ಎಂಬುದು ಕ್ಷತ್ರಿಯವರ್ಗವು ಸಮಾಜದಲ್ಲಿ ಪ್ರಬಲವಾದಾಗ ರೂಪುಗೊಂಡ ಕಲ್ಪನೆ ಎನ್ನಲಾಗಿದೆ. ರಾಮಾಯಣದ ಕಾಲಕ್ಕೆ 'ವೀರಸ್ವರ್ಗ' ಎಂಬ ಕಲ್ಪನೆ ಇದ್ದಂತೆ ತೋರುವುದಿಲ್ಲ. ಯುದ್ಧಕ್ಕೆ ಬಂದ ಇಂದ್ರಜೀತುವನ್ನು ಕಂಡು ವಿಭೀಷಣನು 'ಪುರುಷ ಶ್ರೇಷ್ಠನಾದ ಲಕ್ಷ್ಮಣನೊಡನೆ ಈ ಯುದ್ಧ ಮಾಡು, ಸತ್ತು ಯಮಲೋಕವನ್ನು ಸೇರಿ ಅಲ್ಲಿ ನಿನ್ನ ಹೋಮಕಾರ್ಯವನ್ನು ಮುಗಿಸಬಹುದು' ಎನ್ನುತ್ತಾನೆ. ಲಕ್ಷ್ಮಣನಿಂದ ಹತನಾದ ಇಂಜ್ರಜಿತುವಿನ ಸಾವನ್ನು ಕುರಿತು 'ಇಂದ್ರಜಿತು ತನ್ನ ಕೂರಂಬುಗಳಿಂದ ಲಕ್ಷ್ಮಣನನ್ನು ಸಾಕು ಬೇಕೆನಿಸುವಂತೆ, ಪೀಡಿಸಿ ಕಡೆಯಲ್ಲಿ ವೀರಯೋಗ್ಯವಾದ ಉತ್ತಮ ಲೋಕವನ್ನು ಸೇರಿಕೊಂಡ' ಎಂದು ಮಾತ್ರ ಉಲ್ಲೇಖ ಕಂಡುಬರುತ್ತದೆ.[೬೬] 'ಹತೋವಾ ಪ್ರಾಪ್ತಸಿ ಸ್ವರ್ಗಂ, ಜಿತ್ವಾವಾ ಭೋಕ್ಷಸೇ ಮಹೀಮ್' ಎಂದು ಕೃಷ್ಣನು ಅರ್ಜುನನಿಗೆ ಹೇಳುವ ಮಾತು ಮಹಾಭಾರತದಲ್ಲಿ ಬರುತ್ತದೆ.[೬೭] ಇದರರ್ಥ ಯೋಧನ ಉನ್ನತ ಕರ್ತವ್ಯ ಮತ್ತು ಇಚ್ಛೆಯು ಯುದ್ಧದಲ್ಲಿ ಮರಣಿಸುವುದು, ಇದರಿಂದ ಸ್ವರ್ಗದಲ್ಲಿ ಆತನಿಗೆ ಸ್ಥಾನವು ದೊರಕುತ್ತದೆ ಎಂಬುದಾಗಿದೆ. ಅಂದರೆ ವೀರನಿಗೆ ತನ್ನ ಹೋರಾಟಕ್ಕೆ ಪ್ರತಿಯಾಗಿ ದೊರಕುವ ಸ್ವರ್ಗದ ಕಲ್ಪನೆಯನ್ನು ಮಹಾಕಾವ್ಯಗಳು ಈ ರೀತಿ ವರ್ಣಿಸಿವೆ.

ಕೌಟಿಲ್ಯನು ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ ಪುರಾಣದ ಶ್ಲೋಕವೊಂದನ್ನು ಉಲ್ಲೇಖಿಸಿ ವೀರಸ್ವರ್ಗದ ಕಲ್ಪನೆಯನ್ನು ಈ ರೀತಿ ಪ್ರಸ್ತಾಪಿಸುತ್ತಾನೆ. 'ಸ್ವರ್ಗಾಪೇಕ್ಷೆಯುಳ್ಳ ಬ್ರಾಹ್ಮಣರು ಅದನ್ನು ಹೇಗೆ ತಮ್ಮ ಇಷ್ಟಾರ್ಥಗಳನ್ನು ಅನೇಕ ಯಾಗಾನುಷ್ಠಾನದಿಂದಲೂ, ತಪಸ್ಸಿನಿಂದಲೂ, ದಾನಗಳಿಂದಲೂ ಸಂಪಾದಿಸುತ್ತಾರೋ, ಅವುಗಳನ್ನು ಕ್ಷಣಮಾತ್ರದಲ್ಲಿ ಧರ್ಮಯುದ್ಧದಲ್ಲಿ ಪ್ರಾಣತ್ಯಾಗ ಮಾಡುವವರು ಹೊಂದುತ್ತಾರೆ. ಇದರಿಂದ ಕ್ರತು, ತಪಸು, ದಾನ ಶತದಿಂದ ಪಡೆಯುವ ಫಲಕ್ಕಿಂತಲೂ ಯುದ್ಧದಲ್ಲಿ ಹತರಾದವರು ಹೊಂದುವ ಫಲವು ಶ್ರೇಷ್ಠವಾದುದು.[೧೮] 'ಹೇಡಿಗಳಾಗದೆ, ಯುದ್ಧದಲ್ಲಿ ಹೋರಾಡಿ ಮೃತರಾದವರು, ಯಾಗಾನುಷ್ಠಾನದಿಂದ ಸ್ವರ್ಗ ಪಡೆದವರಂತೆ ತಾವು ಪಡೆಯುತ್ತಾರೆಂದು ವಿಜ್ಞಾನೇಶ್ವರನು ತನ್ನ 'ಮಿತಾಕ್ಷರ'ದಲ್ಲಿ ಉಲ್ಲೇಖಿಸುತ್ತಾನೆ.[೧೯] ಹ್ಯೂಯೆನ್‌ತ್ಸಾಂಗ್ ತನ್ನ ಪ್ರವಾಸಕಥನದಲ್ಲಿ 'ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾಃ ಕ್ಷಣ ವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇರಣೆ' ಎಂಬ ಶ್ಲೋಕವನ್ನು ಉಲ್ಲೇಖಿಸುತ್ತಾನೆ.[೨೦] ಈ ಶ್ಲೋಕವು ಮಧ್ಯಕಾಲೀನ ಬಹುತೇಕ ಸ್ಮಾರಕಶಿಲ್ಪಗಳಲ್ಲಿ ಸಾಮಾನ್ಯವಾಗಿ ಪ್ರಸ್ತಾಪಗೊಂಡಿರುತ್ತದೆ.[೨೧] 'ಜಿತೇನ ಲಭ್ಯತೇ ಲಕ್ಷ್ಮೀ' ಎಂದು ಆರಂಭವಾಗುವ ಶ್ಲೋಕ ದೊರೆಯುವುದೇ ಅಪರೂಪ. ಈ ಶ್ಲೋಕವು ಕ್ರಿ.ಶ. ೯೨೦ರ ನಂತರದ ಸ್ಮಾರಕಶಿಲ್ಪಗಳಲ್ಲಿ ಕಾಣಿಸಿಕೊಳ್ಳುತ್ತದೆ ಎಂದು ವಿದ್ವಾಂಸರಾದ ಆರ್. ಶೇಷಶಾಸ್ತ್ರಿ ಅವರು ಅಭಿಪ್ರಾಯಿಸಿದ್ದಾರೆ.[೨೨] ಸ್ಮಾರಕ ಶಾಸನದ ಪಾಠ ಮತ್ತು ಶಿಲ್ಪಗಳು ಯೋಧರಿಗೆ ವೀರಸ್ವರ್ಗವನ್ನು ವರ್ಣಿಸುವ ಮಾಧ್ಯಮಗಳಾಗಿವೆ. ಯುದ್ಧದಲ್ಲಿ ವೀರನ ಮರಣವು ಸಾಮಾನ್ಯವಾದುದಲ್ಲ, ಅದು ಸ್ವರ್ಗವನ್ನು ಪಡೆಯಲು ಅಥವಾ ದೈವೀಕರಣ ಹೊಂದಲು ಒಂದು ಸಾಧನ ಎಂಬ ನಂಬಿಕೆ ಅಂದು ಬಲವಾಗಿ ಬೇರೂರಿದ್ದಿತೆಂದು ವಿದ್ವಾಂಸರೊಬ್ಬರು ಅಭಿಪ್ರಾಯಿಸಿದ್ದಾರೆ.[೨೩] ಚರಾಚರ ವಸ್ತುಗಳಲ್ಲಿ ದೇವರನ್ನು ಕಾಣುವ ಸಂಸ್ಕೃತಿಯಲ್ಲಿ ಬಹುಶಃ ದೈವೀಕರಣವು ವೀರತ್ವದ ಪ್ರದರ್ಶನ ಮತ್ತು ವೀರಮರಣದ ಆಕರ್ಷಣೆಗೆ ಕಾರಣವಲ್ಲ, ವೀರನಿಗೆ ಅವನ ಹೋರಾಟದಿಂದ ಲಭಿಸುತ್ತಿದ್ದ ಉನ್ನತ ಸ್ಥಾನಮಾನ ಮತ್ತು ಕೊಡುಗೆಗಳು ವೀರತ್ವವನ್ನು ಅಮೂಲ್ಯವಾಗಿಸಿದೆ ಮತ್ತು ವೀರಮರಣಕ್ಕೆ ಆದ್ಯತೆ ನೀಡಲಾಗಿದೆ ಎಂದು ಇತಿಹಾಸತಜ್ಞರಾದ ರೋಮಿಲಾ ಥಾಪರ್ ಅವರು ಅಭಿಪ್ರಾಯಪಡುತ್ತಾರೆ.[೨೪] ಧ್ಯಾನ, ದಾನ ಮೊದಲಾದ ಧರ್ಮಮಾರ್ಗಗಳಲ್ಲಿ ನಡೆವ 'ಧರ್ಮವೀರ'ನಿಗೆ ಸಾಧ್ಯವಾಗುವ ಮೋಕ್ಷ ಸಾಧನೆ (ಸಮಾನವಾದ ಸ್ಥಾನ) 'ಯುದ್ಧವೀರ'ನಿಗೂ ಲಭಿಸಿತು. ಅವನಿಗಾಗಿ ವೀರಸ್ವರ್ಗದ ಕಲ್ಪನೆ ಆಕಾರ ಪಡೆಯಿತು ಎಂಬುದು ವಿದ್ವಾಂಸರಾದ ಎಂ.ಎಂ. ಕಲಬುರ್ಗಿ ಅವರ ಅಭಿಪ್ರಾಯವಾಗಿದೆ.[೨೫] ವೀರ ಮತ್ತು ಮಹಾಸತಿಯರಿಗಾಗಿಯೇ ಸ್ವರ್ಗದ ಕಲ್ಪನೆಗಳನ್ನು ಹೊಸದಾಗಿ ವ್ಯಾಖ್ಯಾನ ಮಾಡಲಾಗಿದ್ದು ಬ್ರಾಹ್ಮಣವರ್ಗದಿಂದ, ಶಾಸನಗಳ ಬರಹಗಳ ಮೇಲೆ, ಚಿತ್ರಗಳ ಮೇಲೆ ಸತ್ತ ನಂತರ ಸಿಗುವ ಸ್ವರ್ಗದ ಕಲ್ಪನೆಯನ್ನು ಗಟ್ಟಿಗೊಳಿಸಲಾಯಿತೆಂದು ಸಂಶೋಧಕರಾದ ಬಸವರಾಜ ಕಲ್ಗುಡಿಯವರು ವ್ಯಾಖ್ಯಾನಿಸಿದ್ದಾರೆ.[೨೬]

ಸ್ಮಾರಕಶಿಲ್ಪಗಳ ಶಾಸನಗಳಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುವ ಮತ್ತು ಸ್ವರ್ಗದಲ್ಲಿ ಲಭ್ಯವಾಗುವ ಸುಖ ಭೋಗಗಳನ್ನು ವರ್ಣಿಸಲಾಗಿದೆ. ಬಹುತೇಕ ಸ್ಮಾರಕಗಳಲ್ಲಿ ಸರಳವಾಗಿ 'ಸುರಲೋಕ ಪ್ರಾಪ್ತನಾದನು' ಎಂಬ ವಾಕ್ಯವಿದ್ದರೆ, ಕೆಲವು ಸ್ಮಾರಕಗಳಲ್ಲಿ ಶಿವಲೋಕ ಪ್ರಾಪ್ತನಾದ, ದೇವಲೋಕಕ್ಕೆ ಸಂದಂ ಎಂದು ವರ್ಣಿಸಿವೆ. ಈ ಸ್ವರ್ಗದ ವರ್ಣನೆಗಳನ್ನು ಎರಡು ರೀತಿಯಲ್ಲಿ ವಿದ್ವಾಂಸರು ಗುರುತಿಸಿದ್ದಾರೆ. ಮೊದಲನೆಯದಾಗಿ, ವೀರನೇ ತನ್ನ ಪರಾಕ್ರಮದಿಂದ ಸ್ವರ್ಗಲೋಕದ ಸುರಕನ್ನಿಕೆಯರನ್ನು ಒಲಿಸಿಕೊಂಡು ಸ್ವರ್ಗವನ್ನು ಪ್ರವೇಶಿಸಿದ ಎಂಬುದಾಗಿ ವರ್ಣಿಸಿರುವುದು. ಎರಡನೆಯದಾಗಿ, ವೀರನನ್ನು ಅಪ್ಸರೆಯರು ಹೇಗೆ ವೈಭವದಿಂದ ವೀರಸ್ವರ್ಗಕ್ಕೆ ಕೊಂಡೊಯ್ದರೆಂಬುದರ ನೇರವಾದ ವಿವರಣೆಯನ್ನು ನೀಡಿರುವುದು.

ಶತ್ರುಗಳು ಬಂದು ತನ್ನ ಊರಿನ ಜೀವದನಗಳನ್ನು(ಹಸುಗಳನ್ನು) ಅಪಹರಿಸಿದಾಗ ಚಟ್ಟೆಯನಾಯಕನೆಂಬುವನು ಶತ್ರುಗಳ ಬೆನ್ನಟ್ಟಿ 'ತೆರಳ್ಚಿ ತಳ್ತಿಱಿದು ಪೆವ್ವಡೆಯಂ ತುಱು ಮುಗುರ್ಚ್ಚಿ ತಾಂ ಚಟ್ಟೆಯನಾಯಕಂ ಪಡೆದು ಮೆಚ್ಚಿಸಿದ ಸುರಕನ್ನೆಯರ್ಕ್ಕಳಂ' ಎಂಬ ವರ್ಣನೆ ಕ್ರಿ.ಶ. ೧೧೮೭ರ ಸ್ಮಾರಕಶಿಲ್ಪವೊಂದರ ಶಾಸನಪಾಠದಿಂದ ತಿಳಿದುಬರುತ್ತದೆ.[೭] ಮೈಲನಾಯಕ ಎಂಬುವನು ತನ್ನ 'ಆತ್ಮಖಡ್ಗದಿಂದ ಕಡುಗಲಿ ಪೊಯ್ದು ವೊಯ್ದಿರದೆ ಮೆಚ್ಚಿಸಿದಂ ಸುರಕನ್ನೆಯರ್ಕ್ಕಳಂ' ಎಂಬ ವರ್ಣನೆ ಕ್ರಿ.ಶ. ೧೧೯೬ರ ಒಂದು ಸ್ಮಾರಕಶಿಲ್ಪದಿಂದ ದೊರೆಯುತ್ತದೆ.[೮] ಕ್ರಿ.ಶ. ೧೧೯೫ರ ಸ್ಮಾರಕಶಿಲ್ಪದಲ್ಲಿ ವರ್ಣನೆ ಈ ರೀತಿ ಇದೆ. 'ಮಲ್ಲನ್ರಿಪಾಳಂ ಬೆಸಸೆ ಮಚ್ಚರದಿಂದ ಮೆಱಟ್ಟಿವಳ್ಳಿಯಾ ಬಲ್ಲಣಿಯಂ ಕಱೆತ್ತಿಱಿದಿರ್ಚ್ಚಿದವರಂತವೆ ಕೊಂದು ಸೇನೆಯೊಳ್ ತಲ್ಲಳಮಂ ತಗುಳ್ಚಿ, ಕಟಪಲ್ಲಟವಾಗಿರೆ ಪೊಯ್ದವೈರಿಯಂ ಕಲ್ಲೆಯನಾಯಕಂ ಕರಮೆಮೆಚ್ಚಿಸಿದಂ ಸುರಕನ್ನೆಯರ್ಕ್ಕಳಂ.'[೯]

ಸತ್ತ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದುಕೊಂಡು ಹೋಗುವುದನ್ನು ಸ್ಮಾರಕ ಶಾಸನಗಳು ಈ ರೀತಿ ವರ್ಣಿಸಿವೆ. ಉದಾಹರಣೆಗೆ,

ಭೂತಳದಲ್ಲಿಯ ಭೋಗಂ
ತೀ ರ್ದುದು ಈತಂಗೆ ಮರ್ತ್ಯದಲ್ಲಿರಬಾರದು ಬೇಗಂ
ತನ್ನಿರೆ ಎಂದಚಳೇಶ್ವರ
ನಂದೊಪ್ಪುಗೊಂಡ ಚಾವುಂಡನುಮಂ॥

ಮಱದಿರ್ದನಂದು ಮರ್ತ್ಯದ
ಬಳಕೆಯ ನೆಱೆಯ ಱದನಲ್ಲಿ ಮೋಕ್ಷ ಲಕ್ಷ್ಮಿಯಂ
ಸದುಗುರು ಲಕ್ಷ್ಮೀನಾಥಂ
ಇದಿರ್ಗೊಂಡಂ ಚಟ್ಟನಣುಗ ಚಾವುಂಡನುಮಂ॥
ಕಟ್ಟಿಸಿದುಪ್ಪರ ಗುಡಿಯಂ

ಎತ್ತಿಸಿದಂ ಅಭವನೊಲ್ದು ನಂದಿಯ ಸಿಂದಂ
ಹೋ ಉಘೇ ಉಘೇ ಎಂದೆನುತಂ
ವೀರೇಶ್ವರನೊಪ್ಪುಗೊಂಡ ಚಾವುಂಡನುಮಂ॥[೮೦]

ವೀರ ಚೌಡರಸ ಸ್ವರ್ಗಾರೋಹಣವನ್ನು ಶಾಸನ ಮೇಲಿನಂತೆ ವರ್ಣಿಸಿದೆ.
ಪಿರಿಯಾಳ್ಬುವನ ಸ್ತುತೆ ಮೈಳುಬಾಯ್ಗೆ ದಾಯಿಯಂಗಂ ತುದ್ಭವಿಸಿದ
ಸೇನನ ವೀರ ವಹವಣಿ ಪಡೆ ಸಹಸ್ರಜಿಹ್ವೆಯುಳ್ಳ ನೆಜೆಯನು
ಸುರಿದ ಉಹ್ಯೂವಿನ ಮಳೆಗಳ್ಸುರದುಂ ದುಭಿಮೊಳಗೆ ಮಗು ಸೇನನನಂಸ್ತಾ
ಸುರಕಂನ್ನೆಯರೋಲಿ ದೊಯ್ದರು ಸುರಲೋಕದ ಸುಖಮನೆಯ್ದಿದಂ ಪರಮಾರ್ತ್ಥಂ॥[೮೧]

ಈ ಶಾಸನಪಾಠದಿಂದ ವ್ಯಕ್ತವಾಗುವ ಅಂಶವೆಂದರೆ ಮಡಿದ ವೀರನನ್ನು ಅಪ್ಸರೆಯರು ಹೂವಿನ ಮಳೆ ಸುರಿಸಿ ಕರೆದೊಯ್ದರು ಎನ್ನಲಾಗಿದೆ. ಅಲ್ಲದೆ ಪರಮಾಥ್ಮನು ವೀರನಿಗೆ ಸುರಲೋಕದ ಸುಖವನ್ನು ಮನ್ನಿಸಿದನೆಂದು ಶಾಸನದಿಂದ ವ್ಯಕ್ತವಾಗುತ್ತದೆ.

ಕ್ರಿ.ಶ. ೧೧೮೭ರ ಒಂದು ಶಾಸನವು ಹೀಗೆ ವರ್ಣಿಸುತ್ತದೆ.[೮೨]

'ಕಂಡದೊಳಿಂಡಿಯಾಡಿ ಬಿಸುನೆತ್ತರಕೋಕುಳಿಯಾಡಿ ಪೆರ್ಚ್ಚಿಮಾ
ರ್ಕ್ಕೊಂಡೊಡನೆಚ್ಚ ಪೂಣಿಗರ ಪಂದಲೆಯಂ ಪೊಡೆಸೆಂಡನಾಡಿದೊ
ಳ್ಗಂಡನಿವಂದಲೆಂದೇಂ ಪೊಸಮುತ್ತಿನ ಸೇಸೆಯನಿಕ್ಕಿ ಕೂಡೆ ಕೈ
ಕೊಂಡೊಡನೊಯ್ದರಚ್ಚರಸಿಯರ್ ಕಲಿಚಟ್ಟನನಾಜಿರಂಗದೊಳ್'

ವೀರನಿಗೆ ಯುದ್ಧ ಮಾಡುವುದು ಓಕುಳಿಯಾಡಿದಂತೆ, ಚೆಂಡನಾಟದಂತೆ ಒಂದು ಕ್ರೀಡೆ ಇಂತಹ ವೀರತ್ವ ಪ್ರಧಾನವಾದ ಕ್ರೀಡೆಯನ್ನಾಡಿದ ಆ ವೀರನನ್ನು ಅಪ್ಸರೆಯರು 'ಪೊಸಮುತ್ತಿನ ಸೇನೆಯನಿಟ್ಟು' ಕೈ ಹಿಡಿದು ಸ್ವರ್ಗಕ್ಕೆ ಒಯ್ದರಂತೆ.

ಸುರಕನ್ಯೆಯರು ವೀರನನ್ನು ಸ್ವಾಗತಿಸಿ ರಾಜ ಮರ್ಯಾದೆಯಿಂದ ಕರೆದೊಯ್ಯುವರೆಂದು, ಅಂದಿನ ಸಮಾಜ ನಂಬಿದ್ದಿತು. ಈ ಹಂತದಲ್ಲಿ ವೀರನಿಗೆ ಲಭ್ಯವಾಗುವುದೆನ್ನಲಾದ ಬೆಳ್ಗೊಡೆ, ಕಳಸ, ಕನ್ನಡಿ, ತೋರಣ, ಚಾಮರ, ಪಂಚಮಹಾಶಬ್ದ(ಕೊಂಬು, ತಮಟೆ, ಭೇರಿ, ಘಂಟೆ ಮತ್ತು ಚಿನ್ನಂಗಹಳೆ) ಮೊದಲಾದವುಗಳು ಆತನ ಗೌರವ ಮತ್ತು ಅಂತಸ್ತನ್ನು ವಾಸ್ತವಿಕವಾಗಿ ಅಲ್ಲವಾದರೂ ಕಾಲ್ಪನಿಕವಾಗಿ ಹೆಚ್ಚಿಸುತ್ತಿದ್ದವು. ವೀರನು ಕೇವಲ ತನ್ನ ವೀರತ್ವದ ಪ್ರದರ್ಶನದಿಂದ ಸ್ವರ್ಗವನ್ನು ಪಡೆಯುವನೆಂಬ ನಂಬಿಕೆಯನ್ನು ಶಿಲ್ಪಗಳ ಮೂಲಕ ಗಟ್ಟಿಗೊಳಿಸುವ ಪ್ರಯತ್ನವು ಕಂಡುಬರುತ್ತದೆ.

ಸ್ಮಾರಕಶಿಲ್ಪಗಳಲ್ಲಿ ಶಾಸನಪಾಠದ ವರ್ಣನೆಗೆ ಪೂರಕವಾಗಿ ವೀರನ ಸ್ವರ್ಗಪ್ರಯಾಣವನ್ನು ಚಿತ್ರಿಸಲಾಗಿರುತ್ತದೆ. ಹೋರಾಟದ ಹಂತದ ನಂತರ ಶಿಲ್ಪದ ಗಾತ್ರವನ್ನಾಧರಿಸಿ ವೀರಸ್ವರ್ಗಕ್ಕೆ

ವೀರನ ಪ್ರಯಾಣವನ್ನು ಶಿಲ್ಪಿಯು ವರ್ಣಿಸಿದ್ದಾನೆ ಎನ್ನಲಾಗಿದೆ ಅಥವಾ ವೀರನ ಶೌರತ್ವದ ಅನುಗುಣವಾಗಿ ಸ್ವರ್ಗಾರೋಹಣದ ಚಿತ್ರಣವನ್ನು ಚಿತ್ರಿಸಿರುವ ಸಾಧ್ಯತೆಯಿದೆ. ಬಹುಸಂಖ್ಯೆಯ ಸ್ಮಾರಕಶಿಲ್ಪಗಳಲ್ಲಿ ವೀರನನ್ನು ಇಬ್ಬರು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುವುದು ಸಾಮಾನ್ಯವಾಗಿರುತ್ತದೆ. ಆದರೆ ಕೆಲವು ಸ್ಮಾರಕಶಿಲ್ಪಗಳಲ್ಲಿ ಇಬ್ಬರಿಗಿಂತ ಹೆಚ್ಚು ಮಂದಿ ಅಪ್ಸರೆಯರು ವೀರನೊಂದಿಗೆ ಸ್ವರ್ಗಾರೋಹಣ ಮಾಡುತ್ತಿರುವ ಉದಾಹರಣೆಗಳಿವೆ. ಇದಕ್ಕೆ ವೀರನು ಯುದ್ಧದಲ್ಲಿ ತೋರಿದ ಶೌರತ್ವವೇ ಮುಖ್ಯ ಕಾರಣವೆಂದು ತೋರುತ್ತದೆ. ಹನಗವಾಡಿ ಗ್ರಾಮದ ಸ್ಮಾರಕಶಿಲ್ಪವೊಂದರಲ್ಲಿ ವೀರನು ಒಂಬತ್ತು ಮಂದಿ ಅಪ್ಸರೆಯರೊಂದಿಗೆ ಸ್ವರ್ಗಾರೋಹಣ ಮಾಡುತ್ತಿರುವ ದೃಶ್ಯ ಕಂಡುಬರುತ್ತದೆ. ಹಲವು ಸ್ಮಾರಕಶಿಲ್ಪಗಳಲ್ಲಿ ವೀರನು ವಿಮಾನದಲ್ಲಿ ಕುಳಿತು ಸುರಕನ್ಯೆಯರೊಡನೆ ಪ್ರಯಾಣಿಸುತ್ತಿರುವುದನ್ನು ಚಿತ್ರಿಸಲಾಗಿದೆ. ವಿಮಾನ ಅಥವಾ ಮಂಟಪದಲ್ಲಿ ಒಬ್ಬ ಅಥವಾ ಇಬ್ಬರು ಕೆಲವೊಮ್ಮೆ ಮೂವರು ವೀರರು ಕುಳಿತಿರುವಂತೆ ಕಂಡರಿಸಲಾಗಿರುತ್ತದೆ. ಇನ್ನೂ ಕೆಲವು ಸ್ಮಾರಕಶಿಲ್ಪಗಳಲ್ಲಿ ವೀರನೊಂದಿಗೆ ಆತನ(ವೀರನ ದೇಹದೊಡನೆ ಸತಿ ಹೋಗಿದ್ದರೆ) ಪತ್ನಿಯನ್ನು ಕೆತ್ತಲಾಗಿರುತ್ತದೆ. ಮಂಟಪದ ಹೊರಭಾಗದಲ್ಲಿ ಎರಡು ಕಡೆ ಅಪ್ಸರೆಯರನ್ನು ತೋರಿಸಲಾಗಿರುತ್ತದೆ.

ಹೊನ್ನಾಳಿ ತಾಲೂಕಿನ ಬೆಳಗುತ್ತಿ[೮೩] ಗ್ರಾಮದ ಕ್ರಿ.ಶ. ೧೨೪೫ರ ಸ್ಮಾರಕಶಿಲ್ಪದಲ್ಲಿ ವೀರನ ಸ್ವರ್ಗಪ್ರಯಾಣವನ್ನು ಭವ್ಯವಾಗಿ ತೋರಿಸಲಾಗಿದೆ. ಈ ಶಿಲ್ಪದಲ್ಲಿ ಸುರಕನ್ಯೆಯರು ಆಕಾಶಮಾರ್ಗದಲ್ಲಿ ಬಂದು ಚಾಮರ, ಕಳಸ, ಹೂಮಾಲೆ, ಚರ್ಮವಾದ್ಯಗಳಾದ ಡಕ್ಕೆ, ಡಮರುಗ ಮತ್ತು ತಾಳ ಇತ್ಯಾದಿ ಮಂಗಳವಾದ್ಯಗಳೊಂದಿಗೆ ವೀರನನ್ನು ಕರೆದೊಯ್ಯುತ್ತಿರುವರು. ಇದೇ ದೃಶ್ಯ ಈ ಗ್ರಾಮದ ಮತ್ತೊಂದು ಸ್ಮಾರಕದಲ್ಲಿ ಕಂಡುಬರುವುದು. ವೇಳೆವಾಳಿಯ ಒಂದು ಸ್ಮಾರಕದಲ್ಲಿ ದೇವಕನ್ಯೆಯರು ನರ್ತನದೊಂದಿಗೆ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರಣವಿದೆ. ಇದೇ ರೀತಿಯ ಸ್ವರ್ಗಪ್ರಯಾಣದ ದೃಶ್ಯಗಳನ್ನು ಅಧ್ಯಯನ ಪ್ರದೇಶದ ಸವಳಂಗ, ಸೊರಟೂರು, ಹೊಸಹಳ್ಳಿ, ಹನಗವಾಡಿ, ಬಾಗಳಿ ಮೊದಲಾದ ಗ್ರಾಮಗಳಲ್ಲಿ ಗುರುತಿಸಬಹುದು. ಕೆಲವೊಂದು ಸ್ಮಾರಕಶಿಲ್ಪಗಳಲ್ಲಿ ವೀರನು ಸ್ವರ್ಗಕ್ಕೆ ಹೋಗುವ ಹಂತದಲ್ಲಿ ಆತನ ವೇಷಭೂಷಣಗಳಲ್ಲಿ ಬದಲಾವಣೆಯಾಗಿರುವಂತೆ ತೋರಿಸಲಾಗಿದೆ. ಗಂಗನಕಟ್ಟೆ, ದೊಡ್ಡಬಾತಿ, ಸೊರಟೂರು, ಕುಂಕೋವಾ ಹಾಗೂ ದೇವಿಕೆರೆ ಸ್ಮಾರಕಶಿಲ್ಪಗಳಲ್ಲಿ ವೀರನು ಯುದ್ಧ ಮಾಡುವಾಗ ವೀರ ಮುಡಿಯ ಕೇಶಾಲಂಕಾರ ಹೊಂದಿದ್ದರೆ ಅವರು ಸ್ವರ್ಗ ಪ್ರಯಾಣದ ಸಂದರ್ಭದಲ್ಲಿ ಕಿರೀಟಧಾರಿಯರಾಗಿದ್ದಾರೆ. ಈ ಬದಲಾವಣೆ ವೀರಮರಣ ಹೊಂದಿದ ವೀರನು ದೈವತ್ವದ ಹಂತವೇರಿರುವುದನ್ನು ಸಂಕೇತಿಸುತ್ತವೆ.

ವೀರನ ಸ್ವರ್ಗ ಪ್ರಯಾಣದ ದೃಶ್ಯದಲ್ಲಿ ಗಮನ ಸೆಳೆಯುವ ಅಂಶವೆಂದರೆ ಮಂಟಪ ಅಥವಾ ವಿಮಾನಗಳ ಕೆತ್ತನೆ ಅವುಗಳು ಚೌಕಾಕಾರದಲ್ಲಿದ್ದು, ಎರಡು ಕಂಬಗಳು ಮುಂಭಾಗದಲ್ಲಿ ಕಾಣುತ್ತಿರುವಂತೆ ತೋರಿಸಲಾಗಿದೆ. ಅವುಗಳ ಮೇಲೆ ಶಿಖರದ ವಿವಿಧ ಮಾದರಿಯ ಕೆತ್ತನೆಗಳಿವೆ. ಆ ಶಿಖರಗಳು ದೇವಾಲಯಗಳಲ್ಲಿರುವ ನಾಗರ, ದ್ರಾವಿಡ ಮತ್ತು ವೇಸರ ಶೈಲಿಗಳಂತೆ ಚಿತ್ರಿಸಿರುವುದು ಕಂಡುಬರುತ್ತದೆ. ಹನಗವಾಡಿ ಗ್ರಾಮದ ಎರಡು ಸ್ಮಾರಕಶಿಲ್ಪಗಳಲ್ಲಿ ಎರಡು ಹಂತಗಳ ವಿಮಾನವಿದೆ. ಅದರ ಮೇಲ್ಭಾಗದಲ್ಲಿ ಅರ್ಧಗೋಲಾಕಾರದ ಶಿಖರವಿದ್ದು, ಅದರ ಮೇಲ್ಭಾಗದ ಸ್ತೂಪಿಯಲ್ಲಿ ಕಳಸವಿದೆ. ಇದೇ ಮಾದರಿಯ ಮಂಟಪಗಳನ್ನು ಹರಿಹರ ತಾಲೂಕಿನ ಗಂಗನರಸಿ, ಚಿಕ್ಕಬಿದಿರೆ, ಕೊಂಡಜ್ಜಿ, ದಾವಣಗೆರೆ ತಾಲೂಕಿನ ಬೇತೂರು, ಕಕ್ಕರಗೊಳ್ಳ, ಚನ್ನಗಿರಿ ತಾಲೂಕಿನ ಹಿರೇಮಳಲಿ, ಹಿರೇಕೋಗಲೂರು ಹಾಗೂ ಹೊನ್ನಾಳಿ ತಾಲೂಕಿನ ಹನಗವಾಡಿ ಮೊದಲಾದ ಗ್ರಾಮಗಳ ಸ್ಮಾರಕಶಿಲ್ಪಗಳಲ್ಲಿ ಕಾಣುತ್ತೇವೆ. ಕ್ರಿ.ಶ. ಸು. ೧೨ನೇ ಶತಮಾನದ ಆಸಗೋಡಿನ ಒಂದು ಸ್ಮಾರಕಶಿಲ್ಪದಲ್ಲಿ ಮಂಟಪದ ಶಿಖರವು ನಾಗರಶೈಲಿಯಲ್ಲಿ ಗೋಚರವಾಗುತ್ತದೆ. ಒಳಬಾವುಳ್ಳ ಶಿಖರದ ಮೇಲೆ ಸೂಪ್ತಿಯನ್ನು ಹೊಂದಿರುವ ಘಂಟೆಯಕಾರದ ಕಳಸವಿದೆ. ಇದೇ ನಾಗರ ಶಿಖರ ಶೈಲಿಯ ಮಂಟಪವನ್ನು ಹೊಂದಿರುವ ಸ್ಮಾರಕಶಿಲ್ಪಗಳು ಜಿಲ್ಲೆಯ ಬೇತೂರು, ಬಳ್ಳೇಶ್ವರ, ಗುಡಿಚಟ್ನಿಹಳ್ಳಿ, ಹೊಸಕೋಟೆ, ಅಣಜಿಗೆರೆ, ವಾಸನ, ಬನ್ನಿಕೋಡು ಮತ್ತು ಚಿಕ್ಕಬಿದರೆ ಗ್ರಾಮಗಳಲ್ಲಿ ಗುರುತಿಸಬಹುದು. ಇನ್ನೂ ಕೆಲವು ಸ್ಮಾರಕಶಿಲ್ಪಗಳಲ್ಲಿ ಮಂಟಪದ ಮೇಲೆ ಗೋಲಾಕಾರದ(ಗೊಮ್ಮಟಾಕಾರದ) ಶಿಖರ ಹೊಂದಿರುವುದನ್ನು ಕಾಣುತ್ತೇವೆ. ಬೆಳಗುತ್ತಿ ಗ್ರಾಮದ ಎರಡು ಸ್ಮಾರಕಗಳಲ್ಲಿ ಮಂಟಪದ ಮೇಲೆ ಗೋಲಾಕಾರದ ಶಿಖರವಿದ್ದು, ಅವುಗಳ ಮೇಲೆ ಕಳಸಗಳಿವೆ. ಒಂದು ಶಿಲ್ಪದಲ್ಲಿ ಶಿಖರದ ಮುಂಭಾಗವನ್ನು ತೋರಣದಂತೆ ಶೃಂಗರಿಸಲಾಗಿದೆ. ಈ ಲಕ್ಷಣಗಳಿರುವ ಸ್ಮಾರಕಗಳು ಹರಪನಹಳ್ಳಿ ತಾಲೂಕಿನ ಚಿಗಟೇರಿ, ಕುಂಚೂರು, ಬಾಗಳಿ, ಹರಿಹರ ತಾಲೂಕಿನ ಗಂಗನರಸಿ ಹಾಗೂ ಹೊನ್ನಾಳಿ ತಾಲೂಕಿನ ಹನಗವಾಡಿ ಮೊದಲಾದ ಗ್ರಾಮಗಳಲ್ಲಿ ಕಂಡುಬರುತ್ತವೆ. ಕೆಲವು ಸ್ಮಾರಕಶಿಲ್ಪಗಳಲ್ಲಿ ವಿಮಾನವನ್ನು ಭವ್ಯವಾಗಿ ಚಿತ್ರಿಸಲಾಗಿದೆ. ಕ್ರಿ.ಶ. ಸು. ೧೩ನೇ ಶತಮಾನಕ್ಕೆ ಸೇರಿದ ಎರಡು ಶಿಲ್ಪಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ. ಈ ಸ್ಮಾರಕಗಳಲ್ಲಿ ಕುಬ್ಜ-ದಡೂತಿ ಮನುಷ್ಯರಿಬ್ಬರೂ ವಿಮಾನವನ್ನು ಹೊತ್ತೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ವಿಮಾನದಲ್ಲಿ ವೀರನು ಕೈ ಮುಗಿದು ಪದ್ಮಾಸನದಲ್ಲಿ ಕುಳಿತಿರುತ್ತಾನೆ. ಪಂಪಭಾರತದಲ್ಲಿ ದೇವತೆಗಳು ಭೀಷ್ಮಾರ್ಜುನರ ಯುದ್ಧವನ್ನು ನೋಡಲು ದೇವವಿಮಾನಗಳಲ್ಲಿ ಬಂದರೆಂಬುದನ್ನು ಹೀಗೆ ವರ್ಣಿಸಲಾಗಿದೆ. 'ಆಕಾಶ ಪ್ರದೇಶದಲ್ಲೆಲ್ಲ ಚೌಕಾಕಾರದ ಮಂಟಪಗಳಲ್ಲಿ ಬಂದಿದ್ದ ದೇವವಿಮಾನಗಳು ಜೊತೆ ಜೊತೆಯಲ್ಲಿಯೇ ಕ್ರಮತಪ್ಪಿ ಕಲಕಿ ಹೋದವು.[೮೪] ಚೌಕಾಕಾರದ ಮಂಟಪಗಳ ರೀತಿ ವಿಮಾನಗಳಿರುತ್ತವೆ ಎಂಬ ಕಲ್ಪನೆಯನ್ನು ಪಂಪನು ಸ್ಮಾರಕಶಿಲ್ಪಗಳಿಂದಲೇ ಪಡೆದಿರುವನೆಂಬ ಅಭಿಪ್ರಾಯಗಳು ಕೆಲವಾರು ಗ್ರಂಥಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು.

ಹರಿಹರ ತಾಲೂಕಿನ ಚಿಕ್ಕಬಿದಿರೆ, ಗಂಗನರಸಿ, ಬೆಳ್ಳುಡಿ, ಹರಿಹರ, ಹೊನ್ನಾಳಿ ತಾಲೂಕಿನ ಹನಗವಾಡಿ, ಚನ್ನಗಿರಿ ತಾಲೂಕಿನ ಹಿರೇಮಳಲಿ ಹಾಗೂ ಹರಪನಹಳ್ಳಿ ತಾಲೂಕಿನ ಕಡತಿ ಗ್ರಾಮಗಳಲ್ಲಿನ ಸ್ಮಾರಕಶಿಲ್ಪಗಳಲ್ಲಿ ವೀರನ ಸ್ವರ್ಗಪ್ರಯಾಣವನ್ನು ಎರಡು ದೃಶ್ಯಪಟ್ಟಿಕೆಗಳಲ್ಲಿ ತೋರಿಸಲಾಗಿದೆ. ಹಿರೇಮಳಲಿಯ ಎರಡು ಮತ್ತು ಹರಿಹರ, ಹನಗವಾಡಿಯ ತಲಾ ಒಂದು ಸ್ಮಾರಕಶಿಲ್ಪಗಳ ಮೊದಲ ಹಂತದಲ್ಲಿ ವೀರನು ವಿಮಾನ ಅಥವಾ ಮಂಟಪದಲ್ಲಿ ಕುಳಿತು ಪ್ರಯಾಣಿಸುತ್ತಿರುವ ಹಾಗೂ ನಂತರದ ಹಂತದಲ್ಲಿ ದೇವತಾಸ್ತ್ರೀಯರು ವಾದ್ಯ ನುಡಿಸುತ್ತಾ ನರ್ತಿಸುತ್ತಿರುವ ದೃಶ್ಯಗಳಿವೆ. ಚಿಕ್ಕಬಿದಿರೆ, ಕಡತಿ ಗ್ರಾಮಗಳ ತಲಾ ಎರಡು ಮತ್ತು ಹನಗವಾಡಿಯ ಒಂದು ಸ್ಮಾರಕಶಿಲ್ಪಗಳಲ್ಲಿನ ಮೊದಲ ಹಂತದಲ್ಲಿ ವೀರನು ಅಪ್ಸರೆಯರ ಹೆಗಲ ಮೇಲೆ ಕೈಹಾಕಿಕೊಂಡು ಆಕಾಶದಲ್ಲಿ ಹಾರುತ್ತಿರುವ ಚಿತ್ರಣಗಳಿದ್ದರೆ, ಎರಡನೆಯ ಹಂತದಲ್ಲಿ ವೀರನು ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಪ್ರಯಾಣಿಸುತ್ತಿರುವ ಮತ್ತು ವಾದ್ಯಗಳನ್ನು ನುಡಿಸಿಕೊಂಡು ನರ್ತಿಸುತ್ತಿರುವ ಸ್ತ್ರೀಯರ ದೃಶ್ಯಗಳಿವೆ. ಹನಗವಾಡಿ ಗ್ರಾಮದ ಸ್ಮಾರಕದಲ್ಲಿ ವೀರನು ಒಂಬತ್ತು ಮಂದಿ ಅಪ್ಸರೆಯರೊಂದಿಗೆ ಸ್ವರ್ಗಾರೋಹಣ ಮಾಡುತ್ತಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ. ಗಂಗನರಸಿ ಮತ್ತು ಹರಿಹರದ ಸ್ಮಾರಕಶಿಲ್ಪಗಳಲ್ಲಿ ವೀರನು ಮೊದಲು ಮಂಟಪದಲ್ಲಿ ಕುಳಿತು ಸ್ವರ್ಗಕ್ಕೆ ತೆರಳುತ್ತಿದ್ದರೆ ನಂತರದಲ್ಲಿ ಸುರಕನ್ಯೆಯರು ಮತ್ತು ಮಂಗಳವಾದ್ಯಕಾರರೊಂದಿಗೆ ಸ್ವರ್ಗಾರೋಹಣ ಮಾಡುತ್ತಿರುವ ದೃಶ್ಯಗಳು ಕಂಡುಬರುತ್ತವೆ. ಪಂಪಭಾರತದಲ್ಲಿ 'ತನ್ನ ಸ್ವಾಮಿಯು ವಿಶೇಷವಾಗಿ ಮೆಚ್ಚುವಂತೆ ಗೆದ್ದವನು ಅಪಾರ ಐಶ್ವರ್ಯವನ್ನು ಪಡೆಯುತ್ತಾನೆ. ದೇವಸ್ತ್ರೀಯರ ಸಮೂಹವು ಸಂತೋಷದಿಂದ ಆತನನ್ನು ಸ್ವಾಗತಿಸುತ್ತದೆ ಹಾಗೂ ಇವತ್ತೇ ಸತ್ತು ನಾಳೆ ದೇವಲೋಕದ ಸ್ತ್ರೀಯರಲ್ಲಿ ಸಂತೋಷದಿಂದಿರುತ್ತೇನೆ'[೮೫] ಎಂದು ಸೈನಿಕರಿಂದ ವ್ಯಕ್ತವಾಗಿರುವ ಅಭಿಪ್ರಾಯಗಳು ಅಂದು ವೀರಸ್ವರ್ಗದ ಬಗ್ಗೆ ರೂಪಿಸಿಕೊಂಡಿದ್ದ ಕಲ್ಪನೆಯಾಗಿದೆ ಎಂಬ ಅಂಶವು ಮೇಲಿನ ವಿವರಣೆಗಳ ಮೂಲಕ ವ್ಯಕ್ತವಾಗುತ್ತದೆ.

### ೩.೪.೨. ಶಿವಲೋಕ

ಬಹುಸಂಖ್ಯೆಯ ಸ್ಮಾರಕಶಿಲ್ಪಗಳಲ್ಲಿ ವೀರನು ಕೈಲಾಸದಲ್ಲಿ ಶಿವನ ಬಳಿ ಇರುವಂತೆ ಶಿಲ್ಪದ ವಿವರಗಳನ್ನು ಬಿಡಿಸಿರುವಂತೆಯೇ, ಸ್ಮಾರಕಶಿಲ್ಪಗಳಲ್ಲಿನ ಪಾಠದಲ್ಲಿಯೂ ಸಹ ವೀರನು ಕೈಲಾಸವನ್ನು ಸೇರಿದನು ಎಂಬ ವರ್ಣನೆಯ ಹಲವಾರು ವಿವರಗಳು ಬರುತ್ತವೆ. ಸ್ಮಾರಕಶಿಲ್ಪಗಳಲ್ಲಿಯ ಕೊನೆಯ ಪಟ್ಟಿಕೆಯಲ್ಲಿ ಕಂಡುಬರುವ ದೃಶ್ಯವು ಶಿವಲೋಕದ ವರ್ಣನೆಯಾಗಿದೆ. ಅಧ್ಯಯನ ಪ್ರದೇಶದ ಕೆಲವು ಸ್ಮಾರಕಶಿಲ್ಪಗಳಲ್ಲಿ ವೀರರು ನೇರವಾಗಿ ಶಿವಲೋಕವನ್ನು ಪಡೆದವರೆಂಬ ಅಥವಾ ಶಿವಲೋಕಕ್ಕೆ ಹೋದರೆಂಬ ಉಲ್ಲೇಖಗಳಿವೆ. ಹಿರೇಕೋಗಲೂರು ಸ್ಮಾರಕಶಿಲ್ಪವೊಂದರಲ್ಲಿ 'ಕಾದಿ ಹಲವಾಳು ಕುದುರೆಯಂ ಕೊಂದು ಶಿವಲೋಕ ಪ್ರಾಪ್ತನಾದ'[೮೬] ಹಿರೇಕೋಗಲೂರಿನ ಮತ್ತೊಂದು ಸ್ಮಾರಕಶಿಲ್ಪವು 'ನಾಗಾವಿ ಕಳಸಾಪುರದೆಡೆಯಲಿ ಕಾದಿ ಶಿವಲೋಕ ಪ್ರಾಪ್ತನಾದ'[೮೭] ದೇವರ ಬೆಳಕೆರೆಯ ಸ್ಮಾರಕಶಿಲ್ಪವೊಂದು 'ತುಱು ಹರಿಯಲು ಶಿವಲೋಕ ಪ್ರಾಪ್ತನಾದ,'[೮೮]

ಕೊಂಡಜ್ಜಿ ಗ್ರಾಮದ ಸ್ಮಾರಕ ಶಾಸನವು 'ಪೊಮಣನೆಯಕ ಕಾದಿ ಸಿವಾಲೋಕ ಪ್ರಾಪ್ತನಾದ'[೮೯] ಹಾಗೂ ಕಕ್ಕರಗೊಳ್ಳದ ಸ್ಮಾರಕಶಿಲ್ಪವೊಂದರಲ್ಲಿ 'ಬಿದಿಯಮಗವುಡಂ ಕಾದಿದ ಕದನದಲು.. ದುವಳನಾದಂ ತವೆಕೊಂದಂ ಮುದದಿಂ ಶಿವನು ಮೆಚ್ಚಿಯಾಪದಪಂಕಜದಲ್ಲಿ ಕೂಡಿ ಸುಖಿಯಾಗಿರುನೀಂ॥ ಶ್ರೀ ಶ್ರೀ ಶ್ರೀ'[೯೦] ಹಾಗೂ ಕುಳ್ಳಹಳ್ಳಿಯ ಒಂದು ಸ್ಮಾರಕವು 'ಸದಾಸಿವ ಪದಕೆ ಬೀರಮಂ ಸಂದಂ'[೯೧] ಎಂಬ ವರ್ಣನೆಗಳು ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಇಲ್ಲಿ ವೀರರು ಸ್ವರ್ಗಲೋಕಕ್ಕೆ ಪ್ರವೇಶಿಸದೆ ನೇರವಾಗಿ ಶಿವಲೋಕಕ್ಕೆ ಹೋಗುತ್ತಾರೆ. ಆದರೆ ಸ್ಮಾರಕಶಿಲ್ಪಗಳಲ್ಲಿನ ಚಿತ್ರಣಗಳನ್ನು ಗಮನಿಸಿದರೆ ವೀರನನ್ನು ಅಪ್ಸರೆಯರು ವೀರಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯವು ಇತರೆ ಸ್ಮಾರಕಶಿಲ್ಪಗಳಲ್ಲಿರುವಂತೆ ಈ ಸ್ಮಾರಕಶಿಲ್ಪಗಳಲ್ಲಿಯೂ ಇವೆ. ವೀರರು ಮಡಿದ ಮೇಲೆ ಅವರಿಗೆ ಶಿವಲೋಕ ಪ್ರಾಪ್ತವಾಗುತ್ತದೆಂಬ ವರ್ಣನೆ ಕಾವ್ಯ, ಜನಪದ ಗೀತೆಗಳಲ್ಲಿಯೂ ದೊರೆಯುತ್ತವೆ. ನಂಜುಂಡ ಕವಿಯ ರಾಮನಾಥಚರಿತೆ ಕಾವ್ಯವು ಕುಮಾರರಾಮನನ್ನು ಕುರಿತು ಇದರಲ್ಲಿ ಕುಮಾರರಾಮನು ಯುದ್ಧರಂಗದಲ್ಲಿ ಮಡಿದ ನಂತರ ಅವನನ್ನು ಕೈಲಾಸಕ್ಕೆ ಬರಮಾಡಿಕೊಳ್ಳಲು ವಿಮಾನವನ್ನು ಶಿವನೇ ಕೊಟ್ಟು ಕಳುಹಿಸುತ್ತಾನೆ ಎಂಬ ಉಲ್ಲೇಖ ದಾಖಲಾಗಿರುವುಂಟು.[೯೨] ಈ ಸಂದರ್ಭವನ್ನು ಕವಿ ನಾಲ್ಕಾರು ಸಾಂಗತ್ಯಗಳಲ್ಲಿ ವರ್ಣಿಸಿದ್ದಾನೆ. ಅವನ ಈ ವರ್ಣನೆಗೆ ಸ್ಮಾರಕಶಿಲ್ಪಗಳಲ್ಲಿನ ವರ್ಣನೆಯೇ ಪ್ರೇರಣೆಯಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಇದೇ ನಂಬಿಕೆ ಜಾನಪದ ಗೀತೆಗಳಲ್ಲಿಯೂ ವ್ಯಕ್ತವಾಗಿದೆ. ಹೋರಾಟದಲ್ಲಿ ಮಡಿದ ವೀರನ ತಾಯಿ ಪುತ್ರಶೋಕದಿಂದ ಆಲಾಪಿಸುತ್ತಿದ್ದಾಗ ಆಕೆಯನ್ನು ಮತ್ತೊಬ್ಬ ಹೆಂಗಸು,

'ತಂಗಿಯಳದೀರೆ ತಂಗ್ಯಮ್ಮ ಅಳದೀರೆ
ತಂಗಿ ಸಿಂಪಮ್ಮ ಅಳದೀರೆ। ನಿಮ್ಮಗುನು
ಲಿಂಗಯಿಕಾನಾವನೆ ಸಿವನಲ್ಲಿ'

ಎಂದು ಸಂತೈಸುತ್ತಾಳೆ. ಈ ಎಲ್ಲಾ ವರ್ಣನೆಗಳನ್ನು ಗಮನಿಸಿ ವಿದ್ವಾಂಸರಾದ ಆರ್. ಶೇಷಶಾಸ್ತ್ರಿಯವರು ಹೀಗೆ ಅಭಿಪ್ರಾಯಿಸಿದ್ದಾರೆ.[೯೩] 'ಆರಂಭದಲ್ಲಿ ವೀರನು ಸ್ವರ್ಗವನ್ನು ಪಡೆಯುತ್ತಾನೆ ಎಂಬ ನಂಬಿಕೆ, ಕಲ್ಪನೆ ಜನರಲ್ಲಿತ್ತು. ಶೈವಧರ್ಮದ ಪ್ರಭಾವದ ನಂತರ ಸ್ವರ್ಗವನ್ನು ಮೀರಿ ಶಿವನಲ್ಲಿ ಐಕ್ಯವಾಗುವುದೇ ಮುಕ್ತಿಪದ ಎಂದರಿತ, ನಂಬಿದ ಜನತೆ ವೀರನು ಹೋರಾಡಿ ಮಡಿಯುವುದರಿಂದ ಸ್ವರ್ಗಸುಖವನ್ನು ಪಡೆದು ಶಿವನ ಬಳಿ ಇರುತ್ತಾನೆಂಬ ನಂಬಿಕೆಯನ್ನು ಬೆಳೆಸಿಕೊಂಡು ಬಂದಿರಬೇಕೆಂಬ ಅಭಿಪ್ರಾಯಗಳನ್ನು ತಾಳಿದ್ದಾರೆ.

ಸ್ಮಾರಕಶಿಲ್ಪಗಳಲ್ಲಿ ಕಂಡುಬರುವ ಶಿವಲೋಕದ ವರ್ಣನೆಯ ಶಿಲ್ಪ ದೃಶ್ಯದ ಕೆತ್ತನೆಯಲ್ಲಿ ಮೂರು ರೀತಿಯಲ್ಲಿ ಪ್ರಸ್ತಾಪಗೊಂಡಿವೆ. ಮೊದಲನೆಯದಾಗಿ, ಬಹುತೇಕ ಸ್ಮಾರಕಶಿಲ್ಪಗಳಲ್ಲಿ ಸಾಮಾನ್ಯವಾಗಿ ಮಧ್ಯದಲ್ಲಿ ಶಿವಲಿಂಗ, ಪೂಜೆ ಮಾಡುತ್ತಿರುವ ಯತಿ ಶಿವಲಿಂಗಕ್ಕೆ ಎಡಭಾಗದಲ್ಲಿ ನಂದಿ, ಬಲಭಾಗದಲ್ಲಿ ವೀರನು ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ದೃಶ್ಯಗಳಿರುತ್ತವೆ. ಎರಡನೆಯದಾಗಿ, ಕೆಲವು ಸ್ಮಾರಕಗಳಲ್ಲಿ ಶಿವಲಿಂಗಕ್ಕೆ ಮಂಟಪ ನಿರ್ಮಿಸಿ ಅಲಂಕಾರಕ್ಕೆ ಆದ್ಯತೆ

ನೀಡಿರುವುದು. ಇಂತಹ ಸ್ಮಾರಕಶಿಲ್ಪಗಳಲ್ಲಿ ಯತಿ ಲಿಂಗದೊಂದಿಗೆ ಮಂಟಪದಲ್ಲಿರುವಂತೆ, ವೀರ ಮತ್ತು ನಂದಿಯನ್ನು ಮಾತ್ರ ಮಂಟಪದ ಹೊರಗಡೆ ಚಿತ್ರಿಸಿರುವುದು ಕಂಡುಬರುತ್ತದೆ. ಮೂರನೆಯದಾಗಿ ದೇವಾಲಯದ ಮಾದರಿಯ ಮಂಟಪವನ್ನು ನಿರ್ಮಿಸಿ ಅದರೊಳಗೆ ಶಿವಲಿಂಗ, ಯತಿ, ವೀರ, ನಂದಿ ಹಾಗೂ ವಾದ್ಯಕಾರರು ಮುಂತಾದ ದೃಶ್ಯಗಳನ್ನು ಹೆಚ್ಚು ವರ್ಣನಾತ್ಮಕವಾಗಿ ಕೆತ್ತನೆ ಮಾಡಿರುವುದು. ಇಂತಹ ಚಿತ್ರಣಗಳು ರಾಷ್ಟ್ರಕೂಟರ ಸ್ಮಾರಕಶಿಲ್ಪಗಳಲ್ಲಿ ಕಂಡುಬರುವುದಿಲ್ಲ. ಇಲ್ಲಿ ವೀರನು ಅಪ್ಸರೆಯರೊಂದಿಗೆ ಶಿವನ ಭಂಗಿಯಲ್ಲಿ ಕುಳಿತಿರುವ ದೃಶ್ಯಗಳಿರುತ್ತವೆ. ಸುತ್ತಲೂ ಸುಂದರವಾದ ದೇವಾಲಯ ಮಾದರಿ ಮಂಟಪದ ಚಿತ್ರಣಗಳಿರುತ್ತವೆ. ಇದರಿಂದ ರಾಷ್ಟ್ರಕೂಟ ಕಾಲಾವಧಿಯಲ್ಲಿ ಶೈವ ಧರ್ಮ ಅಷ್ಟು ಪ್ರಬಲವಾಗಿರಲಿಲ್ಲವೆಂದು ತೋರುತ್ತದೆ.

ಸುಮಾರು ಮೂರು ಅಥವಾ ನಾಲ್ಕು ಅಡಿ ಎತ್ತರದ ಸಣ್ಣ ಗಾತ್ರದ ಸ್ಮಾರಕಶಿಲ್ಪಗಳಲ್ಲಿ ವೀರನು ಎಡಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವಂತೆ, ಮಧ್ಯಭಾಗದಲ್ಲಿ ಪೀಠದ ಮೇಲೆ ಲಿಂಗವಿದ್ದು, ಅದರ ಎದುರು ನಂದಿಯು ಕುಳಿತಂತೆ ಕೆತ್ತಲಾಗಿದೆ. ಬಾಗಳಿ, ಅರಕೆರೆ, ಆಸಗೋಡುನಲ್ಲಿ ಕಂಡುಬರುವ ಸ್ಮಾರಕಶಿಲ್ಪಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ. ಮಧ್ಯಮಗಾತ್ರದ ಸ್ಮಾರಕಶಿಲ್ಪಗಳಲ್ಲಿ ಇದೇ ರೀತಿ ದೃಶ್ಯವಿದ್ದು, ಜೊತೆಗೆ ಲಿಂಗಾರಾಧನೆಯಲ್ಲಿ ತೊಡಗಿದ ಓರ್ವ ಶೈವ ಮುನಿಯು ಕಂಡುಬರುತ್ತಾನೆ. ಆದರೆ ಈ ಸ್ಮಾರಕಗಳಲ್ಲಿ ವೀರನು ಬಲಭಾಗದಲ್ಲಿ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿರುತ್ತದೆ. ದೊಡ್ಡ ಗಾತ್ರದ ಸ್ಮಾರಕಶಿಲ್ಪಗಳಲ್ಲಿ ಶಿವಲೋಕದ ದೃಶ್ಯ ಹೆಚ್ಚು ವರ್ಣನಾತ್ಮಕವಾಗಿವೆ. ಹಗರಿಗುಡಿಹಳ್ಳಿ, ಎಲೆಹೊಳೆ ಗ್ರಾಮದ ಎರಡು ಸ್ಮಾರಕಶಿಲ್ಪಗಳಲ್ಲಿ ಶಿವಲಿಂಗಕ್ಕೆ ಅಷ್ಟೇ ಮಂಟಪವನ್ನು ಮಾಡಿರುವುದು ಕಂಡುಬಂದರೆ, ಬಾಗಳಿಯ ಮೂರು, ಚಿಗಟೇರಿ ಮತ್ತು ಹರಿಹರದ ತಲಾ ಒಂದು ಸ್ಮಾರಕಗಳಲ್ಲಿ ಶಿವಲೋಕದ ದೃಶ್ಯವನ್ನು ದೇವಾಲಯದ ಸೂಕ್ಷ್ಮ ರೂಪದಂತೆ ಬಿಡಿಸಿರುವುದು ಕಂಡುಬರುತ್ತದೆ. ಇಲ್ಲಿ ವೀರನು ಬಲಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿದ್ದು, ಮಧ್ಯದಲ್ಲಿ ಲಿಂಗ, ಲಿಂಗಾರಾಧನೆಯಲ್ಲಿ ತೊಡಗಿರುವ ಯತಿ, ನಂದಿಯ ಚಿತ್ರಣಗಳಿವೆ. ಹಿರೇಮಳಲಿ, ಹನಗವಾಡಿ, ಬಾಗಳಿ, ಬನ್ನಿಕೋಡು ಮತ್ತು ಹರಿಹರದ ಸ್ಮಾರಕಶಿಲ್ಪಗಳಲ್ಲಿ ಪೂಜಾ ಸಂದರ್ಭದಲ್ಲಿ ಬಳಸುವ ಡಮರುಗದಂತಹ ದೊಡ್ಡ ಚರ್ಮದ ವಾದ್ಯವನ್ನು ಓರ್ವನು ನುಡಿಸುತ್ತಿರುವ ಚಿತ್ರಣವಿದೆ. ಬಹುಸಂಖ್ಯೆಯ ಸ್ಮಾರಕಶಿಲ್ಪಗಳಲ್ಲಿ ಒಬ್ಬ ಜಟಧಾರಿ ಯತಿ ಲಿಂಗವನ್ನು ಪೂಜಿಸುತ್ತಿರುವುದು ಸಾಮಾನ್ಯ. ಆದರೆ ಬೆಳಗುತ್ತಿ, ಹನಗವಾಡಿ, ಆಸಗೋಡು, ಅಣಜಿಗೆರೆ ಸ್ಮಾರಕಗಳಲ್ಲಿ ಇಬ್ಬರು ಶೈವ ಮುನಿಗಳು ಲಿಂಗವನ್ನು ಪೂಜಿಸುತ್ತಿರುವಂತೆ ತೋರಿಸಲಾಗಿದೆ. ಅಧ್ಯಯನ ಪ್ರದೇಶದ ಹಲವು ಸ್ಮಾರಕಶಿಲ್ಪಗಳಲ್ಲಿ ಯತಿಗಳು ಜಟಧಾರಿಗಳಾಗಿರುವುದು ವಿಶೇಷವಾಗಿದೆ. ಈ ಶಾಸನಶಿಲ್ಪಗಳಲ್ಲಿ ಕಂಡುಬರುವ ಜಡೆ ಮುನಿಗಳ ಶಿಲ್ಪಗಳು ಲಾಕುಳ ಶೈವ ಯತಿಗಳಾಗಿರಬೇಕೆಂದು ಸಂಶೋಧಕರಾದ ಡಿ.ವಿ. ಪರಮಶಿವಮೂರ್ತಿ ಅಭಿಪ್ರಾಯಿಸಿದ್ದಾರೆ.[೪]

ಸ್ಮಾರಕಶಿಲ್ಪಗಳಲ್ಲಿನ ಶಿವಲೋಕದ ದೃಶ್ಯದಲ್ಲಿ ಕಂಡುಬರುವ ಶಿವಲಿಂಗವನ್ನು ವರ್ಣನಾತ್ಮಕವಾಗಿ ಚಿತ್ರಿಸಿ ಅಲಂಕರಿಸಲಾಗಿದೆ. ಬೆಳಗುತ್ತಿ, ಆಸಗೋಡು, ಚಿಗಟೇರಿ, ಬಾಗಳಿಯಲ್ಲಿನ ಸ್ಮಾರಕಶಿಲ್ಪಗಳಲ್ಲಿ ಲಿಂಗದ ದೇಹ ಭಾಗವನ್ನು ಹಿಂಚಾಚು ಮತ್ತು ಮುಂಚಾಚು ಮಾದರಿಯಲ್ಲಿ ಸುಂದರವಾಗಿ ಕಂಡರಿಸಲಾಗಿದೆ. ಹೊಯ್ಸಳರ ದೇವಾಲಯದ ಭಿತ್ತಿಯಲ್ಲಿ ಕಾಣುವ ಹಿಂಚಾಚು-ಮುಂಚಾಚು ಲಕ್ಷಣಗಳನ್ನು ಶಿಲ್ಪಿಗಳು ಇಲ್ಲಿ ಪ್ರಯೋಗಿಸಿರುವಂತೆ ತೋರುತ್ತದೆ. ಹೊನ್ನಾಳಿ ತಾಲೂಕಿನ ಅರಕೆರೆ, ಚಿಕ್ಕೆರೆಹಳ್ಳಿ, ಬೆಳಗುತ್ತಿ, ಹನಗವಾಡಿ, ಗುಡಿಚಟ್ನಿಹಳ್ಳಿ, ಹರಪನಹಳ್ಳಿ ತಾಲೂಕಿನ ಚಿಗಟೇರಿ, ಹೊಸಕೋಟೆ, ನಿಟ್ಟೂರು, ಅಣಜಿಗೆರೆ, ಬನ್ನಿಕೋಡು, ಬಾಗಳಿ, ಚನ್ನಗಿರಿ ತಾಲೂಕಿನ ಹಿರೇಕೋಗಲೂರು, ಮೆದಿಕೆರೆ, ಬಿಲ್ಲಹಳ್ಳಿ, ಹಾಗೂ ದಾವಣಗೆರೆ ತಾಲೂಕಿನ ಬೇತೂರು ಮುಂತಾದ ಗ್ರಾಮಗಳಲ್ಲಿ ಕಂಡುಬರುವ ಸ್ಮಾರಕಶಿಲ್ಪಗಳಲ್ಲಿ ಲಿಂಗವನ್ನು ರುದ್ರಾಕ್ಷಿ ಹಾರದಿಂದ ಅಲಂಕರಿಸಲಾಗಿದೆ. ಕೆಲವು ಸ್ಮಾರಕಗಳಲ್ಲಿ ಕಿರೀಟದಂತೆ, ಇನ್ನೂ ಕೆಲವೊಂದು ಸ್ಮಾರಕಗಳಲ್ಲಿ ಲಿಂಗದ ತುದಿಯಲ್ಲಿ ನೆಲ್ಲಿಕಾಯಿ ಆಕಾರದಲ್ಲಿ ಸುತ್ತಿದಂತೆ ತೋರಿಸಲಾಗಿದೆ. ಹನಗವಾಡಿ ಮತ್ತು ಆಸಗೋಡು ಸ್ಮಾರಕಗಳಲ್ಲಿ ಲಿಂಗಕ್ಕೆ ಮುಖವಾಡ ರೀತಿಯ ಅಲಂಕಾರದಂತೆ ಕಂಡರಣೆ ಮಾಡಲಾಗಿದೆ. ಶಿವಲೋಕದ ದೃಶ್ಯದ ವರ್ಣನೆಯ ಸಂದರ್ಭದಲ್ಲಿ ಸೂರ್ಯ ಚಂದ್ರರ ಸಂಕೇತಗಳನ್ನು ಸಾಮಾನ್ಯವಾಗಿ ಎಲ್ಲಾ ಸ್ಮಾರಕಶಿಲ್ಪಗಳಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ.

ಅಧ್ಯಯನ ವ್ಯಾಪ್ತಿಯ ಪ್ರದೇಶದಲ್ಲಿ ಕೇವಲ ಕೆಲವು ನಿಸಿದಿ ಸ್ಮಾರಕಶಿಲ್ಪಗಳು ಕಂಡುಬಂದಿವೆ. ವೀರನು ವೈಕುಂಠಕ್ಕೆ ಹೋದ, ಜಿನರಲ್ಲಿ ಸೇರಿದ ಎಂಬ ವರ್ಣನೆಗಳೂ ಅಪರೂಪವಾಗಿ ಕಂಡುಬರುವುದನ್ನು ಗಮನಿಸಬಹುದು. ಚನ್ನಗಿರಿ ತಾಲೂಕು ಹಿರೇಕೋಗಲೂರಿನ ಗ್ರಾಮದಲ್ಲಿನ ಸ್ಮಾರಕಶಿಲ್ಪದ ಪಾಠದಲ್ಲಿ ವೀರನೊಬ್ಬ 'ಗೋಹರಿಸಾಹರಿಯಾಗಿರೆ ಕಾದಿದ ಮೂಲೋಕವಜೆಯೆ ಜಿನರೊಳು ಸಂದ'ನೆಂಬ[೯೫] ವರ್ಣನೆ ದೊರೆಯುತ್ತದೆ.

ಮೇಲಿನ ಸ್ಮಾರಕಶಿಲ್ಪಗಳ ಶಾಸನಪಾಠ ಮತ್ತು ಶಿಲ್ಪಗಳಲ್ಲಿ ವ್ಯಕ್ತವಾಗುವ ಪರಲೋಕದ ಚಿತ್ರಣವು ಅಂದಿನ ಸಮಾಜದ ನಂಬಿಕೆಯನ್ನು ಪ್ರತಿನಿಧಿಸುತ್ತದೆ. ಅದರೊಂದಿಗೆ ಸಮಕಾಲೀನ ಮತಗಳ ಪ್ರತಿಕ್ರಿಯೆಯನ್ನು ತೋರಿಸುತ್ತದೆ. ಇದರಿಂದ ಸ್ಪಷ್ಟವಾಗುವ ಅಂಶವೆಂದರೆ, ವೀರನು ಯಾವ ಮತಕ್ಕೆ ಸೇರಿರುವನೋ ಆ ಮತದ ದೇವರಿಗೆ ಸೇರಿದ ಲೋಕದಲ್ಲಿ ಅಂತಿಮ ಸ್ಥಾನ ಪಡೆಯುತ್ತಾನೆ ಎಂಬ ನಂಬಿಕೆಯು ಅಂದಿನ ಕಾಲದಲ್ಲಿ ಇದ್ದಿತು. ಇದೇ ಅಂತಿಮ ಲೋಕವಾಗಿದೆ. ಅಂದರೆ ಸ್ವರ್ಗವು ಅಂತಿಮವಾದುದಲ್ಲ ಎಂದು ಅಂದಿನ ಸಮಾಜ ಭಾವಿಸಿದಂತೆ ತೋರುತ್ತದೆ. ಅಲ್ಲದೆ ಸಮಕಾಲೀನ ಮತಗಳು ವೀರತ್ವ ಮತ್ತು ವೀರಮರಣ ಕಲ್ಪನೆಯನ್ನು ಒಪ್ಪಿಕೊಂಡಿದ್ದವು ಎಂಬುದನ್ನು ಸ್ಮಾರಕಶಿಲ್ಪಗಳಲ್ಲಿ ವ್ಯಕ್ತವಾಗಿರುವ ಚಿತ್ರಣಗಳು ದೃಢಪಡಿಸುತ್ತವೆ.

### ೩.೫. ಸ್ಮಾರಕ ಶಿಲ್ಪಗಳ ಲಕ್ಷಣ ಅಥವಾ ವಿನ್ಯಾಸ ಕ್ರಮ

ಸ್ಮಾರಕಶಿಲ್ಪಗಳನ್ನು ಗಮನಿಸಿದರೆ, ಅವುಗಳ ನಿರ್ಮಾಣಕ್ಕೆ ಒಂದು ನಿರ್ದಿಷ್ಟ ವಿನ್ಯಾಸ ಕ್ರಮವನ್ನು ಅನುಸರಿಸಿಕೊಂಡು ಬಂದಿರುವುದನ್ನು ಗಮನಿಸಬಹುದು. ಈ ಸಂಪ್ರದಾಯಕ್ಕೆ ಶಾಸನಕವಿಗಳು ಮತ್ತು ಶಿಲ್ಪಿಗಳು ಒಂದು ಸ್ಪಷ್ಟ ರೂಪವನ್ನು ನೀಡಿದ್ದಾರೆ.[೯೬] ಸ್ಮಾರಕಶಿಲ್ಪಗಳ

ಸ್ಥಾಪನೆಯ ಉದ್ದೇಶವು ವೀರನ ತ್ಯಾಗ ಮತ್ತು ಶೌರ್ಯದ ಸ್ಮರಣೆಯಾಗಿದೆ. ಅದರೊಂದಿಗೆ ವೀರತ್ವವನ್ನು ಪ್ರಚಾರ ಮಾಡಿ ವೀರರನ್ನು ಹೋರಾಟಕ್ಕೆ ಪ್ರೇರೇಪಿಸುವುದಾಗಿದೆ. ಈ ಹಿಂದಿನ ಅಧ್ಯಾಯದಲ್ಲಿ ವಿಚಾರ ಮಾಡಿರುವಂತೆ ಸ್ವರ್ಗಪ್ರಾಪ್ತಿಯು ವೀರರಿಗೆ ಇದ್ದ ಒಂದು ಆದರ್ಶವಾಗಿತ್ತೆಂದು ತೋರುತ್ತದೆ. 'ವೀರರು ದೇವಲೋಕ ಅಂದರೆ ಸ್ವರ್ಗಕ್ಕೆ ಹೋಗಲಿ ಎಂಬ ಆಶಯ'ವು ಕೂಡ ಸ್ಮಾರಕಶಿಲ್ಪಗಳ ನಿರ್ಮಾಣ ಕಾರಣವಾಗಿದೆಯೆಂದು ವಿದ್ವಾಂಸರೊಬ್ಬರು ಅಭಿಪ್ರಾಯಿಸಿರುವುದುಂಟು.[೯೭] ವೀರನು ಮಾಡಿದ ಹೋರಾಟವನ್ನು ಮೂಡಿಸಬೇಕಾದ್ದು ಶಿಲ್ಪಗಳ ಕಾರ್ಯವಾದರೂ, ವೀರನು ಪಡೆದ ಸ್ವರ್ಗವೂ ಶಿಲ್ಪದ ಒಂದು ಭಾಗದಲ್ಲಿ ಸ್ಥಾನವನ್ನು ಪಡೆಯಿತು. ಆ ನಂತರದ ಕಾಲದಲ್ಲಿ ವೀರರಿಗೆ ಸ್ವರ್ಗಪ್ರಾಪ್ತಿಯಾದ ರೀತಿಯ ವಿವರಗಳನ್ನು ಬಿಡಿಸುವುದು ತನ್ನ ಉದ್ದೇಶ ಎಂಬುದಾಗಿ ಶಿಲ್ಪಿಯು ಭಾವಿಸಿದನ್ನೆಲಾಗಿದೆ. ಇದರಲ್ಲಿ ಸಮಾಜ ಮತ್ತು ಅರಸರಿಂದಲೂ ಶಿಲ್ಪಿಗೆ ಬೆಂಬಲ ದೊರೆತಿರಬೇಕು. ಆದ್ದರಿಂದ ಮಧ್ಯಕಾಲೀನ ಕರ್ನಾಟಕದಲ್ಲಿ ಸ್ಮಾರಕಶಿಲ್ಪಿಗಳ ತಯಾರಿಕೆಯು ಒಂದು ಉದ್ಯಮದ ಸ್ವರೂಪವನ್ನು ಪಡೆದಿದ್ದಿತು. ಅವುಗಳ ರಚನೆಯಲ್ಲಿ ಶಿಲ್ಪಿಗಳು, ಶಾಸನಕವಿಗಳು, ಬರಹಗಾರರು ಮತ್ತು ಲಿಪಿಗಾರರು ಹೆಚ್ಚು ತೊಡಗಿಸಿಕೊಂಡಿರುವುದು ತಿಳಿಯುತ್ತದೆ.[೯೮] ಸ್ಮಾರಕಶಿಲ್ಪಗಳ ಸ್ಥಾಪನೆಯಿಂದಾಗಿ ಒಂದು ವಿಶಿಷ್ಟ ಶೈಲಿ ಮತ್ತು ವೀರಭಾಷೆಯು ರೂಪು ತಳೆದಿವೆ. ಸ್ಮಾರಕಶಿಲ್ಪಗಳ ನಿರ್ಮಾಣಕ್ಕೆ ಸಮಕಾಲೀನ ದೇವಾಲಯಗಳ ನಿರ್ಮಾಣಕ್ಕೆ ಬಳಸಿರುವ ಶಿಲೆಯನ್ನೇ ಉಪಯೋಗಿಸಿಕೊಂಡಿದ್ದಾರೆ. ಶಿಲೆಯ ಮೇಲೆ ಶಿಲ್ಪ ಮತ್ತು ಶಾಸನಪಾಠ ಕೆತ್ತಲು ಮುಹೂರ್ತವನ್ನು ನಿಗದಿಪಡಿಸಲಾಗುತ್ತಿತ್ತು.[೯೯] ಕಲ್ಲನ್ನು ಪವಿತ್ರಗೊಳಿಸಿ ನಿಗದಿತ ಸ್ಥಳದಲ್ಲಿ ನೆಡುತ್ತಿದ್ದ ಕ್ರಮವನ್ನು ಪಾಲಿಸಿಕೊಂಡು ಬಂದಿರುವ ಉದಾಹರಣೆಗಳಿವೆ. ಈ ಕಲ್ಲು ನೆಡುವ ಕಾರ್ಯಕ್ರಮವನ್ನು ದೇವತಾಪ್ರತಿಷ್ಠಾಪನೆಯ ರೀತಿ ಧಾರ್ಮಿಕ ವಿಧಿಯ ಮೂಲಕ ಆಚರಿಸಲಾಗುತ್ತಿತ್ತು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೦೦] ಸ್ಮಾರಕಶಿಲ್ಪಗಳಾದ ವೀರಗಲ್ಲು, ಮಾಸ್ತಿಗಲ್ಲು, ವೀರ ಮಾಸ್ತಿಗಲ್ಲು, ಆತ್ಮಬಲಿ ಮತ್ತು ನಿಸಿದಿ ಶಿಲ್ಪಗಳನ್ನು ನಿರ್ಮಿಸಲು ಒಂದು ನಿರ್ದಿಷ್ಟವಾದ ಕ್ರಮವನ್ನು ಅನುಸರಿಸಿರುವುದುಂಟು. ಈ ಎಲ್ಲಾ ಸ್ಮಾರಕಶಿಲ್ಪಗಳಲ್ಲಿ ವಿವರಗಳನ್ನು ಶಿಲೆಯ ತಳಭಾಗದಲ್ಲಿ ಆರಂಭವಾಗಿ ಮೇಲಕ್ಕೆ ಹೋಗುತ್ತದೆ. ಆದರೆ ಯಾವ ಸ್ಮಾರಕಶಿಲ್ಪಗಳಲ್ಲಿಯೂ ಘಟನೆಯ ಚಿತ್ರಣ ಮೇಲಿಂದ ಆರಂಭವಾಗಿ ಕೆಳಕ್ಕೆ ನಿರೂಪಣೆಯಾಗಿರುವ ಉದಾಹರಣೆಗಳು ಈವರೆಗೆ ಕಂಡುಬಂದಿಲ್ಲ. ಕಾರಣ ಭೂಲೋಕದಲ್ಲಿ ಯುದ್ಧ ನಡೆಯುವುದು, ಈ ಭೂಲೋಕದ ಮೇಲೆ ಸ್ವರ್ಗ ಇರುವುದು ಆದ್ದರಿಂದ ಭೂಲೋಕದಿಂದ ಮೇಲಿರುವ ಸ್ವರ್ಗಕ್ಕೆ ವೀರನು ಹೋಗುತ್ತಾನೆ ಎಂಬ ನಂಬಿಕೆಯನ್ನು ಶಿಲ್ಪದಲ್ಲಿಯೂ ಪರಿಣಾಮಕಾರಿಯಾಗಿ ಚಿತ್ರಿಸುವ ಸಲುವಾಗಿ ಈ ವಿಧಾನವನ್ನು ಅಳವಡಿಸಲು ಕಾರಣವೆಂದು ತೋರುತ್ತದೆ.[೧೦೧]

## ೩.೫.೧. ವೀರಗಲ್ಲು

ಆರಂಭದ ವೀರಗಲ್ಲುಗಳಿಂದ ಹಿಡಿದು ವಿಜಯನಗರದ ಕಾಲದವರೆಗಿನ ಹಂತಗಳ ಸೂತ್ರದಲ್ಲಿ ಬಿಡಿಸಲಾಗಿರುವ ಶಿಲ್ಪದಲ್ಲಿ ಮೊದಲನೆಯ ಹಂತದಲ್ಲಿ ವೀರನು ಶತ್ರು ಪಕ್ಷದವರೊಡನೆ ಹೋರಾಟ ಮಾಡುತ್ತಿರುವ ಚಿತ್ರಣ ದೊರೆಯುತ್ತದೆ. ಇದೇ ಹಂತಗಳ ಸೂತ್ರವನ್ನು ವಿಸ್ತೃತ ಮಾಡಿಕೊಂಡಿರುವ ವೀರಗಲ್ಲುಗಳಲ್ಲಿ ವೀರನು ಹೋರಾಟಕ್ಕೆ ಸನ್ನದ್ಧನಾಗಿ ಹೋಗುತ್ತಿರುವಂತೆಯೂ, ಆ ನಂತರ ವೀರನು ಶತ್ರು ಪಕ್ಷದವರೊಡನೆ ಹೋರಾಟ ಮಾಡುತ್ತಿರುವಂತೆಯೂ ಚಿತ್ರಿಸಲಾಗಿರುತ್ತದೆ. ಸಾಮಾನ್ಯವಾಗಿ ವೀರಗಲ್ಲುಗಳು ಆಯತಾಕಾರದಲ್ಲಿದ್ದು, ಮೇಲ್ಭಾಗವು ಕಮಾನಿನ ರೀತಿಯಲ್ಲಿ ಮೂಡಿಬಂದಿರುತ್ತವೆ. ಕನಿಷ್ಠ ಮೂರು, ಗರಿಷ್ಠ ಆರು ಹಂತಗಳಲ್ಲಿ ಅಥವಾ ಪಟ್ಟಿಕೆಗಳಲ್ಲಿ ದೃಶ್ಯವರ್ಣನೆ ಇರುತ್ತದೆ. ಎರಡು ದೃಶ್ಯಗಳ ಮಧ್ಯದಲ್ಲಿರುವ ಸಮತಟ್ಟು ಭಾಗದಲ್ಲಿ ಸಂಬಂಧಿತ ಶಾಸನಪಠ್ಯದ ಕೆತ್ತನೆಯು ಕಂಡುಬರುತ್ತದೆ. ಮೂರು ಪಟ್ಟಿಕೆಗಳಲ್ಲಿ ವೀರಗಲ್ಲು ಶಿಲ್ಪದಲ್ಲಿ ಮೊದಲ ಹಂತದಲ್ಲಿ ಹೋರಾಟದ ದೃಶ್ಯ, ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರಣ ಮತ್ತು ಮೂರನೆಯ ಹಂತದಲ್ಲಿ ಶಿವಲೋಕದ ದೃಶ್ಯವಿರುತ್ತದೆ. ಈ ಮಾದರಿಯ ವೀರಗಲ್ಲುಗಳು ಅಧ್ಯಯನ ವ್ಯಾಪ್ತಿಯ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಐದು ಅಥವಾ ಆರು ಹಂತಗಳ ವೀರಗಲ್ಲುಗಳಲ್ಲಿ ಎರಡು ಹಂತದಲ್ಲಿ ಹೋರಾಟದ ದೃಶ್ಯಗಳು, ನಂತರ ಒಂದು ಅಥವಾ ಎರಡು ಹಂತಗಳಲ್ಲಿ ವೀರನನ್ನು ಸ್ವರ್ಗಕ್ಕೆ ಸ್ವಾಗತಿಸುತ್ತಿರುವ, ವಿವಿಧ ವಾದ್ಯಗಳನ್ನು ನುಡಿಸುತ್ತಿರುವ ಮತ್ತು ನೃತ್ಯ ಮಾಡುತ್ತಿರುವ ದೇವತಾಸ್ತ್ರೀಯರ ದೃಶ್ಯವಿರುತ್ತದೆ. ಅಂತಿಮವಾಗಿ ಶಿವಲೋಕದ ದೃಶ್ಯವಿರುತ್ತದೆ. ಮೂರು ಹಂತಗಳಲ್ಲಿ ಚಿತ್ರಿಸಿರುವ ಕೆಲವು ವೀರಗಲ್ಲುಗಳ ಹೋರಾಟದ ಹಂತದಲ್ಲಿ ಇಬ್ಬರು ವೀರರು ಒಟ್ಟಿಗೆ ಹೋರಾಡುತ್ತಿರುವ ನಿದರ್ಶನಗಳಿವೆ. ಉದಾಹರಣೆಗೆ, ಹೊನ್ನಾಳಿ ತಾಲೂಕಿನ ಚಿಕ್ಕೆರೆಹಳ್ಳಿ, ಸೊರಟೂರು, ಹನಗವಾಡಿ, ದಾವಣಗೆರೆ ತಾಲೂಕಿನ ವಡೇರಹಳ್ಳಿ, ಅಣಜಿ, ಆಲೂರು, ಚನ್ನಗಿರಿ ತಾಲೂಕಿನ ಬಿಲ್ಲಹಳ್ಳಿ, ಮತ್ತು ಹರಪನಹಳ್ಳಿ ತಾಲೂಕಿನ ಬಾಗಳಿ ಗ್ರಾಮಗಳಲ್ಲಿನ ವೀರಗಲ್ಲುಗಳಲ್ಲಿ ಕಾಣಬಹುದಾಗಿದೆ. ಹೊನ್ನಾಳಿ ತಾಲೂಕಿನ ಚಿಕ್ಕಗೋಣಿಗೆರೆ, ಹರಪನಹಳ್ಳಿ ತಾಲೂಕಿನ ಹಲುವಾಗಿಲು ಮತ್ತು ಜಗಳೂರು ತಾಲೂಕಿನ ಆಸಗೋಡು ಗ್ರಾಮಗಳ ವೀರಗಲ್ಲುಗಳಲ್ಲಿ ಒಂದೇ ಪಟ್ಟಿಕೆಯಲ್ಲಿ ಮೂವರು ವೀರರು ಹೋರಾಡುತ್ತಿರುವುದನ್ನು ಚಿತ್ರಿಸಲಾಗಿದೆ. ಈ ಮಾದರಿಯ ವೀರಗಲ್ಲುಗಳು ಸಿಗುವುದು ಅಪರೂಪವಾಗಿದೆ. ಇನ್ನೂ ಕೆಲವು ವೀರಗಲ್ಲುಗಳಲ್ಲಿ ಒಬ್ಬನೇ ವೀರ ಹೋರಾಡುತ್ತಿರುವ ದೃಶ್ಯವನ್ನು ಎರಡು ಹಂತಗಳಲ್ಲಿ ಕೆತ್ತನೆ ಮಾಡಲಾಗಿದೆ. ಹರಿಹರ ತಾಲೂಕಿನ ಬನ್ನಿಕೋಡು, ಹರಿಹರ, ಗಂಗನರಸಿ, ಹೊನ್ನಾಳಿ ತಾಲೂಕಿನ ಕಡತಿ, ಚನ್ನಗಿರಿ ತಾಲೂಕಿನ ನಲ್ಕುದರೆ, ಮತ್ತು ದಾವಣಗೆರೆ ತಾಲೂಕಿನ ಎಲೆಬೇತೂರು ಗ್ರಾಮಗಳಲ್ಲಿ ತಲಾ ಎರಡು ಹಾಗೂ ಹರಿಹರ ತಾಲೂಕಿನ ಚಿಕ್ಕಬಿದಿರೆ ಗ್ರಾಮದ ಮೂರು ವೀರಗಲ್ಲುಗಳಲ್ಲಿ ಆ ದೃಶ್ಯಗಳು ಕಂಡುಬರುತ್ತವೆ. ಇಂತಹ ಶಿಲ್ಪಗಳಲ್ಲಿ ಶತ್ರು ಪಕ್ಷದವರು ವೀರನ ಮೇಲೆ ಆಕ್ರಮಣ ಮಾಡುತ್ತಿರುವಂತೆ ಮೊದಲನೆಯ

ಭಾಗದಲ್ಲಿಯೂ, ಎರಡನೆಯ ಭಾಗದಲ್ಲಿ ವೀರನು ಶತ್ರುಗಳನ್ನು ಸಮರ್ಥವಾಗಿ ಎದುರಿಸುತ್ತಿರುವಂತೆಯೂ ಬಿಡಿಸಲಾಗಿರುತ್ತದೆ ಎಂದು ವಿದ್ವಾಂಸರಾದ ಆರ್. ಶೇಷಶಾಸ್ತ್ರಿ ಅವರು ಅಭಿಪ್ರಾಯಪಟ್ಟಿದ್ದಾರೆ.[೧೧೨] ಆದರೆ ಹರಿಹರ ತಾಲೂಕಿನ ಹರಿಹರ, ಚಿಕ್ಕಬಿದಿರೆ ಮತ್ತು ಚನ್ನಗಿರಿ ತಾಲೂಕಿನ ನಲ್ಲುದುರೆ ಗ್ರಾಮಗಳಲ್ಲಿನ ವೀರಗಲ್ಲುಗಳಲ್ಲಿ ವೀರರು ಮೊದಲ ಹಂತದಲ್ಲಿಯೇ ಶತ್ರುಗಳನ್ನು ಸಮರ್ಥವಾಗಿ ಎದುರಿಸಿರುವುದು ಕಂಡುಬರುತ್ತದೆ. ಇದರಿಂದಾಗಿ ವೀರನ ಹೋರಾಟದ ತೀವ್ರತೆಯನ್ನು(ಪರಾಕ್ರಮ) ತೋರಿಸುವ ದೃಷ್ಟಿಯಿಂದ ಶಿಲ್ಪಿಯು ಈ ರೀತಿ ಎರಡು ಹಂತಗಳಲ್ಲಿ ಚಿತ್ರಿಸಿರಬಹುದೆಂದು ನನ್ನ ವೈಯಕ್ತಿಕ ಅಭಿಪ್ರಾಯವಾಗಿದೆ. ಚನ್ನಗಿರಿ ತಾಲೂಕಿನ ದೊಂದ್ರಘಟ್ಟ, ಹೊನ್ನಾಳಿ ತಾಲೂಕಿನ ಸೊರಟೂರು ಮತ್ತು ಹನಗವಾಡಿಯ ವೀರಗಲ್ಲುಗಳಲ್ಲಿ ಇಬ್ಬರು ವೀರರು ಪ್ರತ್ಯೇಕವಾಗಿ ಶತ್ರುಗಳೊಡನೆ ಹೋರಾಡುತ್ತಿರುವ ದೃಶ್ಯ ಕಂಡುಬರುತ್ತವೆ. ಕೆಲವು ವೀರಗಲ್ಲುಗಳಲ್ಲಿ ವೀರನು ಯುದ್ಧರಂಗಕ್ಕೆ ತೆರಳುತ್ತಿರುವ ಚಿತ್ರಣಗಳೂ ಕಂಡುಬರುತ್ತದೆ. ಉದಾಹರಣೆಗೆ ಹೊನ್ನಾಳಿ ತಾಲೂಕಿನ ಬೆಳಗುತ್ತಿ, ಗುಡಿಚಟ್ನಿಹಳ್ಳಿ, ಹಳೇಜೋಗ, ಫಲವನಹಳ್ಳಿ ವೀರಗಲ್ಲುಗಳಲ್ಲಿ ವೀರರು ಪಲ್ಲಕ್ಕಿಯಲ್ಲಿ ಯುದ್ಧರಂಗಕ್ಕೆ ಪ್ರಯಾಣಿಸುತ್ತಿರುವ ದೃಶ್ಯವಿದೆ. ಯಾವುದೇ ವೀರಗಲ್ಲಿನ ಶಿಲ್ಪವನ್ನು ಗಮನಿಸಿದರೂ, ಆ ವೀರಗಲ್ಲು ಸ್ಮಾರಕವಾಗಿರುವ ವೀರನನ್ನು ವೀರಗಲ್ಲಿನ ಬಲಭಾಗಕ್ಕೂ, ಶತ್ರುವನ್ನು ವೀರಗಲ್ಲಿನ ಎಡಭಾಗಕ್ಕೂ ಇರುವಂತೆ ಶಿಲ್ಪದಲ್ಲಿ ಬಿಡಿಸಿರುತ್ತಾರೆ. ಇದು ಒಂದು ಸಾಮಾನ್ಯ ನಿಯಮ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಶಿಲ್ಪಿಗಳು ಕೋಟೆಕಾಳಗದ ದೃಶ್ಯವನ್ನು ಬಹುಸಮರ್ಥವಾಗಿ ವೀರಗಲ್ಲುಗಳ ಶಿಲ್ಪದಲ್ಲಿ ಬಿಡಿಸಿದ್ದಾರೆ. ಎಲೆಬೇತೂರಿನ ಒಂದು ವೀರಗಲ್ಲಿನಲ್ಲಿ ಕೋಟೆಯನ್ನು ಆಕ್ರಮಿಸಲು ಬರುತ್ತಿರುವ ಶತ್ರು ಪಕ್ಷದವರನ್ನು ಕೋಟೆಯ ಮೇಲಿಂದಲೇ ಎದುರಿಸಿ ತಮ್ಮ ಕೋಟೆಯನ್ನು ರಕ್ಷಿಸಿಕೊಳ್ಳಲು ಹೆಣಗುತ್ತಿರುವ ವೀರರನ್ನು ಗಮನಿಸಬಹುದು. ಬಾಗಳಿಯ ಒಂದು ವೀರಗಲ್ಲಿನಲ್ಲಿ ಕೋಟೆಯ ದ್ವಾರದ ಬಳಿಯೇ ಯುದ್ಧವಾಗುತ್ತಿರುವುದರನ್ನು ಗಮನಿಸಬಹುದು. ಭಾನುವಳ್ಳಿಯ ಶಿಲ್ಪದಲ್ಲಿ ಅಶ್ವಾರೂಢನಾಗಿರುವ ವೀರನು ಕೋಟೆಯ ಪ್ರವೇಶ ದ್ವಾರದಲ್ಲಿ ಹಲವು ಶತ್ರುಗಳನ್ನು ಕೊಂದಿರುವ ದೃಶ್ಯವಿದೆ. ಎಲೇಬೇತೂರು ಮತ್ತು ಬೆಳಗುತ್ತಿಯ ನಾಲ್ಕು ವೀರಗಲ್ಲುಗಳು ಕೋಟೆ ಕಾಳಗದ ದೃಶ್ಯ ಹೊಂದಿವೆ. ಆ ಶಿಲ್ಪಗಳ ಬದಿಯ ಅಂಚುಗಳಲ್ಲಿ ಕೋಟೆಯ ತೆನೆಗಳಿವೆ.

ತುರುಗೋಳ್ ವೀರಗಲ್ಲು ಸ್ಮಾರಕಗಳಲ್ಲಿ ವೀರನ ಹಿಂಭಾಗದಲ್ಲಿ ಸಾಲಾಗಿ ದನಗಳ ಶಿಲ್ಪವನ್ನು ಬಿಡಿಸಲಾಗಿರುತ್ತದೆ. ಅದು ವೀರನು ದನಗಳ ರಕ್ಷಣೆಯಲ್ಲಿ ಯಶಸ್ವಿಯಾಗಿದ್ದಾನೆಂದು ಧ್ವನಿಸುತ್ತದೆ. ಶತ್ರುಗಳು ದನಗಳ ಮೇಲೆ ಬೀಳದಂತೆ ಅವುಗಳಿಗೆ ಅಡ್ಡ ನಿಂತು ವೀರನು ಹೋರಾಡುತ್ತಿರುವಂತೆಯೂ ಕೆತ್ತಲಾಗಿರುತ್ತದೆ. ಚಿಗಟೇರಿ, ಪುನಭಘಟ್ಟ, ಬಾಗಳಿ, ಮಲೆಮಾಚಿಕೆರೆ, ಕಲ್ಲೇದೇವರಪುರ ಮುಂತಾದ ಗ್ರಾಮಗಳ ತುರುಗೋಳ್ ವೀರಗಲ್ಲುಗಳಲ್ಲಿ ದನಗಳನ್ನು ವೀರನ ಹಿಂಭಾಗದಲ್ಲಿ ಬದಲಿಗೆ ಹೋರಾಟ ಮತ್ತು ಸ್ವರ್ಗಾರೋಹಣ ನಡುವಿನ ಮಧ್ಯಪಟ್ಟಿಕೆಯಲ್ಲಿ

ಕೆತ್ತಲಾಗಿದೆ. ಚಿಕ್ಕಗೋಣಿಗೆರೆ ಗ್ರಾಮದ ಒಂದು ತುರುಗೋಳ್ ಸ್ಮಾರಕದಲ್ಲಿ ಹೋರಾಟದ ದೃಶ್ಯಪಟ್ಟಿಕೆಯ ಕೆಳಭಾಗದಲ್ಲಿ ಚಿತ್ರಿಸಲಾಗಿದೆ. ಕುಂಕೋವಾ, ಆಲೂರು ಮತ್ತು ಬಾಗಳಿಯ ಎರಡು ವೀರಗಲ್ಲುಗಳಲ್ಲಿ ಹೋರಾಟದಿಂದ ಚೆಲ್ಲಾಪಿಲ್ಲಿಯಾಗಿ(ದಿಕ್ಕಿಗೊಂದು) ಚೆದುರಿ ಓಡುತ್ತಿರುವ ದನಗಳನ್ನು ಗಮನಿಸಬಹುದು. ನಲ್ಕುದುರೆಯ ವೀರಗಲ್ಲೊಂದರಲ್ಲಿ ಹೋರಾಟದ ಆರ್ಭಟಕ್ಕೆ ಹೆದರಿ ಬಾಲವನ್ನೆತ್ತಿಕೊಂಡು ಓಡುತ್ತಿರುವ ದನಗಳ ಚಿತ್ರಣವಿದೆ.

ಯುದ್ಧದ ವಿವರಣೆಯು ವೀರಗಲ್ಲಿನ ಗಾತ್ರವನ್ನಾಧರಿಸಿದೆ. ಮೂರು ಹಂತದ ವೀರಗಲ್ಲುಗಳಲ್ಲಿ ಸಾಮಾನ್ಯವಾಗಿ ವೀರನು ಒಬ್ಬ, ಇಬ್ಬರು ಅಥವಾ ಮೂವರು ಶತ್ರು ಸೈನಿಕರನ್ನು ಎದುರಿಸುತ್ತಿರುವ ಚಿತ್ರಣವಿರುತ್ತದೆ. ನಾಲ್ಕು ಅಥವಾ ಐದು ಹಂತದ ವೀರಗಲ್ಲುಗಳಲ್ಲಿ ವೀರನ ಪಡೆ ಮತ್ತು ವಿರೋಧಿ ಸೈನಿಕರ ನಡುವೆ ಹೋರಾಡುವ ದೃಶ್ಯವನ್ನು ಎರಡು ಹಂತಗಳಲ್ಲಿ ತೋರಿಸಲಾಗಿದೆ. ವಿವಿಧ ಆಯುಧಗಳನ್ನು ಧರಿಸಿದ, ಪದಾತಿ-ಅಶ್ವರೋಹಿಗಳನ್ನೊಳಗೊಂಡ ಚಿತ್ರಣವು ಸಾಮಾನ್ಯವಾಗಿರುತ್ತದೆ. ಕೆಲವೊಂದು ಸ್ಮಾರಕಗಳಲ್ಲಿ ಆನೆ ಮತ್ತು ಒಂಟೆಗಳನ್ನು ಚಿತ್ರಿಸಿರುವುದು ಕಂಡುಬರುತ್ತದೆ. ಪರಸ್ಪರ ಹೋರಾಟದಲ್ಲಿ ನಿರತರಾದವರು, ವೀರನಿಗೆ ಬಾಗಿ ಶರಣಾದವರು, ಯುದ್ಧ ವಾದ್ಯಗಳನ್ನು ನುಡಿಸುವವರು, ಮಡಿದು ಬಿದ್ದಿರುವ ಸೈನಿಕರ ಹೆಣಗಳು, ಹೆಣಗಳ ಮಾಂಸವನ್ನು ತಿನ್ನಲು ಮರದ ಮೇಲೆ ಕಾದು ಕುಳಿತಿರುವ ಪಕ್ಷಿಗಳು ಇನ್ನೂ ಮುಂತಾದ ಹಲವು ದೃಶ್ಯಗಳನ್ನು ಅಧ್ಯಯನ ಪ್ರದೇಶದ ವೀರಗಲ್ಲುಗಳಲ್ಲಿ ಚಿತ್ರಿಸಿರುವುದನ್ನು ಗಮನಿಸಬಹುದು.

**೩.೫.೨. ಅನುಗಮನ ಸತಿಗಲ್ಲು (ಮಾಸ್ತಿಗಲ್ಲು)**

ಅಗ್ನಿಪ್ರವೇಶ, ಸಲ್ಲೇಖನವ್ರತ ಅಥವಾ ಸಮಾಧಿಪ್ರವೇಶ ಮೂಲಕವೋ ತಮ್ಮನ್ನು ಪತಿಗೆ ಸಮರ್ಪಿಸಿಕೊಂಡ ಮಹಾಸತಿಯರ ಹೆಸರಿನಲ್ಲಿ ನಿಲ್ಲಿಸಿದ ಹಲವು ಸ್ಮಾರಕಗಳು ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ದೊರೆತಿವೆ. ಅವುಗಳನ್ನು ನಾಲ್ಕು ವಿಧಾನದಲ್ಲಿ ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಮೊದಲನೆಯದಾಗಿ, ಪೂರ್ಣ ಸತಿಶಿಲ್ಪ, ಎರಡನೆಯದಾಗಿ ಪೂರ್ಣ ಸತಿ ಮತ್ತು ಚಿಕ್ಕದಾದ ವೀರನ ಶಿಲ್ಪ, ಮೂರನೆಯದಾಗಿ ಇಬ್ಬರು ಸತಿಯರ ಪೂರ್ಣಶಿಲ್ಪ, ನಾಲ್ಕನೆಯದಾಗಿ ಒಕ್ಕೈ ಮಾಸ್ತಿಶಿಲ್ಪ. ಈ ನಾಲ್ಕು ಮಾದರಿಯ ಶಿಲ್ಪಗಳನ್ನು ಅನುಗಮನ ಸತಿಗಲ್ಲುಗಳೆಂದೂ ಸಹ ಕರೆಯಲಾಗುತ್ತದೆ. ಈ ಬಗ್ಗೆ ಮುಂದಿನ ಅಧ್ಯಾಯದಲ್ಲಿ ವಿಸ್ತೃತವಾಗಿ ವಿವರಿಸಲಾಗಿದೆ.

ಒಂದು ಮತ್ತು ಎರಡನೆಯ ವಿಧಾನದ ಮಾಸ್ತಿಗಲ್ಲುಗಳಲ್ಲಿ ಸತಿಯರು ಸಾಮಾನ್ಯವಾಗಿ ತಮ್ಮ ಬಲಗೈಯನ್ನು ಮೇಲಕ್ಕೆ ಎತ್ತಿ ಹರಸುತ್ತಿರುವಂತೆ, ಎಡಗೈಯಲ್ಲಿ ಕನ್ನಡಿ ಹಿಡಿದಿರುವ ದೃಶ್ಯವಿರುತ್ತದೆ. ಹೆಚ್ಚಿನ ಸತಿಗಲ್ಲುಗಳಲ್ಲಿ ಹೆಬ್ಬೆರಳು ಮತ್ತು ಅದರ ಪಕ್ಕದ ಬೆರಳುಗಳ ಮಧ್ಯೆ ನಿಂಬೆಯ ಹಣ್ಣನ್ನು ಹಿಡಿದಿರುತ್ತಾಳೆ ಹಾಗೂ ಎರಡು ಕೈ ತುಂಬ ಬಳೆಗಳು ಇರುವಂತೆ ಚಿತ್ರಿಸಿರುವುದು ಸಾಮಾನ್ಯವಾಗಿರುತ್ತದೆ. ಎರಡನೆಯ ಪ್ರಕಾರದ ಸತಿಗಲ್ಲಿನ ವಿಶೇಷವೆಂದರೆ ಅಲ್ಲಿ

ವೀರನ ಚಿತ್ರಕ್ಕೆ ಅವಕಾಶ ನೀಡಿರುವುದು. ಅವನು ಕೈ ಮುಗಿದುಕೊಂಡು ಪದ್ಮಾಸನದಲ್ಲಿ ಕುಳಿತಿರುವಂತೆ ಅಥವಾ ಬಿಲ್ಲು ಇಲ್ಲವೆ ಮತ್ಯಾವುದೋ ಆಯುಧವನ್ನು ಹಿಡಿದು ನಿಂತಿರುವಂತೆ ಒಂದು ಮೂಲೆಯಲ್ಲಿ ಚಿಕ್ಕದಾಗಿ ಬಿಡಿಸಲಾಗಿರುತ್ತದೆ. ಮೂರನೆಯ ಪ್ರಕಾರದ ಸತಿಗಲ್ಲಿನಲ್ಲಿ ಇಬ್ಬರು ಸತಿಯರು ಬಲಗೈಯನ್ನು ಮೇಲಕ್ಕೆ ಎತ್ತಿ ಹರಸುತ್ತಿರುವಂತೆ, ಎಡಗೈಯಲ್ಲಿ ನಿಂಬೆಯ ಹಣ್ಣನ್ನು ಹಿಡಿದು ನಿಂತಿರುವ ದೃಶ್ಯವಿರುತ್ತದೆ. ಇಲ್ಲಿ ಸತಿಯರನ್ನು ಸಮಪ್ರಮಾಣದಲ್ಲಿ ನಿಂತಿರುವಂತೆ ಚಿತ್ರಿಸಲಾಗಿರುತ್ತದೆ. ಇನ್ನು ಕೆಲವೊಂದು ಶಿಲ್ಪಗಳಲ್ಲಿ ಮೂವರು ಸತಿಯರು ನಿಂತಿರುವ ಚಿತ್ರಣಗಳೂ ದೊರೆಯುತ್ತವೆ. ಮೇಲಿನ ಮೂರು ವಿಧಾನದ ಸತಿಗಲ್ಲುಗಳು ಅಧ್ಯಯನ ಪ್ರದೇಶದಲ್ಲಿ ಹೆಚ್ಚು ಕಂಡುಬರುತ್ತವೆ. ನಾಲ್ಕನೇ ವಿಧಾನದ ಶಿಲ್ಪದಲ್ಲಿ ಮಹಾಸತಿಯ ಘಟನೆಯನ್ನು ತಿಳಿಸಲು ಸಾಂಕೇತಿಕವಾಗಿ ಒಂದು ಕಂಬ ಮತ್ತು ಅದರ ಬಲಭಾಗದಿಂದ ಹೊರಟಿರುವಂತೆ ಒಂದು ಕೈಯನ್ನು ಚಿತ್ರಿಸಿರುತ್ತಾರೆ. ಇಂತಹ ಶಿಲ್ಪಗಳನ್ನು 'ಒಕ್ಕೈ ಮಾಸ್ತಿಗಲ್ಲು' ಎಂದು ಕರೆಯಲಾಗುತ್ತದೆ. ಕೆಲವು ಪ್ರದೇಶಗಳಲ್ಲಿ ಕಂಬದಿಂದ ಎರಡು ಕೈಗಳು ಹೊರಟಿರುವಂತೆ ಚಿತ್ರಿಸಿದ್ದಾರೆ. ಅದನ್ನು 'ಇಕ್ಕೈ ಮಾಸ್ತಿಗಲ್ಲು' ಎಂದೂ, ಮೂರು ಕೈಗಳಿದ್ದರೆ 'ಬಹುಕೈ ಮಾಸ್ತಿಗಲ್ಲು' ಎಂದು ವಿದ್ವಾಂಸರು ಗುರುತಿಸಿದ್ದಾರೆ. ಅವುಗಳನ್ನು 'ವ್ಯಾಸನ ತೋಳು' ಎಂದು ಹಳ್ಳಿಗಳಲ್ಲಿ ಕರೆಯಲಾಗುತ್ತದೆ.[೧೦೩] ಜಿಲ್ಲೆಯಲ್ಲಿ ಕೇವಲ ಮೂರು ಒಕ್ಕೈ ಶಿಲ್ಪಗಳು ಮಾತ್ರ ಕಂಡುಬಂದಿವೆ.

**೩.೫.೩. ಸಹಗಮನ ಸತಿಗಲ್ಲು (ವೀರಮಾಸ್ತಿಗಲ್ಲು)**

ಪತಿಯು ಮಡಿದಾಗ ಅವನ ಶವದ ಜೊತೆಯಲ್ಲಿಯೇ ಚಿತೆಗೆ ಬಿದ್ದು ಅಥವಾ ಸಮಾಧಿಯಲ್ಲಿ ಹುಗಿಸಿಕೊಂಡು ಪ್ರಾಣ ಬಿಟ್ಟ ಸತಿಯರಿಗಾಗಿ ನಿರ್ಮಿಸಿದ ಸ್ಮಾರಕಗಳನ್ನು ಸಹಗಮನ ಸತಿಗಲ್ಲು ಅಥವಾ ವೀರಮಾಸ್ತಿಗಲ್ಲು ಎಂದು ಕರೆಯಲಾಗುತ್ತದೆ. ಇಂತಹ ಶಿಲ್ಪಗಳಲ್ಲಿ ವೀರನಿಗೆ ಹೆಚ್ಚು ಪ್ರಾಧಾನ್ಯವಿದ್ದು, ಸತಿಯ ಶಿಲ್ಪಕ್ಕೆ ಕಡಿಮೆ ಪ್ರಾಧಾನ್ಯತೆಯಿರುತ್ತದೆ ಅಥವಾ ಇಬ್ಬರನ್ನು ಸರಿಸಮಾನವಾಗಿ ನಿಂತಿರುವಂತೆ ಚಿತ್ರಿಸಲಾಗಿರುತ್ತದೆ. ಇಲ್ಲಿ ವೀರನು ಆಯುಧಪಾಣಿಯಾಗಿ ಹೋರಾಟದ ಭಂಗಿಯಲ್ಲಿ ನಿಂತಿರುತ್ತಾನೆ. ಆತನ ಪತ್ನಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಹರಸುತ್ತಿರುವಂತೆ ತೋರಿಸಲಾಗಿರುತ್ತದೆ.[೧೦೪] ಇನ್ನು ಕೆಲವು ವೀರಮಾಸ್ತಿ ಸ್ಮಾರಕಗಳು ಒಂದು ಹಂತದಲ್ಲಿ ಚಿತ್ರಣಗೊಳ್ಳದೆ, ಮೂರು ಅಥವಾ ನಾಲ್ಕು ಹಂತಗಳಲ್ಲಿ ಕೆತ್ತನೆ ಮಾಡಲಾಗಿರುತ್ತದೆ. ಈ ಶಿಲ್ಪಗಳಲ್ಲಿ ವೀರನ ಶೌರ್ಯ ಪ್ರದರ್ಶನದ ಚಿತ್ರಣಕ್ಕೆ ಹೆಚ್ಚು ಒತ್ತು ಕೊಡಲಾಗಿರುತ್ತದೆ. ಸಾಮಾನ್ಯವಾಗಿ ಮೊದಲ ಹಂತದಲ್ಲಿ ಸತಿಯು ಬಲಗೈ ಮೇಲಕ್ಕೆತ್ತಿ ಹರಸುತ್ತಿರುವ ದೃಶ್ಯವಿರುತ್ತದೆ. ಎರಡನೆಯ ಹಂತದಲ್ಲಿ ವೀರನ ಹೋರಾಟದ ಚಿತ್ರಣ, ಮೂರನೆಯ ಹಂತದಲ್ಲಿ ಸ್ವರ್ಗಾರೋಹಣದ ದೃಶ್ಯವಿದ್ದರೆ, ನಾಲ್ಕನೇ ಹಂತದಲ್ಲಿ ಸತಿ–ಪತಿಗಳಿಬ್ಬರು ಶಿವಲೋಕದಲ್ಲಿರುವಂತೆ ಚಿತ್ರಿಸಲಾಗಿರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ದೊರೆತಿರುವ ವೀರಮಾಸ್ತಿ ಶಿಲ್ಪಗಳ ವಿಸ್ತೃತ ವಿಶ್ಲೇಷಣೆ ಮುಂದಿನ ಅಧ್ಯಾಯದಲ್ಲಿ ಮಾಡಲಾಗಿದೆ.

### ೩.೫.೪. ಆತ್ಮಬಲಿದಾನ ಶಿಲ್ಪ

ಆತ್ಮಬಲಿದಾನ ಹಲವು ವಿಧಾನಗಳಲ್ಲಿ ನಡೆದುಬಂದಿರುವುದನ್ನು ಈವರೆಗೆ ಕಂಡುಬಂದಿರುವ ಶಾಸನ ಮತ್ತು ಶಿಲ್ಪದ ನೆರವಿನಿಂದ ವಿದ್ವಾಂಸರು ಗುರುತಿಸಿದ್ದಾರೆ. ಸೂರ್ಯಗ್ರಹಣ ಬಲಿದಾನ ಶಿಲ್ಪವಾಗಿದ್ದರೆ, ಕೆಳಹಂತದಲ್ಲಿ ವೀರನು ಎತ್ತರವಾದ ವೇದಿಕೆಯಲ್ಲಿ ಕೈಮುಗಿಯುತ್ತ, ನಿಂತಿರುವ ಹಾಗೆ, ಅವನ ಮುಂದೆ ಉರಿಯುತ್ತಿರುವ ಬೆಂಕಿ, ಹಿಂಬದಿಯಲ್ಲಿ ಒಂದು ಕಂಬದ ಮೇಲೆ ದಂಡನೆಯ ವಸ್ತುವಿರುತ್ತದೆ. ಎರಡನೆಯ ಹಂತದಲ್ಲಿ ಅಪ್ಸರೆಯರೊಂದಿಗೆ ಸ್ವರ್ಗಾರೋಹಣ, ಮೂರನೆಯ ಹಂತದಲ್ಲಿ ಸ್ವರ್ಗಪ್ರಾಪ್ತಿಯಾದ ದೃಶ್ಯವಿರುತ್ತದೆ. ಉರಿ ಉಯ್ಯಾಲೆ ಸ್ಮಾರಕವಾಗಿದ್ದರೆ ಮೊದಲ ಹಂತದಲ್ಲಿ ದೊಡ್ಡದಾದ ಕಲ್ಲಿನ ಚೌಕಟ್ಟಿನೊಳಗೆ ಉಯ್ಯಾಲೆಯಲ್ಲಿ ವೀರನು ನಿಂತಿರುತ್ತಾನೆ. ಅವನ ಕೆಳಭಾಗದಲ್ಲಿ ದೊಡ್ಡದಾದ ಅಗ್ನಿಕುಂಡವಿದ್ದು, ಬೆಂಕಿ ಉರಿಯುತ್ತಿರುತ್ತದೆ. ಅವನ ಎರಡೂ ಬದಿಯಲ್ಲಿ ವಾದ್ಯಕಾರರು ಮೃದಂಗ, ಝಲ್ಲರಿ, ಜಾಗಟೆಯನ್ನು ಬಾರಿಸುತ್ತಿರುತ್ತಾರೆ. ಮಧ್ಯದ ಹಂತದಲ್ಲಿ ಅಪ್ಸರೆಯರೊಂದಿಗೆ ಸ್ವರ್ಗಕ್ಕೆ ಹೋಗುವ, ಮೂರನೆಯ ಹಂತದಲ್ಲಿ ಸ್ವರ್ಗದ ಚಿತ್ರಣವಿರುವಂತೆ ಕಂಡರಿಸಲಾಗಿರುತ್ತದೆ. ಸಿಡಿತಲೆ ಸ್ಮಾರಕವನ್ನು ಬಗ್ಗಿಸಿದ ಗಿಡದ ಟೊಂಗೆ ಅಥವಾ ಬಗ್ಗಿಸಿದ ಬಿದಿರುಬೊಂಬಿನ ತುದಿಗೆ ವೀರನ ಕೂದಲನ್ನು ಕಟ್ಟಿರುವಂತೆ ಅಥವಾ ಕತ್ತರಿಸಿದ ವೀರನ ರುಂಡ ಚಂಗನೆ ಮೇಲಕ್ಕೆ ಚಿಮ್ಮುತ್ತಿರುತ್ತದೆ. ಜೊತೆಗೆ ಖಡ್ಗ ಹಿಡಿದು ನಿಂತಿರುವ ವ್ಯಕ್ತಿಯನ್ನು ಕೆತ್ತನೆ ಮಾಡಲಾಗಿರುತ್ತದೆ.[೧೦೫] ಇವುಗಳಲ್ಲದೆ ತನಗೆ ಪ್ರಿಯರಾದವರ ಶ್ರೇಯಸ್ಸನ್ನು ಕೋರಲು ದೇವರಿಗೆ ಹರಕೆ ಹೊತ್ತು, ಹರಕೆ ಈಡೇರಿದಾಗ ತನ್ನನ್ನು ತಾನೇ ಇರಿದುಕೊಂಡ ವೀರರ ಶಿಲ್ಪಗಳೂ ಕಂಡುಬರುತ್ತವೆ. ಜಿಲ್ಲೆಯ ಕೆಲವೇ ಗ್ರಾಮಗಳಲ್ಲಿ ಈ ಮಾದರಿಯ ಶಿಲ್ಪಗಳು ದೊರೆತಿವೆ.

### ೩.೫.೫. ನಿಸಿದಿಗಲ್ಲು

ಸನ್ಯಸನ ವಿಧಿಯಿಂದ ಮಡಿದವರ ಸ್ಮಾರಕವಾಗಿ, ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುವಂತೆ ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಅವುಗಳನ್ನು 'ನಿಸಿದಿಗಲ್ಲು'ಗಳೆಂದು ಕರೆಯುತ್ತಾರೆ. ಈ ನಿಸಿದಿಗಲ್ಲುಗಳನ್ನು ಹಲವು ವಿಧಾನಗಳಲ್ಲಿ ಚಿತ್ರಿಸಿರುವುದುಂಟು. ಚಿತ್ರವುಳ್ಳವು, ಬರವಣಿಗೆಯುಳ್ಳವು, ಚಿತ್ರ ಮತ್ತು ಬರವಣಿಗೆ ಎರಡನ್ನು ಒಳಗೊಂಡಿರುವಂತೆ ಕಂಡುಬರುತ್ತವೆ. ಬೋಧಿಸುವ ಗುರು, ಆಲಿಸುವ ಶಿಷ್ಯ ಇಬ್ಬರ ಮಧ್ಯ ಪುಸ್ತಕ ಹೊತ್ತ ವ್ಯಾಸಪೀಠ, ಈ ಚಿತ್ರಣವುಳ್ಳ ನಿಸಿದಿ ಶಿಲ್ಪಗಳು ಸಾಮಾನ್ಯವಾಗಿ ಎಲ್ಲ ಕಡೆ ದೊರೆಯುತ್ತವೆ. ಕೆಲವೊಂದು ಸ್ಮಾರಕಗಳಲ್ಲಿ ಕೇವಲ ಜಿನ ವಿಗ್ರಹಗಳನ್ನು ಕೆತ್ತಿರಬಹುದು. ಅಲ್ಲದೆ ಕೆಳಗಿನ ಸ್ತರದಲ್ಲಿ ವ್ಯಾಸಪೀಠ ಸಹಿತ ಗುರುಶಿಷ್ಯ, ಮೇಲಿನ ಸ್ತರದಲ್ಲಿ ತೀರ್ಥಂಕರನ ಪಾದ ಸಮೀಪ ಕೈಮುಗಿದು ಕುಳಿತ ಶಿಷ್ಯನ ಚಿತ್ರ ಇರುತ್ತವೆ.[೧೦೬] ಅಧ್ಯಯನ ಪ್ರದೇಶದಲ್ಲಿ ಒಂದು ಹಂತದ ನಿಸಿದಿ, ಎರಡು ಹಂತದ ನಿಸಿದಿ ಶಿಲ್ಪಗಳು ಕಂಡುಬರುತ್ತವೆ. ಒಂದು ಹಂತದ ನಿಸಿದಿಶಿಲ್ಪದಲ್ಲಿ ಮುಕ್ಕೊಡೆಯ ಕೆಳಗೆ ಜಿನ ಕುಳಿತಿದ್ದು, ಅಕ್ಕಪಕ್ಕ ಭಕ್ತರು ಕುಳಿತಿರುವ ದೃಶ್ಯವಿರುತ್ತದೆ. ಎರಡು ಹಂತದ ನಿಸಿದಿಶಿಲ್ಪದಲ್ಲಿ ಮೊದಲ ಹಂತದಲ್ಲಿ ಮೋಕ್ಷ ಪಡೆದವನನ್ನು, ಮೇಲಿನ ಹಂತದಲ್ಲಿ ಜಿನ ಹಾಗೂ ಅಕ್ಕಪಕ್ಕ ಮುನಿ ಮತ್ತು ಭಕ್ತನನ್ನು ಕೆತ್ತಲಾಗಿರುತ್ತದೆ.

**ಅಡಿ ಟಿಪ್ಪಣಿಗಳು**

೧. ಗೋಪಾಲರಾವ್ ಎಚ್.ಎಸ್., ೨೦೧೭, ಸ್ಮಾರಕಗಳು ಮತ್ತು ಇತಿಹಾಸ, ಗೋಪಾಲರಾವ್ ಎಚ್.ಎಸ್. ಮತ್ತು ಶ್ರೀನಿವಾಸಮೂರ್ತಿ ಎಸ್.ಎಲ್.(ಸಂ), ಡಾ. ಆರ್. ಶೇಷಶಾಸ್ತ್ರಿ ಅಭಿನಂದನಾ ಗ್ರಂಥ ವಿಶೇಷ, ಪು. ೧೨೩.

೨. ಅದೇ, ಪು. ೧೨೪.

೩. ಶೇಷಶಾಸ್ತ್ರಿ ಆರ್., ೨೦೧೭, ಕರ್ನಾಟಕದ ವೀರಗಲ್ಲುಗಳು, ಪು. ೧೪.

೪. ಅದೇ, ಪು. ೧೪-೧೫.

೫. ಚಿದಾನಂದಮೂರ್ತಿ ಎಂ., ೨೦೧೫, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೧.

೬. ಗೋಪಾಲರಾವ್ ಎಚ್.ಎಸ್., ೨೦೧೭, ಪೂರ್ವೋಕ್ತ, ಪು. ೧೨೬.

೭. ಸಂಕ್ಷಿಪ್ತ ಕನ್ನಡ ನಿಘಂಟು, ೨೦೧೬, ಪು. ೧೩೫೧.

೮. ಜ್ಞಾನಾನಂದ ಜಿ., ೧೯೯೪, ವಾಸ್ತು ಪುರುಷಃ ನೆಲೆ-ಹಿನ್ನೆಲೆ, ಪು. ೨೦.

೯. ಸಂಕ್ಷಿಪ್ತ ಕನ್ನಡ ನಿಘಂಟು, ೨೦೧೬, ಪು. ೧೨೦೫.

೧೦. ಮರಿಶಾಮಾಚಾರ್ ಎನ್., ೨೦೦೦, ಭಾರತೀಯ ಶಿಲ್ಪಕಲೆ, ಪು. ೪.

೧೧. ತಿಪ್ಪೇರುದ್ರಸ್ವಾಮಿ ಎಚ್., ೨೦೧೫, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೫೨೩.

೧೨. ಶಿವರಾಮ ಕಾರಂತ, ೧೯೭೫, ಚಿತ್ರ ಶಿಲ್ಪ ವಾಸ್ತುಕಲೆಗಳು, ಪು. ೧.

೧೩. ಪರಮಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನಶಿಲ್ಪ, ಪು. ೧೯.

೧೪. ಅದೇ, ಪು. ೭.

೧೫. ಶಿವರಾಮ ಕಾರಂತ, ೧೯೭೫, ಪೂರ್ವೋಕ್ತ, ಪು. ೧೭-೧೮.

೧೬. ಅದೇ, ಪು. ೧೮.

೧೭. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೧೧.

೧೮. ಕಲಬುರ್ಗಿ ಎಂ.ಎಂ., ೨೦೧೧, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು-೧.

೧೯. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೨೩.

೨೦. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೧೮.

೨೧. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೫೫.

೨೨. ಕುಲಕರ್ಣಿ ಆರ್.ಎಚ್.(ಲೇ), ಗೋಪಾಲರಾವ್ ಎಚ್.ಎಸ್. (ಸಂ), ೨೦೦೮, ಕರ್ನಾಟಕದ ಆರಂಭಿಕ ಶಿಲ್ಪಕಲೆ, ಪು. ೨೪-೨೫.

೨೩. ರಮೇಶ ಕೆ.ವಿ., ೧೯೭೧, ಕರ್ನಾಟಕ ಶಾಸನ ಸಮೀಕ್ಷೆ, ಪು. ೩೮.

೨೪. ಅದೇ, ಪು. ೩೮.

೨೫. ಕುಲಕರ್ಣಿ ಆರ್.ಎಚ್.(ಲೇ), ಗೋಪಾಲರಾವ್ ಎಚ್.ಎಸ್.(ಸಂ), ೨೦೦೮, ಪೂರ್ವೋಕ್ತ, ಪು-೨೫.

೨೬. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೩೦.

೨೭. ಗೋಪಾಲರಾವ್ ಎಚ್.ಎಸ್., ೨೦೧೭, ಪೂರ್ವೋಕ್ತ, ಪು. ೧೨೬-೧೨೮.

೨೮. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೩೦-೩೧.

೨೯. ಶೀಲಾಕಾಂತ ಪತ್ತಾರ, ೨೦೧೭, ಬಾದಾಮಿ ಚಾಲುಕ್ಯರ ಕಾಲದ ವೀರಗಲ್ಲುಗಳು: ಒಂದು ಅವಲೋಕನ, ಗೋಪಾಲರಾವ್ ಎಚ್.ಎಸ್. ಮತ್ತು ಶ್ರೀನಿವಾಸಮೂರ್ತಿ ಎಸ್.ಎಲ್.(ಸಂ), ಡಾ. ಆರ್. ಶೇಷಶಾಸ್ತ್ರಿ ಅಭಿನಂದನಾ ಗ್ರಂಥ ವಿಶೇಷ, ಪು. ೧೭೩.

೩೦. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೫೬.

೩೧. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೩೨.

೩೨. ಶ್ಯಾಮಲಾ ರತ್ನಕುಮಾರಿ ಬೆಂ.ಶಾ., ೨೦೧೭, ರಾಷ್ಟ್ರಕೂಟರ ವೀರಗಲ್ಲು ಶಿಲ್ಪಗಳು, ಗೋಪಾಲರಾವ್ ಎಚ್.ಎಸ್. ಮತ್ತು ಶ್ರೀನಿವಾಸಮೂರ್ತಿ ಎಸ್.ಎಲ್.(ಸಂ), ಡಾ. ಆರ್. ಶೇಷಶಾಸ್ತ್ರಿ ಅಭಿನಂದನಾ ಗ್ರಂಥ ವಿಶೇಷ, ಪು. ೧೭೮.

೩೩. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೩೨-೩೩.

೩೪. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೫೬.

೩೫. ಅದೇ, ಪು. ೨೫೮.

೩೬. ದೇವರಕೊಂಡಾರೆಡ್ಡಿ(ಲೇ), ಗೋಪಾಲರಾವ್ ಎಚ್.ಎಸ್.(ಸಂ), ೨೦೦೮, ಗಂಗರ ಶಿಲ್ಪಕಲೆ, ಪು. ೮೫.

೩೭. ಸ್ಮಿತಾರೆಡ್ಡಿ ಡಿ., ೨೦೧೭, ಗಂಗರ ಕಾಲದ ವೀರಗಲ್ಲುಗಳು, ಗೋಪಾಲರಾವ್ ಎಚ್.ಎಸ್. ಮತ್ತು ಶ್ರೀನಿವಾಸಮೂರ್ತಿ ಎಸ್.ಎಲ್.(ಸಂ), ಡಾ. ಆರ್. ಶೇಷಶಾಸ್ತ್ರಿ ಅಭಿನಂದನಾ ಗ್ರಂಥ ವಿಶೇಷ, ಪು. ೧೫೦.

೩೮. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೩೪.

೩೯. ಸ್ಮಿತಾರೆಡ್ಡಿ ಡಿ., ೨೦೧೭, ಪೂರ್ವೋಕ್ತ, ಪು. ೧೩೬.

೪೦. ದೇವರಕೊಂಡಾರೆಡ್ಡಿ, ೨೦೧೭, ತಲಕಾಡಿನ ಗಂಗರ ವೀರಗಲ್ಲು ಶಾಸನಗಳು, ಗೋಪಾಲರಾವ್ ಎಚ್.ಎಸ್. ಮತ್ತು ಶ್ರೀನಿವಾಸಮೂರ್ತಿ ಎಸ್.ಎಲ್.(ಸಂ), ಡಾ. ಆರ್. ಶೇಷಶಾಸ್ತ್ರಿ ಅಭಿನಂದನಾ ಗ್ರಂಥ ವಿಶೇಷ, ಪು. ೧೬೧.

೪೧. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೬೨.

೪೨. ಅದೇ, ಪು. ೨೬೨.

೪೩. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೩೪.

೪೪. ಅದೆ, ಪು. ೩೫.

೪೫. ಅದೇ, ಪು. ೩೫.

೪೬. ಶ್ರೀನಿವಾಸ ರಿತ್ತಿ, ೨೦೧೭, ಬೆಳಗವರ್ತಿಯ ವೀರಗಲ್ಲುಗಳು ಮತ್ತು ಸೇವುಣ-ಹೊಯ್ಸಳರ ಹಗ್ಗಜಗ್ಗಾಟ, ಗೋಪಾಲರಾವ್ ಎಚ್.ಎಸ್. ಮತ್ತು ಶ್ರೀನಿವಾಸಮೂರ್ತಿ ಎಸ್.ಎಲ್. (ಸಂ), ಡಾ. ಆರ್. ಶೇಷಶಾಸ್ತ್ರಿ ಅಭಿನಂದನಾ ಗ್ರಂಥ ವಿಶೇಷ, ಪು. ೨೦೬.

೪೭. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೩೫.

೪೮. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೬೩-೨೬೪.

೪೯. ಅದೇ, ಪು. ೨೬೩.

೫೦. ನರಸಿಂಹನ್ ಅ.ಲ. (ಲೇ), ಗೋಪಾಲರಾವ್ ಎಚ್.ಎಸ್. (ಸಂ), ೨೦೦೮, ವಿಜಯನಗರ ಶಿಲ್ಪಕಲೆ, ಪು. ೪೬.

೫೧. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೭೧-೭೨.

೫೨. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೨೭, ಚಿಕ್ಕಯರೆಹಳ್ಳಿ.

೫೩. ಅದೇ, ಶಾ.ಸಂ. ೨೮, ಚಿಕ್ಕಯರೆಹಳ್ಳಿ.

೫೪. ಕ.ವಿ.ಶಾ.ಸಂ.-೧, ೧೯೯೯, ಹರಪನಹಳ್ಳಿ ಶಾ.ಸಂ. ೬೩, ನಿಟ್ಟೂರು.

೫೫. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೬೯, ಆಲೂರು.

೫೬. ಅದೇ, ಚಳ್ಳಕೆರೆ, ಶಾ.ಸಂ. ೪೨, ಗೌರಸಮುದ್ರ.

೫೭. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೨೩, ಸೊರಟೂರು.

೫೮. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೧೬, ವಾಸನ.

೫೯. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೫೪, ಕುಳ್ಳಹಳ್ಳಿ.

೬೦. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೮೨, ಕಡ್ಲೆಬಾಳು.

೬೧. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೫೬, ಕುಳ್ಳಹಳ್ಳಿ.

೬೨. ಅದೇ, ಶಾ.ಸಂ., ೪೭, ಬೆಳಗುತ್ತಿ.

೬೩. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ.೧೧೫, ವಾಸನ.

೬೪. ಎ.ಕ.ಸಂ-೭, ಚನ್ನಗಿರಿ, ಶಾ.ಸಂ. ೫೪, ನೆಲ್ಲುದುರೆ.

೬೫. ಮಜುಂದಾರ್ ಆರ್.ಸಿ., ೨೦೦೬, ವೇದಯುಗ ಭಾಗ ಎರಡು, ಪು. ೧೪೩-೧೫೨.

೬೬. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೧೮.

೬೭. ಭಗವದ್ಗೀತೆ-ಆಶ್ವಾಸ-೨ ಶ್ಲೋಕ ೩೭.

೬೮. ಕೃಷ್ಣಭಟ್ಟ ಕೆ (ಅನು), ೨೦೦೦, ಕೌಟಿಲ್ಯನ ಅರ್ಥಶಾಸ್ತ್ರ, ಪು. ೪೮೪.

೬೯. ಗಾರ್ಪುರೆ ಜೆ.ಆರ್. (ಅನು), ೧೯೩೭, ಮಿತಾಕ್ಷರ, ಶ್ಲೋಕ ೩೨೪, ಪು. ೩೮೪.

೭೦. ನಾಗೇಗೌಡ ಎಚ್.ಎಲ್., ೧೯೬೪, ಪ್ರವಾಸಿ ಕಂಡ ಇಂಡಿಯಾ ಸಂ-೧, ಪು. ೨೧೮-೨೧೯.

೭೧. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೨೭, ಚಿಕ್ಕಯರೆಹಳ್ಳಿ ಮತ್ತು ಕ.ಐ.ಶಾ.ಸಂ ಭಾಗ-೧, ಹರಪನಹಳ್ಳಿ, ಶಾ.ಸಂ. ೫೬, ಕಡತಿ ಹಾಗೂ ಶಾ.ಸಂ. ೨೦೫, ಚಿಗಟೇರಿ.

೭೨. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೯೭.

೭೩. Mugali R.S., 1946, The Heritage of Karnataka, P. 73.

೭೪. Romila Thapar (Ed), 2000, Death and the Hero, Cultural Pasts: Essays in Early Indian History, P. 692.

೭೫. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೭೧.

೭೬. ಬಸವರಾಜ ಕಲ್ಗುಡಿ, ೧೯೮೮, ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಪು. ೨೩೭.

೭೭. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೩೫, ಬೆಳಗುತ್ತಿ.

೭೮. ಅದೇ, ಶಾ.ಸಂ. ೩೮, ಬೆಳಗುತ್ತಿ.

೭೯. ಅದೇ, ಶಾ.ಸಂ. ೫೧, ಬೆಳಗುತ್ತಿ.

೮೦. ಅದೇ, ಚನ್ನಗಿರಿ, ಶಾ.ಸಂ. ೨೪, ಹಿರೇಕೋಗಿಲೂರು.

೮೧. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೮, ಬೇತೂರು.

೮೨. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೩೫, ಬೆಳಗುತ್ತಿ.

೮೩. ಅದೇ, ಶಾ.ಸಂ. ೪೯, ಬೆಳಗುತ್ತಿ.

೮೪. ಪಂಪಭಾರತಂ ಆಶ್ವಾಸ ೧೧, ವಚನ ೧೬.

೮೫. ಪಂಪಭಾರತಂ ಆಶ್ವಾಸ ೧೦, ಪದ್ಯ ೪೪.

೮೬. ಎ.ಕ.ಸಂ-೭, ಚನ್ನಗಿರಿ, ಶಾ.ಸಂ.೨೪, ಹಿರೇಕೋಗಲೂರು.

೮೭. ಅದೇ, ಶಾ.ಸಂ. ೨೩, ಹಿರೇಕೋಗಲೂರು.

೮೮. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೭೫, ದೇವರಬೆಳಗೆರೆ.

೮೯. ಅದೇ, ಶಾ.ಸಂ. ೭೯, ಕೊಂಡಜ್ಜಿ.

೯೦. ಅದೇ, ಶಾ.ಸಂ. ೯೮, ಕಕ್ಕರಗೊಳ್ಳ.

೯೧. ಎ.ಕ.ಸಂ-೭, ಹೊನ್ನಾಳಿ, ಶಾ.ಸಂ. ೫೪, ಕುಳಗಹಳ್ಳಿ.

೯೨. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೨೧.

೯೩. ಅದೇ, ಪು. ೨೨೧.

೯೪. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೨೫೪.

೯೫. M.A.R., 1935, P. 89.

೯೬. Mugali R.S., 1946, ಪೂರ್ವೋಕ್ತ, ಪು. ೭೩.

೯೭. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೪೩.

೯೮. ಕ.ವಿ.ಶಾ.ಸಂ ಭಾಗ-೧, ೧೯೯೯, ಹರಪನಹಳ್ಳಿ, ಶಾ.ಸಂ. ೬೩, ನಿಟ್ಟೂರು.

೯೯. ಎ.ಕ.ಸಂ-೧೧, ದಾವಣಗೆರೆ, ಶಾ.ಸಂ. ೧೧೬, ವಾಸನ.

೧೦೦. Ramachandra Dikshitar V.R., 1999, War in Ancient India, P. 384.

೧೦೧. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೨೩೯.

೧೦೨. ಅದೇ, ಪು. ೨೩೯.

೧೦೩. ಚಿದಾನಂದಮೂರ್ತಿ ಎಂ., ೧೯೮೪, ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು, ಪು. ೧೫.

೧೦೪. ಮಂಜುನಾಥ ಎಂ.ಜಿ. (ಲೇ), ೨೦೧೧, ಮಾಸ್ತಿಕಲ್ಲು, ವೀರಗಲ್ಲು ಮತ್ತು ನಿಸಿದಿ ಶಾಸನಗಳು, ಪು. ೩-೪.

೧೦೫. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೧೧೯-೧೨೦.

೧೦೬. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೧೩.

# ಅಧ್ಯಾಯ: ನಾಲ್ಕು

## ವೀರಮರಣದ ಸ್ಮಾರಕ ಶಿಲ್ಪಗಳು

೪.೧. ವೀರಮರಣದ ಸ್ವರೂಪ ಮತ್ತು ಇತಿಹಾಸ

೪.೨. ವೀರಮರಣದ ಪ್ರಕಾರಗಳು

೪.೨.೧ ಯುದ್ಧದಲ್ಲಿ ಮಡಿದ ವೀರರು

೪.೨.೨ ತುರುಕಾಳಗದಲ್ಲಿ ಮಡಿದ ವೀರರು

೪.೨.೩ ಊರು ದಾಳಿ ಹಾಗೂ ಉರಟಿವಿನಲ್ಲಿ ಸತ್ತ ವೀರರು

೪.೨.೪ ಕೋಟೆಕಾಳಗದಲ್ಲಿ ಮಡಿದ ವೀರರು

೪.೨.೫ ಪೆಣ್ಬುಯ್ಯಲಿನಲ್ಲಿ ಮಡಿದ ವೀರರು

೪.೨.೬ ಕಳ್ಳರೊಡನೆ ಹೋರಾಡಿ ಮಡಿದ ವೀರರು

೪.೨.೭ ಪ್ರಾಣಿಗಳೊಂದಿಗೆ ಹೋರಾಡಿ ಮಡಿದ ವೀರರು

# ಅಧ್ಯಾಯ: ನಾಲ್ಕು

## ವೀರಮರಣದ ಸ್ಮಾರಕ ಶಿಲ್ಪಗಳು

ಪ್ರಾಚೀನ ಕಾಲದಿಂದ ಬಹುತೇಕ ರಾಜ್ಯ-ರಾಷ್ಟ್ರಗಳಿಗೆ ಯುದ್ಧ ಒಂದು ಅನಿವಾರ್ಯ ಸಂಗತಿಯಾಗಿ ಬೆಳೆದುಬಂದಿದೆ. ಯುದ್ಧದ ಹಿನ್ನೆಲೆಯಲ್ಲಿ ಮಾನವನ ಮಹಾತ್ವಾಕಾಂಕ್ಷೆ, ಸ್ವಾರ್ಥ, ಸ್ಪರ್ಧೆ, ಸೇಡು, ಅಸಹನೆ, ಕಲಹಪ್ರಿಯತೆ, ಅಹಂಕಾರದಂತಹ ಮನೋಭಾವಗಳು ಪ್ರಕರ್ಷ ಸ್ಥಿತಿಯಲ್ಲಿ ಪ್ರಕಟಗೊಂಡು ಯುದ್ಧಕ್ಕೆ ಕಾರಣವಾಗಿವೆ. ಹಲವು ಸಂದರ್ಭಗಳಲ್ಲಿ ಸ್ವರಕ್ಷಣೆ ಮತ್ತು ಸ್ವರಾಜ್ಯ ರಕ್ಷಣೆಗಾಗಿ ಯುದ್ಧ ಮಾಡುವುದು ಅನಿವಾರ್ಯವಾಗುತ್ತಿತ್ತು. ಕ್ರಮೇಣ ಯುದ್ಧವು ರಾಜ್ಯಾಡಳಿತ ವಿಸ್ತರಣೆಯ ಒಂದು ಅವಿಭಾಜ್ಯ ಅಂಗವಾಗಿ ಬೆಳೆದುಬಂದಿದೆ. ನಾಗರಿಕತೆ ಮತ್ತು ಪ್ರಜಾಪ್ರಭುತ್ವಗಳು ಬೆಳೆದುಬಂದರೂ ಯುದ್ಧಗಳು ಕಡಿಮೆಯಾಗದೆ ಇತಿಹಾಸದ ಒಂದು ಸ್ಥಿರ ಅಂಶವಾಗಿಯೇ ಉಳಿದುಬಂದಿದೆ.[೧]

ಆರಂಭ ಕಾಲದಿಂದಲೂ ಕರ್ನಾಟಕವು ಶೌರ್ಯ-ಧೈರ್ಯಕ್ಕೆ ಪ್ರಖ್ಯಾತಿಯಾಗಿದೆ. ಕ್ಷತ್ರಿಯರಿಂದ ಅಪಮಾನಿತನಾದ ಮಯೂರಶರ್ಮನು ತನ್ನ ಬ್ರಾಹ್ಮಣ ಜಾತಿಯನ್ನು ತ್ಯಜಿಸಿ ಕದಂಬ ಕುಲವನ್ನು ಸ್ಥಾಪಿಸಿದನೆಂದು ತಾಳಗುಂದ ಶಾಸನವು ಹೇಳುತ್ತದೆ. ಬಾದಾಮಿ ಶಾಸನದಲ್ಲಿ ಉಲ್ಲೇಖಗೊಳ್ಳುವ ಕಪ್ಪೆ ಆರಭಟ್ಟನ ಶೌರ್ಯ ಮತ್ತು ಸ್ವಾಭಿಮಾನಗಳು ಕನ್ನಡನಾಡಿನ ಶೌರ್ಯತ್ವಕ್ಕೆ ಕೈಗನ್ನಡಿಯಾಗಿವೆ. ಚೀನಿ ಯಾತ್ರಿಕ ಹ್ಯೂಯೆನ್‌ತ್ಸಾಂಗನು ಕನ್ನಡಿಗರನ್ನು ಹೊಗಳುತ್ತಾ ಅವರಿಗೆ ಅಪಮಾನವಾದರೆ ಪ್ರಾಣ ಹೋದರೂ ಸರಿಯೇ ಸೇಡನ್ನು ತೀರಿಸಿಕೊಳ್ಳದೆ ಬಿಡರೆಂದೂ, ಶತ್ರುವಿಗೆ ಎಚ್ಚರ ಕೊಟ್ಟು ಇರಿಯುವರೆಂದೂ, ಸೋತು ಬಂದ ದಳಪತಿಗೆ ಸ್ತ್ರೀಯರು ವೇಷಭೂಷಣಗಳನ್ನು ಕೊಟ್ಟು ಅಪಮಾನದಿಂದ ಸಾಯುವಂತೆ ಮಾಡುವರೆಂದು ಹೇಳಿದ್ದಾನೆ. ವೀರರ ಶೌರತ್ವವನ್ನು ಮೆಚ್ಚಿದ ಬಂಗಾಳದ ದೊರೆಗಳು ಕರ್ನಾಟಕದಿಂದ ಸೈನಿಕರನ್ನು ಕರೆಸಿಕೊಳ್ಳುತ್ತಿದ್ದರಂತೆ. ರಾಜಶೇಖರನು 'ವಿದ್ಧ ಶಾಲಭಂಜಿಕಾ'ದಲ್ಲಿ ಯುದ್ಧದಲ್ಲಿ ಕನ್ನಡಿಗರು ಸ್ವಭಾವತಃ ಶೂರರು ಎಂದು ಹೊಗಳಿದ್ದಾನೆ.[೨] ಕನ್ನಡ ನಾಡಿನಲ್ಲಿ ದೊರೆತಿರುವ ಶಾಸನಗಳಲ್ಲಿ ದಾನಶಾಸನಗಳನ್ನು ಬಿಟ್ಟರೆ ವೀರಮರಣ ಸ್ಮಾರಕಶಾಸನಗಳ ಸಂಖ್ಯೆಯೇ ಹೆಚ್ಚಾಗಿವೆ. ಇಂಥ ಸ್ಮಾರಕ ಶಾಸನಗಳಿಂದ ಕರ್ನಾಟಕದ ಯುದ್ಧ ಪ್ರಕಾರಗಳ ಸ್ಪಷ್ಟ ಚಿತ್ರಣ ಕಂಡುಕೊಳ್ಳಲು ಸಾಧ್ಯವಾಗಿದೆ.

### ೪.೧. ವೀರಮರಣದ ಸ್ವರೂಪ ಮತ್ತು ಇತಿಹಾಸ

'ವೀರ' ಎಂಬ ಪದವು ಮೂಲತಃ ಸಂಸ್ಕೃತ ಭಾಷೆಯ ಪದವಾಗಿದ್ದು, ಕೆಲವು ಇಂಡೋ ಆರ್ಯನ್ ಭಾಷೆಗಳಲ್ಲಿ ಬಳಕೆಯಲ್ಲಿದೆ. ಈ ಪದವು ವ್ಯಕ್ತಿಯ ಪರಾಕ್ರಮ, ಶಕ್ತಿ ಮುಂತಾದ ಅವನ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಲ್ಲಿದೆ. ಕೆಲವು ಭಾಷೆಗಳಲ್ಲಿ ವೀರತ್ವವನ್ನು ಅನ್ವರ್ಥಕವಾಗಿ ಆಡು, ಟಗರು, ಗಂಡು ಒಂಟೆ, ಸೋದರ ಎಂಬ ಮೊದಲಾದ ಅರ್ಥಗಳಿವೆ.[೩] 'ವೀರ' ಎಂದರೆ 'ಶೂರ', 'ಪರಾಕ್ರಮ' ಹಾಗೂ 'ವೀರಮರಣ'ವೆಂದರೆ ಯುದ್ಧದಲ್ಲಿ ದಿಟ್ಟತನದಿಂದ ಹೋರಾಡಿ ರಣರಂಗದಲ್ಲಿಯೇ ಮರಣ ಹೊಂದುವುದು ಎಂಬ ಅರ್ಥಗಳು ಕನ್ನಡ ನಿಘಂಟಿನಲ್ಲಿದೆ.[೪] ಇದೇ 'ವೀರ' ಎಂಬ ಪದವು ಕೆಲವು ಕಡೆ 'ಬೀರ' ಎಂಬುದಾಗಿ ತದ್ಭವ ರೂಪವನ್ನು ಪಡೆದುಕೊಂಡಿದೆ. ಪ್ರಾಚೀನ ಕರ್ನಾಟಕದ ಸಾಮಾಜಿಕ ಮೌಲ್ಯಗಳಲ್ಲಿ 'ಚಾಗ'(ತ್ಯಾಗ) ಮತ್ತು 'ಬೀರ'(ವೀರ) ಈ ಎರಡೂ ಬಹುಮುಖ್ಯವಾಗಿದ್ದವು. ಸಂಪಾದಿಸಿದ ಹಣವನ್ನು ಉದಾರವಾಗಿ ದಾನ ಮಾಡಬೇಕು, ಯುದ್ಧದಲ್ಲಿ ಧೈರ್ಯದಿಂದ ಹೋರಾಡಬೇಕು ಇವೆರಡೂ ಆ ಕಾಲದ ಆದರ್ಶಗಳಾಗಿದ್ದವು. 'ಲೋಭಿ' ಎನಿಸಿಕೊಳ್ಳುವುದು, 'ಪಂದೆ'(ಹಂದೆ, ಹೇಡಿ)ಯೆನಿಸಿಕೊಳ್ಳುವುದು ಸಾವಿಗಿಂತ ಕಡೆ ಎಂಬ ಭಾವನೆ ಆ ಕಾಲದಲ್ಲಿತ್ತು.[೫]

ಪ್ರಾಚೀನ ಕರ್ನಾಟಕದ ಹತ್ತನೆಯ ಶತಮಾನವು ವೀರಯುಗ ಅಥವಾ ಕ್ಷಾತ್ರಯುಗವೆಂದು ಖ್ಯಾತಿ ಪಡೆದಿತ್ತು. ಅಂದಿನ ಸಮಾಜದಲ್ಲಿ ದಾನದಂತೆ, ವೀರ ಅದರೊಂದಿಗೆ ಅವಿಭಾಜ್ಯ ಅಂಗವಾಗಿ ಬರುವ ತ್ಯಾಗಗುಣಗಳು ಮಹತ್ವದ ಮೌಲ್ಯಗಳಾಗಿದ್ದವು. ಇಂತಹ ಮೌಲ್ಯಗಳನ್ನು ಅಳವಡಿಸಿಕೊಂಡು ಬದುಕುವುದು ಅಂದಿನ ಜನರ ಕರ್ತವ್ಯವಾಗಿತ್ತು.[೬] ಎದುರಿಸಿ ನಿಂತ ವೈರಿಗಳನ್ನು ನಾಶ ಮಾಡುವುದು, ಶರಣಾಗತರಾದವರನ್ನು ರಕ್ಷಿಸುವುದು, ತ್ಯಾಗದ ಮೂರ್ತಿಯಾಗಿ ನಿಲ್ಲುವುದು ಅಂದಿನ ವ್ಯಕ್ತಿಯ ಕರ್ತವ್ಯವಾಗಿತ್ತು. ಆ ತೆರನಾಗಿ ಬಾಳದವನು ಭೂಮಿಯೆನ್ನುವ ಅತ್ತಿ ಹಣ್ಣಿನಲ್ಲಿರುವ ಹುಳದ ಸಮಾನವೆಂದು ಜನರು ತಿಳಿಯುತ್ತಿದ್ದರು. ಯುದ್ಧದಲ್ಲಿ ಸೋತು ಹಿಂತಿರುಗಿ ಬಂದವರಿಗೆ ಅವರ ಪತ್ನಿಯರು ಬಳೆಗಳನ್ನು ಕಾಣಿಕೆಯಾಗಿ ನೀಡುತ್ತಿದ್ದರಂತೆ. ಹೀಗೆ ಅವರು ತಮ್ಮ ಪುರುಷರಿಗೆ ವೀರತ್ವ ಮೆರೆಯಲು ಪ್ರೇರಣೆ ನೀಡುತ್ತಿದ್ದರು. 'ಹೇಡಿ' ಎನಿಸಿಕೊಳ್ಳುವುದಕ್ಕಿಂತ ಅಂದಿನ ಜನರಿಗೆ ಸಾವೇ ಶ್ರೇಷ್ಠವಾಗಿತ್ತು. ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಹಾಗೂ ಸೋತು ಪ್ರಾಣ ಬಿಡುವುದು ಎರಡಕ್ಕೂ ಸಮಾನವಾದ ಗೌರವ ಅಂದಿನ ಸಮಾಜದಲ್ಲಿತ್ತು. ಸೋತು ಹಿಂದಕ್ಕೆ ಬರುವುದು ಸಾವಿಗಿಂತ ಕಡೆಯಾದುದಾಗಿತ್ತು. ಮೃತ್ಯುವು ಕ್ಷಣಿಕ ದುಃಖವನ್ನು ತಂದರೆ, ಮಾನಭಂಗವು ದಿನ ದಿನವೂ ತರುತ್ತದೆ ಎಂಬ ನಂಬಿಕೆಗಳಿದ್ದವು. ಯುದ್ಧದಲ್ಲಿ ಮಕ್ಕಳನ್ನು ಕಳೆದುಕೊಂಡ ತಾಯಂದಿರು ವೀರಗಲ್ಲುಗಳನ್ನು ನಿಲ್ಲಿಸಿದ್ದಾರೆ. ಇಂಥ ನಿದರ್ಶನಗಳು ಮಗನ ವಿಷಯವಾಗಿ ತಾಯಿಗೆ ಇದ್ದ ಹೆಮ್ಮೆ ಎದ್ದು ಕಾಣುತ್ತದೆ. ತಮ್ಮನ್ನು 'ವೀರಜನನಿ'ಯರೆಂದು ಜನರು ಕರೆದಾಗ ಅವರು ಹೆಮ್ಮೆಪಟ್ಟುಕೊಳ್ಳುತ್ತಿದ್ದರಂತೆ.[೭] ಒಬ್ಬ ತಾಯಿಗೆ ಆಕೆಯ ಮಗನು ಯುದ್ಧರಂಗದಿಂದ ಹೇಡಿಯಂತೆ ಓಡಿಹೋದನೆಂದು ಜನ ತಿಳಿಸುತ್ತಾರೆ. ಆ

ವಾರ್ತೆ ನಿಜವೇ ಆಗಿದ್ದ ಪಕ್ಷದಲ್ಲಿ, ಅಂಥ ಹೇಡಿಯಾದ ಮಗನಿಗೆ ಹಾಲನ್ನು ಉಣಿಸಿದ ತನ್ನ ಸ್ತನಗಳನ್ನೇ ಕತ್ತರಿಸಿಕೊಳ್ಳುವುದಾಗಿ ಆಕೆ ಪ್ರತಿಜ್ಞೆ ಮಾಡುತ್ತಾಳೆ. ಯುದ್ಧರಂಗದಲ್ಲಿ ತನ್ನ ಮಗನ ಶವವನ್ನು ಹುಡುಕುತ್ತಾ ಹೋದ ಅವಳಿಗೆ ಮಡಿದು ಬಿದ್ದಿರುವ ಮಗನ ದೇಹವು ಕಣ್ಣಿಗೆ ಬೀಳುತ್ತದೆ. ಆಗ ಆಕೆ ತಾನು ಅವನನ್ನು ಹೆತ್ತಾಗ ಪಟ್ಟ ಸಂತೋಷಕ್ಕಿಂತ ಮಿಗಿಲಾದ ಸಂತೋಷವನ್ನು ಪಡೆದಳಂತೆ.[೮] ಹೆಂಡತಿಯರು ವೀರಪತ್ನಿಯೆನಿಸಿಕೊಳ್ಳಲು ತವಕಿಸುತ್ತಿದ್ದರು.[೯] ಇಂತಹ ಮೌಲ್ಯಗಳು ಅಂದಿನ ವೀರರಿಗೆ ಪ್ರೇರಕ ಅಂಶಗಳಾಗಿದ್ದವು.

ದೇಹವೆನ್ನುವುದು ಅಶಾಶ್ವತವಾದುದು. ಕೀರ್ತಿಯು ಶಾಶ್ವತವಾದದ್ದು. ಅಶಾಶ್ವತವಾದ ದೇಹವು ಹೋದರೂ ಹೋಗಲಿ, ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಬೇಕೆಂಬುದು ಜನರ ಬಯಕೆಯಾಗಿದ್ದಿತ್ತು. ಆ ಕಾಲದಲ್ಲಿ ಒಬ್ಬ ದೊಡ್ಡ ಪಂಡಿತನ ಹೆಸರೋ ಅಥವಾ ಒಬ್ಬ ಮಹಾದಾನಿಯ ಹೆಸರೋ ನಾಡಿನಲ್ಲಿ ಬಹುವಾಗಿ ಪ್ರಸಾರವಾಗುತ್ತಿತ್ತೋ ಇಲ್ಲವೋ ಗೊತ್ತಿಲ್ಲ. ಆದರೆ ಯುದ್ಧದಲ್ಲಿ ಪ್ರಾಣವನ್ನು ತ್ಯಾಗ ಮಾಡಿದ ವೀರನ ಹೆಸರು ಈ ಲೋಕದಲ್ಲಿ ಮಾತ್ರವಲ್ಲ ಪರಲೋಕದಲ್ಲಿಯೂ ಪ್ರಸಾರಗೊಳ್ಳುತ್ತಿತ್ತು.[೧೦]

ಆ ಕಾಲದ ರಾಜಕೀಯ ಸಂದರ್ಭ ಮತ್ತು ಆಚರಣೆಯಲ್ಲಿದ್ದ ತುರುಗಳವು, ಸ್ತ್ರೀ ಅಪಹರಣ ಹಾಗೂ ಹಠಾತ್ ಆಕ್ರಮಣಗಳು ವೀರತ್ವವನ್ನು ಒಂದು ಮೌಲ್ಯವನ್ನಾಗಿ ಮಾಡಿ ಅದಕ್ಕೆ ಪ್ರಾಮುಖ್ಯತೆಯನ್ನು ತಂದುಕೊಟ್ಟಿದ್ದವು. ವೀರತ್ವದ ಹೊಗಳಿಕೆಗಾಗಿ ವೀರಕಾವ್ಯಗಳು, ವೀರಗಲ್ಲುಗಳು ಹಾಗೂ ವೀರಶಾಸನಗಳು ಅಂದಿನ ಸಮಾಜದಲ್ಲಿ ರೂಪುಗೊಂಡವು. ವೀರನನ್ನು ಮಹಾಕಾವ್ಯಗಳ ಪಾತ್ರಗಳಿಗೆ ಹೋಲಿಸುವುದು, ವೀರರಿಗೆ ವಿಶೇಷ ಬಿರುದುಗಳನ್ನು ನೀಡುವುದು ಜನಪ್ರಿಯವಾಗಿದ್ದಿತು. ರಾಜ್ಯ ಮತ್ತು ಸಮಾಜಗಳೆರಡೂ 'ವೀರತ್ವ'ವನ್ನು ಪೋಷಿಸುವ ಕಾರ್ಯವನ್ನು ಮಾಡುತ್ತಿದ್ದವು. ವೀರತ್ವವು ಧರ್ಮದಷ್ಟೇ ಪವಿತ್ರವೆಂದು ಭಾವಿಸಲಾಗಿದ್ದಿತು. ಅಲ್ಲದೇ ವೀರತ್ವ ಸ್ವರ್ಗವನ್ನು ಪಡೆಯುವುದು ಸುಲಭ ಮಾರ್ಗವೆಂದು ಪ್ರತಿಬಿಂಬಿಸಲಾಗಿತ್ತು. ಧ್ಯಾನ, ದಾನ ಮೊದಲಾದ ಧರ್ಮಮಾರ್ಗಗಳಲ್ಲಿ ನಡೆದ 'ಧರ್ಮವೀರ'ನಿಗೆ ಸಾಧ್ಯವಾಗುವ ಮೋಕ್ಷ ಸಾಧನೆಯು, ಧಾರ್ಮಿಕ ಬಲಿದಾನ ಮತ್ತು ಲೌಕಿಕ ಬಲಿದಾನ ಮಾರ್ಗಗಳಿಂದಲೂ ಸಾಧ್ಯವೆಂಬ ಭಾವನೆ ಬೆಳೆದು ಕೊನೆ ಕೊನೆಗೆ ಯುದ್ಧಮಾರ್ಗದಲ್ಲಿ ಮಡಿದ 'ಯುದ್ಧವೀರ'ನಿಗೂ ಸಾಧ್ಯವೆಂಬ ಭಾವನೆ ಸಮಾಜದಲ್ಲಿ ಕಾಣಿಸಿಕೊಂಡಿತು.[೧೧] ಗ್ರಾಮರಕ್ಷಣೆ, ದೇಶರಕ್ಷಣೆಯ ಅವಶ್ಯಕತೆ ಹೆಚ್ಚಿದಂತೆ, ಕ್ಷತ್ರಿಯರ ಭೂದಾಹ ಹೆಚ್ಚಿದಂತೆ ವೀರತ್ವವನ್ನು ಹೊಗಳುವ ಹಲವು ಘೋಷಣೆಗಳು ಹುಟ್ಟಿಕೊಂಡವು. 'ಧರ್ಮವೀರ'ನಿಗೆ ಸಮಾನವಾದ ಸ್ಥಾನ 'ಯುದ್ಧವೀರ'ನಿಗೂ ಲಭಿಸಿ ಅವನಿಗಾಗಿ ವೀರಸ್ವರ್ಗದ ಕಲ್ಪನೆ ಆಕಾರ ಪಡೆಯಿತು. ಈ ವೀರಮರಣ-ವೀರತ್ಯಾಗಗಳ ಮೌಲ್ಯ ಪ್ರಸಾರಕ್ಕಾಗಿ ಅಂದಿನ ಸಮಾಜ ಕಾವ್ಯ ಮತ್ತು ಶಾಸನಗಳನ್ನು ಮಾಧ್ಯಮವನ್ನಾಗಿ ಬಳಸಿಕೊಂಡಿತು. ಸಮಕಾಲೀನ ಸಾಹಿತ್ಯ ಮತ್ತು ಶಾಸನಗಳು ಅದನ್ನು ಸ್ಪಷ್ಟಪಡಿಸುತ್ತವೆ.

ಉತ್ತರದ ಗೂರ್ಜರ-ಚೇದಿಯುರೊಂದಿಗೆ, ದಕ್ಷಿಣದ ಚೋಳ-ಚೇರರೊಂದಿಗೆ ಹೋರಾಡುವುದು ಅನಿವಾರ್ಯವಾಗಿದ್ದುದರಿಂದ ಕರ್ನಾಟಕ ದಕ್ಷಿಣ ಭಾರತದ 'ಯುದ್ಧ ಭೂಮಿ'ಯಾಗಿ ಪರಿಣಮಿಸಿತು. ಜಗತ್ಪ್ರಸಿದ್ಧ ಯುದ್ಧಗಳು ಜರುಗುವುದರೊಂದಿಗೆ ಆಂತರಿಕ ಕಲಹಗಳೂ ಎಡೆ ಪಡೆದು ವೀರಪ್ರಜೆಗಳ ಅವಶ್ಯಕತೆ ಅಧಿಕವಾಯಿತು.[೧೨] ಹೀಗಾಗಿ ವೀರಜೀವನವನ್ನು ಪ್ರತಿಪಾದಿಸಲು ವಿಕ್ರಮಾರ್ಜುನ ವಿಜಯ, ಸಾಹಸಭೀಮ ವಿಜಯಗಳಂತಹ ಕೃತಿಗಳೂ, ವೀರಘಟನೆಗಳನ್ನು ಪ್ರತಿನಿಧಿಸಲು ಸಾವಿರಾರು ವೀರಗಲ್ಲುಗಳೂ ನಾಡಿನ ತುಂಬ ತಲೆಯೆತ್ತಿ ನಿಲ್ಲಲು ಕಾರಣವಾಗಿದೆ. ಸಮಕಾಲೀನ ಸಮಾಜದಿಂದ ಸಾಹಿತ್ಯ ಪ್ರೇರಣೆ ಪಡೆದಂತೆ, ಸಾಹಿತ್ಯದಿಂದಲೂ ಸಮಕಾಲೀನ ಸಮಾಜ ಪ್ರೇರಣೆ ಪಡೆದಿದೆ. ಹೀಗಾಗಿ ಆಗಿನ ಜನರು 'ಜೀವಮುಳ್ಳಿನಂ ಇಜೆವುದು ಅರ್ಥಮುಳ್ಳಿನಂ ಈವುದು' ಎಂಬ ಮಾತನ್ನು ಮಂತ್ರವಾಗಿ ಗ್ರಹಿಸಿದರು. ತಾಯಿ ವೀರಮಾತೆಯೆನಿಸಿಕೊಳ್ಳಲು, ಹೆಂಡತಿ ವೀರಪತ್ನಿಯೆನಿಸಿಕೊಳ್ಳಲು ತವಕಿಸಿದರು. 'ವಿಸಸನದೊಳ್ ವಿರೋಧಿ ನೃಪರಂ ತಜೆದೊಟ್ಟಲ್... ಕರಂ ನೆಜೆವ ಮಕ್ಕಳನೀಯದೆ ನೋಡೆನಾಡೆ ನೋಯಿಸಿದಪುದಿಕ್ಷುಪುಷ್ಪದ ವೊಲೆನ್ನಯ ನಿಷ್ಫಲ ಪ್ರದರ್ಶನಂ'[೧೩] ಎಂಬ ಕುಂತಿಯ ಮಾತಿನಲ್ಲಿ ಪಂಪನು ವೀರತ್ವದ ಮಹತ್ವವನ್ನು ಪ್ರತಿಪಾದಿಸುತ್ತಾನೆ.

ಇನ್ನೊಂದೆಡೆ ರನ್ನ ದ್ರೌಪದಿಯ ಮಾತಿನ ಮೂಲಕ ವೀರತ್ವದ ಮಹತ್ವವನ್ನು ಈ ರೀತಿ ವ್ಯಕ್ತಪಡಿಸುತ್ತಾನೆ.

'ಮಣಿಕನಕಂ ವಸ್ತುವಿಭೂ
ಷಣಂಗಳಂ ಕೊಟ್ಟು ಪೆಂಡಿರೇಲ್ವರೆ
ಗಂಡರ್ಗುಣಮನೆ ಮರೆವುದು ಶಸ್ತ್ರವ್ರಣವಂ
ನಿನ್ನಂತೆ ಮೆರೆವುದಿರಿವ ಬೆಡಂಗಾ'[೧೪]

ಅಂದರೆ ಸ್ತ್ರೀಯರು ತಮಗೆ ಪುರುಷರಿಂದ ದೊರಕುವ ಮಣಿಕನಕಾದಿ ವಸ್ತುಗಳನ್ನು ಮೆಚ್ಚುವುದಿಲ್ಲ. ಅವರು ಮೆಚ್ಚುವುದು ಪುರುಷರ ವೀರಗುಣವನ್ನು ಮತ್ತು ಅವರ ದೇಹದ ಮೇಲಿನ ಆಯುಧದಿಂದ ಆದ ಗಾಯದ ಗುರುತುಗಳನ್ನು ಮಾತ್ರ ಎಂಬುದನ್ನು ಕವಿ ಪದ್ಯದ ಮೂಲಕ ವೀರ ಮೌಲ್ಯವನ್ನು ಎತ್ತಿಹಿಡಿದಿದ್ದಾನೆ.

ವೀರತನವೆಂಬುದು ಪುರುಷರ ಸ್ವತ್ತಷ್ಟೇ ಅಲ್ಲ, ಸ್ತ್ರೀಯರ ಸಂಪತ್ತೂ ಆಗಿತ್ತು. ಯುದ್ಧ ಭೂಮಿಯಿಂದ ಹಿಮ್ಮೆಟ್ಟಿ ಹೆದರಿ ಓಡಿ ಬಂದ ಗಂಡಂದಿರನ್ನು ಹೆಂಡಂದಿರು ತಮ್ಮ ಮನೆಯಲ್ಲಿ ಸೇರಿಸಿಕೊಳ್ಳುತ್ತಿರಲಿಲ್ಲ. ಅವರಿಗೆ ಕುಂಕುಮ, ಬಳೆ, ಸೀರೆಯನ್ನು ನೀಡಿ ಹೊರಗೆ ಅಟ್ಟುತ್ತಿದ್ದರು ಎಂದು ದ್ರೌಪದಿಯ ನುಡಿಗಳನ್ನು ರನ್ನ ತನ್ನ ಗದಾಯುದ್ಧದಲ್ಲಿ ಉಲ್ಲೇಖಿಸುತ್ತಾನೆ.[೧೫]

ಮಾತೃಭೂಮಿಯ ರಕ್ಷಣೆಯ ಮೂಲಕ ಮೋಕ್ಷ ಗಳಿಸಲು ಹಾತೊರೆಯುವಲ್ಲಿ ಪ್ರಾಣಾಂತಿಕ ಹೋರಾಟ ಕನ್ನಡಗರಿಗೆ ಒಂದು ಮೌಲ್ಯವಾಯಿತು. ಶರಣಾಗತ ರಕ್ಷಣೆ ತ್ಯಾಗಗಳೊಂದಿಗೆ

ಅಂದು ವೀರಮರಣವೂ ಮೌಲ್ಯಶ್ರೇಣಿಯಲ್ಲಿ ಗಣಿಸಲ್ಪಟ್ಟಿದ್ದಿತೆಂದು ಆದಿಕವಿ ಪಂಪನು ಪದ್ಯದ ಮೂಲಕ ತಿಳಿಸುತ್ತಾನೆ.[೧೬] ಒಬ್ಬಳಂತೂ

ತಾಂ ಗಂಡ ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಿರ್ಪನಿಲ್ಲ ಮಾ
ಣ್ದಾಂ ಗಡಮಿರ್ಪೆನಂತನಿತು ಬೆ(ಳ್ಳು)ನೆ ಮುನ್ನಮೆ ಪೋಗಿ ನಲ್ಮೆಗೆ
ಲ್ಲಂಗೊಳೆ ದೇವಲೋಕದೊಳ ಧೀಶನನಾನಿದಿರ್ಗೊಳ್ವೆನೋಸ
ಗ್ಗಂಗಳೊಳಿರ್ಪ ದೇವವಿಡಿ ತೋಟ್ಟಿರೊಳಟ್ಟಿ ಯನಾಗಲೀವೆನೇ॥[೧೭]

ಎಂದು ನುಡಿದು, ಗಂಡ ವೀರಸ್ವರ್ಗವೇರುವ ಮೊದಲೇ ಮಹಾಸತಿಯಾಗಿ ಅವನನ್ನು ಸ್ವರ್ಗದಲ್ಲಿ ಎದುರುಗೊಳ್ಳಲು ನಿಶ್ಚಯಿಸುತ್ತಾಳೆ. ಇನ್ನೊಬ್ಬಳು 'ಸಮುದ್ರದಲ್ಲಿ ಸಿಗುವ ಮುತ್ತುಗಳು ಸಾಕು, ವೈರಿ ಗಜಗಳ ಮಸ್ತಕದ ಮುತ್ತು ಬೇಕು, ನಾಳೆ ತೆಗೆದುಕೊಂಡು ಬಾ'ಯೆಂದು ಗಂಡನಿಗೆ ನಗೆನುಡಿಯುತ್ತಾಳೆ. 'ನನ್ನ ತಲೆ ಹೋದರೂ ಮುಂಡವೇ ಶೂರನನ್ನು ಬೆನ್ನಟ್ಟಿ ಹೋಗಿ ಶತ್ರುಗಳನ್ನು ಕೊಲ್ಲದಿದ್ದರೆ ಅಂಜಿದವನಾಗುತ್ತೇನೆ' ಎಂದು ಪಂಪನು ವೀರನೊಬ್ಬನಿಂದ ವ್ಯಕ್ತವಾದ ಅಭಿಪ್ರಾಯವನ್ನು ಉಲ್ಲೇಖಿಸುತ್ತಾನೆ.[೧೮] ಇಂಥ ಭಾವನೆಗಳು ಸಮಾಜದಲ್ಲಿ ವೀರ ಪಡೆ ದಿನದಿಂದ ದಿನಕ್ಕೆ ದ್ವಿಗುಣಗೊಳ್ಳಲು ಕಾರಣವಾಯಿತು. ಕಾವ್ಯಗಳಲ್ಲಿ ಬರುವ ವೀರತ್ವದ ಮೌಲ್ಯಗಳು ಆ ಕಾಲದ 'ಯುದ್ಧವೀರ' ಸಮಾಜದ ಮನಸ್ಸನ್ನು ಸ್ಪಷ್ಟಪಡಿಸುತ್ತವೆ.

ಸಮಕಾಲೀನ ಸಾಹಿತ್ಯ ಕೃತಿಗಳಲ್ಲದೆ, ಸಮಕಾಲೀನ ಶಾಸನಗಳೂ ವೀರತ್ವದ ಮೌಲ್ಯಗಳನ್ನು ಎತ್ತಿಹಿಡಿದಿವೆ. ಹಲವು ವೀರಶಾಸನಗಳಿಂದ ವೀರರು ತಮ್ಮ ದೇಹ ಲೌಕಿಕ ಬದುಕಿನ ಬಗೆಗೆ ಎಂತಹ ಭಾವನೆ ತಾಳಿದರೆಂಬ ವಿಷಯಗಳು ತಿಳಿದುಬಂದಿವೆ. ಅಂತಹ ವಿಷಯಗಳನ್ನು ಉಲ್ಲೇಖಿಸುವ ಶ್ಲೋಕಗಳು ಹಲವಾರು ವೀರಶಾಸನಗಳಲ್ಲಿ ಕಂಡುಬರುತ್ತವೆ.

ದ್ವಾವಿಮೌ ಪುರುಷೌಲೋಕೇ ಸ್ಸೂರ್ಯಮಂಡಲ ಭೇದಿನೌ
ಪರಿವ್ರಾಡ್ಯೋಗ ಯುಕ್ತಾಶ್ಚ ರಣೇಚ ಅಭಿಮುಖೇಹತಃ[೧೯]

ಅಂದರೆ ಸೂರ್ಯಮಂಡಲವನ್ನು ಭೇದಿಸಲು ಸಮರ್ಥರು ಈ ಲೋಕದಲ್ಲಿರುವವರು ಇಬ್ಬರೇ. ಯೋಗ ನಿಷ್ಠನಾದ ಸನ್ಯಾಸಿಯೊಬ್ಬ, ರಣರಂಗದಲ್ಲಿ ಹೋರಾಟ ಮಾಡುತ್ತ ಅಸುನೀಗಿದ ವೀರ. ಇಂಥ ಮೌಲ್ಯಗಳು ಜನಮನದಲ್ಲಿ ಆಳವಾಗಿ ಬೇರೂರತೊಡಗಿತು. ವೀರರಿಗೆ ಸ್ಫೂರ್ತಿಯನ್ನು ನೀಡುವ ದುರ್ಗಸಿಂಹನ ಪಂಚತಂತ್ರದ ಶ್ಲೋಕವೊಂದು ಹಲವಾರು ವೀರಗಲ್ಲುಗಳ ಅಂತ್ಯದಲ್ಲಿ ಕಾಣಿಸಿಕೊಂಡಿರುವುದುಂಟು.

ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ।
ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ॥[೨೦]

ಎಂದರೆ ಯುದ್ಧದಲ್ಲಿ ಜಯಶಾಲಿಯಾದರೆ ಇಹಲೋಕದಲ್ಲಿ ಲಕ್ಷ್ಮಿ ಲಭಿಸುತ್ತಾಳೆ. ಹೋರಾಡುತ್ತ ಮಡಿದರೆ ಸ್ವರ್ಗದಲ್ಲಿ ಸುರಾಂಗನೆಯರು ದೊರಕುವರು, ನಿಮಿಷದಲ್ಲಿ ಅಳಿಯುವ ಈ ದೇಹಕ್ಕೆ ಕಾಳಗದಲ್ಲಿ ಅಳಿವೆನೆಂಬ ಕೊರಗೇಕೆ? ಇಂಥ ಯೋಚನೆಗಳು ಕನ್ನಡ ನಾಡಿನ ವೀರರ ಮಂತ್ರವಾಗಿತ್ತು, ಬದುಕಿನ ಉಸಿರಾಗಿತ್ತು. ಈ ಕಾರಣದಿಂದ ರಾಜರುಗಳಿಗೆ ತಮ್ಮ ಸ್ವಾಮಿನಿಷ್ಠೆಯನ್ನು ವ್ಯಕ್ತಗೊಳಿಸುವಲ್ಲಿ, ಊರಿಗೆ ಬಂದ ತೊಂದರೆಯನ್ನು ನಿವಾರಿಸುವಲ್ಲಿ, ಮೊರೆಹೊಕ್ಕವರನ್ನು ರಕ್ಷಿಸುವಲ್ಲಿ, ಗೋವುಗಳನ್ನು ರಕ್ಷಿಸುವಲ್ಲಿ, ಸ್ತ್ರೀಯರ ಮಾನವನ್ನು ಕಾಪಾಡುವಲ್ಲಿ, ದುಷ್ಟಮೃಗ–ದುರ್ಜನರನ್ನು ಬಗ್ಗು ಬಡಿಯುವಲ್ಲಿ ವೀರರಾಗಿದ್ದ ಕನ್ನಡಿಗರು ತಮ್ಮ ಪ್ರಾಣವನ್ನೇ ಆಹುತಿಯಾಗಿಸಿ ಹೋರಾಡಿದ್ದಾರೆ. ಅಂಥವರ ಕತೆಯನ್ನು ಸಾರುತ್ತ ಅವರ ಸ್ಮರಣೆಯನ್ನು ಮಾಡುವ ವೀರರ ಸ್ಮಾರಕಶಿಲ್ಪಗಳು ನಾಡಿನುದ್ದಗಲಕ್ಕೂ ನಿಂತುಕೊಂಡಿವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿಯೂ ಇಂಥ ಸ್ಮಾರಕಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ.

### ೪.೨. ವೀರಮರಣದ ಪ್ರಕಾರಗಳು

ದಾವಣಗೆರೆ ಜಿಲ್ಲೆಯಲ್ಲಿ ವೀರಮರಣದ ಸ್ಮಾರಕಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ. ಅಧ್ಯಯನದ ದೃಷ್ಟಿಯಿಂದ ಅವುಗಳನ್ನು ವಿಂಗಡಣೆ ಮಾಡುವಲ್ಲಿ ಅರಸುಮನೆತನಗಳನ್ನು ಗಮನದಲ್ಲಿಟ್ಟುಕೊಳ್ಳುವುದಕ್ಕಿಂತಲೂ ಹೋರಾಟಗಳ ಪ್ರಭೇದಗಳನ್ನು ಗಮನದಲ್ಲಿರಿಸಿಕೊಳ್ಳಲಾಗಿದೆ. ವೀರನಾದವನು ಯಾವುದೇ ರೀತಿಯ ಹೋರಾಟದಲ್ಲಿ ಮಡಿದಿರಬಹುದು. ಆ ಹೋರಾಟದ ಘಟನೆಯ ಸಂಪೂರ್ಣ ಚಿತ್ರಣವನ್ನು ಪುನರ್‌ರಚಿಸುವಾಗ ಅಧ್ಯಯನ ಪ್ರದೇಶದ ಕ್ರಿ.ಶ. ೮ನೇ ಶತಮಾನದಿಂದ ೨೦ನೇ ಶತಮಾನದವರೆಗಿನ ವೀರಮರಣದ ಸ್ಮಾರಕಶಿಲ್ಪಗಳನ್ನು ಗಮನಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಅವುಗಳನ್ನು ಶಾಸನಸಹಿತ ಮತ್ತು ಶಾಸನರಹಿತ ಸ್ಮಾರಕಶಿಲ್ಪಗಳೆಂದು ವಿಭಾಗಿಸಿಕೊಳ್ಳಲಾಗಿದೆ. ಅವುಗಳ ಮೇಲೆ ಶಾಸನವಿರಲಿ ಇಲ್ಲದಿರಲಿ, ಆ ಸ್ಮಾರಕಶಿಲ್ಪಗಳ ಉದ್ದೇಶ ಒಂದೇ ಆಗಿರುತ್ತದೆ. ಅವುಗಳಲ್ಲಿರುವ ವಿಷಯ ಮತ್ತು ಶಿಲ್ಪದ ಆಧಾರದಿಂದ ಮುಂದಿನಂತೆ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

#### ೪.೨.೧ ಯುದ್ಧದಲ್ಲಿ ಮಡಿದ ವೀರರ ಸ್ಮಾರಕ ಶಿಲ್ಪಗಳು

ಯುದ್ಧ ಎಂಬುದು ಮನುಷ್ಯನ ಸ್ವಭಾವಕ್ಕೆ ಅಂಟಿಬಂದ ಹುಟ್ಟುಗುಣ. ಯುದ್ಧದಿಂದಾಗಿ ಒಬ್ಬ ಅರಸನ, ರಾಜ್ಯದ ಏಳಿಗೆ ಮತ್ತು ನಾಶವಾಗಿರುವುದರ ಚಿತ್ರಗಳೇ ಕಂಡುಬರುತ್ತವೆ.[೨೧] ಯುದ್ಧದಿಂದಲೇ ತನ್ನ ಏಳಿಗೆ, ತನ್ನ ಶತ್ರುಗಳ ನಾಶ ಎಂಬುದಾಗಿ ಭಾರತದಲ್ಲಿ ಆಳಿದ ಎಲ್ಲ ಅರಸರೂ ಭಾವಿಸಿದ್ದಂತೆ ತೋರುತ್ತದೆ. ಈ ಅಂಶ ಅವರು ಮಾಡಿದ ಯುದ್ಧಗಳಿಂದ ಮತ್ತು ಅವರು ಹೊಂದಿದ್ದ ಬಿರುದು, ಪ್ರಶಸ್ತಿಗಳಿಂದಲೂ ವ್ಯಕ್ತವಾಗುತ್ತದೆ.

ರಾಜ್ಯ ವಿಸ್ತರಣೆಗಾಗಿಯೋ, ವ್ಯಕ್ತಿ ಮಾತ್ಸರ್ಯದಿಂದಲೋ ಅರಸರಲ್ಲಿ ಯುದ್ಧಗಳು ನಡೆಯುತ್ತಿದ್ದವು. ಇಂಥ ಹೋರಾಟಗಳಲ್ಲಿ ಸೈನಿಕರದೇ ಮಹತ್ವದ ಪಾತ್ರವಾಗಿತ್ತು. ಒಂದು ರೀತಿಯಲ್ಲಿ ಹೇಳುವುದಾದರೆ

ಎರಡು ಕಡೆಯ ಸೈನಿಕರ ಸೋಲು ಗೆಲುವುಗಳೇ ಅರಸರ ಸೋಲು ಗೆಲುವುಗಳಾಗಿದ್ದವು. ತಮ್ಮ ಪರವಾಗಿ ಹೋರಾಡಿ ಮಡಿದ ವೀರನ ಸೇವೆಯನ್ನು ಮೆಚ್ಚಿ, ಅವನ ವೀರತನವನ್ನು ಹೊಗಳುವ ಸ್ಮಾರಕಶಿಲ್ಪಗಳನ್ನು ಅರಸರ ಅಥವಾ ಅವನ ಕೈಕೆಳಗಿನ ಅಧಿಕಾರಿಗಳು ಹಾಕಿಸುತ್ತಿದ್ದರು. ಅದೇ ಸ್ಮಾರಕಗಳಲ್ಲಿ ವೀರನ ಮನೆಯವರಿಗೆ ದತ್ತಿ ಬಿಟ್ಟ ವಿಷಯವನ್ನು ಬರೆಯಿಸುತ್ತಿದ್ದರು. ಕನ್ನಡದ ಅತ್ಯಂತ ಪ್ರಾಚೀನ ಹಲ್ಮಿಡಿ ಶಾಸನವು ಪರಾಕ್ರಮವನ್ನು ಪುರಸ್ಕರಿಸುವ ವೀರಶಾಸನವಾಗಿದೆ. ಆದರೆ ಇದು ಸತ್ತವೀರನ ನೆನಪಿಗಾಗಿ ನೆಟ್ಟ ವೀರಗಲ್ಲು ಆಗಿರದೇ, ಗೆದ್ದವರ ಪುರಸ್ಕಾರಕ್ಕಾಗಿ ಕೊಟ್ಟ ದಾನದ ಪ್ರಶಸ್ತಿ ಶಾಸನವಾಗಿದೆ.[೨೨] ಇದರಿಂದ ಯುದ್ಧದಲ್ಲಿ ಸತ್ತ ವೀರರಿಗೆ ಅಷ್ಟೇ ಅಲ್ಲ, ಗೆದ್ದು ಬದುಕಿ ಬಂದವರಿಗೂ ಪ್ರಶಂಸನೆ ನೀಡುವುದು ತಿಳಿಯುತ್ತದೆ. ಬದುಕಿ ಬಂದವರಿಗಿಂತಲೂ ಸತ್ತವರು ಹೆಚ್ಚು ಸಹಾನುಭೂತಿ ಗಳಿಸುವುದು ಸ್ವಾಭಾವಿಕವಾಗಿರುತ್ತದೆ. ಆದರೂ ಹಲ್ಮಿಡಿ ಶಾಸನವನ್ನು ಪ್ರಥಮ ಉಪಲಬ್ಧ ವೀರಗಲ್ಲು ಶಾಸನವೆಂದೇ ಪರಿಗಣಿಸಲಾಗಿದೆ. ಈ ಶಾಸನವಲ್ಲದೇ ಕ್ರಿ.ಶ. ಸುಮಾರು ೫೦೦ರ ಕಾಲಘಟ್ಟಕ್ಕೆ ಸೇರಿದ ತಮಟಗಲ್ಲು ಶಾಸನವು ಕರ್ನಾಟಕದ ಅತ್ಯಂತ ಪ್ರಾಚೀನ ಉಪಲಬ್ಧ ವೀರಗಲ್ಲು ಎಂಬ ಹಿರಿಮೆಗೆ ಪ್ರಾಪ್ತವಾಗಿದೆ.[೨೩] ನೆರೆಯ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುವ ಈ ಶಾಸನ ರಣರಂಗದಲ್ಲಿ ಹೋರಾಡಿ ಮಡಿದ ಗುಣಮಧುರ ಎಂಬ ಅರಸನ ವ್ಯಕ್ತಿತ್ವವನ್ನು ವರ್ಣಿಸುವ ಪ್ರಶಸ್ತಿ ಶಾಸನವಾಗಿದೆ. ಈ ಶಾಸನ ಸ್ಮಾರಕವನ್ನೇ ನಾವು ಕರ್ನಾಟಕದಲ್ಲಿ ಅಧಿಕೃತವಾಗಿ ಕಂಡುಬರುವ ಪ್ರಪ್ರಥಮ ವೀರಗಲ್ಲು ಎಂದು ಒಪ್ಪಿಕೊಳ್ಳಲಾಗಿದೆ. ಇಂಥ ಪರಂಪರೆ ಕರ್ನಾಟಕದಲ್ಲಿ ೨೦ನೇ ಶತಮಾನದ ಆದಿ ಭಾಗದವರೆಗೂ ಮುಂದುವರಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಚನ್ನಗಿರಿ ತಾಲೂಕು ದಾಗಿನಕಟ್ಟೆ ಗ್ರಾಮದಲ್ಲಿ ಹುಲಿಯೊಂದಿಗೆ ಹೋರಾಡಿ ಮಡಿದ ವೀರನಿಗಾಗಿ ೧೯೩೮ರಲ್ಲಿ ಸ್ಮಾರಕಶಿಲ್ಪವೊಂದನ್ನು ನೆಡಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಯುದ್ಧದಲ್ಲಿ ಹೋರಾಡಿ ಮಡಿದಿರುವ ವೀರರ ಸ್ಮಾರಕಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ. ಆ ಶಿಲ್ಪಗಳ ಕುರಿತ ವಿವರಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

**ಯುದ್ಧದಲ್ಲಿ ಮಡಿದ ವೀರರ ಸ್ಮಾರಕ ಶಿಲ್ಪಗಳು: ಶಾಸನಸಹಿತ**

ಬಸವನಕೋಟೆ[೨೪] ಗ್ರಾಮದ ದಕ್ಷಿಣಕ್ಕೆ ಬಸವಣ್ಣನ ಗುಡಿಯಲ್ಲಿರುವ ಸ್ಮಾರಕಶಿಲ್ಪವು ಕ್ರಿ.ಶ. ೯೦೭ರದ್ದಾಗಿದೆ. ರಾಷ್ಟ್ರಕೂಟ ವಂಶದ ಚಕ್ರವರ್ತಿ ಅಕಾಲವರ್ಷ (ಕನ್ನರದೇವ)ನು ಆಳುತ್ತಿದ್ದಾಗ, ಕಾಸಿಕಜ್ಜ ಎಂಬ ಪ್ರಾಂತ್ಯಪಾಲಕನ ಅಪ್ಪಣೆಯಂತೆ ನಾಗವರ್ಮ ಮತ್ತು ಅಜವರ್ಮ ಎಂಬುವರು ನೊಳಂಬರೊಂದಿಗೆ ಕಾದಾಡಿ ಮಡಿಯುತ್ತಾರೆ. ಆಗ ಅವರ ಸ್ಮಾರಕವಾಗಿ ವೀರಗಲ್ಲನ್ನು ನಿಲ್ಲಿಸಲಾಗಿತ್ತು. ಆದರೆ ನೊಳಂಬರು ಆ ಕಲ್ಲನ್ನು ಸುಟ್ಟುಬಿಟ್ಟರು. ಆಗ ಮತ್ತೆ ಆ ಕಲ್ಲನ್ನು ಅವರಿಗೆಂದು ಸ್ಥಾಪಿಸಲಾಯಿತು ಎಂಬ ಕುತೂಹಲಕಾರಿ ವಿಷಯವನ್ನು ಈ ಸ್ಮಾರಕಶಿಲ್ಪ ತಿಳಿಸುತ್ತದೆ. ವೀರನ ಸಾವನ್ನು ಹೇಳುವ ವೀರಗಲ್ಲು ಅವನ ಹೆಸರನ್ನು ಶಾಶ್ವತವಾಗಿ ಮಾಡುತ್ತಿತ್ತಲ್ಲದೆ

ಅವನ ಕಡೆಯವರಿಗೆ ಧೈರ್ಯ, ಶಕ್ತಿ, ಉತ್ಸಾಹಗಳನ್ನು ತುಂಬುತ್ತಿತ್ತು. ಇದನ್ನು ತಪ್ಪಿಸುವ ಸಲುವಾಗಿ ನೊಳಂಬರು ಆ ವೀರಗಲ್ಲನ್ನು ನಾಶ ಮಾಡಿರಬಹುದೇ ಎಂಬ ಶಂಕೆಯೂ ಮೂಡುತ್ತದೆ ಎಂದು ವಿದ್ವಾಂಸರಾದ ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೨೪] ಕಡಬಗೆರೆ ಗ್ರಾಮದ ಪಶ್ಚಿಮಕ್ಕೆ ಹೊಲವೊಂದರಲ್ಲಿ ರಾಷ್ಟ್ರಕೂಟರ ನಾಲ್ಕು ಸ್ಮಾರಕಶಿಲ್ಪಗಳಿವೆ. ಕ್ರಿ.ಶ. ೯-೯-೯೨೨ನೆಯ ಕಾಲದ ಒಂದು ಸ್ಮಾರಕಶಿಲ್ಪವು ರಾಷ್ಟ್ರಕೂಟ ದೊರೆ ನಿತ್ಯವರ್ಷ ಇಂದ್ರವಲ್ಲಭನ ಕಾಲದಲ್ಲಿ ಅವನ ಮಹಾಸಾಮಂತ ಬಿಜ್ಜನೆಂಬುವನು ಕೋಗಳಿ-೫೦, ಮಾಸಿಯವಾಡಿ-೧೪೦ನ್ನು ಆಳುತ್ತಿದ್ದಾಗ, ಕದಂಬ ವಂಶದ ಮುದುದರ ದೇವಯ್ಯನ ಮಗ ಮಾಳಯ್ಯನು, ನೊಳಂಬ ಅಯ್ಯಪದೇವನ ಮಗ ಅಣ್ಣಿಗನು ಪಡಗಲ್ಲನ್ನು ಮುತ್ತಿದಾಗ ಹೋರಾಡಿ ಮಡಿದಿರುವುದನ್ನು ದಾಖಲಿಸಿದೆ.[೨೫] ಅದೇ ಸ್ಥಳದಲ್ಲಿರುವ ಕ್ರಿ.ಶ. ೯೨೨ರ ಮತ್ತೊಂದು ಸ್ಮಾರಕ ಶಿಲ್ಪವು ನಿತ್ಯವರ್ಷನ ಸಾಮಂತ ಬಿಜ್ಜನು ಮಾಸಿಯವಾಡಿ-೧೪೦, ಕೋಗಳಿ-೫೦೦ ಪ್ರದೇಶಗಳನ್ನು ಆಳುತ್ತಿದ್ದಾಗ ಕದಂಬ ವಂಶದ ನಾಕಲೋಕ್ಕನ ಮಗನು, ಅಯ್ಯಪದೇವನ ಮಗನಾದ ಅಣ್ಣಿಗ ಎಂಬುವನು ಪಡಗಲ್ಲನ್ನು ಮುತ್ತಿದಾಗ ಹೋರಾಡಿ ಮಡಿದಿರುವುದನ್ನು ಉಲ್ಲೇಖಿಸುತ್ತದೆ.[೨೬] ಕೋಗಳಿ-೫೦೦ ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕಿನ ಇಂದಿನ ಕೋಗಳಿಯಾಗಿದೆ. ಈ ವಿಭಾಗದ ಉತ್ತರ ಮತ್ತು ಪಶ್ಚಿಮಕ್ಕೆ ತುಂಗಭದ್ರಾ ನದಿ, ಪೂರ್ವಕ್ಕೆ ಬಲ್ಲಕುಂದೆ-೩೦೦, ದಕ್ಷಿಣದಲ್ಲಿ ಆಗ್ನೇಯಕ್ಕೆ ಜಗಲೂರು-೭೦, ದಕ್ಷಿಣಕ್ಕೆ ಬೆಳ್ತೂರು-೧೨, ಕೋಗಳಿ-೫೦೦ ಪ್ರದೇಶದ ಬಾಹ್ಯ ಮೇರೆಗಳಾಗಿದ್ದವು.[೨೭] ಮಾದವಾಡಿ-೧೪೦ರಲ್ಲಿ ಗದಗ ಜಿಲ್ಲೆಯ ಮುಂಡರಗಿ ಮತ್ತು ಕೊಪ್ಪಳ ತಾಲೂಕಿನ ಹಳ್ಳಿಗಳು ಸೇರಿದ್ದು ತಿಳಿದುಬರುತ್ತದೆ.[೨೮] ಸೊರಟೂರು ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಬಳಿ ರಾಷ್ಟ್ರಕೂಟರ ಮೂರು ಸ್ಮಾರಕಶಿಲ್ಪಗಳಿವೆ. ಕ್ರಿ.ಶ. ೯೩೫ರ ಒಂದು ಸ್ಮಾರಕವು ಸುವರ್ಣ ವರ್ಷ ವಲ್ಲಭ(ನಾಲ್ಕನೇ ಗೋವಿಂದ)ನ ಆಳ್ವಿಕೆ ಮತ್ತು ಬನವಾಸಿ-೧೨೦೦೦ವನ್ನು ಆಳುತ್ತಿದ್ದ ಶಾಂತರಸನ ಕಾಲದಲ್ಲಿ 'ಮಲೆಗ' ಎಂಬ ವೀರನು ಹೋರಾಟವೊಂದರಲ್ಲಿ ಮಡಿದಿರುವುದನ್ನು ಉಲ್ಲೇಖಿಸುತ್ತದೆ.[೩೦] ಅಲ್ಲಿಯೇ ಇರುವ ಎರಡನೇ ಸ್ಮಾರಕವು ಮೇಲಿನ ಶಾಸನದ ಕಾಲ, ರಾಜ ಮತ್ತು ಸಾಮಂತನನ್ನು ಉಲ್ಲೇಖಿಸುತ್ತಿದ್ದು, ರಟ್ಟಹಳ್ಳಿಯ 'ಪೊಲಗ'ನು ಹೋರಾಟದಲ್ಲಿ ಮಡಿದಿರುವುದನ್ನು ದಾಖಲಿಸಿದೆ.[೩೧] ರಟ್ಟಹಳ್ಳಿಯು ಹಿರೆಕೆರೂರು ತಾಲೂಕಿನ ಇಂದಿನ 'ರಟ್ಟಿಪಹಳ್ಳಿ' ಗ್ರಾಮವಾಗಿದೆ.[೩೨] ಇಲ್ಲಿರುವ ಮತ್ತೊಂದು ಸ್ಮಾರಕ ಶಿಲ್ಪವು 'ರಾಣಿಗಮಲ್ಲ' ಎಂಬುವನು ಕಾದಾಟವೊಂದರಲ್ಲಿ ಕುಂದಗಾವುಂಡನ ಮುಂದೆ ನಿಧನ ಹೊಂದಿದ್ದನ್ನು, ಆತನ ತಾಯಿ ಸಿರಿಯಕ್ಕನು ಸ್ಮಾರಕಶಿಲ್ಪವನ್ನು ನಿರ್ಮಿಸಿರುವುದಾಗಿ ಉಲ್ಲೇಖಿಸುತ್ತದೆ.[೩೩] ಸ್ಮಾರಕ ಶಿಲ್ಪದ ವಿಶೇಷವೆಂದರೆ ತನ್ನ ಮಗನಿಗಾಗಿ ತಾಯಿಯೊಬ್ಬಳು ಸ್ಮಾರಕ ನಿರ್ಮಾಣ ಮಾಡಿರುವುದು. ಈ ಸ್ಮಾರಕಶಿಲ್ಪಗಳಲ್ಲಿ ರಾಷ್ಟ್ರಕೂಟರ ಅರಸೊತ್ತಿಗೆಯ ಲಾಂಛನವಾದ ನೇಗಿಲಿನ ಚಿತ್ರಣಗಳಿವೆ.

ಹಿರೇಹಾಲಿವಣ ಗ್ರಾಮದ ಸ್ಮಾರಕಶಿಲ್ಪವೊಂದು ಕನ್ನರದೇವನ ಆಳ್ವಿಕೆ ಕಾಲದಲ್ಲಿ ಗೊಡ್ಡಿಲದೇವನೆಂಬುವನು ರಾಜ್ಯವಾಳುತ್ತಿರುವಾಗ ಹೋರಾಟದಲ್ಲಿ ಗಂಗವಂಶದ ಎರಗಂಗಯ್ಯನು ಮರಣ ಹೊಂದಿದ್ದನ್ನು ಉಲ್ಲೇಖಿಸುತ್ತದೆ.[೩೪] ಕನ್ನರದೇವನ ಕಾಲದ ಮತ್ತೊಂದು ಸ್ಮಾರಕಶಿಲ್ಪವು ಹಿರೇಕೋಗಲೂರು ಗ್ರಾಮದಲ್ಲಿದೆ. ಆ ಸ್ಮಾರಕ ಕನ್ನರದೇವನು ಮುಂವಾಡಿ ಸಿಂಗೆಯ ನಾಯಕನ ಮೇಲೆ ಕಾದಿದಲ್ಲಿ ಮಹಾಪ್ರಧಾನ ರಾಯದಂಡನಾಥ ಪೇಸಣ ಹನುಮ ಶರಣಾಗತ ವಜ್ರಪಂಜರಂ ಕೂಚರ್ಯರ ಮಗ ವಣದೇವರಸ ಹಲವಾರು ಕುದುರೆಗಳನ್ನು ಕೊಂದು ಸುರಲೋಕ ಪ್ರಾಪ್ತನಾದನೆಂದು ತಿಳಿಸುತ್ತದೆ.[೩೫] ಕೊಕ್ಕನೂರಿನ ರಾಷ್ಟ್ರಕೂಟ ಆರ್ಕದೇವರಸನ ಸ್ಮಾರಕಶಿಲ್ಪವೊಂದು ದೇವಯ್ಯ ಎಂಬುವನು ಹೋರಾಟದಲ್ಲಿ ಮಡಿದಾಗ ಉಂಬಳಿ ನೀಡಿರುವುದನ್ನು ದಾಖಲಿಸಿದೆ.[೩೬] ಕಾರಬೋವಚನ ಮಗ ಮಾರನು ಬೊಮ್ಮನನ್ನು ಮುತ್ತಿ ಕೊಂದುದಕ್ಕೆ, ಕಂಬ ೨೦ ಭೂಮಿಯನ್ನು ಕೊಟ್ಟ ದಾನ ಮತ್ತು ರಾಮೋಜನು ಈ ಕಲ್ಲನ್ನು ಸ್ಥಾಪಿಸಿದನೆಂದು ಬೇಲಿಮಲ್ಲೂರಿನ ಸ್ಮಾರಕಶಿಲ್ಪದಿಂದ ತಿಳಿಯುತ್ತದೆ.[೩೭] ಮಲ್ಲಿಗೇನಹಳ್ಳಿಯ ಸ್ಮಾರಕವು ಕದಂಬರ ತೈಲಪನ ಅಧಿಕಾರಿ ದಸರಸನ ವೀರಮರಣವನ್ನು ಉಲ್ಲೇಖಿಸುತ್ತದೆ.[೩೮]

ತ್ಯಾವಣಿಗಿ ಗ್ರಾಮದ ಕಲ್ಯಾಣ ಚಾಲುಕ್ಯರ ಕಾಲದ ತ್ರುಟಿತ ಸ್ಮಾರಕಶಿಲ್ಪವೊಂದು ಕಳ ಚಾಳುಕ್ಯರಾಭರಣ ಶ್ರೀಮ ಮಲ್ಲದೇವಂ ಪೃಥ್ವಿವೀ ರಾಜ್ಯಂಗೆಯ್ಯುತ್ತ ಸಕ ವರುಷ ೯೧೮ಯ ನನ್ದನ ಸಂವತ್ಸರದ ಕ್ರಾಹಯೊಳೆ ಶ್ರೀ ಮದಾಹವ ಎಂದಷ್ಟೇ ಉಲ್ಲೇಖಿಸುತ್ತದೆ.[೩೯] ಈ ಸ್ಮಾರಕ ಶಿಲ್ಪದ ಕಾಲ ಕ್ರಿ.ಶ. ೯೯೨ ಮತ್ತು ಆಹವಮಲ್ಲದೇವನ ಅವಧಿಯ ಸ್ಮಾರಕವೆಂದು ಶಾಸನತಜ್ಞ ಬಿ.ಎಲ್. ರೈಸ್ ಅವರು ತರ್ಕಿಸಿದ್ದಾರೆ. ಚಿಕ್ಕಯರೆಹಳ್ಳಿಯ[೪೦] ಕ್ರಿ.ಶ. ೧೦೯೦ರ ಸ್ಮಾರಕಶಿಲ್ಪವು ವಿಕ್ರಮಾದಿತ್ಯನ ಕಾಲದಲ್ಲಿ ಮಗುಸಾಡಿಯ ಮಾದಗನು ವಲ್ಲವರಸನ ಯುದ್ಧದಲ್ಲಿ ಮಡಿದಿರುವುದನ್ನು ತಿಳಿಸುತ್ತದೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕವು ಕ್ರಿ.ಶ. ಸು. ೯-೧೦ನೇ ಶತಮಾನದ್ದಾಗಿದ್ದು,[೪೧] ಹೋರಾಟವೊಂದರ ಅಸ್ಪಷ್ಟ ಮಾಹಿತಿಯನ್ನು ನೀಡುತ್ತದೆ. ನ್ಯಾಮತಿಯ[೪೨] ಚಾಲುಕ್ಯ ತ್ರಿಭುವನ ಮಲ್ಲದೇವನ ಕಾಲದ ಸ್ಮಾರಕವು ಚಾಲುಕ್ಯ ವಿಕ್ರಮ ವರ್ಷದ-೨೮ ಸ್ವಭಾನು ಸಂವತ್ಸರ, ಆಷಾಢ ಬಹುಳ-೧ ಗುರುವಾರ ವ್ಯತಿಪಾತ ಮತ್ತು ದಕ್ಷಿಣಾಯಣ ಸಂಕ್ರಮಣ(ಕ್ರಿ.ಶ. ೨೨ ಜೂನ್ ೧೧೦೩)ರಂದು ಖಂಡಿಕದ ಧರ್ಮಕ್ಕೆ ೧೬ ಕಮ್ಮ ತೋಟವನ್ನು ನಲವತ್ತಿಯ ಮಹಾಜನಗಳ ಸಮ್ಮುಖದಲ್ಲಿ ಮಾಧವ ಸಳಂಗಿ ಕೋಸವಯ್ಯನ ಮಗ ಬಿಟ್ಟಯ್ಯನಿಗೆ ದಾನ ನೀಡಿರುವುದನ್ನು ತಿಳಿಸುತ್ತದೆ. ಬಿಟ್ಟಯ್ಯನು ಹೋರಾಟದಲ್ಲಿ ಮಡಿದಿರುವನೆಂದು ತೋರುತ್ತದೆ. ಅದೇ ಗ್ರಾಮದ ದೇವಸ್ಥಾನದ ಉತ್ತರ ಕಡೆ ನಿಂತಿರುವ ಕ್ರಿ.ಶ. ೧೧೦೩ರ ಸ್ಮಾರಕ ಶಿಲ್ಪವು ತರ್ಕಶಾಸ್ತ್ರ, ವ್ಯಾಕರಣ, ಛಂದಸ್ಸು, ಅಲಂಕಾರ, ಕಾವ್ಯ, ನಾಟಕ, ರಕ್ಷಕರು, ಶಿಕ್ಷಕರು ಮುಂತಾದವರನ್ನು ಉಲ್ಲೇಖಿಸುತ್ತದೆ. ಆದರೆ ಹೋರಾಟದಲ್ಲಿ ಮಡಿದ ವೀರ ಯಾರೆಂಬುದನ್ನು ಸ್ಪಷ್ಟಪಡಿಸುವುದಿಲ್ಲ.[೪೩] ಬಿಳಿಚೋಡು[೪೪] ಗ್ರಾಮದ ರಾಮೇಶ್ವರ ದೇವಾಲಯದ ಮುಂದೆ ಇರುವ ಸ್ಮಾರಕಶಿಲ್ಪ ಕ್ರಿ.ಶ.ಸು. ೧೦-೧೧ನೆಯ ಶತಮಾನಕ್ಕೆ ಸೇರಿದೆ. ಮಡಿವಾಳ ಕೇತ ಎಂಬ

ವೀರನೊಬ್ಬ ಕಾಳಗದಲ್ಲಿ ಮಡಿದಿದ್ದಕ್ಕೆ ನಿಲ್ಲಿಸಲಾಗಿರುವ ಈ ಸ್ಮಾರಕ ಅವನ್ನು ಅರವತ್ತು ಒಕ್ಕಲ ಪುತ್ರ, ಐನೂರ್ವರ ಗಂಧವಾರಣ(ಆನೆ), ಬಿಲ್ಲ ಮೂನೂರ್ವರ ಪತಿ ಆಗಿದ್ದನೆಂದು ವರ್ಣಿಸುತ್ತದೆ. ಅವನು ಹೆಮ್ಮನಬೆಲ್ಲುಋ(ಹೆಮ್ಮನ ಬೇತೂರು)ವಿನ ಕೇತ ಗಾವುಣ್ಡ ಎಂಬುವನೊಂದಿಗೆ ಹೋರಾಡಿ ಜಯ ಪಡೆದು ಸತ್ತನೆಂದೂ, ಅವನ ಕುಟುಂಬದವರಿಗೆ ಬಿಣ್ಣಚೇಡಿನ(ಬಿಳಿಚೋಡಿನ) ಬತ್ತಚ ಗಾವುಣ್ಡನು ದತ್ತಿ ನೀಡಿದನೆಂದು ತಿಳಿಸುತ್ತದೆ. ಬಿಳಿಚೋಡು ಗ್ರಾಮದ ಪ್ರಾಚೀನ ಹೆಸರು 'ಬಿಣ್ಣಚೇಡು' ಆಗಿತ್ತೆಂದು ಸ್ಮಾರಕ ಶಿಲ್ಪದಿಂದ ತಿಳಿಯುತ್ತದೆ.[೪೫] ಇಲ್ಲಿರುವ ಇನ್ನೊಂದು ಸ್ಮಾರಕ ಶಿಲ್ಪವು ಕ್ರಿ.ಶ. ೧೧೧೧ರದ್ದಾಗಿದ್ದು, ತ್ರಿಭುವನಮಲ್ಲನ ಕಾಲದ ಸ್ಮಾರಕ ಶಿಲ್ಪವೆಂದು ಶಾಸನತಜ್ಞ ಬಿ.ಎಸ್. ರೈಸ್ ಅವರು ಊಹಿಸಿದ್ದಾರೆ.[೪೬] ಆದರೆ ಈ ಸ್ಮಾರಕದ ಕಾಲ ಕ್ರಿ.ಶ. ೧೧೦೦-೧೧೦೧ರ ವರ್ಷದ್ದೆಂದು ತೋರುತ್ತದೆ.[೪೭] ಇದು ಸಾಕಷ್ಟು ನಷ್ಟಗೊಂಡಿರುವುದರಿಂದ, ವಿವರ ಪೂರ್ಣವಾಗಿ ಸ್ಪಷ್ಟವಿಲ್ಲ. ಆದರೂ ಯಾವುದೋ ಒಂದು ದೇವದಾನವನ್ನು ಕಾಳಾಮುಖ ಪಾಶುಪತ ಪಂಥದ ಆಚಾರ್ಯರೊಬ್ಬರಿಗೆ ನೀಡಿದ ಸಂಗತಿಯನ್ನು ತಿಳಿಸುತ್ತದೆ. ಆ ದಾನವು ದೇವಾಲಯದ ಹಿಂದೆಯೇ ಇದ್ದ ೨೦೦ ಮರಗಳ ತೋಟ ಸೇರಿದಂತೆ ಬೆದ್ದಲು ಭೂಮಿಯನ್ನೂ ಒಳಗೊಂಡಿತ್ತು. ಶಾಮನೂರು ಗ್ರಾಮದ ಒಂದು ಸ್ಮಾರಕ ಶಿಲ್ಪವು ಆನಂದ ಸಂವತ್ಸರದ ವೈಶಾಖ ಶುದ್ಧ ಗುರುವಾರದಂದು ಕನವಸೆಟ್ಟಿಯ ಮಗ ಕೊಂಡನಂಬಿಯು ಹೋರಾಟದಲ್ಲಿ ಹಲವರನ್ನು ಕೊಂದು ಸುರಲೋಕ ಪ್ರಾಪ್ತನೆಂದು ತಿಳಿಸುತ್ತದೆ.[೪೮] ಕೊಂಡನಂಬಿ ಒಬ್ಬ ವ್ಯಾಪಾರಿಯಾಗಿದ್ದು ಹೋರಾಟದಲ್ಲಿ ವೀರಮರಣ ಹೊಂದಿದ್ದಾನೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪವು ಕನವಸೆಟ್ಟಿಯ ಜಕ್ಕಯ್ಯನ ಮಗ ಸಾಂತಯ ಶ್ರೀಕರಣದ ನಾಗಯ ಸಾದಗಿರಿಯನ ಬಂಡಿಯ ಹಿಡಿವಲ್ಲಿ ಕಾದು ಸುರಲೋಕ ಪ್ರಾಪ್ತನಾಗಿರುವುದನ್ನು ಉಲ್ಲೇಖಿಸುತ್ತದೆ.[೪೯] ಇಲ್ಲಿ ವೀರನು ಎತ್ತಿನಗಾಡಿ ಕದ್ದವರ ವಿರುದ್ಧ ಹೋರಾಡಿ ಮಡಿದನೆಂದು ತೋರುತ್ತದೆ. ಸ್ಮಾರಕಶಿಲ್ಪದಲ್ಲಿ ಎತ್ತಿನಗಾಡಿಯ ಯಾವುದೇ ದೃಶ್ಯಗಳಿಲ್ಲ. ಆದರೆ ವೀರನು ಶತ್ರುಗಳೊಂದಿಗೆ ಹೋರಾಡುತ್ತಿರುವ ಚಿತ್ರಣವು ಮಾತ್ರ ದಾಖಲಾಗಿದೆ.

ಹೊನ್ನಾಳಿ[೫೦] ಮಲ್ಲಿಕಾರ್ಜುನ ದೇವಸ್ಥಾನದ ಪೂರ್ವದಲ್ಲಿರುವ ಕ್ರಿ.ಶ. ೧೦೬೪ರ ಸ್ಮಾರಕಶಿಲ್ಪವೊಂದು ಯಡೆಯೂರ ಒಡೆಯನಾದ ನಾಗಿಲ ಮುದ್ದಯ್ಯನ ಮಗ ಕೇಶಣ್ಣನು ಹೋರಾಟದಲ್ಲಿ ಮಡಿದಿರುವುದನ್ನು ಉಲ್ಲೇಖಿಸುತ್ತದೆ. ಚನ್ನಗಿರಿ[೫೧] ಕಲ್ಲೇಶ್ವರ ದೇವಸ್ಥಾನದ ಬಳಿಯ ಸ್ಮಾರಕವು ವನಖಡೆಯ ಮಯಿದೇವನ ಮಗ ಕ್ಷಯದೇವ ಎಂಬುವನು ಹನಗವಾಡಿಯಲ್ಲಿ ನಡೆದ ಹೋರಾಟದಲ್ಲಿ ಪ್ರಾಣ ತೆತ್ತಿರುವುದನ್ನು ಉಲ್ಲೇಖಿಸುತ್ತದೆ. ಸೋಮಯ್ಯನ ಮಗ ಬೊಂಮೆಯ ನಾಯಕನು ನಲ್ಲುದುರೆ ಗ್ರಾಮದ ಗಡಿಯಲ್ಲಿ ಬೇಡರೊಂದಿಗೆ ಕಾದಾಡಿ ಮಡಿದನೆಂದು ಸ್ಮಾರಕಶಿಲ್ಪವೊಂದರಿಂದ ತಿಳಿದುಬರುತ್ತದೆ.[೫೨] ಉಚ್ಚಂಗಿ ಪಾಂಡ್ಯರ ವಿಜಯ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳ್ವಿಕೆ ಮಾಡುತ್ತಿದ್ದಾಗ, ಓಸನದ ಸಾಮಂತ ಚಟ್ಟಯನಾಯಕನ ಮಗ ಸಾಮಂತ ಬೆನವನಾಯಕ ಮತ್ತು ಸಾಮಂತ ಹುಣಿಯನ ಮಗ ಹರಿಯಮನಾಯಕರು

ಓಸನ, ಕೊಕ್ಕಲೂರು ಮತ್ತು ಹೊಗೆಯ ಪ್ರದೇಶಗಳಲ್ಲಿ ಸುಖ ಸಂತೋಷದಿಂದ ರಾಜ್ಯಭಾರ ಮಾಡುತ್ತಿದ್ದರು. ಆ ವೇಳೆ ವಾಸನದ ಸೂಳೆಯ ಕಾಳೆಯ ಮಕ್ಕಳಾದ ಹಡವಳ ಬೆನವಯ, ಚಂಡಮಯ, ಕರಿಯ ಮತ್ತು ಬಾಳ ಎನ್ನುವ ನಾಲ್ವರು ಕ್ರಿ.ಶ. ೧೧೬೨ರಲ್ಲಿ ಹೋರಾಟವೊಂದರಲ್ಲಿ ಮಡಿದ ಪ್ರಯುಕ್ತ ಕಾಳಿಸೆಟ್ಟಿ ಎಂಬುವನು ಪ್ರಭವ ಸಂವತ್ಸರ ಮಾಘ ಬಹುಳ-೫ ಸೋಮವಾರದಂದು ಈ ಸ್ಮಾರಕಶಿಲ್ಪವನ್ನು ಪ್ರತಿಷ್ಠಾಪಿಸಿ ಭೂದಾನ ನೀಡಿದನೆಂದು ಸ್ಮಾರಕವು ಉಲ್ಲೇಖಿಸುತ್ತದೆ.[೫೩] ಸ್ಮಾರಕ ಉಲ್ಲೇಖಿಸುವ 'ಓಸನ' ಆಡಳಿತ ಪ್ರದೇಶವು ಹರಿಹರ ತಾಲೂಕಿನ ಇಂದಿನ ವಾಸನ ಗ್ರಾಮವಾಗಿದೆಯೆಂದು ಅಭಿಪ್ರಾಯಿಸಬಹುದು.

ಹೊಯ್ಸಳ ಎರಡನೇ ವೀರಬಲ್ಲಾಳನ ಕ್ರಿ.ಶ. ೧೧೮೫ರ ಕಂಚಿಗನಹಳ್ಳಿ ಸ್ಮಾರಕಶಿಲ್ಪವೊಂದು ದುರ್ಮತಿ ಸಂವತ್ಸರ ಆದಿತ್ಯವಾರದಂದು ಸಿಂಗಾಟಾನೂರು ಎಂಬ ಪ್ರದೇಶದಲ್ಲಿ ಬೀಬೋಜ ಎಂಬುವನು ಕಾದಾಡಿ ಮಡಿದಿದ್ದನ್ನು ಉಲ್ಲೇಖಿಸುತ್ತದೆ.[೫೪] ಕ್ರಿ.ಶ. ೧೦-೫-೧೨೦೯ರ ಒಂದು ಸ್ಮಾರಕಶಿಲ್ಪವು ವೀರಬಲ್ಲಾಳನ ಕಾಲದಲ್ಲಿ ಚೆಂಡುರೊಡೆಯ ಪೊಂಮಯ್ಯ ಎಂಬುವನು ಯುದ್ಧವೊಂದರಲ್ಲಿ ಮಡಿದಿರುವುದನ್ನು ತಿಳಿಸುತ್ತದೆ.[೫೫] ವೀರಬಲ್ಲಾಳನ ಕಾಲದ ಮತ್ತೊಂದು ಸ್ಮಾರಕಶಿಲ್ಪವು ಬಿಲ್ಲಹಳ್ಳಿ ಗ್ರಾಮದಲ್ಲಿದೆ. ಈ ಶಾಸನವು ಉದ್ರಿ ಸಂವತ್ಸರದ ಮಾರ್ಗಸಿರ ಪುಷ್ಯಶುದ್ಧ ಸಪ್ತಮಿ ಆದಿವಾರದಂದು, ಬಿಲ್ಲಹಳ್ಳಿಯ ಬಿಲ್ಲಗೌಡನ ಮಗ ಮಾದಿಗಗೌಡನು ಬೇಡರೊಡನೆ ಕಾದಿ ಮಡಿದನೆಂದು ತಿಳಿದುಬರುತ್ತದೆ.[೫೬] ವೀರ ನರಸಿಂಹನ ಕಾಲದ ಸ್ಮಾರಕಶಿಲ್ಪವೊಂದು ಬೇಲಿಮಲ್ಲೂರಿನಲ್ಲಿದೆ. ಈ ಸ್ಮಾರಕದ ಕಾಲವನ್ನು ವಿದ್ವಾಂಸ ಬಿ.ಎಲ್. ರೈಸ್ ಅವರು ಕ್ರಿ.ಶ. ೧೧೬೬ ಎಂದು ಊಹಿಸಿದ್ದಾರೆ. ಸಿಂದರ ಚಕ್ರವರ್ತಿ ಈಶ್ವರದೇವ ಅರಕೆರೆ ನಾಡಿನ ಮೇಲೆ ದಾಳಿಗಾಗಿ ಮಲೆವೂರಲ್ಲಿದ್ದು, ಹಣ್ಣಿಸಿಗೆಯಂಗೊಂಡು ಹೋಗುವಾಗ ವೀರನರಸಿಂಹದೇವನ ಸೇನಾಳು ಅಕ್ಕಸಾಲಿಗರ ರಾಮೋಜನ ಮಗ ಕಾಮೋಜನು ಸಿಂಧರ ವಿರುದ್ಧ ಹೋರಾಡಿ ಮಡಿಯುತ್ತಾನೆ.[೫೭] ವೀರನರಸಿಂಹನ ಆಳ್ವಿಕೆ ಕಾಲದ ಮತ್ತೊಂದು ಸ್ಮಾರಕಶಿಲ್ಪ ಬಿಲ್ಲಹಳ್ಳಿ ಗ್ರಾಮದಲ್ಲಿದೆ. ತ್ರುಟಿತಗೊಂಡಿರುವ ಈ ಸ್ಮಾರಕದಲ್ಲಿ ಹೋರಾಟದಲ್ಲಿ ಮಡಿದ ವೀರ ಯಾರೆಂಬುದು ತಿಳಿಯುತ್ತಿಲ್ಲ. ಶಾಸನತಜ್ಞ ಬಿ.ಎಲ್. ರೈಸ್ ಅವರು ಈ ಶಾಸನದ ಕಾಲ ಕ್ರಿ.ಶ. ೧೧೭೦ ಎಂದು ಊಹಿಸಿದ್ದಾರೆ. ಆದರೆ ಇದರ ಕಾಲ ಕ್ರಿ.ಶ. ೮-೧-೧೨೩೦ಕ್ಕೆ ಸರಿಹೊಂದುತ್ತದೆ.[೫೮] ವೀರನರಸಿಂಹನ ಕಾಲದ ಇನ್ನೊಂದು ಸ್ಮಾರಕಶಿಲ್ಪವು ಹಿರೇ ಹಾಲಿವಾಣದಲ್ಲಿದೆ. ಯುದ್ಧವೊಂದರಲ್ಲಿ ಮಡಿದ ವೀರನಿಗೆ ಕಿತ್ತೂರು ಕೋಟೆ ಕೆಳಗೆ ಭೂಮಿಯನ್ನು ದಾನವಾಗಿ ನೀಡಿರುವುದು ತಿಳಿಯುತ್ತದೆ.[೫೯] ವೀರನರಸಿಂಹದೇವ ರಾಜ್ಯವಾಳುತ್ತಿದ್ದಾಗ ಕೋಡಗನೂರಿನಲ್ಲಿ ಆದ ವಿವಾದದಲ್ಲಿ ಮಲೆಬೆನ್ನೂರಿನ ಸೆಟ್ಟಿವೊನಾಯಕನ ಅಳಿಯ ಮೂಕಣ ಎಂಬ ವೀರನು ಬಳಹದಕರಡಿ ಬಯಲಲ್ಲಿ ಕಾದಿ ಮಡಿದನೆಂದು ಮಾಯಕೊಂಡ ಗ್ರಾಮದ ಸ್ಮಾರಕಶಿಲ್ಪವೊಂದು ಉಲ್ಲೇಖಿಸುತ್ತದೆ.[೬೦] ಅರಕೆರೆ ನಾಗೇಶ್ವರ ದೇವಸ್ಥಾನದ ಬಳಿಯಿರುವ ಸ್ಮಾರಕಶಿಲ್ಪವೊಂದು ಮಹಾಮಂಡಳೇಶ್ವರ ಸೋಮೇಶ್ವರ ನರಸಿಂಹದೇವ ಮತ್ತು ಸೋಮಯ ದಣ್ಣಾಯಕರುಗಳನ್ನು ಉಲ್ಲೇಖಿಸುತ್ತಿದ್ದು, ವಿಕ್ರಮ ಸಂವತ್ಸರ, ಚೈತ್ರ ಬಹುಳ ೫ ಸೋಮವಾರದಂದು

ಕಂಬ ೨೫ನ್ನು ದಾನವಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ.[೬೧] ಹೋರಾಟದಲ್ಲಿ ಮಡಿದ ವೀರ ಯಾರು ಮತ್ತು ಯಾರಿಗಾಗಿ ದಾನ ನೀಡಲಾಯಿತು ಎಂಬುದು ಸ್ಮಾರಕದಲ್ಲಿ ಅಸ್ಪಷ್ಟವಾಗಿದೆ.

ಕ್ರಿ.ಶ. ೧೨೮೫ರ ಒಂದು ಸ್ಮಾರಕಶಿಲ್ಪವು ಬೇಡರು ಅಣಜಿಯನ್ನು ಮುತ್ತಿದ ವಿಷಯ ಮತ್ತು ಹೈಮೈಯನಾಯಕನ ಮಗ ಮೈಯಿದೇವನನ್ನು ಹೆಸರಿಸಿದೆ.[೬೨] ಇಲ್ಲಿ ಬೇಡರೊಂದಿಗೆ ನಡೆದ ಹೋರಾಟದಲ್ಲಿ ಮೈಯಿದೇವ ವೀರಮರಣ ಹೊಂದಿದನೆಂದು ತೋರುತ್ತದೆ. ಹರಿಹರದ ಹರಿಹರೇಶ್ವರ ದೇವಸ್ಥಾನದ ಬಳಿಯ ಕ್ರಿ.ಶ. ೧೩೦೨ರ ಸ್ಮಾರಕಶಿಲ್ಪವೊಂದು, ಆಷಾಢ ಬಹುಳ ೫ರಂದು ಸೋಮಣ್ಣ ದಂಡನಾಯಕರು ಶ್ರೀ ಹರಿಹರದ ದೇವಾಲಯಕ್ಕೆ ಸಂಬಂಧಿಸಿದ ಕಳಶವನ್ನು ತೆಗೆದುಕೊಂಡು ಬರುತ್ತಿರುವಾಗ ಕಂಚಿಗೆರೆಯಲ್ಲಿ ಬೇಡರು ಅವರ ಮೇಲೆ ಎರಗಿದಾಗ ಅವರ ವಿರುದ್ಧ ನಿಂತು ಹೋರಾಡಿ ಹಲವರನ್ನು ಕೊಂದು ಸ್ವರ್ಗಸ್ಥನಾದನೆಂದು ಉಲ್ಲೇಖಿಸುತ್ತದೆ.[೬೩] ಹನಗವಾಡಿಯಲ್ಲಿರುವ ವಿರೂಪಾಕ್ಷ ಬಲ್ಲಾಳನ ಕ್ರಿ.ಶ. ೧೩೨೬ರ ಸ್ಮಾರಕ ಶಿಲ್ಪವು,[೬೪] ವೀರಬಲ್ಲಾಳನ ಹಿರಿಯಮನೆಯ ಪ್ರಧಾನಿ ಬೈಚೆಯ ದುಣ್ಣಾಯ್ಕರ ಮೈದುನ ಸಂಕಿಯ ಸಹಣಿ ಎಂಬುವನು ಘಟ್ಟದ ಕೆಳಗಿನ ಚಂದಾಪುರದ ಬಸವದೇವನ ಮೇಲೆ ದಂಡೆತ್ತಿ ಹೋಗಿ ಚಂದಾಪುರವನ್ನು ಹಾಳುಮಾಡುತ್ತಾನೆ. ಈ ದಾಳಿಯಲ್ಲಿ ಮಂಡಳಿಕರ ಗಂಡನೆನಿಸಿಕೊಂಡಿದ್ದ ಸಂಗಿಯನಾಯಕನು ಕಾದಿ ವಯಕುಂಠ ಲೋಕಕ್ಕೆ ಪ್ರಾಪ್ತನಾದಾಗ, ಆ ವೀರನಿಗಾಗಿ ಸ್ಮಾರಕವನ್ನು ನಿರ್ಮಿಸಿ, ಪೂಜೆಗಾಗಿ ದಾನ ನೀಡಿರುವುದು ತಿಳಿಯುತ್ತದೆ.

ಹೊಯ್ಸಳರ ಸಮಕಾಲೀನರಾಗಿ ಬೆಳಗುತ್ತಿ ಸಿಂದರು ಪ್ರಸ್ತುತ ಅಧ್ಯಯನ ಪ್ರದೇಶದ ಬೆಳಗುತ್ತಿಯಲ್ಲಿ ಆಳ್ವಿಕೆ ನಡೆಸಿದ್ದಾರೆ. ಹೊಯ್ಸಳ, ಸೇವುಣ ಮತ್ತು ಬೆಳಗುತ್ತಿ ಸಿಂದರ ನಡುವಿನ ನಿರಂತರ ಘರ್ಷಣೆಗಳಲ್ಲಿ ಹಲವು ವೀರರು ಮಡಿದಿರುವುದು ತಿಳಿದುಬರುತ್ತದೆ. ಅದನ್ನು ಬೆಳಗುತ್ತಿ ಮತ್ತು ಸುತ್ತಲಿನ ಗ್ರಾಮಗಳಲ್ಲಿ ದೊರೆಯುವ ಸಿಂದರ ಕಾಲದ ಸ್ಮಾರಕ ಶಿಲ್ಪಗಳು ಸಾಕ್ಷೀಕರಿಸುತ್ತವೆ. ಚಿಕ್ಕಯರೆಹಳ್ಳಿ[೬೫] ರಾಮೇಶ್ವರ ದೇವಸ್ಥಾನ ಬಳಿಯಿರುವ ಕ್ರಿ.ಶ. ೧೧೭೧ರ ಸ್ಮಾರಕಶಿಲ್ಪವೊಂದು ಎಡವಟ್ಟಿ ರಾಜ್ಯದಲ್ಲಿನ ಬಳ್ಳುವೆಮುದವಲ್ಲ-೩೦ ಮತ್ತು ನರಿವಳಿಗೆ-೪೦ಗಳನ್ನು ಈಶ್ವರದೇವನು ಬೆಳಗುತ್ತಿಯಿಂದ ಆಳುತ್ತಿದ್ದಾಗ, ಸಾಂತಳಿಗೆಯ ರಾಜ ಸಿಂಗಿದೇವನು ಹತ್ತೂರಿನ ಮೇಲೆ ದಾಳಿ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದಾಳಿಯಲ್ಲಿ ದಾಸಗಾವುಡ ಎಂಬ ವೀರನು ಹೋರಾಡಿ ಮಡಿದಿರುವುದು ತಿಳಿಯುತ್ತದೆ. ಎಡವಟ್ಟಿ ರಾಜ್ಯ ಹಿರೇಕೆರೂರು ತಾಲೂಕಿನ ದಕ್ಷಿಣ ಭಾಗ ಮತ್ತು ಹೊನ್ನಾಳಿ ತಾಲೂಕಿನ ಉತ್ತರ ಭಾಗವನ್ನು ಒಳಗೊಂಡ ಪ್ರದೇಶವಾಗಿದೆ.[೬೬] ಬಳ್ಳವೆ ಮುದಮಲ್ಲ-೩೦ ಎಡವಟ್ಟಿ ನಾಡಿನ ದಕ್ಷಿಣದಲ್ಲಿ ಬಹುತೇಕ ಹೊನ್ನಾಳಿ ತಾಲೂಕಿನ ಪ್ರದೇಶವನ್ನು ಒಳಗೊಂಡಿದೆ. ನರಿಯಳಿಗೆ-೪೦ ಆಡಳಿತ ಪ್ರದೇಶ ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಕುಬಟೂರು ಬಳಿಯ 'ನೇರಲಿಗೆ' ಇರಬಹುದೆಂದು ವಿದ್ವಾಂಸರಾದ ಶ್ರೀನಿವಾಸ ರಿತ್ತಿಯವರು ಊಹಿಸಿದ್ದಾರೆ.[೬೭] ಕ್ರಿ.ಶ. ೧೧೬೬ರ ಒಂದು ಸ್ಮಾರಕಶಿಲ್ಪವು ಮಲ್ಲನೃಪಾಳನ ಮಗ ಮಹಾಮಂಡಳೇಶ್ವರ ಒಂದನೇ ಈಶ್ವರದೇವರಸನು ಹೆಗ್ಗಡೆ ನಿಂಗಯ್ಯ ಮತ್ತು ಗಂಡ ವಿಗ್ರಹಕೇಶವ

ದೇವರ ಸಹಕಾರದೊಂದಿಗೆ ಬೆಳಗುತ್ತಿಯಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಶ್ರೀ ಶಕೆ ೧೦೮೮ ವ್ಯಯ ಸಂವತ್ಸರದ ಭಾದ್ರಪದ ಬಹುಳ ೧೩ ಭಾನುವಾರದಂದು ತುರುಗದಳ ಪದಾತಿ ಬಲ ಬಿಲ್ಲಣಿ ಲಖ್ಖಣಿ ವಗ್ಗಸೇನೆಯೊಂದಿಗೆ ಬೆಳಗುತ್ತಿ ಕೋಟೆಯನ್ನು ಮುತ್ತಿಗೆ ಹಾಕಿದ ಬಲಿಗೌಡನ ವಿರುದ್ಧ ಮಲ್ಲನಗೌಡ ಎಂಬ ವೀರನು ಹೋರಾಡಿ ಮಡಿಯುತ್ತಾನೆ. ಆಗ ಆತನ ಮಕ್ಕಳಾದ ಬಮ್ಮಯ್ಯ, ಶಿವಯ್ಯ ಮತ್ತು ಜೀಕಯ್ಯ ಎಂಬುವರು ತಂದೆಗಾಗಿ ಸ್ಮಾರಕಶಿಲ್ಪ ನಿಲ್ಲಿಸಿದ ವಿಷಯ ತಿಳಿಯುತ್ತದೆ.[೧೮] ಕ್ರಿ.ಶ. ೧೧೯೫ರ ಸ್ಮಾರಕಶಿಲ್ಪವು ಶ್ರೀಮನ್ ಮಹಾಮಂಡಳೇಶ್ವರ ಮಲ್ಲಿದೇವರಸರು ರಾಜ್ಯವಾಳುತ್ತಿರುವಾಗ ಶ್ರೀ ಶಕೆ ೧೧೧೭ ರಾಕ್ಷಸ ಸಂವತ್ಸರ ಚೈತ್ರ ಶುದ್ಧ ೫ ಗುರುವಾರದಂದು ಕಲ್ಲೆಯನಾಯಕ ರಟ್ಟಿಹಳ್ಳಿಯ ಬಲ್ಲಣಿಯನ್ನು ಕೊಂದು ಸುರಕನ್ನೆಯರನ್ನು ಮೆಚ್ಚಿಸಿದನೆಂದು ಉಲ್ಲೇಖಿಸುತ್ತದೆ.[೧೯] ರಟ್ಟಿಹಳ್ಳಿಯು ರಟ್ಟಪಳ್ಳಿ-೭೦ ಎಂದು ಗುರುತಿಸಿಕೊಂಡಿದೆ.[೨೦] ರಟ್ಟಿಹಳ್ಳಿ ಪ್ರಾಂತ್ಯದ ಅರಸರು ಮತ್ತು ಸಿಂದರಿಗೆ ಹೋರಾಟವಾಗಿರುವುದು ಈ ಸ್ಮಾರಕಶಿಲ್ಪದಿಂದ ತಿಳಿದುಬರುತ್ತದೆ. ಹೊಯ್ಸಳರ ವೀರ ಬಲ್ಲಾಳನ ರಾಣಿ ಉಮಾದೇವಿ ಸಿಂದರ ಮಲ್ಲದೇವರ ಮೇಲೆ ಒಂದೇ ವರ್ಷದಲ್ಲಿ ಮೂರು ಬಾರಿ ದಾಳಿ ಮಾಡಿರುವುದು ಸ್ಮಾರಕಶಿಲ್ಪಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೧೯೬ರ ಒಂದು ಸ್ಮಾರಕಶಿಲ್ಪವು ಉಮಾದೇವಿಯು ಬೆಳಗುತ್ತಿಯ ಮೇಲೆ ದಾಳಿ ಮಾಡಿದಾಗ ಕೇಶವ ನಾಯಕನ ಮಗ ಮೈಲೆಯ ನಾಯಕನು ಹೋರಾಡಿ ಮಡಿದನೆಂಬ ವಿಷಯ ಉಲ್ಲೇಖಿಸುತ್ತದೆ.[೨೧] ಕ್ರಿ.ಶ. ೧೧೯೭ರ ತ್ರುಟಿತ ಸ್ಮಾರಕಶಿಲ್ಪವೊಂದು ಕೂತಣ ದಂಡನಾಯಕ ಮತ್ತು ಬೆಳಗುತ್ತಿಯನ್ನು ಉಲ್ಲೇಖಿಸುತ್ತಿದ್ದು, ಪಿಂಗಳ ಸಂವತ್ಸರದಂದು ಕೇತ? ಎಂಬ ವೀರನು ಹೋರಾಟವೊಂದರಲ್ಲಿ ಮಡಿದಿರುವುದನ್ನು ದಾಖಲಿಸಿದೆ.[೨೨] ಬೆಳಗುತ್ತಿಯಲ್ಲಿರುವ ತ್ರುಟಿತ ಸ್ಮಾರಕಶಿಲ್ಪವು ಮಲ್ಲಿದೇವರಸನ ಕಾಲದಲ್ಲಿ ತಂತ್ರಪಾಳ ಬಿಲ್ಲೆಯ ಎಂಬ ವೀರನೊಬ್ಬ ಹೋರಾಟದಲ್ಲಿ ಮಡಿದಿರುವ ವಿಷಯ ತಿಳಿಸುತ್ತದೆ.

ಸಿಂದರ ಎರಡನೇ ಈಶ್ವರ ದೇವರಸನ ಕಾಲದ ಮೂರು ಸ್ಮಾರಕಶಿಲ್ಪಗಳು ಬೆಳಗುತ್ತಿಯ ಸಿದ್ಧೇಶ್ವರ ದೇವಸ್ಥಾನದ ಬಳಿಯಿವೆ. ಕ್ರಿ.ಶ. ೧೨೧೫ರ ಒಂದು ಸ್ಮಾರಕವು ಈಶ್ವರ ದೇವರಸನ ಆದೇಶದಂತೆ ಮಲ್ಲಶೆಟ್ಟಿಯ ಮಗ ಕಾಳೆಯನು ಕಾಳಗವೊಂದರಲ್ಲಿ ಮಡಿದನೆಂದು ತಿಳಿಯುತ್ತದೆ.[೨೩] ಅದೇ ಸ್ಥಳದಲ್ಲಿರುವ ತ್ರುಟಿತ ಸ್ಮಾರಕವೊಂದು ಸಿಂದ ವಂಶದ ಆಡಳಿತಗಾರ ಮಲ್ಲನೃಪಾಳನ ಮಗ ಈಶ್ವರದೇವರಸ ಹಾಗೂ ಬೆಳಗುತ್ತಿಯನ್ನು ಉಲ್ಲೇಖಿಸುತ್ತದೆ.[೨೪] ಬೆಳಗುತ್ತಿ ಸಿದ್ಧೇಶ್ವರ ದೇವಸ್ಥಾನದ ಪೂರ್ವದ ಕಡೆ ನೆಟ್ಟಿರುವ ಕ್ರಿ.ಶ. ೧೨೧೦ರ ಮತ್ತೊಂದು ಸ್ಮಾರಕಶಿಲ್ಪ ಸಿಂದರ ಮಲ್ಲನೃಪಾಳನ ಮಗ ಈಶ್ವರದೇವನ ಆಳ್ವಿಕೆ ಕಾಲದಲ್ಲಿ ವೀರನೊಬ್ಬ ಮಡಿಯುತ್ತಾನೆ. ಆತನಿಗೆ ನೀಡಿರುವ ಭೂದಾನವನ್ನು ವಿವರಿಸುತ್ತದೆ.[೨೫] ತ್ರುಟಿತಗೊಂಡಿರುವ ಸ್ಮಾರಕವಾಗಿರುವುದರಿಂದ ಹೋರಾಟದಲ್ಲಿ ಮಡಿದ ವೀರ ಯಾರೆಂಬುದು ತಿಳಿಯುವುದಿಲ್ಲ. ಕ್ರಿ.ಶ. ೧೨೨೬ರ ಒಂದು ಸ್ಮಾರಕವು ಸೇವುಣ ದೊರೆ ಸಿಂಹಳದೇವನ ಆಳ್ವಿಕೆ ಕಾಲದಲ್ಲಿ ಬನವಾಸಿ ನಾಡಿನ ಮೇಲಾಳ್ವಿಕೆಯ

ಅಧಿಕಾರ ಹೊಂದಿದ್ದ ಹೊನ್ನಬೊಮ್ಮ ಶೆಟ್ಟಿಯ ಮೇಲೆ ಕೇಶವದೇವರಸನ ಆದೇಶದ ಅನ್ವಯ ಸೋಯಿದೇವನ ತಮ್ಮ ಬಮ್ಮನು ಕಾದಾಡಿ ಮಡಿದ ವಿಷಯ ತಿಳಿಸುತ್ತದೆ.[೭೬] ಸಿಂದರ ಹರಬರದೇವರಸ ಕಲ್ಲಸೆಯಿಂದ ಆಳ್ವಿಕೆ ಮಾಡುತ್ತಿದ್ದಾಗ ಅವನ ಅಧಿಕಾರಿ ಬೊಪ್ಪಲ ಮತ್ತು ಸಮಸ್ತ ಸೇನಾನಾಯಕರು, ಸೇವುಣರ ಮಹಾಪ್ರಧಾನಿ ಹನುಪ್ಪ ಶ್ರೀಧರ ದಣ್ಣಾಯಕ ಆಳುತ್ತಿದ್ದ ಕೂಡಲಿ ಪ್ರದೇಶದ ಮೇಲೆ ದಾಳಿ ಮಾಡುತ್ತಾರೆ. ಆ ದಾಳಿಯಲ್ಲಿ ಸೇತುವಿನ ಬಮ್ಮಯನು ಪ್ರಳಯ ಭೈರವನಂತೆ ಹೋರಾಡಿ ಮಡಿದಾಗ ಅವನ ತಮ್ಮ ಎರೆಯಮನು ಈ ಸ್ಮಾರಕ ನಿಲ್ಲಿಸಿರುವುದು ತಿಳಿಯುತ್ತದೆ.[೭೭] ಕುಮಾರ ಬಾಳೆಯರ್ಮ ವೆಗ್ಗಡೆ ಎಂಬುವನು 'ಕಲಿಸೆ'ಯಲ್ಲಿ ಆಳುತ್ತಿದ್ದನೆಂದು ಸಾಗರ ತಾಲೂಕಿನ ಕ್ರಿ.ಶ. ೧೨೧೨ರ ಶಾಸನವೊಂದು ಉಲ್ಲೇಖಿಸುತ್ತದೆ.[೭೮] ಹರಬರದೇವರಸ ಆಳ್ವಿಕೆ ಮಾಡುತ್ತಿದ್ದ 'ಕಲ್ಲಸೆ' ಸಾಗರ ತಾಲೂಕಿನ ಕಲಸೆ ಆಗಿತ್ತೆಂದು ತೋರುತ್ತದೆ. ದಾಳಿಗೆ ಒಳಗಾದ ಕೂಡಲಿ ಪ್ರದೇಶವು ಶಿವಮೊಗ್ಗ ಸಮೀಪದ ತುಂಗ ಮತ್ತು ಭದ್ರಾ ನದಿಗಳು ಸೇರುವ ಸ್ಥಳವಾಗಿದೆ. ಸೇವುಣ ಮತ್ತು ಸಿಂದರ ನಡುವೆ ನಿರಂತರವಾದ ಹೋರಾಟಗಳು ನಡೆದಿರುವುದು ಮೇಲಿನ ಸ್ಮಾರಕ ಶಿಲ್ಪಗಳ ವಿವರಣೆಯಿಂದ ತಿಳಿದುಬರುತ್ತದೆ. ಕ್ರಿ.ಶ. ೧೨೪೬ರ ಒಂದು ಸ್ಮಾರಕಶಿಲ್ಪವು ಹರಬರದೇವ ಬೆಳಗುತ್ತಿಯನ್ನು ಆಳುತ್ತಿದ್ದಾಗ, ಚೇಳಂಗಿಯ ಬೀರನಾಯಕ ಮತ್ತು ಅವನ ಮಹಾಮಂಡಳೇಶ್ವರ ದೇಕರಸನಾಯಕನು ಮತ್ತಿಯ ಮೇಲೆ ಮಾಡಿದ ದಾಳಿಯಲ್ಲಿ ಜಕ್ಕಬೆಯ ಮಗ ಬಿಟಿಯಮನು ಶತ್ರುಪಾಳೆಯದ ಹತ್ತು ಕುದುರೆಗಳನ್ನು ಕೊಂದು ತಾನು ಮಡಿದನೆಂಬ ವಿಷಯ ತಿಳಿಸುತ್ತದೆ.[೭೯] ಕ್ರಿ.ಶ. ೧೨೫೭ರ ಒಂದು ಸ್ಮಾರಕ ಶಿಲ್ಪವು ಚೇಳಂಗಿಯ ಬೀರನಾಯಕ ಸಮಸ್ತ ಸೈನ್ಯದೊಂದಿಗೆ ನೇಮತ್ತಿ ಮೇಲೆ ದಾಳಿ ಮಾಡಿದಾಗ ಬೀರದೇವರಸನ ಮಂತ್ರಿಗಳಾದ ಮೆದಿಮೆಯ ಹಾಗೂ ಶ್ರೀಧರರು ಅವನ ದಾಳಿಯನ್ನು ಎದುರಿಸುತ್ತಾರೆ. ಈ ದಾಳಿಯಲ್ಲಿ ಸಿಂದ ವಂಶದ ಪಟ್ಟಸಹಾನಿ ಗಂಗಯಸಹಾನಿಯ ಅಳಿಯ ಏಚಯನು ಒಡ್ಡೋಲಗದಲ್ಲಿ ಕೊಟ್ಟ ಭಾಷೆಯಂತೆ ಶತ್ರುಗಳ ವಿರುದ್ಧ ಹೋರಾಡಿ ಸ್ವರ್ಗಸ್ಥನಾದನೆಂದು ಉಲ್ಲೇಖಿಸುತ್ತದೆ. ಶಾಸನತಜ್ಞ ಬಿ.ಎಲ್. ರೈಸ್ ಅವರು ಈ ಶಾಸನದ ಕಾಲವನ್ನು ಕ್ರಿ.ಶ. ೧೨೪೭ ಎಂದು ಊಹಿಸಿರುತ್ತಾರೆ. ತೃಟಿತ ಸ್ಮಾರಕವೊಂದು ಬೀರದೇವರಸನ ಕಾಲದಲ್ಲಿ ಕರಿಯ ತೈಲನ ಭಾವ ಕರಿಯ ಚೌಡನು ಹೋರಾಟವೊಂದರಲ್ಲಿ ಮಡಿದಾಗ ಅವನ ಸಂಬಂಧಿ ಸಾತೆಯ ನಾಯಕನು ವೀರಗಲ್ಲು ನಿಲ್ಲಿಸಿದನೆಂದು ದಾಖಲಿಸುತ್ತದೆ.[೮೧] ಮತ್ತೊಂದು ತ್ರುಟಿತವಾದ ಸ್ಮಾರಕವು ಚೆಳ್ಳಂಗೆಯ ಬೀರೆಯ ನಾಯಕ ನ್ಯಾಮತಿ ಮೇಲೆ ದಾಳಿ ಮಾಡಿದಾಗ, ಮಾಂಡಳಿಕ ಬೀರನ್ರಿಪಾಳನ ತೆಂಕಗೋಳಿಗೋಡ ಬೋಗಜ್ಜನ ಮಗ ನಾಗಗೌಡ, ಅವನ ಮಗ ಗೋಳಿಗೋಡ ದುಗ್ಗ ಧೈರ್ಯದಿಂದ ಹೋರಾಡಿ ಬಲಶಾಲಿಗಳೆಂದು ಮೆಚ್ಚುಗೆಗೆ ಪಾತ್ರರಾಗಿರುವುದನ್ನು ಮತ್ತು ಆ ಕಾದಾಟದಲ್ಲಿ ಗೋಳಿಗೋಡದುಗ್ಗನು ಮಡಿದನೆಂದು ಉಲ್ಲೇಖಿಸುತ್ತದೆ.[೮೨] ಈ ಹೋರಾಟದಲ್ಲಿ ನಾಗಗೌಡ ಬದುಕಿ ಉಳಿದನೆಂದು ತೋರುತ್ತದೆ.

ಯಾದವರ ಪ್ರೌಢಪ್ರತಾಪ ಚಕ್ರವರ್ತಿ ಶ್ರೀ ವೀರಮಹದೇವರ ಕಾಲದ ಕ್ರಿ.ಶ. ೧೨೮೦ ಫೆಬ್ರವರಿ ೨ರ ಒಂದು ಸ್ಮಾರಕಶಿಲ್ಪವು ಮಹಾಪ್ರಧಾನ ದಂಡನಾಯಕನಾದ ಪೇಸಣಿಹನುಮ ಶ್ರೀ ವೀರಚವುಡರಸರು ಕುರುಗೋಡ ದೊರವದೆಯ ಮುಂಮಡಿ ಸಿಂಗೆನಾಯಕ್ಕನ ಮೇಲೆ ದಾಳಿ ಮಾಡಿ ಹಲವಾರು ಕುದುರೆಗಳನ್ನು ಕೊಂದು ಶಿವಲೋಕ ಪ್ರಾಪ್ತನಾದನೆಂದು ಉಲ್ಲೇಖಿಸುತ್ತದೆ.[೮೩] ಮುಂಮಡಿ ಸಿಂಗೆನಾಯಕ್ಕನು ಆಳುತ್ತಿದ್ದ ದೊರವದೆ ಪ್ರದೇಶ ದೊರವಡಿ ೭೦ ಆಗಿರಬೇಕು. ಈ ಪ್ರದೇಶ ಬಲ್ಲಕುಂದೆ ನಾಡಿನ ದೊಡ್ಡ ಉಪವಿಭಾಗಗಳಲ್ಲಿ ಒಂದಾಗಿದ್ದು ಸೊಂಡೂರು ತಾಲ್ಲೂಕಿನ ಚಿಕ್ಕಹಳ್ಳಿಯಾದ ದರೋಜಿಯು ಇದರ ಮುಖ್ಯ ಪಟ್ಟಣವಾಗಿತ್ತೆಂಬ ಅಭಿಪ್ರಾಯವುಂಟು.[೮೪] ಈತನ ಕಾಲದ ಕ್ರಿ.ಶ. ೧೨೮೫ರ ಮತ್ತೊಂದು ಸ್ಮಾರಕವು ಚೌಡರಸರ ಮೈದುನ ಗೋಪರಸನು ನಾಗಾವಿಕಳಸಾಪುರದ ದಡೆಯಲ್ಲಿ ನಡೆದ ಹೋರಾಟದಲ್ಲಿ ಕಾದಿ ಶಿವಲೋಕ ಪ್ರಾಪ್ತನಾದನೆಂದು ಉಲ್ಲೇಖಿಸುತ್ತದೆ.[೮೫] ಹಿರೇಕೋಗಿಲೂರಿನಲ್ಲಿ ಕಂಡುಬರುವ ಈ ಸ್ಮಾರಕ ಶಿಲ್ಪಗಳನ್ನು ನೆಲದಲ್ಲಿ ಹೂತಿರದೆ ಅಥವಾ ನಿಲ್ಲಿಸದೆ ಒಂದು ಪಾಣಿಪೀಠದ ಮೇಲೆ ನಿಲ್ಲಿಸಲಾಗಿದೆ. ಪ್ರಸ್ತುತ ಪಾಣಿಪೀಠ ಸ್ವಲ್ಪ ಮುಂದಕ್ಕೆ ಸರಿದಿರುವುದರಿಂದ ವೀರಗಲ್ಲು ಗೋಡೆಗೆ ಆತುಕೊಂಡಿದೆ. ಯಾವುದೇ ಪಾಣಿಪೀಠದ ಮೇಲೆ ವೀರಗಲ್ಲನ್ನು ನಿಲ್ಲಿಸಿರದೆ ವೀರಗಲ್ಲನ್ನು ನಿಲ್ಲಿಸುವುದಕ್ಕಾಗಿಯೇ ಪಾಣಿಪೀಠವನ್ನು ಮಾಡಿರುವುದು ಕೆಲವು ದೃಷ್ಟಿಗಳಿಂದ ಗಮನಾರ್ಹವಾಗಿವೆಯೆಂದು ವಿದ್ವಾಂಸರಾದ ಆರ್. ಶೇಷಶಾಸ್ತ್ರಿಯವರು ಅಭಿಪ್ರಾಯಪಟ್ಟಿದ್ದಾರೆ.[೮೬] ಆ ಸ್ಮಾರಕಶಿಲ್ಪಗಳಲ್ಲಿದ್ದ ಪಾಣಿಪೀಠಗಳು ಪ್ರಸ್ತುತ ಕಂಡುಬರುವುದಿಲ್ಲ. ಕುರುವದಗಡ್ಡೆ ಗ್ರಾಮದ ತ್ರುಟಿತ ಸ್ಮಾರಕಶಿಲ್ಪವೊಂದು ಯಾದವ ನಾರಾಯಣ ಭುಜಬಳ ಚಕ್ರವರ್ತಿ ರಾಮಚಂದ್ರನ ಕಾಲದಲ್ಲಿ ಕುರುಮಪ್ಪ ಮಯಿದೇವರ ಮಗ ಕೊಂಮೆನಾಯಕ್ಕನು ಎಡವಟ್ಟಿಯ ಬಳ್ಳೆರ ಶ್ರೀ ಕುರುವದ ರಾಮನಾಥ ದೇವರ ಸ್ತಾನಾದಚರ್ಯ ಬಯಿಚರಸ ದೇವರಿಗೆ ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ.[೮೭] ಆದರೆ ಹೋರಾಟದಲ್ಲಿ ಮಡಿದ ವೀರ ಯಾರೆಂಬುದು ಸ್ಪಷ್ಟವಾಗುವುದಿಲ್ಲ. ಶಾಸನದಲ್ಲಿ ಉಲ್ಲೇಖಗೊಳ್ಳುವ ಎಡವಟ್ಟೆ ಬಳ್ಳೆರೆ, ಎಡವಟ್ಟೆ ಬಳ್ಳವೆ–೭೦ ಆಗಿತ್ತೆಂದು ತಿಳಿಯುತ್ತದೆ. ಕ್ರಿ.ಶ. ೧೧೬೫ರ ಹಳೆ ನಿಡನೇಗಿಲ ಶಾಸನ ಎಡವಟ್ಟೆ ಬಳ್ಳವ–೭೦ನ್ನು ಉಲ್ಲೇಖಿಸುತ್ತದೆ. ಈ ಆಡಳಿತ ಘಟಕವು ಹಿರೆಕೆರೂರು ತಾಲೂಕಿನ ದಕ್ಷಿಣ ಭಾಗ ಮತ್ತು ಶಿಕಾರಿಪುರ ತಾಲೂಕಿನ ಉತ್ತರ ಭಾಗದ ವ್ಯಾಪ್ತಿಯನ್ನು ಹೊಂದಿತ್ತು.[೮೮]

ಕ್ರಿ.ಶ. ೧೨೮೭–೮೮ರ ಸ್ಮಾರಕಶಿಲ್ಪವೊಂದು ರಾಮಚಂದ್ರದೇವರಾಯನ ಕಾಲದಲ್ಲಿ ಸೆಜಿಯ ಮಲ್ಲಯ್ಯ ಎಂಬ ವೀರನು ಹೋರಾಟದಲ್ಲಿ ಮಡಿದಿರುವುದನ್ನು ಉಲ್ಲೇಖಿಸುತ್ತದೆ.[೮೯] ಕಡತಿ ಗ್ರಾಮದಲ್ಲಿರುವ ಕ್ರಿ.ಶ. ೧೨೯೩–೯೪ರ ಒಂದು ಸ್ಮಾರಕಶಿಲ್ಪವು ಕಂದರದೇವನ ಮುಂದಾಳತ್ವದಲ್ಲಿ ಮಂನೆಯಗೊಡಿತಿ ಚಟ್ಟರಸನು ಹೋರಾಡಿ ಸತ್ತಾಗ ಅವನಿಗಾಗಿ ಸ್ಮಾರಕ ನೆಡಲಾಯಿತೆಂದು ತಿಳಿಸುತ್ತದೆ.[೯೦] ಗಂಗನರಸಿ ಗ್ರಾಮದ ಯಾದವರ ವಿಕ್ರಮ ಕನ್ನರದೇವನ ಕಾಲದ ತ್ರುಟಿತ ಸ್ಮಾರಕವೊಂದಿದ್ದು ಹೋರಾಟದ ಉದ್ದೇಶ ಸ್ಪಷ್ಟವಾಗುವುದಿಲ್ಲ.[೯೧] ಶಾಸನತಜ್ಞ ಬಿ.ಎಲ್. ರೈಸ್ ಅವರು ಈ ಶಾಸನದ ಕಾಲವನ್ನು ಕ್ರಿ.ಶ. ೧೨೫೦ ಇರಬಹುದೆಂದು ಊಹಿಸಿದ್ದಾರೆ.

ಮಹಾದೇವರಾಯನ ಆಳ್ವಿಕೆ ಕಾಲದ ಐದು ಸ್ಮಾರಕಶಿಲ್ಪಗಳು ಕಂಡುಬಂದಿವೆ. ಕ್ರಿ.ಶ. ೧೨೬೪ರ ಗಂಗನರಸಿ ಗ್ರಾಮದ ಒಂದು ಸ್ಮಾರಕವು ವೀರಪರಾಕ್ರಮಿಯಾದ ಮಯಿದೇವನು ಉರುವತ್ತಿಯ ದೇವನ ಕಲ್ಲವೆಗ್ಗಡೆಯೊಂದಿಗೆ ಹೋರಾಡಿ ಸ್ವರ್ಗಸ್ಥನಾಗುತ್ತಾನೆ. ಅವನ ಮಗ ಕುಮಾರ ಸೋವಿದೇವನು ಅರಸೀಕೆರೆಯ ಕಲ್ಲೇಶ್ವರ ದೇವಸ್ಥಾನದ ಬಳಿ ತಂದೆಗಾಗಿ ವೀರಗಲ್ಲು ನಿಲ್ಲಿಸುತ್ತಾನೆ. ಅದರ ಭೋಗಪೂಜೆ ಕಾರ್ಯಕ್ಕಾಗಿ ಅರಸೀಕೆರೆಯ ಹನುಮಗೌಡ ಮತ್ತು ಬೊಂಮ್ಮಗೌಡರುಗಳು ಗುಂಡುಕಲ್ಲು ಹರಳಕೆಯ ಬಳಿ ಭೂದಾನ ಮಾಡಿರುವುದು ತಿಳಿಯುತ್ತದೆ.[೯೨] ಸ್ಮಾರಕದಲ್ಲಿ ಉಲ್ಲೇಖವಾಗುವ ಉರುವತ್ತಿ ಹಡಗಲಿ ತಾಲೂಕಿನ ಇಂದಿನ ಕುರುವತ್ತಿ ಗ್ರಾಮವಾಗಿರಬೇಕು. ಭೂದಾನ ಮಾಡಿದ ಗುಂಡುಕಲ್ಲು ಪ್ರದೇಶ ಹರಪನಹಳ್ಳಿ ತಾಲೂಕಿನ ಇಂದಿನ ಗುಂಡಗತ್ತಿ ಗ್ರಾಮವಾಗಿತ್ತೆಂದು ತೋರುತ್ತದೆ. ಸ್ಮಾರಕವನ್ನು ಅರಸೀಕೆರೆಯಲ್ಲಿ ನಿಲ್ಲಿಸಲಾಯಿತೆಂದು ಶಾಸನ ಉಲ್ಲೇಖಿಸುತ್ತದೆ. ಆದರೆ ಸ್ಮಾರಕಶಿಲ್ಪವು ಹರಿಹರ ತಾಲೂಕು ಗಂಗನರಸಿ ಗ್ರಾಮದಲ್ಲಿದೆ. ಬಹುಶಃ ಅರಸೀಕೆರೆಯಲ್ಲಿನ ಸ್ಮಾರಕವನ್ನು ಈ ಸ್ಥಳಕ್ಕೆ ತಂದಿರಬಹುದು. ಕೋಮಳಸರ ಸಿಜರೆನಿಪ ಮಹಾಮಹಿಮ ಚಟ್ಟರಸ ಮತ್ತು ಕೊಚರಸ ಇವರಿಬ್ಬರಿಗೆ ಹಿರಿಯವನಾದ ವೀರ ವಹವಣಿ ತನ್ನ ಸೈನ್ಯದೊಡನೆ ಹೋರಾಟವೊಂದರಲ್ಲಿ ಮಡಿದು ಸುರಕನ್ನೆಯರೊಂದಿಗೆ ಶಿವಲೋಕಕ್ಕೆ ತೆರಳಿದನೆಂದು ಸ್ಮಾರಕಶಿಲ್ಪವೊಂದರಿಂದ ತಿಳಿಯುತ್ತದೆ.[೯೩] ಮಹಾದೇವರಾಯನ ಸೈನಿಕನಾದ ಕಾವದೇವನ ವಿರುದ್ಧ ಪೋಮಣ್ಣ ನಾಯಕ ಎಂಬ ವೀರನು ಕಾದಾಡಿ ಮಡಿಯುತ್ತಾನೆ. ಅವನಿಗಾಗಿ ಸ್ಮಾರಕವನ್ನು ನಿಲ್ಲಿಸಿ ಗದ್ದೆ ಮತ್ತು ಕಂಬ ೧೦೦ ಬೆದ್ದಲು ಭೂಮಿಯನ್ನು ದಾನ ನೀಡಿರುವುದು ತಿಳಿದುಬರುತ್ತದೆ.[೯೪] ಮಹಾದೇವರಾಯನ ಕಾಲದಲ್ಲಿ ಮಹಾಪ್ರಧಾನ ಸರ್ವಾಧಿಕಾರಿ ತಿಪ್ಪರಸ ಬಿಲ್ಲಾಳು ತೋರಹತ್ತ ಅಮ್ಮೆಯನಾಯಕರ ಮಗ ಮಯಿನಾಯಕನು ನಲ್ವತ್ತು ಬೇಡರ ತಾಣವಾಗಿದ್ದ ಇಂಗಳೇಶ್ವರದ ಬಾದವಾಡಿಯ ರಾಮನನ್ನು ಯಿರಿದು ನಲ್ವತ್ತು ಬೇಡರ ಠಾಣಾಂತರದಲ್ಲಿ ಹೊಯಿಲನ್ನು ಹರಿಸಿದನೆಂದು ಸ್ಮಾರಕಶಿಲ್ಪವೊಂದು ಉಲ್ಲೇಖಿಸುತ್ತದೆ.[೯೫] ಯಾದವರ ಕಾಲಕ್ಕೆ ಸೇರುವ ತ್ರುಟಿತ ಸ್ಮಾರಕವೊಂದು ತೋರಹತ್ತ ಜವರಾಜಪಾಯಿ ನಾಯಕನ ಮಗ ಲೂಯಿನಾಯಕನನ್ನು ಉಲ್ಲೇಖಿಸುತ್ತದೆ.[೯೬] ಮಹಾಪ್ರಧಾನಿ ಭಾಚರ್ಸ ಭೀಮಲದಾಂತ ರಾಜನು ಕ್ರೋಧಿ ಸಂವತ್ಸರ ಜೇಷ್ಠ ಮಂಗಳವಾರದಂದು ಕುಂದುಗೋಳದ ಪಶ್ಚಿಮ ದಿಕ್ಕಿನಲ್ಲಿ ಕಾದಿ ಕುದುರೆಯನ್ನು ಕೊಂದು ಸತ್ತನೆಂದು ಸ್ಮಾರಕವೊಂದು ದಾಖಲಿಸುತ್ತದೆ.[೯೭] ಕ್ರಿ.ಶ. ೧೧೮೯ರಲ್ಲಿ ಎಮ್ಮನ ಬೇತೂರಿನಲ್ಲಿ ವೀರನೊಬ್ಬ ಹೋರಾಡಿ ಮಡಿದಿದನೆಂದು ಸ್ಮಾರಕದಿಂದ ತಿಳಿಯುತ್ತದೆ.[೯೮] ಕ್ರಿ.ಶ. ಸು. ೧೩ನೆಯ ಶತಮಾನಕ್ಕೆ ಸೇರಿದ ಸ್ಮಾರಕಶಿಲ್ಪವೊಂದು ಹಲುವಾಗಿಲು ಬಡಗಮಟ್ಟಿ ಪೂಣೋಜಣನು ಕದಿರೆಮಿಡಿಯ ಕಾಳಗದಲ್ಲಿ ಮಡಿದಾಗ ಶಿವಕುಮಾರ ಚಿಕ್ಕೇಶನು ಈ ಸ್ಮಾರಕ ಹಾಕಿಸಿದನೆಂದು, ಆ ಸ್ಮಾರಕವನ್ನು ಕಲ್ಲೋಜ ಎಂಬ ಶಿಲ್ಪಿ ಕೆತ್ತಿನೆಂದು ತಿಳಿದುಬರುತ್ತದೆ.[೯೯] ಇದೇ ಕಾಲಕ್ಕೆ ಸೇರಿದ ತ್ರುಟಿತ ಸ್ಮಾರಕವೊಂದು ಇಟಿಗೆ ಗ್ರಾಮದ ತೋಜನ ಮಕ್ಕಳು ಹೋರಾಟವೊಂದರಲ್ಲಿ ಕಾದಿ ಸತ್ತಿರುವುದನ್ನು ಉಲ್ಲೇಖಿಸುತ್ತದೆ.[೧೦೦]

ವಿಜಯನಗರದ ಅರಸ ಎರಡನೆಯ ಹರಿಹರನ ಕಾಲಕ್ಕೆ ಸೇರಿದ ೨೦.೭.೧೩೯೨ರ ಒಂದು ಸ್ಮಾರಕಶಿಲ್ಪ ಮಲ್ಲಪ್ಪ ಎಂಬುವನ ವಿರುದ್ಧ ನಡೆದ ಹೋರಾಟದಲ್ಲಿ ತುರುಬಗೌಡನು ಮಡಿಯುತ್ತಾನೆ. ಅವನ ತಂದೆ ಹರಿಗೆನಾಯಕ ಈ ವೀರಗಲ್ಲು ಸ್ಥಾಪಿಸಿರುವುದನ್ನು ಮತ್ತು ಮುದ್ದೋಜನ ಮಗ ದೇವೋಜನು ವೀರಗಲ್ಲು ಕೆತ್ತಿದ್ದನ್ನು ಉಲ್ಲೇಖಿಸುತ್ತದೆ.[೧೦೧] ಕ್ರಿ.ಶ. ೩.೧.೧೩೯೭ರ ಒಂದು ಸ್ಮಾರಕದಿಂದ ಸಂಗೆಯನಾಯಕ ಎಂಬ ವೀರನು ಹೋರಾಟವೊಂದರಲ್ಲಿ ಮಡಿದಿರುವುದು ತಿಳಿದುಬರುತ್ತದೆ.[೧೦೨] ಕಂಚಿಗನಹಳ್ಳಿಯ ತ್ರುಟಿತ ಸ್ಮಾರಕವು ವಿಕ್ರಮ ಸಂವತ್ಸರ ಬಹುಳ ಮಂಗಳವಾರದಂದು ಬಯಿರಯನಾಯಕನ ಮೇಲೆ ದಾಳಿ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಶಾಸನದಲ್ಲಿ ಹೋರಾಡಿ ಮಡಿದ ವೀರ ಯಾರೆಂದು ತಿಳಿಯುವುದಿಲ್ಲ. ಈ ಸ್ಮಾರಕದ ಕಾಲ ಕ್ರಿ.ಶ. ೧೪೦೦ ಆಗಿದೆ.[೧೦೩] ಚಿಕ್ಕ ಹಾಲಿವಾಣ ಗ್ರಾಮದ ಕ್ರಿ.ಶ. ಸು. ೧೫ನೇ ಶತಮಾನದ ಒಂದು ಸ್ಮಾರಕವು ಮಾಂಡಳಿಕರ ಗಂಡ, ಗಂಡರಗಂಡ ಹಾಲಿವಾಣದ ನಾಯಕರ ಮಗ ರಾಮಣ್ಣನು ಹೋರಾಟದಲ್ಲಿ ಸತ್ತನೆಂದು ಉಲ್ಲೇಖಿಸುತ್ತದೆ.[೧೦೪] ಶಿಲ್ಪದಲ್ಲಿ ವೀರನು ಆಯುಧವೊಂದನ್ನು ಹಿಡಿದು ಕುದುರೆ ಮೇಲೆ ಕುಳಿತಿದ್ದಾನೆ. ಅವನಿಗೆ ಸೇವಕನೊಬ್ಬ ರಾಜ ಛತ್ರಿ ಹಿಡಿದಿದ್ದಾನೆ. ಓರ್ವ ಶತ್ರು ಎಡಗೈಯಲ್ಲಿ ಆಳೆತ್ತರದ ಬಿಲ್ಲು ಹಿಡಿದು ನಿಂತಿದ್ದಾನೆ. ಅವನ ಬೆನ್ನಹಿಂದೆ ಬಿಲ್ಲುಗಳ ಭತ್ತಳಿಯಿದೆ.

**ಯುದ್ಧದಲ್ಲಿ ಮಡಿದ ವೀರರ ಸ್ಮಾರಕ ಶಿಲ್ಪಗಳು: ಶಾಸನರಹಿತ**

ರಾಷ್ಟ್ರಕೂಟ ಕಾಲದ ಒಂಬತ್ತು ಸ್ಮಾರಕಶಿಲ್ಪಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿವೆ. ಹರಿಹರ ತಾಲೂಕು ಸಾರಥಿ ಗ್ರಾಮದಲ್ಲಿ ಅವರ ಕಾಲದ ಎರಡು ಬೃಹದಾಕಾರದ ಸ್ಮಾರಕಶಿಲ್ಪಗಳಿವೆ. ಈ ಶಿಲ್ಪಗಳು ಕ್ರಿ.ಶ. ಸು. ೮ನೇ ಶತಮಾನಕ್ಕೆ ಸೇರಿವೆ. ಎರಡು ಶಿಲ್ಪಗಳನ್ನು ಮೂರು ಹಂತಗಳಲ್ಲಿ ಕಂಡರಿಸಲಾಗಿದೆ. ಒಂದು ಸ್ಮಾರಕಶಿಲ್ಪದಲ್ಲಿ ವೀರನು ಕುದುರೆ ಮೇಲೆ ಕುಳಿತು, ಆನೆಯ ಮೇಲೆ ಕುಳಿತಿರುವ ಶತ್ರುಗಳೊಂದಿಗೆ ಹೋರಾಡುತ್ತಿರುವ ದೃಶ್ಯವಿದೆ. ಕುದುರೆ ಮತ್ತು ಆನೆಯ ಕಾಲುತುಳಿತಕ್ಕೆ ನಾಲ್ವರು ಬಲಿಯಾಗಿರುವ ಚಿತ್ರಣವಿದೆ. ವೀರನೊಬ್ಬ ಶತ್ರುಗಳ ವಿರುದ್ಧ ಹೋರಾಡುತ್ತಿರುವುದನ್ನು ಸ್ಮಾರಕಶಿಲ್ಪದ ಬಲಭಾಗದಲ್ಲಿ ಚಿತ್ರಿಸುವುದು ಸಾಮಾನ್ಯವಾಗಿರುತ್ತದೆ. ಆದರೆ ಈ ಸ್ಮಾರಕಶಿಲ್ಪದಲ್ಲಿ ವೀರನು ಹೋರಾಡುತ್ತಿರುವುದನ್ನು ಶಿಲ್ಪದ ಎಡಭಾಗದಲ್ಲಿ ನಿರೂಪಿಸಿರುವುದು ವಿಶೇಷವಾಗಿದೆ. ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಬಲಗೈಯಲ್ಲಿ ಕಡುಗತ್ತಿ, ಎಡಗೈಯಲ್ಲಿ ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಶತ್ರುವೊಬ್ಬ ಕತ್ತಿ ಮತ್ತು ಬಾಕುವನ್ನು ಹಿಡಿದು ಯುದ್ಧಕ್ಕೆ ಧಾವಿಸುತ್ತಿರುವಂತೆ, ಮತ್ತೊಬ್ಬ ಶತ್ರು ಬಿಲ್ಲಿನಿಂದ ಬಾಣ ಪ್ರಯೋಗಿಸುತ್ತಿರುವ ಚಿತ್ರಣವಿದೆ. ಚಿರಸ್ತಹಳ್ಳಿ[೧೦೫] ಶಂಕರಲಿಂಗಸ್ವಾಮಿ ದೇವಸ್ಥಾನದ ಬಳಿಯಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನ ಹೋರಾಟವನ್ನು ಶಿಲ್ಪ ಸುಂದರವಾಗಿ ಚಿತ್ರಿಸಿದ್ದಾನೆ. ಎತ್ತರದ ನಿಲುವನ್ನು ಹೊಂದಿರುವ ವೀರನು ಉದ್ದನೆಯ ಭರ್ಚಿಯಿಂದ ಶತ್ರುವೊಬ್ಬನ ಹೊಟ್ಟೆಯ

ಭಾಗಕ್ಕೆ ಇರಿದು ಮೇಲಕ್ಕೆತ್ತಿ ಹಿಡಿದಿದ್ದಾನೆ. ಹಗಲವಾಸಿ ಹಿಡಿದ ಶತ್ರುವಿನ ಎರಡು ಕೈಯಲ್ಲಿ ಕತ್ತಿ, ಗುರಾಣಿಗಳಿವೆ. ಅವನ ತಲೆಯ ಕೂದಲು ಗಾಳಿಗೆ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಮತ್ತೋರ್ವ ಶತ್ರು ಗಾಬರಿಗೊಂಡು(ಹೆದರಿ) ನಿಂತಿರುವ ದೃಶ್ಯವಿದೆ. ಇಂತಹ ದೃಶ್ಯಗಳಿರುವ ಸ್ಮಾರಕಶಿಲ್ಪಗಳು ದೊರೆತಿರುವುದು ಅತಿ ವಿರಳವೆಂದೇ ಹೇಳಬಹುದು. ಈ ದೃಷ್ಟಿಯಿಂದ ಸ್ಮಾರಕ ವಿಶೇಷವೆನಿಸಿದೆ. ಬಸವನಕೋಟೆ ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಶತ್ರುಗಳಿಬ್ಬರ ರುಂಡವನ್ನು ಕತ್ತರಿಸಿದ್ದಾನೆ. ಒಬ್ಬ ಶತ್ರು ವೀರನಿಗೆ ಪ್ರತಿ ದಾಳಿ ಮಾಡುತ್ತಿರುವಂತೆ ಕೆತ್ತನೆ ಮಾಡಲಾಗಿದೆ. ಮತ್ತೂರು ಗ್ರಾಮದಲ್ಲಿ ರಾಷ್ಟ್ರಕೂಟರ ಎರಡು ಸ್ಮಾರಕಶಿಲ್ಪಗಳಿವೆ. ಒಂದು ಸ್ಮಾರಕಶಿಲ್ಪದಲ್ಲಿ ವೀರನು ಕಡುಗತ್ತಿ ಮತ್ತು ಗುರಾಣಿಯನ್ನು ಹಿಡಿದು ಯುದ್ಧ ಸನ್ನದ್ಧನಾಗಿರುವನು. ಒಬ್ಬ ಶತ್ರು ಕಡುಗತ್ತಿ ಮತ್ತು ಬಿಲ್ಲು ಆಯುಧಗಳನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಶಿಲ್ಪದ ಕೆಳಭಾಗದಲ್ಲಿ ಹೋರಾಟದಲ್ಲಿ ಮಡಿದವನೊಬ್ಬನ ಚಿತ್ರಣವಿದೆ. ಇನ್ನೊಂದು ಸ್ಮಾರಕಶಿಲ್ಪದಲ್ಲಿ ಹೋರಾಟದ ದೃಶ್ಯ ತ್ರುಟಿತಗೊಂಡಿದೆ. ಮೇಲಿನ ಹಂತದಲ್ಲಿ ವೀರನು ಅಪ್ಸರೆಯರೊಡನೆ ಸ್ವರ್ಗಾರೋಹಣ ಮಾಡುತ್ತಿರುವುದನ್ನು ಚಿತ್ರಿಸಲಾಗಿದೆ. ಮುದಹದಡಿ ಗ್ರಾಮದ ಈಶ್ವರ ದೇವಸ್ಥಾನದ ಬಳಿ ಕ್ರಿಶ. ಸು. ೧೦ನೇ ಶತಮಾನದ ಒಂದು ಸ್ಮಾರಕಶಿಲ್ಪವಿದೆ. ಆ ಶಿಲ್ಪದ ಮೊದಲ ಹಂತದಲ್ಲಿ ವೀರನು ಆಳೆತ್ತರದ ಬಿಲ್ಲಿಗೆ ಬಾಣವನ್ನು ಹೂಡಿ ಯುದ್ಧಸನ್ನದ್ಧನಾಗಿದ್ದಾನೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ವೀರನ ಹಿಂದೆ ಸೈನಿಕನೊಬ್ಬ ಬಿಲ್ಲು ಹಿಡಿದು ನಿಂತಿದ್ದಾನೆ. ವೀರನಿಗೆ ಅಭಿಮುಖವಾಗಿರುವ ಇಬ್ಬರು ಶತ್ರುಗಳು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಪ್ರತಿ ದಾಳಿಗೆ ಸನ್ನದ್ಧರಾಗಿರುವಂತೆ ಚಿತ್ರಿಸಲಾಗಿದೆ. ಹಿರೇಮಲ್ಲನಹೊಳೆ ಗ್ರಾಮದ ತ್ರುಟಿತ ಸ್ಮಾರಕಶಿಲ್ಪದಲ್ಲಿ ವೀರನು ಕತ್ತಿಯಿಂದ ಶತ್ರುವಿನ ಕುದುರೆಯ ಕತ್ತಿನ ಭಾಗಕ್ಕೆ ಇರಿದಿರುವ ಚಿತ್ರಣವಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ವೀರನ ಉಡುಪು ಗಮನ ಸೆಳೆಯುತ್ತದೆ. ಹಗರಿಶಿರನಹಳ್ಳಿಯ ತ್ರುಟಿತಗೊಂಡಿರುವ ಸ್ಮಾರಕಶಿಲ್ಪವೊಂದು ರಾಷ್ಟ್ರಕೂಟ ಕಾಲದ್ದಾಗಿದೆ.

ಹರಪನಹಳ್ಳಿ ತಾಲೂಕು ಕುಂಚೂರಿನಲ್ಲಿ[೧೦೬] ಕಲ್ಯಾಣ ಚಾಲುಕ್ಯ ಕಾಲದ ನಾಲ್ಕು ಸ್ಮಾರಕಶಿಲ್ಪಗಳು ಕಂಡುಬಂದಿವೆ. ಈ ಶಿಲ್ಪಗಳು ಕ್ರಿಶ. ಸು. ೧೧-೧೨ನೇ ಶತಮಾನಕ್ಕೆ ಸೇರಿವೆ. ಒಂದು ಸ್ಮಾರಕದಲ್ಲಿ ಕತ್ತಿ ಮತ್ತು ಗುರಾಣಿಗಳನ್ನು ಹಿಡಿದ ವೀರನು ಯುದ್ಧಸನ್ನದ್ಧನಾಗಿ, ತನ್ನ ಎಡಗಾಲಿನಿಂದ ಅಂಗಾತವಾಗಿ ಬಿದ್ದಿರುವ ಶತ್ರುವಿನ ಬೆನ್ನನ್ನು ತುಳಿಯುತ್ತಿದ್ದಾನೆ. ವೀರನ ಹಿಂಬದಿಯಲ್ಲಿ ಓರ್ವ ಶತ್ರು ಕುದುರೆಯನ್ನು ಹಾರಿಸಿಕೊಂಡು ಬರುತ್ತಿರುವ ಚಿತ್ರಣವಿದ್ದರೆ, ಮತ್ತೊಬ್ಬ ಬಿಲ್ಲು ಬಾಣವನ್ನು ಹಿಡಿದು ವೀರನಿಗೆ ಗುರಿಯಿಟ್ಟಿರುವಂತೆ ಕಂಡರಿಸಲಾಗಿದೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ. ಇಲ್ಲಿ ವೀರನು ಶತ್ರುಗಳು ಪ್ರಯೋಗಿಸುವ ಬಾಣಗಳಿಂದ ರಕ್ಷಿಸಿಕೊಳ್ಳಲು ಗುರಾಣಿಯನ್ನು ಅಡ್ಡವಾಗಿ ಹಿಡಿದಿದ್ದಾನೆ. ವೀರನಿಗೆ ಅಭಿಮುಖವಾಗಿ ಸಮಭಂಗಿಯಲ್ಲಿ ನಿಂತಿರುವ

ಶತ್ರುಗಳಿಬ್ಬರು ಆಳೆತ್ತರದ ಬಿಲ್ಲಿಗೆ ಬಾಣವನ್ನು ಹಿಡಿದು ಗುರಿಯಿಟ್ಟಿರುವಂತೆ ಚಿತ್ರಿಸಲಾಗಿದೆ. ಇನ್ನೊಂದು ಸ್ಮಾರಕಶಿಲ್ಪದಲ್ಲಿ ವೀರನು ಗುರಾಣಿ ಮತ್ತು ಕತ್ತಿಯನ್ನು ಹಿಡಿದು ಯುದ್ಧ ಸನ್ನದ್ಧನಾಗಿರುವಂತೆ ಬಿಡಿಸಲಾಗಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ವೀರನ ಕಾಲು ಬಳಿ ಶತ್ರುವೊಬ್ಬ ಬಲಿಯಾಗಿರುವ ದೃಶ್ಯವಿದೆ. ಮೂವರು ಶತ್ರುಗಳು ವೀರನನ್ನು ಸುತ್ತುವರಿದಿರುವಂತೆ ಕೆತ್ತಲಾಗಿದೆ. ಇಬ್ಬರು ಕತ್ತಿ, ಒಬ್ಬ ಬಿಲ್ಲು ಆಯುಧಗಳನ್ನು ಹಿಡಿದಿರುವರು. ವೀರ ಹಾಗೂ ಶತ್ರು ಸೈನಿಕರ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ನಾಲ್ಕನೆಯ ಸ್ಮಾರಕಶಿಲ್ಪದಲ್ಲಿ ಎರಡು ಗುಂಪಿನ ನಡುವೆ ನಡೆಯುತ್ತಿರುವ ಹೋರಾಟವನ್ನು ಚಿತ್ರಿಸಲಾಗಿದೆ. ಎರಡು ಗುಂಪಿನ ನಾಯಕರು ಸಮಭಂಗಿಯಲ್ಲಿ ಅಭಿಮುಖವಾಗಿ ನಿಂತಿರುವಂತೆ ಕಂಡರಿಸಲಾಗಿದೆ. ಇಬ್ಬರು ಒಂದೇ ತರಹದ ಕತ್ತಿ, ಗುರಾಣಿ ಮತ್ತು ಉಡುಪುಗಳನ್ನು ಧರಿಸಿರುವಂತೆ ಚಿತ್ರಿಸಲಾಗಿದೆ. ಸೈನಿಕರು ಬಿಲ್ಲು, ಕತ್ತಿ, ಭರ್ಚಿ ಆಯುಧಗಳನ್ನು ಹಿಡಿದಿರುವಂತೆ ಕೆತ್ತಲಾಗಿದೆ.

ಉಚ್ಚಂಗಿದುರ್ಗದಲ್ಲಿ ಚಾಲುಕ್ಯರ ಎರಡು ಸ್ಮಾರಕಶಿಲ್ಪಗಳಿವೆ. ಊರಿನ ಹೊರವಲಯದ ನೋಣವೇಶ್ವರ ದೇವಸ್ಥಾನದ ಬಳಿಯ ಸ್ಮಾರಕವೊಂದನ್ನು ಶಿಲ್ಪಿ ತುಂಬ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಕ್ರಿ.ಶ. ಸು. ೧೧ನೇ ಶತಮಾನದ ಸ್ಮಾರಕದಲ್ಲಿ ಎತ್ತರದ ನಿಲುವನ್ನು ಹೊಂದಿರುವ ವೀರನು ಕತ್ತಿ ಮತ್ತು ಗುರಾಣಿ ಹಿಡಿದು ಯುದ್ಧಸನ್ನದ್ಧನಾಗಿರುವನು. ಬಲಗೈಯಲ್ಲಿನ ಕತ್ತಿಯನ್ನು ಮೇಲಕ್ಕೆ ಎತ್ತಿ ಹಿಡಿದಿರುವಂಥ ಚಿತ್ರಣವಿದೆ. ವೀರನು ಮೂವರು ಶತ್ರುಗಳ ಚಿರಛೇದನ ಮಾಡಿದ್ದು, ಅವರ ರುಂಡ ಮತ್ತು ಮುಂಡಗಳು ದಿಕ್ಕಿಗೊಂದು ಬಿದ್ದಿರುವಂತೆ ಸುಂದರವಾಗಿ ಕೆತ್ತಲಾಗಿದೆ. ಇಬ್ಬರು ಶತ್ರುಗಳು ಭರ್ಚಿ ಮತ್ತು ಗುರಾಣಿಗಳನ್ನು ಹಿಡಿದು ಯುದ್ಧಕ್ಕೆ ಮುನ್ನುಗ್ಗಿ ಬರುತ್ತಿರುವಂತೆ ತೋರಿಸಲಾಗಿದೆ. ಈ ರೀತಿಯ ಲಕ್ಷಣಗಳಿರುವ ಸ್ಮಾರಕಶಿಲ್ಪಗಳು ದೊರೆಯುವುದು ಅಪರೂಪವಾಗಿದ್ದು ಈ ದೃಷ್ಟಿಯಿಂದ ಸ್ಮಾರಕಶಿಲ್ಪ ವಿಶೇಷವೆನಿಸಿದೆ. ಸ್ಮಾರಕದಲ್ಲಿ ವೀರನ ಸ್ವರ್ಗಾರೋಹಣವನ್ನು ರಾಷ್ಟ್ರಕೂಟ ಸ್ಮಾರಕಶಿಲ್ಪಗಳಲ್ಲಿರುವಂತೆ ತೋರಿಸಿದೆ. ಆದ್ದರಿಂದ ಈ ಸ್ಮಾರಕಶಿಲ್ಪ ಚಾಲುಕ್ಯರ ಆರಂಭ ಕಾಲದ್ದೆಂದು ತೋರುತ್ತದೆ. ಇದೇ ಗ್ರಾಮದ ಬಂದಮ್ಮನ ದೇವಸ್ಥಾನದ ನವರಂಗದಲ್ಲಿರುವ ಸ್ಮಾರಕಶಿಲ್ಪವು ಕ್ರಿ.ಶ. ಸು. ೧೨ನೇ ಶತಮಾನಕ್ಕೆ ಸಂಬಂಧಿಸಿದೆ. ದೇಹದಾರ್ಢ್ಯನಾಗಿರುವ ವೀರ ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಕತ್ತಿ ಹಿಡಿದು ಯುದ್ಧ ಸನ್ನದ್ಧನಾಗಿರುವ ಚಿತ್ರಣವಿದೆ. ತನ್ನ ಎಡಗಾಲನ್ನು ಅಂಗಾತವಾಗಿ ಬಿದ್ದಿರುವ ಶತ್ರುವಿನ ಬೆನ್ನ ಮೇಲೆ ಇಟ್ಟಿದ್ದಾನೆ. ಅವನ ತಲೆಯ ಕೂದಲು ನೆಲದ ಮೇಲೆ ಹರಡಿಕೊಂಡಿರುವಂತೆ ಚಿತ್ರಿಸಲಾಗಿದೆ. ವೀರನ ಹಿಂದೆ ಸೈನಿಕನೊಬ್ಬ ಕತ್ತಿ ಮತ್ತು ಗುರಾಣಿ ಹಿಡಿದು ನಿಂತಿದ್ದಾನೆ. ವೀರನಿಗೆ ಅಭಿಮುಖವಾಗಿ ಇಬ್ಬರು ಶತ್ರುಗಳು ಬಿಲ್ಲು ಬಾಣವನ್ನು ಹಿಡಿದು ಪ್ರತಿದಾಳಿ ಮಾಡುತ್ತಿರುವ ದೃಶ್ಯವಿದೆ.

ಬಾಗಳಿ ವಸ್ತುಸಂಗ್ರಹಾಲಯದಲ್ಲಿ ಕಲ್ಯಾಣ ಚಾಲುಕ್ಯರ ನಾಲ್ಕು ಸ್ಮಾರಕಶಿಲ್ಪಗಳಿವೆ. ಒಂದು ಸ್ಮಾರಕದಲ್ಲಿ ವೀರನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಎತ್ತರದ ನಿಲುವನ್ನು ಹೊಂದಿರುವ ವೀರನು ಮಡಿದು ಬಿದ್ದಿರುವ ಶತ್ರುವಿನ ಮೇಲೆ ನಿಂತು ಬಿಲ್ಲು ಬಾಣವನ್ನು ಹಿಡಿದು ಶತ್ರುಗಳ ಕಡೆ ಗುರಿಯಿಟ್ಟುರುವಂತೆ ಕೆತ್ತನೆ ಮಾಡಲಾಗಿದೆ. ಬಿಲ್ಲು ಹಿಡಿದಿರುವ ಮೂವರು ಶತ್ರುಗಳು ಯುದ್ಧದಿಂದ ಪಲಾಯನಗೈಯುತ್ತಿರುವುದನ್ನು ಶಿಲ್ಪಿ ತುಂಬ ಆಕರ್ಷಕವಾಗಿ ಚಿತ್ರಿಸಿದ್ದಾನೆ. ಅವರಲ್ಲಿ ಒಬ್ಬ ಪಲಾಯನಗೈಯುತ್ತಿದ್ದರೂ ಹಿಂದಕ್ಕೆ ತಿರುಗಿ ವೀರನ ಕಡೆ ಬಿಲ್ಲು ಪ್ರಯೋಗಿಸುತ್ತಿರುವಂತೆ ಬಿಡಿಸಿರುವುದು ಶಿಲ್ಪಿಯ ಕಲಾಜ್ಞಾನ ಎದ್ದು ಕಾಣುತ್ತದೆ. ಉಳಿದ ಇಬ್ಬರು ಶತ್ರುಗಳು ಕತ್ತಿಗಳನ್ನು ಹಿಡಿದು ಯುದ್ಧಕ್ಕೆ ಧಾವಿಸುವ ದೃಶ್ಯವಿದೆ. ವೀರನ ಹಿಂಬದಿಯಲ್ಲಿರುವ ಅವನ ಸೈನಿಕರು ಬಿಲ್ಲು ಬಾಣಗಳನ್ನು ಹಿಡಿದುಕೊಂಡಿದ್ದಾರೆ. ಸ್ಮಾರಕದಲ್ಲಿ ವೀರನ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಅದೇ ಸ್ಥಳದಲ್ಲಿರುವ ಎರಡನೆಯ ಸ್ಮಾರಕಶಿಲ್ಪದಲ್ಲಿ ವೀರ ಮತ್ತು ಶತ್ರು ಪಡೆಯ ಸೈನಿಕರು ಪರಸ್ಪರ ಹೋರಾಡುತ್ತಿರುವ ದೃಶ್ಯವಿದೆ. ಬಿಲ್ಲು ಬಾಣ ಹಿಡಿದಿರುವ ವೀರನನ್ನು ಪ್ರಧಾನವಾಗಿ ಕಂಡರಿಸಲಾಗಿದೆ. ಹೋರಾಟ ದೃಶ್ಯದ ಕೆಳಭಾಗದಲ್ಲಿ ಯುದ್ಧದಲ್ಲಿ ಮಡಿದವರ ಹೆಣಗಳನ್ನು ಚಿತ್ರಿಸಲಾಗಿದೆ. ಮೂರನೆಯ ಸ್ಮಾರಕಶಿಲ್ಪದಲ್ಲಿ ವೀರನು ಆಳೆತ್ತರದ ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿರುವಂತೆ, ವೀರನಿಗೆ ಅಭಿಮುಖವಾಗಿರುವ ಇಬ್ಬರು ಶತ್ರುಗಳು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ನಿಂತಿದ್ದಾರೆ. ಮತ್ತಿಬ್ಬರು ಅಶ್ವಾರೂಢರಾಗಿರುವಂತೆ ಕೆತ್ತನೆ ಮಾಡಲಾಗಿದೆ. ವೀರನ ಕಾಲುಗಳ ಕೆಳಗೆ ಹೋರಾಟದಲ್ಲಿ ಮಡಿದಿರುವ ಇಬ್ಬರ ಶವಗಳನ್ನು ಬಿಡಿಸಲಾಗಿದೆ. ವೀರನ ಹಿಂಬದಿಯಲ್ಲಿರುವ ಅವನ ಸೇವಕರಲ್ಲಿ ಒಬ್ಬ ಎಡಗೈಯಲ್ಲಿ ಭರ್ಚಿ, ಬಲಗೈಯಲ್ಲಿ ವಸ್ತ್ರ(ಬಟ್ಟೆ)ವನ್ನು ಹಿಡಿದಿದ್ದಾನೆ. ಮತ್ತೊಬ್ಬ ರಾಜಛತ್ರಿಯನ್ನು ಹಿಡಿದಿದ್ದಾನೆ. ಹೋರಾಟ ಹಂತದ ಬಲ ಮೂಲೆಯಲ್ಲಿ ಶಿಲ್ಪಿ ಪಕ್ಷಿಯೊಂದು ಕುಳಿತಿರುವುದನ್ನು ಚಿತ್ರಿಸಿದ್ದಾನೆ. ಇದು ಮಡಿದವರ ಹೆಣಗಳ ಮಾಂಸವನ್ನು ತಿನ್ನಲು ಬಂದಿರುವುದನ್ನು ಧ್ವನಿಸುತ್ತದೆ. ಇದರಿಂದ ಹೋರಾಟದ ಭೀಕರತೆ ಎಷ್ಟು ಇತ್ತು ಎಂಬುದು ಸೂಕ್ಷ್ಮವಾಗಿ ನಮ್ಮ ಅರಿವಿಗೆ ಬರುತ್ತದೆ. ಇಂತಹ ದೃಶ್ಯಗಳನ್ನೊಳಗೊಂಡ ಸ್ಮಾರಕಶಿಲ್ಪಗಳೂ ಸಹ ನಮಗೆ ಅಪರೂಪವಾಗಿ ಸಿಗುತ್ತವೆ. ನಾಲ್ಕನೇ ಸ್ಮಾರಕಶಿಲ್ಪದಲ್ಲಿ ಬಿಲ್ಲು ಬಾಣವನ್ನು ಹಿಡಿದಿರುವ ವೀರನು ಶತ್ರುವೊಬ್ಬನ ದೇಹದ ಮೇಲೆ ನಿಂತಿರುವಂತೆ ಕಂಡರಿಸಲಾಗಿದೆ. ಅವನ ಎದುರಿಗೆ ಶತ್ರು ಸೈನ್ಯವಿದೆ. ಮೂವರು ಸೈನಿಕರು ಬೃಹತ್ ಗಾತ್ರದ ಗುರಾಣಿ ಮತ್ತು ಕತ್ತಿಗಳನ್ನು ಹಿಡಿದಿದ್ದರೆ, ಅವರ ಹಿಂಬದಿಯಲ್ಲಿರುವ ಇಬ್ಬರು ಬಿಲ್ಲು ಬಾಣಗಳನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ರುಂಡವಿಲ್ಲದ ದೇಹವೊಂದು ನೆಲದ ಮೇಲೆ ಬಿದ್ದಿರುವಂತೆ ಶಿಲ್ಪದ ಕೆಳತುದಿಯಲ್ಲಿ ಬಿಡಿಸಲಾಗಿದೆ.

ಚಿಗಟೇರಿ ನಾರದಮುನಿ ದೇವಸ್ಥಾನದ ಒಳಾವರಣದಲ್ಲಿ ನಾಲ್ಕು ಸ್ಮಾರಕಶಿಲ್ಪಗಳಿವೆ. ಬಿಳಿ ಬಳಪದ ಶಿಲೆಯಲ್ಲಿ ಕೆತ್ತಲ್ಪಟ್ಟಿರುವ ಈ ಸ್ಮಾರಕಶಿಲ್ಪಗಳು ಚಾಲುಕ್ಯರ ಆರಂಭ ಕಾಲದವುಗಳಾಗಿವೆ. ಒಂದೇ ರೀತಿಯ ಲಕ್ಷಣಗಳನ್ನು ಹೊಂದಿರುವ ಅವುಗಳನ್ನು ಒಬ್ಬನೇ ಶಿಲ್ಪಿ ಕೆತ್ತನೆ ಮಾಡಿರುವಂತೆ

ಭಾಸವಾಗುತ್ತದೆ. ಒಂದು ಸ್ಮಾರಕದಲ್ಲಿ ಎತ್ತರದ ನಿಲುವನ್ನು ಹೊಂದಿರುವ ವೀರ ಎಡಗೈಯಲ್ಲಿ ಆಳೆತ್ತರದ ಬಿಲ್ಲು, ಬಲಗೈಯಲ್ಲಿ ಬಾಕುವನ್ನು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಶತ್ರುಗಳು ಪ್ರಯೋಗಿಸಿದ ಬಾಣಗಳು ಅವನ ಸೊಂಟ ಮತ್ತು ತೊಡೆಯ ಭಾಗದಲ್ಲಿ ಹೊಕ್ಕಿವೆ. ಇಬ್ಬರು ಶತ್ರುಗಳು ಬಿಲ್ಲು ಬಾಣವನ್ನು ಹಿಡಿದು ವೀರನ ಕಡೆ ಗುರಿಯಿಟ್ಟಿರುವಂತೆ, ಮತ್ತೊಬ್ಬ ಭರ್ಚಿಯನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಶತ್ರುಗಳ ಹಿಂಬದಿಯಲ್ಲಿ ವೀರನ ಕಡೆ ಎಸೆದಿರುವ ಮೂರು ಭರ್ಚಿಗಳನ್ನು ಚಿತ್ರಸಲಾಗಿದೆ. ಅದೇ ಸ್ಥಳದಲ್ಲಿರುವ ಎರಡನೇ ಸ್ಮಾರಕಶಿಲ್ಪದಲ್ಲಿ ಎತ್ತರದವಾದ ದೇಹವನ್ನು ಹೊಂದಿರುವ ವೀರ ಕತ್ತಿ ಮತ್ತು ಗುರಾಣಿಗಳನ್ನು ಹಿಡಿದಿರುವ ಚಿತ್ರಣವಿದೆ. ಶತ್ರು ಪಡೆಯ ಸೈನಿಕರಿಬ್ಬರು ಭರ್ಚಿ ಮತ್ತು ಬಿಲ್ಲು ಆಯುಧಗಳನ್ನು ಹಿಡಿದು ಯುದ್ಧಕ್ಕೆ ಧಾವಿಸುತ್ತಿರುವಂತೆ, ಮತ್ತೊಬ್ಬ ಸೈನಿಕ ಅಶ್ವಾರೂಢನಾಗಿ ಕತ್ತಿ ಹಿಡಿದಿರುವುದನ್ನು ಚಿತ್ರಿಸಲಾಗಿದೆ. ಹೋರಾಟದಲ್ಲಿ ಮಡಿದಿರುವ ಸೈನಿಕರ ಶವಗಳು ದಿಕ್ಕಿಗೊಂದು ಬಿದ್ದಿರುವಂತೆ ಕಂಡರಿಸಲಾಗಿದೆ. ಇಲ್ಲಿ ಕಂಡುಬರುವ ಮೂರನೇ ಸ್ಮಾರಕಶಿಲ್ಪವು ಸ್ವಲ್ಪವೂ ವ್ಯತ್ಯಾಸವನ್ನು ಹೊಂದಿರದೇ ಮೇಲಿನ ಸ್ಮಾರಕದ ವಿವರಗಳನ್ನು ಹೊಂದಿದೆ. ಇಂತಹ ಅವಘಡಕ್ಕೆ ಒಬ್ಬನೇ ಶಿಲ್ಪಿಯ ಕೆತ್ತನೆಯ ಲೋಪವೆಂದು ತೋರುತ್ತದೆ.

ತೆಲಗಿ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಬಾಕುವಿನಿಂದ ಶತ್ರುವೊಬ್ಬನ ಹೊಟ್ಟೆಯ ಭಾಗಕ್ಕೆ ಇರಿದಿರುವ ದೃಶ್ಯವಿದೆ. ಶತ್ರುವು ತನ್ನ ಎರಡು ಕೈಗಳನ್ನು ಮೇಲಕ್ಕೆತ್ತಿ ಶರಣಾಗತನಾಗುವ ರೀತಿಯಲ್ಲಿ ಕಂಡರಣೆ ಮಾಡಲಾಗಿದೆ. ಅವನ ಹಿಂಬದಿಯಲ್ಲಿರುವ ಸೈನಿಕನೊಬ್ಬ ಭಯಭೀತನಾಗಿರುವಂತೆ ಕೆತ್ತಲ್ಪಟ್ಟಿದೆ. ವೀರನ ಹಿಂಬದಿಯಿರುವ ಇಬ್ಬರು ಸೈನಿಕರು ಭರ್ಚಿ ಮತ್ತು ಗುರಾಣಿಯನ್ನು ಹಿಡಿದಿದ್ದಾರೆ. ವೀರನು ಮಲ್ಲಗಚ್ಚೆ ಉಡುಪು ಧರಿಸಿದ್ದಾನೆ. ಕಡಗೋಳ ಆಂಜನೇಯ ದೇವಸ್ಥಾನದ ಬಳಿಯಿರುವ ಒಂದು ಸ್ಮಾರಕಶಿಲ್ಪದಲ್ಲಿ ಎತ್ತರದ ದೇಹವನ್ನು ಹೊಂದಿರುವ ವೀರನು ಎಲೆ ಭರ್ಚಿಗಳನ್ನು ಹಿಡಿದು ಶತ್ರು ಸೈನ್ಯದೊಂದಿಗೆ ಹೋರಾಡುತ್ತಿರುವ ದೃಶ್ಯವಿದೆ. ಮಾಡಲಗೆರೆ[೧೦೭] ಹಳ್ಳದ ಬದಿಯಲ್ಲಿರುವ ಒಂದು ಶಿಲ್ಪದಲ್ಲಿ ವೀರನು ಬಿಲ್ಲು ಬಾಣವನ್ನು ಹಿಡಿದು ಶತ್ರುಗಳೊಂದಿಗೆ ಹೋರಾಡುವ ಚಿತ್ರಣವಿದೆ. ವೀರನಿಗೆ ಅಭಿಮುಖವಾಗಿರುವ ಒಬ್ಬ ಶತ್ರುವು ಬಿಲ್ಲು ಮತ್ತು ಕಡುಗತ್ತಿ ಹಿಡಿದು ಪ್ರತಿದಾಳಿಗೆ ಮುಂದಾಗಿರುವಂತೆ, ಮತ್ತೊಬ್ಬ ಸೈನಿಕ ಭರ್ಚಿಯನ್ನು ಹಿಡಿದಿರುವುದನ್ನು ಕೆತ್ತಲಾಗಿದೆ. ಮೈದೂರು ಈಶ್ವರ ದೇವಸ್ಥಾನದಲ್ಲಿರುವ ಒಂದು ಸ್ಮಾರಕದಲ್ಲಿ ವೀರನು ಬಿಲ್ಲು ಮತ್ತು ಕಡುಗತ್ತಿ ಹಿಡಿದು ಯುದ್ಧಸನ್ನದ್ಧನಾಗಿರುವಂತೆ ಚಿತ್ರಿಸಲಾಗಿದೆ. ಶತ್ರುವೊಬ್ಬ ತನ್ನ ಆಯುಧವನ್ನು ಕೆಳಗಿಳಿಸಿ ವೀರನ ಮುಂದೆ ಶರಣಾಗತನಾಗಿರುವಂತೆ ಇಲ್ಲಿ ತೋರಿಸಲಾಗಿದೆ.

ಹೊನ್ನಾಳಿ ತಾಲೂಕು ಬೆನಕನಹಳ್ಳಿ ಗ್ರಾಮದ ಬೆನಕೇಶ್ವರ ದೇವಸ್ಥಾನದ ಬಳಿಯಿರುವ ಸ್ಮಾರಕದಲ್ಲಿ ವೀರ ಹಾಗೂ ಶತ್ರು ಇಬ್ಬರು ಹೋರಾಡುತ್ತಿರುವ ದೃಶ್ಯವಿದೆ. ವೀರನು ಬಿಲ್ಲು ಮತ್ತು ಚೂರಿಯನ್ನು ಹಿಡಿದ್ದಿದ್ದರೆ, ಶತ್ರು ಕತ್ತಿ ಮತ್ತು ಗುರಾಣಿ ಹಿಡಿದಿರುವಂತೆ ಚಿತ್ರಿಸಲಾಗಿದೆ. ವೀರ ತನ್ನ ಬೆನ್ನ ಹಿಂದೆ ಬಿಲ್ಲುಗಳ ಬತ್ತಳಿಕೆಯನ್ನು ಕಟ್ಟಿಕೊಂಡಿದ್ದಾನೆ. ಓರ್ವ ಶತ್ರು ಸೈನಿಕ

ಯುದ್ಧದಿಂದ ಪಲಾಯನಗೈಯುತ್ತಿರುವ ಚಿತ್ರಣವಿದೆ. ಮಾದನಬಾವಿ ಗ್ರಾಮದ ರಂಗನಾಥಸ್ವಾಮಿ ದೇವಸ್ಥಾನದ ಬಳಿ ಕ್ರಿ.ಶ. ಸು. ೧೦ನೇ ಶತಮಾನದ ಎರಡು ಸ್ಮಾರಕಶಿಲ್ಪಗಳಿವೆ. ಒಂದು ಸ್ಮಾರಕದಲ್ಲಿ ವೀರನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಬೃಹತ್ ಗಾತ್ರದ ಗುರಾಣಿ ಮತ್ತು ಕತ್ತಿ ಹಿಡಿದಿರುವ ವೀರನು ಹೋರಾಟಕ್ಕೆ ಮುಂದಾಗಿರುವನು. ದಾಳಿಗಾಗಿ ಬಂದ ಓರ್ವ ಶತ್ರು ಯುದ್ಧದಿಂದ ಪಲಾಯನಗೈಯುತ್ತಿದ್ದರೆ, ಮೂವರು ಶತ್ರು ಸೈನಿಕರು ಯುದ್ಧಕ್ಕೆ ಧಾವಿಸುತ್ತಿರುವಂತೆ ಚಿತ್ರಿಸಲಾಗಿದೆ. ಅವರ ಕೈಗಳಲ್ಲಿ ಕಡುಗತ್ತಿ, ಭರ್ಚಿ ಆಯುಧಗಳಿವೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ಶತ್ರು ಸೈನಿಕರು ವೀರನನ್ನು ಸುತ್ತುವರಿದಿರುವಂತೆ ತೋರಿಸಲಾಗಿದೆ. ನಡುವೆ ವೀರನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ವೀರನ ಎಡಭಾಗದಲ್ಲಿರುವ ಐವರು ಶತ್ರು ಸೈನಿಕರು ಕತ್ತಿ, ಗುರಾಣಿಗಳನ್ನು ಹಿಡಿದಿದ್ದರೆ, ಬಲಭಾಗದಲ್ಲಿರುವ ನಾಲ್ವರು ಬಿಲ್ಲು ಬಾಣ ಮತ್ತು ಕತ್ತಿ ಗುರಾಣಿಗಳನ್ನು ಹಿಡಿದಿರುವಂತೆ ಕೆತ್ತಲಾಗಿದೆ. ಸಾಸುವೆಹಳ್ಳಿ ನರಸಿಂಹ ದೇವಸ್ಥಾನದ ಬಳಿ ಕ್ರಿ.ಶ. ಸು. ೧೨ನೇ ಶತಮಾನದ ಒಂದು ಸ್ಮಾರಕಶಿಲ್ಪವಿದೆ. ಆ ಸ್ಮಾರಕದಲ್ಲಿ ವೀರನು ಕತ್ತಿ ಮತ್ತು ಗುರಾಣಿ ಹಿಡಿದು ಶತ್ರುವಿನೊಂದಿಗೆ ಹೋರಾಡುವ ದೃಶ್ಯವಿದೆ. ವೀರನಿಗೆ ಎದುರಾಗಿ ನಿಂತಿರುವ ಶತ್ರು ಕತ್ತಿಯನ್ನು ಹಿಡಿದಿದ್ದಾನೆ. ಮತ್ತೊಬ್ಬ ಶತ್ರು ಭರ್ಚಿಯನ್ನು ನೆಲಕ್ಕೆ ಊರಿ, ವೀರನಿಗೆ ಶರಣಾಗಿರುವಂತೆ ಕಂಡುಬರುವನು. ಹೋರಾಟದಲ್ಲಿ ಮಡಿದವರ ಮಾಂಸವನ್ನು ತಿನ್ನಲು ಬಂದ ಪಕ್ಷಿಯೊಂದು ಕಂಬದ ಮೇಲೆ ಕುಳಿತಿರುವಂತೆ ಶಿಲ್ಪಿ ಚಿತ್ರಿಸಿದ್ದಾನೆ. ಇದು ಯುದ್ಧದಲ್ಲಿ ಆದ ಸಾವು ನೋವುಗಳನ್ನು ಸಂಕೇತಿಸುತ್ತದೆ.

ದಾವಣಗೆರೆ ಮಹಾನಗರ ಪಾಲಿಕೆ ಬಳಿಯಿರುವ ಒಂದು ಸ್ಮಾರಕದಲ್ಲಿ ಬಿಲ್ಲು ಮತ್ತು ಕತ್ತಿಯನ್ನು ಹಿಡಿದಿರುವ ವೀರನು ಅಶ್ವಾರೂಢರಾಗಿರುವ ಶತ್ರುಗಳ ವಿರುದ್ಧ ಹೋರಾಡುತ್ತಿರುವ ದೃಶ್ಯವಿದೆ. ವೀರನು ಮಲ್ಲಗಚ್ಚೆಯ ಉಡುಪನ್ನು ಧರಿಸಿರುವುದು ಕಂಡುಬರುತ್ತದೆ. ಆಲೂರು ಆಂಜನೇಯ ದೇವಸ್ಥಾನದ ಬಳಿಯಿರುವ ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲು ಮತ್ತು ಬಾಕು ಆಯುಧಗಳನ್ನು ಹಿಡಿದು ಯುದ್ಧಸನ್ನದ್ಧನಾಗಿರುವ ಚಿತ್ರಣವಿದೆ. ಅವನಿಗೆ ಅಭಿಮುಖವಾಗಿ ಶತ್ರುಗಳಿಬ್ಬರು ಎಲೆ ಭರ್ಚಿಗಳನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಸ್ಮಾರಕದಲ್ಲಿ ವೀರನ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ನಲ್ಕುಂದೆ ಗ್ರಾಮದ ಕಲ್ಲೇಶ್ವರ ದೇವಸ್ಥಾನ ಮುಂಭಾಗದಲ್ಲಿ ಕಂಡುಬರುವ ಸ್ಮಾರಕಶಿಲ್ಪವೊಂದು ವಿಶಿಷ್ಟವಾಗಿದೆ. ಈ ಸ್ಮಾರಕದಲ್ಲಿ ದೇಹದಾರ್ಢ್ಯನಾಗಿರುವ ವೀರ ಆಳೆತ್ತರದ ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಅವನ ಎಡಗಾಲಿನ ಮುಂದೆ ಓರ್ವ ಶತ್ರು ಬಲಗೈಯಲ್ಲಿರುವ ಬಿಲ್ಲನ್ನು ನೆಲಕ್ಕೆ ಊರಿ, ಬಲಗಾಲು ಮಂಡಿಯನ್ನು ಬಾಗಿಸಿ ಶರಣಾಗತನಾಗಿರುವಂತೆ ಕಂಡರಿಸಲಾಗಿದೆ. ಮತ್ತೊಬ್ಬ ಶತ್ರು ಸೈನಿಕ ಬಿಲ್ಲು ಹಿಡಿದುಕೊಂಡು ತಟಸ್ಥನಾಗಿರುವಂತೆ ಕಂಡುಬರುವನು. ವೀರನು ಶತ್ರು ಸೈನಿಕನೊಬ್ಬನ ತಲೆಯನ್ನು ಕತ್ತರಿಸಿದ್ದು, ಅವನ ದೇಹದ(ಮುಂಡ) ಭಾಗ ಮಾತ್ರವೇ ಕಂಡುಬರುವಂತೆ ಶಿಲ್ಪದ ಕೆಳಭಾಗದಲ್ಲಿ ಚಿತ್ರಿಸಲಾಗಿದೆ.

ಹರಿಹರ ತಾಲೂಕು ಹಿರೇಹಾಲಿವಾಣದ ಒಂದು ಸ್ಮಾರಕಶಿಲ್ಪದಲ್ಲಿ ವೀರ ಮತ್ತು ಶತ್ರು ಇಬ್ಬರು ಬಿಲ್ಲುಗಳನ್ನು ಹಿಡಿದು ಅಭಿಮುಖವಾಗಿ ನಿಂತಿರುವ ದೃಶ್ಯವಿದೆ. ಇಲ್ಲಿ ಶತ್ರು ವೀರನನ್ನು ಸಮರ್ಥವಾಗಿ ಎದುರಿಸಿದನೆಂದು ತೋರುತ್ತದೆ. ಎರಡನೆಯ ಹಂತದಲ್ಲಿ ವೀರನು ಬಿಲ್ಲು ಹಿಡಿದು ಶತ್ರುಗಳಿಗೆ ಗುರಿಯಿಟ್ಟಿದ್ದಾನೆ. ಒಬ್ಬ ಶತ್ರುವು ಬಿಲ್ಲುವಿನಿಂದ ತಪ್ಪಿಸಿಕೊಳ್ಳುವ ಯತ್ನದಲ್ಲಿರುವಂತೆ ಚಿತ್ರಿಸಲಾಗಿದೆ. ಈ ಹಂತದಲ್ಲಿ ವೀರನು ಶತ್ರುಗಳನ್ನು ಸೋಲಿಸುವಲ್ಲಿ ಯಶಸ್ವಿಯಾದನೆಂಬ ಅರ್ಥದಲ್ಲಿ ಕಂಡರಿಸಲಾಗಿದೆ. ಹರಿಹರದ ಹರಿಹರೇಶ್ವರ ದೇವಸ್ಥಾನದ ಒಳಾವರಣದಲ್ಲಿರುವ ಸ್ಮಾರಕಶಿಲ್ಪದಲ್ಲಿ ಇಬ್ಬರು ವೀರರು ಬಿಲ್ಲು ಆಯುಧಗಳನ್ನು ಹಿಡಿದು ಪರಸ್ಪರ ಹೋರಾಡುತ್ತಿರುವ ವಿವರಗಳಿವೆ.

ಜಗಲೂರು ತಾಲೂಕು ಆಸಗೋಡು[೧೦೮] ಕಡ್ಲೆ ಬಸವೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಚಾಲುಕ್ಯರ ಮೂರು ಸ್ಮಾರಕಶಿಲ್ಪಗಳಿವೆ. ದೇವಸ್ಥಾನದ ಎಡಭಾಗದಲ್ಲಿರುವ ಒಂದು ಸ್ಮಾರಕಶಿಲ್ಪವನ್ನು ಶಿಲ್ಪಿ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಎತ್ತರದ ನಿಲುವನ್ನು ಹೊಂದಿರುವ ವೀರ ಕತ್ತಿ ಗುರಾಣಿಗಳನ್ನು ಹಿಡಿದು ಯುದ್ಧಸನ್ನದ್ಧನಾಗಿರುವನು. ಗುರಾಣಿಯಲ್ಲಿರುವ ಎರಡು ಕೊಂಡಿಗಳನ್ನು ತನ್ನ ಎಡಗೈ ಮುಂಗೈಗೆ ಹಾಕಿಕೊಂಡಿರುವುದನ್ನು ತೋರಿಸಿರುವುದು ಇಲ್ಲಿ ವಿಶೇಷವೆನಿಸಿದೆ. ಓರ್ವ ಶತ್ರು ಅಶ್ವಾರೂಢನಾಗಿ ಬಲಗೈಯಲ್ಲಿ ಭರ್ಜಿಯನ್ನು ಹಿಡಿದಿದ್ದಾನೆ. ಉಳಿದ ಮೂವರು ಶತ್ರು ಸೈನಿಕರು ಕತ್ತಿ ಮತ್ತು ಗುರಾಣಿ ಹಿಡಿದಿರುವಂತೆ ಕೆತ್ತಲಾಗಿದೆ. ಅಶ್ವಾರೂಢನಾಗಿರುವ ವ್ಯಕ್ತಿ ಶತ್ರುಪಾಳೆಯದ ಪ್ರಮುಖನೆಂದು ತೋರುತ್ತದೆ. ಸ್ಮಾರಕದಲ್ಲಿ ವೀರನ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಅದೇ ದೇವಸ್ಥಾನದ ಬಲಭಾಗದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪವು ಅಪರೂಪದ್ದಾಗಿದೆ. ಈ ಸ್ಮಾರಕದ ಹೋರಾಟ ಹಂತದಲ್ಲಿ ಮೂವರು ವೀರರು ಬಿಲ್ಲು ಬಾಣಗಳನ್ನು ಹಿಡಿದು ಯುದ್ಧಸನ್ನದ್ದರಾಗಿರುವಂತೆ ಕಂಡರಿಸಲಾಗಿದೆ. ಇದೇ ಹಂತದ ಎಡಭಾಗದಲ್ಲಿ ಓರ್ವ ಶತ್ರು ನಿಂತಿರುವ ಚಿತ್ರಣವಿದೆ. ಈ ಸ್ಮಾರಕಶಿಲ್ಪದ ವಿಶೇಷತೆಯೆಂದರೆ ಹೋರಾಟದಲ್ಲಿ ಮಡಿದ ಮೂವರು ವೀರರಿಗೆ ಒಂದೇ ಸ್ಮಾರಕವನ್ನು ನೆಟ್ಟಿರುವುದು. ಇಂತಹ ಸ್ಮಾರಕಶಿಲ್ಪಗಳು ದೊರೆಯುವುದು ಅತಿ ವಿರಳವೆಂದೇ ಹೇಳಬಹುದು. ಇನ್ನೊಂದು ಸ್ಮಾರಕಶಿಲ್ಪದಲ್ಲಿ ದೃಢಕಾಯನಾಗಿರುವ ವೀರ ಕತ್ತಿ ಮತ್ತು ಗುರಾಣಿ ಹಿಡಿದಿರುವಂತೆ, ಶತ್ರುಗಳಿಬ್ಬರು ಬಿಲ್ಲು, ಕಡುಗತ್ತಿಯನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ದೇವಸ್ಥಾನದ ಬಲಭಾಗದಲ್ಲಿರುವ ಎರಡು ಸ್ಮಾರಕಶಿಲ್ಪಗಳನ್ನು ಒಬ್ಬನೇ ಶಿಲ್ಪಿ ಕಂಡರಿಸಿರುವುದು ಕಂಡುಬರುತ್ತದೆ. ಬಿಳಿಚೋಡು[೧೦೯] ಗ್ರಾಮದ ಈಶ್ವರ ದೇವಸ್ಥಾನದ ಮುಂದೆ ಕ್ರಿ.ಶ. ಸು. ೧೧ನೇ ಶತಮಾನದ ಒಂದು ಸ್ಮಾರಕಶಿಲ್ಪವಿದೆ. ಈ ಸ್ಮಾರಕದಲ್ಲಿ ವೀರನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಅವನು ಆಳೆತ್ತರದ ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿವನು. ತನ್ನ ಬಲಗಾಲನ್ನು ಶತ್ರುವೊಬ್ಬನ ಎದೆಯ ಮೇಲೆ ಇಟ್ಟು ತುಳಿಯುತ್ತಿದ್ದಾನೆ. ಶತ್ರುವು ತನ್ನ ಎರಡು ಕೈಗಳನ್ನು ಮೇಲಕ್ಕೆತ್ತಿ ತಪ್ಪಿಸಿಕೊಳ್ಳಲು ಪ್ರಯತ್ನಪಡುತ್ತಿರುವ ದೃಶ್ಯವಿದೆ. ಈ ದೃಷ್ಟಿಯಿಂದ ಸ್ಮಾರಕಶಿಲ್ಪವು ವಿಶೇಷವೆನಿಸಿದೆ. ಬಿಲ್ಲು ಬಾಣಗಳನ್ನು ಹಿಡಿದಿರುವ

ಶತ್ರು ಸೈನಿಕರು ವೀರನನ್ನು ಸುತ್ತುವರಿದಿರುವಂತೆ ಕಂಡರಿಸಲಾಗಿದೆ. ಅಶ್ವಾರೂಢನಾಗಿರುವ ಓರ್ವ ವ್ಯಕ್ತಿ ಶತ್ರುಪಡೆಯ ನಾಯಕನೆಂದು ತೋರುತ್ತದೆ. ದಿದ್ದಿಗಿ[೧೧೦] ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಆಳೆತ್ತರದ ಬಿಲ್ಲು ಹಿಡಿದು ಹೋರಾಡುವ ದೃಶ್ಯವಿದೆ. ಶತ್ರು ಸೈನಿಕರಿಬ್ಬರು ಬಿಲ್ಲುಗಳನ್ನು ಹಿಡಿದು ವೀರನಿಗೆ ಎದುರಾಗಿ ನಿಂತಿರುವಂತೆ ಕೆತ್ತಲಾಗಿದೆ. ಹೋರಾಟದಲ್ಲಿ ಮಡಿದಿರುವ ಒಬ್ಬನ ದೇಹವನ್ನು ವೀರನ ಕಾಲಬಳಿ ಕಂಡರಿಸಲಾಗಿದೆ.

ಹೊನ್ನಾಳಿ ತಾಲೂಕು ಹನಗವಾಡಿ ಗ್ರಾಮದ ಪಂಚಲಿಂಗೇಶ್ವರ ದೇವಸ್ಥಾನದ ಒಳಾವರಣದಲ್ಲಿ ಹೊಯ್ಸಳರ ಕಾಲದ ಮೂರು ಸ್ಮಾರಕಶಿಲ್ಪಗಳು ಕಂಡುಬಂದಿವೆ. ಸ್ಮಾರಕಶಿಲ್ಪಗಳಲ್ಲಿ ಭಿತ್ತರವಾಗಿರುವ ಘಟನೆಯ ಚಿತ್ರಣಗಳು ಆಕರ್ಷಕವಾಗಿ ಮೂಡಿಬಂದಿವೆ. ಸ್ಮಾರಕಗಳನ್ನು ಶಿಲ್ಪಿ ಒಬ್ಬನೇ ಚಿತ್ರಿಸಿರುವನೆಂದು ತೋರುತ್ತದೆ. ಒಂದು ಸ್ಮಾರಕಶಿಲ್ಪದಲ್ಲಿ ವೀರನು ಮಡಿದು ಬಿದ್ದಿರುವವನ ಬೆನ್ನ ಮೇಲೆ ಯುದ್ಧಸನ್ನದ್ಧನಾಗಿ ನಿಂತಿದ್ದಾನೆ. ಎಡಗೈಯಲ್ಲಿ ಗುರಾಣಿಯಿದ್ದು, ಬಲಗೈಯಲ್ಲಿರುವ ಕತ್ತಿಯಿಂದ ಶತ್ರುವೊಬ್ಬನ ಕತ್ತಿನ ಭಾಗಕ್ಕೆ ಇರಿದಿರುವಂತೆ ಚಿತ್ರಿಸಲಾಗಿದೆ. ಶತ್ರು ಸೈನಿಕರು ಇಬ್ಬರು ತಮ್ಮ ಕೈಯಲ್ಲಿರುವ ಆಯುಧಗಳನ್ನು ಕೆಳಗಿಳಿಸಿ, ಬಾಗಿ ವೀರನ ಮುಂದೆ ಶರಣಾಗತರಾಗಿರುವುದನ್ನು ಕಂಡರಿಸಲಾಗಿದೆ. ಈ ಸ್ಮಾರಕದಲ್ಲಿ ವೀರನ ಕೇಶವಿನ್ಯಾಸ ಭಿನ್ನವಾಗಿದೆ. ಸಾಮಾನ್ಯವಾಗಿ ಬಹುತೇಕ ಸ್ಮಾರಕಗಳಲ್ಲಿ ವೀರರು ನೆತ್ತಿಯ ಮೇಲೆ ಮುಡಿಯನ್ನು ಕಟ್ಟಿರುವುದು ಕಾಣುತ್ತೇವೆ. ಆದರೆ ಈ ಶಿಲ್ಪದಲ್ಲಿರುವ ವೀರ ತನ್ನ ಕೇಶವನ್ನು ಹಿಂದಕ್ಕೆ ಬಾಚಿಕೊಂಡಿರುವಂತೆ ಬಿಡಿಸಿರುವುದು ವಿಶೇಷವಾಗಿದೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಿಂದ ಹೋರಾಟವೊಂದರಲ್ಲಿ ವೀರರಿಬ್ಬರು ಮಡಿದಿರುವುದು ತಿಳಿದುಬರುತ್ತದೆ. ಸಮಾನಾಂತರ ನಿಲುವನ್ನು ಹೊಂದಿರುವ ಇಬ್ಬರು ವೀರರು ಆಳೆತ್ತರದ ಬಿಲ್ಲು ಮತ್ತು ಕತ್ತಿಗಳನ್ನು ಹಿಡಿದು ಯುದ್ಧಸನ್ನದ್ಧ ಭಂಗಿಯಲ್ಲಿರುವರು. ವೀರರು ಹಲವು ಶತ್ರು ಸೈನಿಕರನ್ನು ಕೊಂದಿರುವಂತೆ, ಮಡಿದು ಬಿದ್ದವರ ಕೇಶವು ನೆಲದ ಮೇಲೆ ಹರಡಿಕೊಂಡಿರುವಂತೆ ಶಿಲ್ಪಿ ಕೆತ್ತಿರುವುದು ವಿಶೇಷವೆನಿಸಿದೆ. ಇಬ್ಬರು ಶತ್ರುಗಳು ವೀರರ ಕಾಲುಗಳ ನಡುವೆ ಸೆರೆಯಾಗಿರುವುದು ಕಂಡುಬರುತ್ತದೆ. ಓರ್ವ ಶತ್ರು ಪ್ರಾಣಭಯದಿಂದ ಪಲಾಯನಗೈಯುತ್ತಲೇ ಹಿಂದಕ್ಕೆ ತಿರುಗಿ ನೋಡುತ್ತಿರುವಂತೆ ಚಿತ್ರಿಸಲಾಗಿದೆ. ವೀರರ ಉಡುಪು ಮತ್ತು ಆಭರಣಗಳು ಆಕರ್ಷಕವಾಗಿ ಮೂಡಿಬಂದಿವೆ. ಅಲ್ಲಿರುವ ಇನ್ನೊಂದು ಸ್ಮಾರಕದಲ್ಲಿ ವೀರನು ತನ್ನ ಎಡಗಾಲನ್ನು ಮಡಿದವನ ಎದೆಯ ಮೇಲಿಟ್ಟು, ಬಲಗೈಯಲ್ಲಿ ಹಿಡಿದಿರುವ ಭರ್ಚಿಯಿಂದ ಶತ್ರುವೊಬ್ಬನ ಬಲಗಾಲಿನ ತೊಡೆಯ ಭಾಗಕ್ಕೆ ತಿವಿದಿರುವಂತೆ(ಚುಚ್ಚಿರುವಂತೆ) ಕೆತ್ತಲಾಗಿದೆ. ಆ ದೃಶ್ಯವನ್ನು ಕಂಡ ಒಬ್ಬ ಶತ್ರು ಸೈನಿಕ ಭಯಗೊಂಡು ನಿಂತಿರುವನು, ಮತ್ತೊಬ್ಬ ಗುರಾಣಿ ಮತ್ತು ಕತ್ತಿಯನ್ನು ಬಲಗೈ ಕೆಳಗೆ ಇಟ್ಟುಕೊಂಡು ಓಡುತ್ತಿರುವಂತೆ ನಿರೂಪಿಸಲಾಗಿದೆ. ಈ ದೃಷ್ಟಿಯಿಂದ ಈ ಸ್ಮಾರಕಶಿಲ್ಪವು ಅಪರೂಪದ್ದೆನಿಸುತ್ತದೆ. ಮೇಲಿನ ಎರಡು ಸ್ಮಾರಕಶಿಲ್ಪಗಳ ಬಲಭಾಗದ ಅಂಚಿಪಟ್ಟಿಯಲ್ಲಿ ಕಂಬದ ಮೇಲೆ ಪಕ್ಷಿಯೊಂದು ಕುಳಿತಿದೆ. ಪ್ರಾಯಶಃ ಸತ್ತವರ ಹೆಣಗಳ ಮಾಂಸವನ್ನು ತಿನ್ನಲು ಕಾದು ಕುಳಿತಿರುವಂತೆ ಕಂಡರಿಸಲಾಗಿದೆ. ಈ ದೃಶ್ಯವು ಯುದ್ಧದ ಭೀಕರತೆಯನ್ನು ಧ್ವನಿಸುತ್ತದೆ.

ಕ್ರಿ.ಶ. ಸು. ೧೩ನೇ ಶತಮಾನಕ್ಕೆ ಸೇರಿದ ಎರಡು ಸ್ಮಾರಕಶಿಲ್ಪಗಳು ಕುಳಗಟ್ಟೆ ಗ್ರಾಮದ ಈಶ್ವರ ದೇವಸ್ಥಾನದ ಬಳಿ ಕಂಡುಬಂದಿವೆ. ಒಂದು ಸ್ಮಾರಕಶಿಲ್ಪದಲ್ಲಿ ವೀರನು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು, ಅಶ್ವಾರೂಢನಾಗಿದ್ದ ಶತ್ರುವನ್ನು ನೆಲಕ್ಕೆ ಉರುಳಿಸಿದ್ದಾನೆ. ಮತ್ತೊಬ್ಬ ಸೈನಿಕ ವೀರನ ಕಾಲುಗಳ ಕೆಳಗೆ ಬಂದಿಯಾಗಿರುವಂತೆ ಕೆತ್ತಲಾಗಿದೆ. ವೀರನಿಗೆ ಸೇವಕನೊಬ್ಬ ಛತ್ರಿ ಹಿಡಿದಿದ್ದಾನೆ. ಇದರಿಂದ ವೀರನು ರಾಜಪ್ರಮುಖನೆಂದು ಸಾಂಕೇತಿಕವಾಗಿ ತಿಳಿದುಬರುತ್ತದೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಕುದುರೆ ಮೇಲೆ ಕುಳಿತು ಭರ್ಚಿಯನ್ನು ಹಿಡಿದಿದ್ದಾನೆ. ದೃಢಕಾಯ ದೇಹವನ್ನು ಹೊಂದಿರುವ ಇಬ್ಬರು ಶತ್ರುಗಳು ಗುರಾಣಿ ಮತ್ತು ಭರ್ಚಿಗಳನ್ನು ಹಿಡಿದು ವೀರನಿಗೆ ಅಭಿಮುಖವಾಗಿ ನಿಂತಿರುವಂತೆ ಚಿತ್ರಿಸಲಾಗಿದೆ. ಚೀಲೂರು ಗ್ರಾಮದ ಈಶ್ವರ ದೇವಸ್ಥಾನ ಬಳಿಯಿರುವ ತ್ರುಟಿತಗೊಂಡಿರುವ ಸ್ಮಾರಕದಲ್ಲಿ ಹೋರಾಟದ ಚಿತ್ರಣವಷ್ಟೇ ಕಂಡುಬರುವುದು. ಸಾಲಂಕೃತಗೊಂಡಿರುವ ವೀರನು ಗುರಾಣಿ ಮತ್ತು ಕತ್ತಿ ಹಿಡಿದು ಯುದ್ಧಸನ್ನದ್ಧನಾಗಿರುವನು. ಅವನ ಸುತ್ತಲೂ ಶತ್ರು ಸೈನ್ಯದ ಅಶ್ವಪಡೆ ಸುತ್ತುವರಿದಿರುವಂತೆ ಕಂಡರಿಸಲಾಗಿದೆ. ಅಶ್ವಾರೂಢರಾಗಿರುವ ಸೈನಿಕರು ಕತ್ತಿ ಮತ್ತು ಭರ್ಚಿಗಳನ್ನು ಹಿಡಿದಿರುವುದು ಕಂಡುಬರುತ್ತದೆ. ಓರ್ವ ಶತ್ರು ಸೈನಿಕ ಮುಖವನ್ನು ಕೆಳಗೆ ಮಾಡಿ ವೀರನ ಕಾಲುಗಳ ಮುಂದೆ ಬಿದ್ದಿರುವ ಚಿತ್ರಣವಿದೆ. ಅವನ ಕೇಶವು ಹರಡಿಕೊಂಡಿರುವಂತೆ ತೋರಿಸಲಾಗಿದೆ.

ಹರಪನಹಳ್ಳಿ ತಾಲೂಕು ಅಣಜಿಗೆರೆ ಗ್ರಾಮದ ಮಠದ ಮಂಜಯ್ಯನ ಹೊಲದಲ್ಲಿ ಹೊಯ್ಸಳರ ಒಂದು ಸ್ಮಾರಕಶಿಲ್ಪವಿದೆ. ಆ ಸ್ಮಾರಕದಲ್ಲಿ ವೀರನು ತನ್ನ ಅಶ್ವಪಡೆಯೊಂದಿಗೆ ಶತ್ರುಗಳ ಸೈನ್ಯದ ವಿರುದ್ಧ ಹೋರಾಡುತ್ತಿರುವ ಹಾಗೆ ಕಂಡರಿಸಲಾಗಿದೆ. ವೀರನು ಉದ್ದನೆಯ ಭರ್ಚಿಯನ್ನು, ಅವನ ಸೈನಿಕರಿಬ್ಬರು ಕತ್ತಿಗಳನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಶತ್ರು ಸೈನ್ಯದ ಮೂವರು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಒಬ್ಬರ ಹಿಂದೆ ಒಬ್ಬರು ಸಾಲಾಗಿ ನಿಂತಿರುವಂತೆ ಕೆತ್ತಲಾಗಿದೆ. ಎರಡು ಸೈನ್ಯಪಡೆಯ ಹಿಂಬದಿಯಲ್ಲಿ ಸೇವಕರಿಬ್ಬರು ರಾಜ ಛತ್ರಿಗಳನ್ನು ಹಿಡಿದಿದ್ದಾರೆ. ಈ ಚಿತ್ರಣವು ಇಬ್ಬರು ಪ್ರಮುಖ ನಾಯಕರ ನಡುವೆ ನಡೆದಿರುವ ಹೋರಾಟವನ್ನು ಸಂಕೇತಿಸುತ್ತದೆ. ಸ್ಮಾರಕದಲ್ಲಿ ಶಿಲ್ಪಿಯ ಕುಸುರಿ ಕೆತ್ತನೆ ಎದ್ದು ಕಾಣುತ್ತದೆ. ಚಿಗಟೇರಿ ರಾಮಲಿಂಗೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಹೊಯ್ಸಳರ ಕಾಲದ ಮೂರು ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ಆ ಸ್ಮಾರಕಗಳಲ್ಲಿರುವ ಹೋರಾಟದ ದೃಶ್ಯಗಳು ಭೂಮಿಯಲ್ಲಿ ಉಳಪಟ್ಟಿದರಿಂದ ಅವುಗಳನ್ನು ಗ್ರಹಿಸಲು ತೊಡಕಾಗಿದೆ. ದಾವಣಗೆರೆ ತಾಲೂಕು ಗಂಗನಕಟ್ಟೆ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಬಾಕುವಿನಿಂದ ಶತ್ರುವೊಬ್ಬನ ಶಿರ ಭಾಗಕ್ಕೆ ಚುಚ್ಚಿದ್ದಾನೆ. ಶತ್ರು ಶಿರವನ್ನು ಬಾಗಿಸಿಯೇ ಬಲಗೈ ಹಿಡಿದಿರುವ ಕತ್ತಿಯಿಂದ ಪ್ರತಿರೋಧ ಒಡ್ಡುತ್ತಿರುವ ದೃಶ್ಯವಿದೆ. ಅವನ ಹಿಂಬದಿಯಲ್ಲಿರುವ ಇಬ್ಬರು ಸೈನಿಕರು ಕತ್ತಿ ಮತ್ತು ಗುರಾಣಿ ಹಿಡಿದಿದ್ದಾರೆ. ವೀರನ ಕಡೆಯ ಸೈನಿಕರಿಬ್ಬರು ಎಲೆಭರ್ಚಿಗಳನ್ನು ಹಿಡಿದಿರುವುದನ್ನು ಕಂಡರಿಸಲಾಗಿದೆ. ಇಲ್ಲಿ ವೀರನು ಕುದುರೆ ಮೇಲೆ ಬಂದು ಕೆಳಗಿಳಿದು ಹೋರಾಡುತ್ತಿರುವ ಹಾಗೆ ತೋರಿಸಲಾಗಿದೆ.

ದಾವಣಗೆರೆ ತಾಲೂಕು ಎಲೆಬೇತೂರು ಗ್ರಾಮದ ಕಲ್ಲೇಶ್ವರ ದೇವಸ್ಥಾನ ಸಭಾಮಂಟಪದಲ್ಲಿ ಯಾದವರ ಕಾಲದ ಮೂರು ಸ್ಮಾರಕಶಿಲ್ಪಗಳು ಕಂಡುಬಂದಿವೆ. ಒಂದು ಸ್ಮಾರಕದಲ್ಲಿ ವೀರನು ಕಡುಗತ್ತಿ ಹಿಡಿದು ಶತ್ರುವೊಬ್ಬನಿಗೆ ಹೊಡೆಯಲು ಮುಂದಾಗಿರುವ ದೃಶ್ಯವಿದೆ. ದಾಳಿಯಿಂದ ತಪ್ಪಿಸಿಕೊಳ್ಳಲು ಶತ್ರು ಹಿಂದಕ್ಕೆ ಬಾಗಿ ಎರಡು ಕೈಗಳನ್ನು ಅಡ್ಡವಾಗಿ ಹಿಡಿದಿರುವಂತೆ ಕೆತ್ತಲಾಗಿದೆ. ಸ್ಮಾರಕದ ಬಲಭಾಗದಲ್ಲಿ ನಿಂತು ವೀರನು ಹೋರಾಡುವಂತೆ ಚಿತ್ರಿಸುವುದು ಸಾಮಾನ್ಯವಾಗಿರುತ್ತದೆ. ಆದರೆ ಈ ಸ್ಮಾರಕದಲ್ಲಿ ವೀರ ಎಡಭಾಗದಲ್ಲಿ ನಿಂತು ಹೋರಾಡುವುದನ್ನು ಚಿತ್ರಿಸಲಾಗಿದೆ. ಅದೇ ಸ್ಥಳದಲ್ಲಿರುವ ಇನ್ನೊಂದು ಸ್ಮಾರಕಶಿಲ್ಪವನ್ನು ಶಿಲ್ಪಿ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಆ ಸ್ಮಾರಕದಲ್ಲಿ ಹೋರಾಟದ ದೃಶ್ಯವನ್ನು ಎರಡು ಹಂತದಲ್ಲಿ ನಿರೂಪಿಸಲಾಗಿದೆ. ಮೊದಲ ಹಂತದಲ್ಲಿ ಅಶ್ವಾರೂಢರಾಗಿರುವ ಎರಡು ಗುಂಪಿನ ನಾಯಕರನ್ನು ಪ್ರಧಾನವಾಗಿ ಕಂಡರಿಸಲಾಗಿದೆ. ಅವರ ಹಿಂದೆ ಅಶ್ವಾರೂಢ ಸೈನಿಕ ಪಡೆ ಇರುವುದನ್ನು ತೋರಿಸಲಾಗಿದೆ. ವೀರನ ಕುದುರೆಯು ಶತ್ರುವಿನ ದಾಳಿಗೆ ಮುಖವನ್ನು ಹಿಂದಕ್ಕೆ ತಿರುಗಿಸಿಕೊಂಡಿರುವ ಹಾಗೆ ಕೆತ್ತಲಾಗಿದೆ. ಈ ದೃಶ್ಯ ಶತ್ರುಪಡೆಯು ವೀರನನ್ನು ಸಮರ್ಥವಾಗಿ ಎದುರಿಸಿತು ಎನ್ನುವ ಅರ್ಥದಲ್ಲಿ ಆ ರೀತಿ ಚಿತ್ರಿಸಿರುವುದುಂಟು. ಹೋರಾಟದ ದಾಳಿಗೆ ಹಲವರು ಬಲಿಯಾಗಿರುವ ದೃಶ್ಯವಿದೆ. ಎರಡನೇ ಹಂತದಲ್ಲಿಯೂ ಎರಡು ಗುಂಪಿನ ನಾಯಕರು ಅಶ್ವಪಡೆಗಳೊಂದಿಗೆ ಹೋರಾಡುತ್ತಿರುವಂತೆ ಕಂಡರಿಸಲಾಗಿದೆ. ಈ ಹಂತದಲ್ಲಿ ವೀರನು ಶತ್ರುಪಡೆಯನ್ನು ಸೋಲಿಸುವಲ್ಲಿ ಯಶಸ್ವಿಯಾದನೆಂಬ ಅರ್ಥದಲ್ಲಿ ಶಿಲ್ಪಿ ನಿರೂಪಿಸಿರುವುದು ಕಂಡುಬರುತ್ತದೆ. ಇಲ್ಲಿಯೂ ಹೋರಾಟದ ದಾಳಿಗೆ ಹಲವರು ಬಲಿಯಾಗಿರುವಂತೆ, ಅವರ ಕೇಶವು ನೆಲದ ಮೇಲೆ ಹರಡಿಕೊಂಡಿರುವಂತೆ ಚಿತ್ರಿಸಲಾಗಿದೆ. ಎರಡು ಹಂತಗಳಲ್ಲಿ ಚಿತ್ರಿತಗೊಂಡಿರುವ ವೀರ ಹಾಗೂ ಸೈನಿಕರ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಅಲ್ಲಿಯೇ ಇರುವ ಇನ್ನೊಂದು ಸ್ಮಾರಕಶಿಲ್ಪದಲ್ಲಿ ಬಿಲ್ಲು ಮತ್ತು ಬಾಣವನ್ನು ಹಿಡಿದಿರುವ ವೀರ ಕುದುರೆ ಮೇಲೆ ಕುಳಿತಿರುವ ಸೈನಿಕರನ್ನು ಎದುರಿಸುತ್ತಿರುವ ಚಿತ್ರಣವಿದೆ. ಚನ್ನಗಿರಿ ತಾಲೂಕು ಗೊಪ್ಪೇನಹಳ್ಳಿ ವೀರಭದ್ರೇಶ್ವರ ದೇವಸ್ಥಾನದ ಪ್ರವೇಶದ್ವಾರದ ಎರಡು ಬದಿಯಲ್ಲಿ ಕ್ರಿ.ಶ.ಸು. ೧೨ನೇ ಶತಮಾನದ ಎರಡು ಸ್ಮಾರಕಶಿಲ್ಪಗಳಿವೆ. ಈ ಸ್ಮಾರಕಗಳಲ್ಲಿರುವ ಹೋರಾಟ ದೃಶ್ಯದ ಭಾಗವು ಭೂಮಿಯಲ್ಲಿ ಹೂಳಲ್ಪಟ್ಟಿರುವುದರಿಂದ ಆ ಶಿಲ್ಪಗಳ ವಿವರಗಳನ್ನು ಗ್ರಹಿಸಲು ತೊಡಕಾಗಿದೆ.

ಹರಪನಹಳ್ಳಿ ತಾಲೂಕು ಹಲುವಾಗಲು ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಯಾದವರ ಕಾಲದ ಎರಡು ಸ್ಮಾರಕಶಿಲ್ಪಗಳಿವೆ. ಈ ಸ್ಮಾರಕಗಳನ್ನು ಶಿಲ್ಪಿ ತುಂಬ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಒಂದು ಸ್ಮಾರಕದಲ್ಲಿ ಕುದುರೆ ಮೇಲೆ ಕುಳಿತಿರುವ ಮೂವರು ವೀರರು ಶತ್ರು ಸೈನ್ಯದೊಂದಿಗೆ ಯುದ್ಧ ಮಾಡುತ್ತಿರುವ ಚಿತ್ರಣವಿದೆ. ವೀರರ ಕೈಯಲ್ಲಿ ಕತ್ತಿಗಳಿವೆ. ಶತ್ರು ಸೈನ್ಯ ತಂಡೋಪತಂಡವಾಗಿ ಯುದ್ಧ ಮಾಡಲು ನಿಂತಿರುವ ಹಾಗೆ ಕೆತ್ತಲಾಗಿದೆ. ಮೊದಲ ಸಾಲಿನಲ್ಲಿ ಪದಾತಿದಳದ ಸೈನಿಕರು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ನಿಂತಿದ್ದರೆ, ಅವರ

ಹಿಂಬದಿಯಲ್ಲಿರುವ ಅಶ್ವಪಡೆಯ ಸೈನಿಕರನ್ನು ಕಂಡರಿಸಲಾಗಿದೆ. ಹೋರಾಟ ದೃಶ್ಯದ ಕೆಳಭಾಗದಲ್ಲಿ ಒಬ್ಬನು ರಣಕಹಳೆಯನ್ನು ಊದುತ್ತಿದ್ದು, ಅವನ ಹಿಂದೆ ಯುದ್ಧ ವಾದ್ಯಗಳನ್ನು ನುಡಿಸುತ್ತಿರುವವರನ್ನು ಚಿತ್ರಿಸಲಾಗಿದೆ. ಈ ಚಿತ್ರಣ ಯುದ್ಧದ ಭೀಕರತೆಯನ್ನು ಧ್ವನಿಸುತ್ತದೆ. ಸ್ಮಾರಕದಲ್ಲಿ ಎರಡು ಸೈನ್ಯಗಳ ಹಿಂದೆ ಸೇವಕರಿಬ್ಬರು ರಾಜಛತ್ರಿಗಳನ್ನು ಹಿಡಿದಿರುವುದು ಕಂಡುಬರುತ್ತದೆ.[೧೧೧] ಇದರಿಂದ ಹೋರಾಟವು ಎರಡು ಪ್ರಮುಖ ರಾಜವಂಶಗಳ ಮಧ್ಯೆ ನಡೆದಿರುವುದು ಕಂಡುಬರುತ್ತದೆ. ಹೋರಾಡಿ ಮಡಿದ ಮೂವರು ವೀರರನ್ನು ಒಂದೇ ಸ್ಮಾರಕದಲ್ಲಿ ಚಿತ್ರಿಸಿರುವುದು ವಿಶೇಷವಾಗಿದೆ. ಮೂವರು ವೀರರಿಗಾಗಿ ನೆಟ್ಟಂತಹ ಸ್ಮಾರಕಶಿಲ್ಪಗಳು ಅಪರೂಪವಾಗಿ ದೊರೆಯುತ್ತವೆ. ಅದೇ ಸ್ಥಳದಲ್ಲಿರುವ ಇನ್ನೊಂದು ಸ್ಮಾರಕಶಿಲ್ಪದಲ್ಲಿ ಎರಡು ಗುಂಪಿನ ಮಧ್ಯೆ ನಡೆಯುತ್ತಿರುವ ಭೀಕರ ಹೋರಾಟವನ್ನು ಚಿತ್ರಿಸಲಾಗಿದೆ. ಅಶ್ವಾರೂಢರಾಗಿರುವ ವೀರರಿಬ್ಬರು ಕುದುರೆಗಳನ್ನು ಹಾರಿಸುತ್ತಿರುವಂತೆ ಅಭಿಮುಖವಾಗಿ ಕೆತ್ತಲಾಗಿದೆ. ವೀರನ ದಾಳಿಗೆ ಶತ್ರುಪಡೆ ನಾಯಕನ ಕುದುರೆ ತನ್ನ ಮುಖವನ್ನು ಹಿಂದಕ್ಕೆ ತಿರುಗಿಸಿದೆ. ಇದು ಶತ್ರುಸೇನೆ ಸೋತಿತು ಎಂಬುದನ್ನು ಸಂಕೇತಿಸುತ್ತಿರಬಹುದು. ವೀರರ ಹಿಂಬದಿಯಲ್ಲಿ ಎರಡೂ ಸೈನ್ಯದ ಸೈನಿಕರು ಭರ್ಚಿಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಸ್ಮಾರಕದ ಕೆಳಭಾಗದಲ್ಲಿ ಹೋರಾಟದ ಕೆಲವರು ಬಲಿಯಾಗಿರುವ ಚಿತ್ರಣವಿದೆ. ಒಬ್ಬನು ಕುದುರೆ ಜೊತೆಯಲ್ಲಿಯೇ ನೆಲಕ್ಕೆ ಉರುಳಿರುವಂತೆ ಚಿತ್ರಿಸಿರುವುದು ಸ್ಮಾರಕಶಿಲ್ಪದ ವಿಶೇಷವೆನಿಸಿದೆ.[೧೧೨] ಎರಡು ಸ್ಮಾರಕಗಳಲ್ಲಿರುವ ವೀರರ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಈ ಸ್ಮಾರಕಶಿಲ್ಪಗಳನ್ನು ಒಬ್ಬನೇ ಶಿಲ್ಪಿ ಕಂಡರಿಸಿರುವನೆಂದು ತೋರುತ್ತದೆ.

ಹರಿಹರ ತಾಲೂಕು ಚಿಕ್ಕಬಿದಿರೆ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಬಳಿ ಯಾದವರ ಕಾಲದ ಮೂರು ಸ್ಮಾರಕಶಿಲ್ಪಗಳಿವೆ. ಐದು ಹಂತದಲ್ಲಿರುವ ಒಂದು ಸ್ಮಾರಕದಲ್ಲಿ ಹೋರಾಟದ ದೃಶ್ಯವನ್ನು ಎರಡು ಹಂತಗಳಲ್ಲಿ ನಿರೂಪಿಸಲಾಗಿದೆ. ಮೊದಲ ಹಂತದಲ್ಲಿ ವೀರರಿಬ್ಬರು ಅಲಂಕರಿಸಿದ ಬಿಲ್ಲುಗಳನ್ನು ಹಿಡಿದು ಅಭಿಮುಖವಾಗಿ ನಿಂತಿದ್ದಾರೆ. ಎರಡು ಗುಂಪಿನ ಸೈನಿಕರು ಎಲೆಭರ್ಚಿ ಮತ್ತು ಕಡುಗತ್ತಿಯನ್ನು ಹಿಡಿದಿರುವಂತೆ ಕೆತ್ತಲಾಗಿದೆ. ಎರಡನೇ ಹಂತದಲ್ಲಿ ವೀರ ಹಾಗೂ ಅವನಿಗೆ ಎದುರಾಗಿ ಇಬ್ಬರು ಸೈನಿಕರು ಅಶ್ವಾರೂಢರಾಗಿರುವಂತೆ ಕಂಡರಿಸಲಾಗಿದೆ. ಕುದುರೆಗಳು ಹೋರಾಟದಲ್ಲಿ ಮಡಿದವರ ದೇಹದ ಮೇಲೆ ನಿಂತಿರುವಂತೆ ಚಿತ್ರಿಸಿರುವುದು ವಿಶೇಷವೆನಿಸಿದೆ. ಎರಡೂ ಹಂತಗಳಲ್ಲಿ ಚಿತ್ರಿತಗೊಂಡಿರುವ ವೀರ ಹಾಗೂ ಶತ್ರುಸೈನಿಕರು ಧರಿಸಿರುವ ಉಡುಪು, ಆಭರಣ ಮತ್ತು ಕೇಶಾಲಂಕಾರದ ವಿನ್ಯಾಸ ಆಕರ್ಷಕವಾಗಿ ಮೂಡಿಬಂದಿವೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಹೋರಾಡುತ್ತಿರುವುದನ್ನು ಒಂದೇ ಹಂತದಲ್ಲಿ ಎರಡು ಬಗೆಯಲ್ಲಿ ಚಿತ್ರಿಸಲಾಗಿದೆ. ಕೆಳಭಾಗದಲ್ಲಿ ವೀರನು ಭರ್ಚಿಯನ್ನು ಹಿಡಿದು ನಿಂತಿರುವನು, ಅವನ ಮುಂದೆ ಕತ್ತಿ ಮತ್ತು ಗುರಾಣಿಯನ್ನು ಹಿಡಿದಿರುವ ಓರ್ವ ಶತ್ರು ಎಡಗಾಲು ಮಂಡಿಯನ್ನು ಊರಿ ಶರಣಾಗತನಾಗಿರುವ ಹಾಗೆ ಕೆತ್ತಲಾಗಿದೆ. ಮೇಲ್ಭಾಗದಲ್ಲಿ

ಕತ್ತಿ ಮತ್ತು ಬಾಕು ಹಿಡಿದಿರುವ ವೀರ ಯುದ್ಧಸನ್ನದ್ಧನಾಗಿರುವಂತೆ, ಅವನ ಮುಂದೆ ಒಬ್ಬ ಶತ್ರು ಭಯಗೊಂಡು ನಿಂತಿರುವ ಚಿತ್ರಣವಿದೆ. ಈ ಸ್ಮಾರಕದ ಒಂದೇ ಹಂತದಲ್ಲಿ ವೀರನ ಹೋರಾಟವನ್ನು ಎರಡು ರೀತಿಯಲ್ಲಿ ಕೆತ್ತಿಸುವುದರಿಂದ ಸ್ಮಾರಕಶಿಲ್ಪವು ಭಿನ್ನವೆನಿಸಿಕೊಳ್ಳುತ್ತದೆ. ಅದೇ ಸ್ಥಳದಲ್ಲಿರುವ ಇನ್ನೊಂದು ಸ್ಮಾರಕದಲ್ಲಿ ಹೋರಾಟವನ್ನು ಎರಡು ಹಂತಗಳಲ್ಲಿ ಕೆತ್ತಲಾಗಿದೆ. ಮೊದಲ ಪಟ್ಟಿಯಲ್ಲಿ ಶತ್ರುಗಳ ಅಶ್ವಪಡೆ ವೀರರನ್ನು ಸುತ್ತುವರಿದಿದೆ. ವೀರನು ಎಡಗೈಯಲ್ಲಿ ಭರ್ಚಿ ಹಿಡಿದು, ಬಲಗೈಯಿಂದ ಶತ್ರುವೊಬ್ಬನ ಕುದುರೆಯನ್ನು ನೆಲಕ್ಕೆ ಉರುಳಿಸಲು ಯತ್ನಿಸುತ್ತಿರುವ ದೃಶ್ಯವಿದೆ. ವೀರನ ಕಾಲುಗಳ ಬಳಿ ಮಡಿದಿರುವ ಇಬ್ಬರ ಹೆಣಗಳಿವೆ. ಎರಡನೇ ಪಟ್ಟಿಯಲ್ಲಿ ವೀರನು ಉದ್ದನೆಯ ಭರ್ಚಿಯಿಂದ ಒಬ್ಬ ಶತ್ರುವಿನ ಹೊಟ್ಟೆಯ ಭಾಗಕ್ಕೆ ಇರಿದಿದ್ದು, ಅದು ಬೆನ್ನ ಹಿಂದೆ ಹಾದು ಬಂದಿರುವಂತೆ ಕಂಡರಿಸಿದೆ. ಈ ಹಂತದ ಬಲಭಾಗದ ಹಂಚಿನಲ್ಲಿ ಪಕ್ಷಿಯೊಂದು ಕುಳಿತಿರುವಂತೆ ಕೆತ್ತಲಾಗಿದೆ. ಇದು ಯುದ್ಧದ ಸಾವು ನೋವುಗಳನ್ನು ಸಂಕೇತಿಸುತ್ತದೆ.

ವಿಜಯನಗರ ಕಾಲಾವಧಿಯಲ್ಲಿ ಹೋರಾಟದಲ್ಲಿ ಮಡಿದ ವೀರರ ಸ್ಮಾರಕಶಿಲ್ಪಗಳು ಪ್ರಸ್ತುತ ಅಧ್ಯಯನ ಪ್ರದೇಶದ ಬಹುಸಂಖ್ಯೆಯ ಗ್ರಾಮಗಳಲ್ಲಿ ಕಂಡುಬಂದಿವೆ. ಅವರ ಕಾಲದ ಹಲವು ಸ್ಮಾರಕಶಿಲ್ಪಗಳು ಏಕ ವ್ಯಕ್ತಿ ಮಾದರಿಯುಳ್ಳವಾಗಿವೆ. ಇಂತಹ ಶಿಲ್ಪಗಳಲ್ಲಿ ಶತ್ರು ಅಥವಾ ಶತ್ರು ಸೈನ್ಯವನ್ನು ಚಿತ್ರಿಸಿರುವುದಿಲ್ಲ. ಬೆರಳೆಣಿಕೆಯ ಸ್ಮಾರಕಗಳಲ್ಲಿ ಮಾತ್ರ ವೀರನು ಶತ್ರುಪಡೆಯೊಂದಿಗೆ ಹೋರಾಡುತ್ತಿರುವಂತಹ ಚಿತ್ರಿಸಿರುವ ಉದಾಹರಣೆಗಳಿವೆ. ಆದರೆ ಹೆಚ್ಚಿನ ಸಂಖ್ಯೆಯ ಸ್ಮಾರಕಗಳಲ್ಲಿ ವೀರನು ಬಿಲ್ಲನ್ನೋ, ಕತ್ತಿಯನ್ನೋ, ಕೋವಿಯನ್ನೋ ಇಲ್ಲವೇ ಕುದುರೆ ಮೇಲೆ ಕುಳಿತಿರುವಂತೆಯೂ ಚಿತ್ರಿಸಿರುವುದುಂಟು. ಇಲ್ಲಿ ಎದುರಾಳಿಗಳನ್ನು ಚಿತ್ರಿಸದಿದ್ದರೂ ಸಹ ಆ ವೀರನು ಯಾವುದೋ ಒಂದು ಹೋರಾಟದಲ್ಲಿ ಮಡಿದಿರುವುದನ್ನು ಧ್ವನಿಸುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ಅವರ ಕಾಲದ ಸ್ಮಾರಕ ಶಿಲ್ಪಗಳನ್ನು ಈ ಕೆಳಕಂಡಂತೆ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಮೂರು ಹಂತಗಳಲ್ಲಿರುವ ಸ್ಮಾರಕ ಶಿಲ್ಪಗಳು**

ದಾವಣಗೆರೆ ತಾಲೂಕು ಮಾಯಕೊಂಡ ಗ್ರಾಮದ ಸರ್ವೇಶ್ವರ ದೇವಸ್ಥಾನದಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಅಲಂಕಾರವಿರುವ ಬಿಲ್ಲು ಮತ್ತು ಬಾಣವನ್ನು ಹಿಡಿದು ಯುದ್ಧ ಸನ್ನದ್ಧನಾಗಿರುವನು. ವೀರನಿಗೆ ಅಭಿಮುಖವಾಗಿ ನಿಂತಿರುವ ಶತ್ರುಗಳಿಬ್ಬರು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದುಕೊಂಡಿರುವ ಹಾಗೆ ಕೆತ್ತಲಾಗಿದೆ. ವೀರನ ಹಿಂಬದಿಯಲ್ಲಿ ನಿಂತಿರುವ ಅವನ ಸೈನಿಕನೊಬ್ಬ ಕತ್ತಿ ಹಿಡಿದು ನಿಂತಿರುವ ಚಿತ್ರಣವಿದೆ. ಕೋಲ್ಕುಂಟೆ ಆಂಜನೇಯ ದೇವಸ್ಥಾನದ ಮುಂಭಾಗದಲ್ಲಿರುವ ಸ್ಮಾರಕಶಿಲ್ಪದಲ್ಲಿ ವೀರನು ಆಳೆತ್ತರದ ಬಿಲ್ಲು ಹಿಡಿದು ಶತ್ರುವೊಬ್ಬನನ್ನು ಕಾಲುಗಳಿಂದ ತುಳಿಯುತ್ತಿರುವ ದೃಶ್ಯವಿದೆ. ಓರ್ವ ಶತ್ರುವು ಭಯಗೊಂಡು ನಿಂತಿರುವುದು ಕಂಡುಬರುತ್ತದೆ. ಹರಿಹರ ತಾಲೂಕು ಹಿರೇಹಾಲಿವಣ ಗ್ರಾಮದಲ್ಲಿ ಕಂಡುಬರುವ

ಒಂದು ಸ್ಮಾರಕಶಿಲ್ಪದಲ್ಲಿ ವೀರನ ಹೋರಾಟದ ದೃಶ್ಯವನ್ನು ಶಿಲ್ಪಿ ಕೇವಲ ಒಂದು ಅಡಿ ಶಿಲೆಯಲ್ಲಿ ಮೂರು ಹಂತದಲ್ಲಿ ಚಿತ್ರಿಸಿದ್ದಾನೆ. ಕೆಳ ಹಂತದಲ್ಲಿ ಬಿಲ್ಲು ಹಿಡಿದು ನಿಂತಿರುವ ವೀರನಿಗೆ ಅಭಿಮುಖವಾಗಿ ಶತ್ರುವೊಬ್ಬ ಭರ್ಚಿಯನ್ನು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ. ಮೇಲಿನ ಹಂತದಲ್ಲಿ ವೀರನು ಅಪ್ಸರೆಯರೊಂದಿಗೆ ಸ್ವರ್ಗಾರೋಹಣ ಮಾಡುತ್ತಿರುವ ದೃಶ್ಯವಿದೆ. ಈ ಸ್ಮಾರಕದ ಹಿನ್ನೆಲೆಯಲ್ಲಿ ನೋಡಿದಾಗ ವಿಜಯನಗರ ಕಾಲದಲ್ಲಿ ಸ್ಮಾರಕಶಿಲ್ಪಗಳನ್ನು ಮೂರು ಹಂತಗಳಲ್ಲಿ ಚಿತ್ರಿಸುವುದನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿಲ್ಲವೆಂಬುದು ತಿಳಿಯುತ್ತದೆ. ಎಳೆಹೊಳೆ[೧೧೩] ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಹಿಂಬದಿಯಲ್ಲಿ ಮೂರು ಹಂತವಿರುವ ಒಂದು ಸ್ಮಾರಕವಿದೆ. ಈ ಸ್ಮಾರಕದ ಮೊದಲ ಹಂತದಲ್ಲಿ ಎತ್ತರದ ನಿಲುವನ್ನು ಹೊಂದಿರುವ ವೀರನು ಶತ್ರುಪಡೆಯೊಂದಿಗೆ ಹೋರಾಡುವ ಚಿತ್ರಣವಿದೆ. ಶಿಲ್ಪ ಅಸ್ಪಷ್ಟವಾಗಿರುವುದರಿಂದ ಆಯುಧಗಳನ್ನು ಗುರುತಿಸಲು ಅಸಾಧ್ಯವಾಗಿದೆ. ಮೇಲಿನ ಹಂತಗಳಲ್ಲಿ ಸ್ವರ್ಗಾರೋಹಣ ಮತ್ತು ಸ್ವರ್ಗದ ಚಿತ್ರಣಗಳನ್ನು ಕಂಡರಿಸಲಾಗಿದೆ. ಜಗಲೂರು ತಾಲೂಕು ಅಣಬೂರು ಗ್ರಾಮದ ಸ್ಮಾರಕ ಶಿಲ್ಪವು ಮೂರು ಹಂತದಲ್ಲಿ ಚಿತ್ರಣಗೊಂಡಿದೆ. ಕೆಳಹಂತದಲ್ಲಿ ಕುದುರೆ ಮೇಲೆ ಕುಳಿತಿರುವ ವೀರನು ಭರ್ಚಿಯನ್ನು ಹಿಡಿದಿರುವಂತೆ ಕಂಡರಿಸಲಾಗಿದೆ. ಎರಡನೇ ದೃಶ್ಯದಲ್ಲಿ ವೀರ ತನ್ನ ಸತಿಯೊಂದಿಗೆ ಸ್ವರ್ಗಾರೋಹಣ ಮಾಡುತ್ತಿರುವ ದೃಶ್ಯವಿದ್ದರೆ, ಕೊನೆಯ ಹಂತದಲ್ಲಿ ಶಿವಲಿಂಗ, ನಂದಿ ಹಾಗೂ ಸೂರ್ಯಚಂದ್ರರ ಚಿತ್ರಣಗಳಿವೆ.

**ಎರಡು ಹಂತಗಳಲ್ಲಿರುವ ಸ್ಮಾರಕ ಶಿಲ್ಪಗಳು**

ದಾವಣಗೆರೆ ತಾಲೂಕು ಮತ್ತಿ ಗ್ರಾಮದಲ್ಲಿ ಎರಡು ಹಂತದಲ್ಲಿ ಕಂಡರಿಸಿರುವ ಒಂದು ಸ್ಮಾರಕಶಿಲ್ಪವಿದೆ. ಒಂದನೇ ಪಟ್ಟಿಯಲ್ಲಿ ವೀರನು ಕುದುರೆ ಮೇಲೆ ಕುಳಿತು ಕತ್ತಿ ಹಿಡಿದಿರುವುದನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಕುದುರೆ ಮುಂಭಾಗದಲ್ಲಿ ಶತ್ರುಗಳಿಬ್ಬರು ಬಿಲ್ಲುಗಳನ್ನು ಹಿಡಿದು ಸಮಭಂಗಿಯಲ್ಲಿ ನಿಂತಿರುವ ಹಾಗೆ ಬಿಡಿಸಲಾಗಿದೆ. ಎರಡನೇ ಪಟ್ಟಿಯಲ್ಲಿ ಜಟಾಧಾರಿ ಯತಿ, ಶಿವಲಿಂಗ, ನಂದಿ ಹಾಗೂ ಸೂರ್ಯ–ಚಂದ್ರರ ಚಿತ್ರಣಗಳಿವೆ. ಹರಿಹರ ತಾಲೂಕು ಕುಣಿಬೆಳಗೆರೆ ಗ್ರಾಮದ ಸ್ಮಾರಕಶಿಲ್ಪದ ಮೊದಲ ಹಂತದಲ್ಲಿ ಎತ್ತರದ ನಿಲುವನ್ನು ಹೊಂದಿರುವ ವೀರ ಬಿಲ್ಲು ಬಾಣವನ್ನು ಹಿಡಿದು ಯುದ್ಧಸನ್ನದ್ಧನಾಗಿರುವ ಚಿತ್ರಣವಿದೆ. ಅವನ ಬೆನ್ನ ಹಿಂದೆ ಬಿಲ್ಲುಗಳ ಬತ್ತಳಿಕೆಯಿದೆ. ಎರಡನೆಯ ಹಂತದಲ್ಲಿ ವೀರನು ಸ್ವರ್ಗದಲ್ಲಿರುವಂತೆ ಕಂಡರಿಸಲಾಗಿದೆ. ಹೊನ್ನಾಳಿ ತಾಲೂಕು ದಾಸರಹಟ್ಟಿ ಗ್ರಾಮದ ಹೊಲವೊಂದರಲ್ಲಿರುವ ಸ್ಮಾರಕಶಿಲ್ಪದಲ್ಲಿ ವೀರರಿಬ್ಬರನ್ನು ಪ್ರತ್ಯೇಕ ಹಂತಗಳಲ್ಲಿ ಕೆತ್ತಲಾಗಿದೆ. ಕೆಳಹಂತದಲ್ಲಿರುವ ವೀರನು ಕೊಡಲಿಯಂತಹ ಆಯುಧವೊಂದನ್ನು ತನ್ನ ಬಲಭುಜದ ಮೇಲೆ ಇಟ್ಟುಕೊಂಡಿರುವಂತೆ ಚಿತ್ರಿಸಲಾಗಿದೆ. ಮೇಲಿನ ಹಂತದಲ್ಲಿ ಬಿಲ್ಲು ಹಿಡಿದಿರುವ ವೀರ ಯುದ್ಧಸನ್ನದ್ಧನಾಗಿದ್ದಾನೆ. ಅವನ ಬೆನ್ನ ಹಿಂದೆ ಬಿಲ್ಲುಗಳ ಬತ್ತಳಿಕೆಯಿರುವ ಚಿತ್ರಣವಿದೆ. ಹೋರಾಟವೊಂದರಲ್ಲಿ ಮಡಿದ ವೀರರನ್ನು ಒಂದೇ ಹಂತದಲ್ಲಿ

ಚಿತ್ರಿಸದೇ ಪ್ರತ್ಯೇಕವಾಗಿ ಕಂಡರಿಸಲಾಗಿದೆ. ಅವರು ಒಂದೇ ಘಟನೆಯಲ್ಲಿ ಮಡಿದರೋ, ಇಲ್ಲವೇ ಪ್ರತ್ಯೇಕವಾದ ಹೋರಾಟಗಳಲ್ಲಿ ಮಡಿದರೋ ಹೇಳಲು ಬರುವುದಿಲ್ಲ. ಈ ಸ್ಮಾರಕಶಿಲ್ಪದ ವಿಶೇಷತೆಯೆಂದರೆ ವೀರನು ಕೊಡಲಿಯನ್ನು ಹಿಡಿದಿರುವುದು. ಹೋರಾಟಗಳಲ್ಲಿ ಆ ಆಯುಧವನ್ನು ಬಳಸಿರುವ ವೀರರ ಸ್ಮಾರಕಶಿಲ್ಪಗಳು ಅತಿ ವಿರಳವಾಗಿ ಕಂಡುಬರುತ್ತವೆ. ಚನ್ನಗಿರಿ ತಾಲೂಕು ಬೆಟ್ಟಕಡೂರು ಗ್ರಾಮದ ಒಂದು ಸ್ಮಾರಕಶಿಲ್ಪದ ಮೊದಲ ಹಂತದಲ್ಲಿ ನಾಲ್ವರು ಸೈನಿಕರು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಅಭಿಮುಖವಾಗಿ ನಿಂತಿರುವಂತೆ ಕಂಡರಿಸಲಾಗಿದೆ. ಎರಡನೇ ಹಂತದಲ್ಲಿ ಅಶ್ವಾರೂಢನಾಗಿರುವ ವೀರನು ಭರ್ಚಿಯನ್ನು ಹಿಡಿದಿದ್ದಾನೆ. ಕುದುರೆ ಕಾಲುಗಳ ಬಳಿ ರುಂಡ ಮತ್ತು ಮುಂಡಗಳು ಬೇರ್ಪಟ್ಟಿರುವ ಹೆಣವೊಂದನ್ನು ಕೆತ್ತಲಾಗಿದೆ. ಓರ್ವ ಶತ್ರು ಕುದುರೆ ಕೆಳಗೆ ಅವಿತುಕೊಂಡಿರುವ ಚಿತ್ರಣವಿದೆ. ವೀರನ ಹಿಂಬದಿಯಲ್ಲಿ ಅವನ ಸಹಚರರಿಬ್ಬರು ರಾಜಛತ್ರಿ ಮತ್ತು ಧ್ವಜವನ್ನು ಹಿಡಿದು ನಿಂತಿರುವುದು ಕಂಡುಬರುತ್ತದೆ. ಮಾವಿನಕಟ್ಟೆ ಅರಣ್ಯದಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದು ಎಡಭಾಗಕ್ಕೆ ಚಾಚಿ ನಿಂತಿದ್ದಾನೆ. ಅವನ ಬೆನ್ನ ಹಿಂದೆ ಕಟ್ಟಿಕೊಂಡಿರುವ ಬಿಲ್ಲುಗಳ ಬತ್ತಳಿಕೆಯನ್ನು ಚಿತ್ರಿಸಲಾಗಿದೆ.

**ಬಿಲ್ಲನ್ನು ಹಿಡಿದು ನಿಂತ ವೀರರ ಸ್ಮಾರಕ ಶಿಲ್ಪಗಳು**

ದಾವಣಗೆರೆ ತಾಲೂಕು ಮಾಯಕೊಂಡ ಗ್ರಾಮದ ಸರ್ವೇಶ್ವರ ದೇವಸ್ಥಾನದಲ್ಲಿರುವ ಸ್ಮಾರಕಶಿಲ್ಪವೊಂದರಲ್ಲಿ ವೀರನು ಎಡಗೈಯಲ್ಲಿ ಹಿಡಿದಿರುವ ಬಿಲ್ಲನ್ನು ಎಡಕ್ಕೆ ಚಾಚಿದ್ದಾನೆ. ಬಲಗೈಯಲ್ಲಿ ಬಾಣವನ್ನು ಹಿಡಿದು ಸೊಂಟದ ಮೇಲೆ ಇಟ್ಟುಕೊಂಡಿರುವಂತೆ ಚಿತ್ರಿಸಲಾಗಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ಇದೇ ಲಕ್ಷಣಗಳಿರುವ ಸ್ಮಾರಕಶಿಲ್ಪ ಕೊಡಗನೂರು ಗ್ರಾಮದಲ್ಲಿ ಕಂಡುಬರುವುದು.

ತುರ್ಚಘಟ್ಟ ಗ್ರಾಮದಲ್ಲಿರುವ ಸ್ಮಾರಕದಲ್ಲಿ ವೀರನು ಎಡಗೈಯಲ್ಲಿ ಆಳೆತ್ತರದ ಬಿಲ್ಲು ಹಿಡಿದು ಎಡಕ್ಕೆ ಚಾಚಿಕೊಂಡಿದ್ದಾನೆ. ಬಲಗೈಯಲ್ಲಿ ಗಂಟೆ ಆಯುಧ ಹಿಡಿದಿರುವ ಚಿತ್ರಣವಿದೆ. ಸೊಂಟದಲ್ಲಿ ಕಿರುಗತ್ತಿ ಇಟ್ಟಿದ್ದಾನೆ. ವಸ್ತ್ರದಿಂದ ನೆತ್ತಿಯ ಮೇಲೆ ಮುಡಿಕಟ್ಟಿ, ಉರಿಮೀಸೆ ಬಿಟ್ಟಿರುವ ಹಾಗೆ ಚಿತ್ರಿಸಲಾಗಿದೆ. ವೀರನು ಧರಿಸಿರುವ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ.[೧೧೪] ಈ ಸ್ಮಾರಕಶಿಲ್ಪದ ವಿಶೇಷವೆಂದರೆ ವೀರನು ಹೋರಾಟಕ್ಕೆ ಘಂಟೆ ಆಯುಧವನ್ನು ಬಳಸಿರುವುದು. ಈವರೆಗೆ ಕಂಡುಬಂದಿರುವ ಯಾವುದೇ ಸ್ಮಾರಕಗಳಲ್ಲಿ ವೀರನೊಬ್ಬ ಘಂಟೆ ಆಯುಧವನ್ನು ಬಳಸಿರುವ ಉದಾಹರಣೆಗಳಿಲ್ಲ. ಆದ್ದರಿಂದ ಈ ಸ್ಮಾರಕ ಅಪರೂಪದ್ದಾಗಿದೆ. ಇಂತಹದ್ದೇ ಆಯುಧ ಹಿಡಿದು ನಿಂತಿರುವ ವೀರನ ಸ್ಮಾರಕಶಿಲ್ಪವೊಂದನ್ನು ಹೊನ್ನಾಳಿ ತಾಲೂಕು ಚಿಕ್ಕಬಾಸೂರು ಗ್ರಾಮದಲ್ಲಿ ಕಾಣುತ್ತೇವೆ. ಹಿರೇತೊಗಲೇರಿ ಗ್ರಾಮದ ಸ್ಮಾರಕದಲ್ಲಿ ವೀರನು ಬಿಲ್ಲು ಮತ್ತು ಬಾಣವನ್ನು ಹಿಡಿದು ಯುದ್ಧಸನ್ನದ್ಧನಾಗಿರುವ ದೃಶ್ಯವಿದೆ. ವೀರನು ಮಲ್ಲಗಚ್ಚೆಯ ಉಡುಪು ಧರಿಸಿರುವುದು ಕಂಡುಬರುತ್ತದೆ. ಹೊನ್ನಾಳಿ ತಾಲೂಕು ನೇರಲಗುಂಡಿ ಗ್ರಾಮದ ಒಂದು ಶಿಲ್ಪದಲ್ಲಿ ವೀರನು ಎಡಗೈಯಲ್ಲಿ ಹಿಡಿದಿರುವ ಬಿಲ್ಲನ್ನು ಎಡಕ್ಕೆ ಚಾಚಿ, ನೇರ

ಮುಖ ಮಾಡಿ ನಿಂತಿರುವಂತೆ ಕೆತ್ತಲಾಗಿದೆ. ಸ್ಮಾರಕದಲ್ಲಿ ವೀರನ ಶಿರಭಾಗದ ಎರಡು ಕಡೆ ರಂಧ್ರಗಳನ್ನು ಮಾಡಲಾಗಿದೆ. ಅದೇ ಗ್ರಾಮದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲು ಮತ್ತು ಕತ್ತಿಯನ್ನು ಹಿಡಿದು ಯುದ್ಧಸನ್ನದ್ಧನಾಗಿರುವಂತೆ ಕಂಡರಿಸಲಾಗಿದೆ. ಹಳೇಜೋಗ ಗ್ರಾಮದ ಅಗಸಿ ಬಾಗಿಲು ಬಳಿಯಿರುವ ಸ್ಮಾರಕದಲ್ಲಿ ವೀರನು ಬಿಲ್ಲು ಬಾಣವನ್ನು ಹಿಡಿದು ಶತ್ರುವಿಗೆ ಗುರಿಯಿಟ್ಟಿದ್ದಾನೆ. ಶತ್ರುವು ಗುರಿಯಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಿರುವಂತೆ ಕೆತ್ತಲಾಗಿದೆ.

ಚನ್ನಗಿರಿ ತಾಲೂಕು ಮಲಹಾಳ್ ಗ್ರಾಮದ ಸ್ಮಾರಕವೊಂದರಲ್ಲಿ ಬಿಲ್ಲು ಮತ್ತು ಕತ್ತಿ ಹಿಡಿದಿರುವ ವೀರನನ್ನು ಯುದ್ಧಸನ್ನದ್ಧ ಭಂಗಿಯಲ್ಲಿರುವಂತೆ ಕಂಡರಿಸಲಾಗಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ವಸ್ತ್ರದಿಂದ ನೆತ್ತಿಯ ಮೇಲೆ ಮುಡಿ ಕಟ್ಟಿರುವ ಚಿತ್ರಣವಿದೆ. ಸ್ಮಾರಕದ ಸುತ್ತಲೂ ಹೂಬಳ್ಳಿಯ ಅಲಂಕರಣವನ್ನು ಮಾಡಿರುವುದು ಕಂಡುಬರುತ್ತದೆ. ಜಗಲೂರು ತಾಲೂಕು ಗೌರಿಪುರ ಗ್ರಾಮದಲ್ಲಿರುವ ಸ್ಮಾರಕಶಿಲ್ಪದಲ್ಲಿ ಇಬ್ಬರು ವೀರರನ್ನು ಕಂಡರಿಸಲಾಗಿದೆ. ಒಬ್ಬ ವೀರ ಬಿಲ್ಲುವಿಗೆ ಬಾಣವನ್ನು ಹೂಡಿ ಎಡಕ್ಕೆ ಚಾಚಿ ನಿಂತಿರುವ ಚಿತ್ರಣವಿದೆ. ಮತ್ತೊಬ್ಬ ವೀರನು ಬಲಗೈಯಲ್ಲಿ ಹಿಡಿದಿರುವ ಕತ್ತಿಯನ್ನು ಭುಜದ ಮೇಲೆ ಇಟ್ಟುಕೊಂಡಿರುವ ಹಾಗೆ ಕೆತ್ತಲಾಗಿದೆ. ಇಲ್ಲಿ ವೀರರಿಬ್ಬರೂ ವಸ್ತ್ರದಿಂದ ಮುಡಿಯನ್ನು ನೆತ್ತಿಯ ಮೇಲೆ ಕಟ್ಟಿದ್ದಾರೆ. ಮಲೆಮಾಚಿಕೆರೆ ಗ್ರಾಮದ ಸ್ಮಾರಕದಲ್ಲಿ ವೀರನು ಬಿಲ್ಲು ಮತ್ತು ಕತ್ತಿಯನ್ನು ಹಿಡಿದು ಯುದ್ಧಸನ್ನದ್ಧನಾಗಿರುವನು. ಅವನು ಹಿಡಿದಿರುವ ಕತ್ತಿಯ ತುದಿಯಲ್ಲಿ ಕುಚ್ಚನ್ನು ಹಾಕಿರುವಂತೆ ಕೆತ್ತಲಾಗಿದೆ. ವೀರನು ಮಲ್ಲಗಚ್ಚೆ ಉಡುಪನ್ನು ಧರಿಸಿದ್ದು ಅದರ ಕುಚ್ಚುಗಳು ಸುತ್ತಲೂ ಇಳಿಬಿದ್ದಿರುವಂತೆ ಬಿಡಿಸಲಾಗಿದೆ. ಸ್ಮಾರಕದ ಮೇಲ್ಭಾಗವು ಕಮಾನಿನಾಕಾರದಲ್ಲಿ ಮೂಡಿಬಂದಿದೆ.[೧೧೫] ಕೊರಟಗೆರೆ ಗ್ರಾಮದ ಹೊರಗಿರುವ ಸ್ಮಾರಕದಲ್ಲಿ ವೀರನು ಬಿಲ್ಲು ಮತ್ತು ಬಾಣಗಳನ್ನು ಹಿಡಿದಿರುವ ದೃಶ್ಯವಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿರುವಂತೆ ಚಿತ್ರಿಸಲಾಗಿದೆ. ವಸ್ತ್ರದಿಂದ ಮುಡಿಯನ್ನು ನೆತ್ತಿಯ ಮೇಲೆ ಕಟ್ಟಿದ್ದಾನೆ.

ಹರಪನಹಳ್ಳಿ ತಾಲೂಕು ಕುಂಚೂರು ಗ್ರಾಮದ ಶಿಲ್ಪವೊಂದರಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದು ಎಡಕ್ಕೆ ಚಾಚಿದ್ದಾನೆ. ಅವನ ಬೆನ್ನ ಹಿಂದೆ ಕಟ್ಟಿರುವ ಬಿಲ್ಲುಗಳ ಬತ್ತಳಿಕೆಯಿದೆ. ವೀರನು ಕಾಲುಗಳಲ್ಲಿ ಶೂ ಮಾದರಿಯ ಚಪ್ಪಲಿಯನ್ನು ಹಾಕಿಕೊಂಡಿರುವಂತೆ ಕಂಡರಿಸಿರುವುದು ಸ್ಮಾರಕಶಿಲ್ಪದ ವಿಶೇಷತೆಯಾಗಿದೆ. ಅದೇ ಸ್ಥಳದಲ್ಲಿರುವ ಇನ್ನೊಂದು ಸ್ಮಾರಕವು ಮೇಲೆ ವಿವರಿಸಿದ ಶಿಲ್ಪದ ವಿವರಗಳನ್ನೇ ಹೊಂದಿದೆ. ಆದರೆ ವೀರನು ಬಾಣವನ್ನು ಹಿಡಿದಿರುವ ಬಲಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿರುವಂತೆ ಕೆತ್ತಲಾಗಿದೆ. ಜಿಟ್ಟನಕಟ್ಟೆ ದುರ್ಗಮ್ಮ ದೇವಸ್ಥಾನದ ಮುಂಭಾಗದಲ್ಲಿರುವ ಒಂದು ಶಿಲ್ಪದಲ್ಲಿ ವೀರನು ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಕತ್ತಿ ಹಿಡಿದು ಮೇಲಕ್ಕೆತ್ತಿರುವಂತೆ ಕೆತ್ತಲಾಗಿದೆ. ಅವನು ನಡುಪಟ್ಟಿಯಲ್ಲಿ ಕಿರುಗತ್ತಿಯನ್ನು ಇಟ್ಟಿರುವಂತೆ ತೋರಿಸಲಾಗಿದೆ. ಈ ಸ್ಮಾರಕದಲ್ಲಿರುವ ವೀರನು ಉರಿಮೀಸೆಯನ್ನು

ಬಿಟ್ಟಿರುವುದು ಕಂಡುಬರುತ್ತದೆ. ಸ್ಮಾರಕದ ಸುತ್ತಲೂ ಹೂಬಳ್ಳಿಯ ಅಲಂಕರಣವನ್ನು ಮಾಡಲಾಗಿದೆ. ಕಡತಿ ಗ್ರಾಮದ ಈಶ್ವರ ದೇವಸ್ಥಾನದ ಬಳಿಯಿರುವ ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲು ಮತ್ತು ಬಾಣವನ್ನು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ವೀರನಿಗೆ ಅಭಿಮುಖವಾಗಿರುವ ಶತ್ರು ಕಡುಗತ್ತಿಯನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಬಾಗಳಿ ವಸ್ತುಸಂಗ್ರಹಾಲಯದಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲಿಗೆ ಬಾಣವನ್ನು ಹೂಡಿ ಯುದ್ಧಸನ್ನದ್ಧನಾಗಿರುವ ದೃಶ್ಯವಿದೆ. ಅವನು ಮಲ್ಲಗಚ್ಚೆಯ ಉಡುಪು ಧರಿಸಿದ್ದು, ಅದರ ಕುಚ್ಚುಗಳು ಸುತ್ತಲೂ ನೇತಾಡುತ್ತಿರುವಂತೆ ಬಿಡಿಸಲಾಗಿದೆ. ವಸ್ತ್ರದಿಂದ ತಲೆಯಲ್ಲಿ ಮುಡಿ ಕಟ್ಟಿಕೊಂಡಿರುವಂತೆ ಬಿಡಿಸಲಾಗಿದೆ. ಕಡಕೋಳ ಗ್ರಾಮದ ಆಂಜನೇಯ ದೇವಸ್ಥಾನದ ಬಳಿಯಿರುವ ಸ್ಮಾರಕವೊಂದು ಅಪರೂಪದ್ದಾಗಿದೆ. ಆ ಸ್ಮಾರಕಶಿಲ್ಪದಲ್ಲಿ ಸ್ತ್ರೀಯರಿಬ್ಬರು ಬಿಲ್ಲಿಗೆ ಬಾಣವನ್ನು ಹೂಡಿ ಯುದ್ಧಸನ್ನದ್ಧರಾಗಿರುವಂತೆ ಕೆತ್ತಲಾಗಿದೆ. ನಡುವಲ್ಲಿ ಕಿರುಗತ್ತಿಗಳನ್ನು ಇಟ್ಟಿರುವ ಚಿತ್ರಣವಿದೆ. ಅವರ ಬೆನ್ನ ಹಿಂದೆ ಬಿಲ್ಲುಗಳ ಬತ್ತಳಿಕೆಯನ್ನು ಕಟ್ಟಿಕೊಂಡಿರುವ ಹಾಗೆ ತೋರಿಸಲಾಗಿದೆ. ಸ್ಮಾರಕದಲ್ಲಿ ವೀರ ಸ್ತ್ರೀಯರ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಕ್ರಿ.ಶ.ಸು. ೧೫–೧೬ನೇ ಶತಮಾನದಲ್ಲಿ ಸ್ತ್ರೀಯರು ಯುದ್ಧರಂಗದಲ್ಲಿ ಸಕ್ರಿಯವಾಗಿ ತೊಡಗಿದ್ದರೆಂಬುದನ್ನು ಈ ಸ್ಮಾರಕಶಿಲ್ಪವು ದೃಢಪಡಿಸುತ್ತದೆ.

### ಕುದುರೆ ಮೇಲೆ ಕುಳಿತಿರುವ ವೀರರ ಸ್ಮಾರಕ ಶಿಲ್ಪಗಳು

ದಾವಣಗೆರೆ ತಾಲೂಕು ಲೋಕಿಕೆರೆ ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಅಶ್ವಾರೂಢನಾಗಿದ್ದು, ಬಲಗೈಯಲ್ಲಿರುವ ಕತ್ತಿಯನ್ನು ಭುಜದ ಮೇಲೆ ಇಟ್ಟುಕೊಂಡಿರುವಂತೆ ಚಿತ್ರಿಸಲಾಗಿದೆ. ಅದೇ ಗ್ರಾಮದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಕುದುರೆಯನ್ನು ಹಾರಿಸುತ್ತಿರುವಂತೆ ಕಂಡರಿಸಲಾಗಿದೆ. ಇದೇ ರೀತಿಯ ದೃಶ್ಯವಿರುವ ಸ್ಮಾರಕವೊಂದು ಮಾಯಕೊಂಡ ಗ್ರಾಮದಲ್ಲಿ ಕಂಡುಬರುತ್ತದೆ. ಕ್ಯಾತನಹಳ್ಳಿಯಲ್ಲಿ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಕುದುರೆ ಮೇಲೆ ಕುಳಿತು, ಬಲಗೈಯಲ್ಲಿ ಹಿಡಿದ ಕತ್ತಿಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾನೆ. ಕುದುರೆ ತನ್ನ ಮುಂಗಾಲುಗಳನ್ನು ಮೇಲಕ್ಕೆತ್ತಿ ಹಾರುತ್ತಿರುವ ಹಾಗೆ ಕೆತ್ತಲಾಗಿದೆ. ಕುದುರೆ ಚಿತ್ರಣವಿರುವ ಕೆಳಭಾಗದಲ್ಲಿ ಓರ್ವ ಶತ್ರು ನಿಂತಿದ್ದಾನೆ. ವೀರನಿಗೆ ಸೇವಕನೊಬ್ಬ ಛತ್ರಿಯನ್ನು ತಲೆಯ ಮೇಲೆ ಬರುವಂತೆ ಹಿಡಿದು ನಿಂತಿರುವ ದೃಶ್ಯವಿದೆ. ಇದರಿಂದ ವೀರನು ಪ್ರಮುಖ ವ್ಯಕ್ತಿಯಾಗಿದ್ದನೆಂದು ತಿಳಿದುಬರುತ್ತದೆ. ಹರಿಹರ ತಾಲೂಕು ಜಿಗಳಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ಅಶ್ವಾರೂಢನಾಗಿರುವ ವೀರನು ಎಡಗೈಯಲ್ಲಿ ಬಿಲ್ಲುವನ್ನು ಹಿಡಿದು, ಬಲಗೈಯಲ್ಲಿ ಸಭಳ ಆಯುಧವನ್ನು ಭುಜದ ಮೇಲೆ ಇಟ್ಟುಕೊಂಡಿರುವಂತೆ ಕೆತ್ತಲಾಗಿದೆ. ಕುದುರೆ ದಿಬ್ಬವನ್ನು ಏರಿ ನಿಂತಿದೆ. ಶಿಲ್ಪದ ಕೆಳಭಾಗದಲ್ಲಿ ಒಬ್ಬ ಶತ್ರುವಿನ ರುಂಡ ಮತ್ತು ಮುಂಡಗಳು ಬೇರ್ಪಟ್ಟಿರುವ ದೃಶ್ಯ ಕಂಡುಬರುವುದು. ಸ್ಮಾರಕದಲ್ಲಿ ವೀರನು ಎಡಗೈಯಲ್ಲಿ ಕುದುರೆ ಲಗಾಮನ್ನು ಹಿಡಿಯದೇ ಎರಡೂ ಕೈಗಳಲ್ಲಿ ಆಯುಧಗಳನ್ನು ಹಿಡಿದಿರುವಂತೆ ಚಿತ್ರಿಸಿರುವುದು ಇತರೆ ಸ್ಮಾರಕಗಳಿಗಿಂತ ಭಿನ್ನವಾಗಿರುವುದು ಕಂಡುಬರುತ್ತದೆ. ಅಲ್ಲದೆ ವೀರನು

ತಲೆಕೂದಲನ್ನು ಜಡೆ ರೂಪದಲ್ಲಿ ಹೆಣೆದುಕೊಂಡು ಉದ್ದವಾಗಿ ಇಳಿಬಿಟ್ಟಿರುವಂತೆ ಕಂಡರಿಸಿರುವುದೂ ಸಹ ಈ ಸ್ಮಾರಕಶಿಲ್ಪದ ವಿಶೇಷ ಲಕ್ಷಣವಾಗಿದೆ. ಹರಳಹಳ್ಳಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ಅಶ್ವರೂಢನಾಗಿರುವ ವೀರನು ಬಲಗೈಯಲ್ಲಿರುವ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದಿರುವಂತೆ ಕೆತ್ತಲಾಗಿದೆ. ಶಿಲ್ಪದ ಕೆಳಭಾಗದಲ್ಲಿ ಮಡಿದು ಬಿದ್ದಿರುವನೊಬ್ಬನ ಕಾಲುಗಳನ್ನು ತುಂಡರಿಸಿರುವಂತೆ ತೋರಿಸಲಾಗಿದೆ. ಬಹುಸಂಖ್ಯೆಯ ಸ್ಮಾರಕಶಿಲ್ಪಗಳಲ್ಲಿ ವೀರರು ಶತ್ರುವಿನ ತಲೆಯನ್ನು ಕತ್ತರಿಸಿರುವುದು ಸಾಮಾನ್ಯವಾಗಿರುತ್ತದೆ. ಆದರೆ ಈ ಸ್ಮಾರಕದಲ್ಲಿ ವೀರನು ಶತ್ರುವೊಬ್ಬನ ಕಾಲುಗಳನ್ನು ಕತ್ತರಿಸಿರುವಂತೆ ಬಿಡಿಸಿರುವುದರಿಂದ ಈ ಸ್ಮಾರಕಶಿಲ್ಪವು ಅಪರೂಪವಾಗಿ ಕಂಡುಬರುವುದು.

ಹೊನ್ನಾಳಿ ತಾಲೂಕು ಕುಳಗಟ್ಟೆ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಬಳಿಯಿರುವ ಒಂದು ಸ್ಮಾರಕಶಿಲ್ಪದಲ್ಲಿ ಅಶ್ವಾರೂಢನಾಗಿರುವ ವೀರನು ಒಂದು ಕೈಯಲ್ಲಿ ಲಗಾಮು, ಮತ್ತೊಂದು ಕೈಯಲ್ಲಿ ಭರ್ಜಿಯನ್ನು ಹಿಡಿದಿರುವಂತೆ ಕೆತ್ತಲಾಗಿದೆ. ಈ ಸ್ಮಾರಕದ ವಿಶೇಷತೆಯೆಂದರೆ ವೀರ ಹಾಗೂ ಕುದುರೆಯನ್ನು ಶಿಲ್ಪದ ಎಡಭಾಗಕ್ಕೆ ಮುಖ ಮಾಡಿರುವಂತೆ ಚಿತ್ರಿಸದೇ ಬಲಭಾಗಕ್ಕೆ ಇರುವಂತೆ ಕಂಡರಿಸಿರುವುದು. ಹಳೇಜೋಗ ಗ್ರಾಮದ ಹೊಲವೊಂದರಲ್ಲಿರುವ ಸ್ಮಾರಕದಲ್ಲಿ ಅಶ್ವಾರೂಢನಾಗಿರುವ ವೀರನು ಕತ್ತಿಯನ್ನು ಹಿಡಿದಿದ್ದಾನೆ. ಸೇವಕನೊಬ್ಬ ವೀರನಿಗೆ ಛತ್ರಿಯನ್ನು ಹಿಡಿದಿರುವ ಚಿತ್ರಣವಿದೆ. ಈ ದೃಶ್ಯದಿಂದ ವೀರನು ಪ್ರಮುಖ ವ್ಯಕ್ತಿಯಾಗಿದ್ದನೆಂದು ಧ್ವನಿಸುತ್ತದೆ. ವೀರನು ಧರಿಸಿರುವ ಆಭರಣಗಳು ಗಮನ ಸೆಳೆಯುತ್ತವೆ. ಇದೇ ವಿವರಗಳನ್ನು ಹೊಂದಿರುವ ಸ್ಮಾರಕಶಿಲ್ಪವೊಂದು ಸವಳಂಗ ಗ್ರಾಮದ ಆಂಜನೇಯ ದೇವಸ್ಥಾನದ ಬಳಿ ಕಂಡುಬರುವುದು. ನೇರಲಗುಂಡಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಕುದುರೆಯನ್ನು ಹಾರಿಸುತ್ತಿರುವಂತೆ ಕಂಡರಿಸಲಾಗಿದೆ. ಅವನಿಗೆ ಸೇವಕನೊಬ್ಬ ಛತ್ರಿಯನ್ನು ಹಿಡಿದಿರುವ ಚಿತ್ರಣವಿದೆ.

ಚನ್ನಗಿರಿ ತಾಲೂಕು ಗುಡ್ಡದಬೆನಕನಹಳ್ಳಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ಅಶ್ವಾರೂಢನಾಗಿರುವ ವೀರನು ಬಲಗೈಯಲ್ಲಿ ಭರ್ಜಿ ಹಿಡಿದಿದ್ದಾನೆ. ಅವನ ಹಿಂಬದಿಯಲ್ಲಿ ಸೇವಕನೊಬ್ಬ ಛತ್ರಿ ಹಿಡಿದಿರುವ ಚಿತ್ರಣವಿದೆ. ಕುದುರೆ ಕಾಲುಗಳ ಬಳಿ ಇಬ್ಬರು ಶತ್ರುಗಳು ಇರುವುದನ್ನು ಕಂಡರಿಸಲಾಗಿದೆ. ಕಂಸಾಗರ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ಕುದುರೆ ಮೇಲೆ ಕುಳಿತಿರುವ ವೀರನು ಕತ್ತಿ ಹಿಡಿದಿದ್ದಾನೆ. ಕುದುರೆ ಮುಂಭಾಗದಲ್ಲಿ ಓರ್ವ ಶತ್ರು ಕೈಮುಗಿದುಕೊಂಡು ಶರಣಾಗತನಾಗಿರುವಂತೆ ಬಿಡಿಸಿರುವುದು ಕಂಡುಬರುತ್ತದೆ. ಮಲಹಾಳ್ ಗ್ರಾಮದ ಸ್ಮಾರಕದಲ್ಲಿ ಅಶ್ವಾರೂಢನಾಗಿರುವ ವೀರನು ಬಲಗೈಯಲ್ಲಿ ಕತ್ತಿ ಹಿಡಿದು ಮೇಲಕ್ಕೆತ್ತಿ ಹಿಡಿದಿರುವನು. ಅವನ ಸುತ್ತಲೂ ಪ್ರಭಾವಳಿಯ ಮಾದರಿಯನ್ನು ಚಿತ್ರಿಸಲಾಗಿದೆ. ಇದೇ ಲಕ್ಷಣವಿರುವ ಒಂದು ಸ್ಮಾರಕಶಿಲ್ಪವು ಹರಪನಹಳ್ಳಿ ತಾಲೂಕು ಕಣಕುಪ್ಪೆ ಕೋಟೆಯಲ್ಲಿ ಕಂಡುಬರುತ್ತದೆ. ಕೋಟೆಯಲ್ಲಿರುವ ಮತ್ತೊಂದು ಸ್ಮಾರಕಶಿಲ್ಪವು ಕಲಾತ್ಮಕವಾಗಿ ಮೂಡಿಬಂದಿದೆ. ವೀರನು ಅಶ್ವಾರೂಢನಾಗಿ ಕತ್ತಿಯನ್ನು ಹಿಡಿದಿರುವ ಚಿತ್ರಣವಿದೆ. ಓರ್ವ ಶತ್ರು ಬಲಗಾಲನ್ನು ನೆಲಕ್ಕೆ ಊರಿ ವೀರನ ಕುದುರೆಯನ್ನು

ನೆಲಕ್ಕೆ ಉರುಳಿಸುವ ಯತ್ನದಲ್ಲಿರುವಂತೆ ಕಂಡರಿಸಲಾಗಿದೆ. ಮತ್ತೊಬ್ಬ ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ನಿಂತಿರುವ ದೃಶ್ಯವಿದೆ. ಸೇವಕನೊಬ್ಬ ವೀರನಿಗೆ ಛತ್ರಿಯನ್ನು ಹಿಡಿದಿದ್ದಾನೆ. ಈ ಸ್ಮಾರಕದ ಹಂಚಿನ ಸುತ್ತಲೂ ತೋರಣದ ಅಲಂಕಾರವನ್ನು ಮಾಡಿರುವುದು ಕಂಡುಬರುತ್ತದೆ.[೧೧೬] ಗೌರಿಪುರ ಗ್ರಾಮದಲ್ಲಿ ಕಂಡುಬರುವ ಸ್ಮಾರಕದಲ್ಲಿ ವೀರನು ಅಶ್ವಾರೂಢನಾಗಿ ಬಲಗೈಯಲ್ಲಿರುವ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದಿರುವಂತೆ ಕೆತ್ತಲಾಗಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ವೀರನು ಉರಿಮೀಸೆ ಬಿಟ್ಟಿದ್ದಾನೆ. ಸೇವಕನೊಬ್ಬ ವೀರನ ತಲೆಯ ಮೇಲೆ ಇರುವಂತೆ ಛತ್ರಿ ಹಿಡಿದಿದ್ದಾನೆ. ಚದರಗೊಳ್ಳ ಕಲ್ಲೇಶ್ವರ ದೇವಸ್ಥಾನ ಹತ್ತಿರ ಕಂಡುಬರುವ ಸ್ಮಾರಕಶಿಲ್ಪದಲ್ಲಿ ಅಶ್ವಾರೂಢನಾಗಿರುವ ವೀರನು ಬಲಗೈಯಲ್ಲಿ ಹಿಡಿದಿರುವ ಕತ್ತಿಯನ್ನು ಭುಜದ ಮೇಲೆ ಇಟ್ಟುಕೊಂಡಿರುವಂತೆ ಕೆತ್ತಲಾಗಿದೆ. ಮಾರೇನಹಳ್ಳಿಯ ಒಂದು ಶಿಲ್ಪದಲ್ಲಿಯ ವೀರನು ಕುದುರೆ ಮೇಲೆ ಕುಳಿತು ಕತ್ತಿ ಹಿಡಿದಿದ್ದಾನೆ. ಸೊಂಟದಲ್ಲಿ ಕಿರುಗತ್ತಿ ಇಟ್ಟಿರುವುದನ್ನು ಚಿತ್ರಿಸಲಾಗಿದೆ. ಓರ್ವ ಶತ್ರು ಬಾಕು ಮತ್ತು ಕತ್ತಿಯನ್ನು ಹಿಡಿದು ನಿಂತಿರುವುದನ್ನು ಕುದುರೆ ಮುಂದೆ ಚಿಕ್ಕದಾಗಿ ಕಂಡರಿಸಲಾಗಿದೆ. ಇದೇ ವಿವರಗಳನ್ನು ಹೋಲುವ ಸ್ಮಾರಕಶಿಲ್ಪವೊಂದು ಹರಪನಹಳ್ಳಿ ತಾಲೂಕು ಕುಮಾರನಹಳ್ಳಿ ಗ್ರಾಮದಲ್ಲಿ ಕಂಡುಬರುವುದು. ಮಾದಿಹಳ್ಳಿ ಆಂಜನೇಯ ದೇವಸ್ಥಾನ ಬಳಿಯಿರುವ ಸ್ಮಾರಕಶಿಲ್ಪವನ್ನು ಶಿಲ್ಪಿ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ವೀರನು ಅಶ್ವಾರೂಢನಾಗಿ ಕತ್ತಿಯನ್ನು ಹಿಡಿದಿದ್ದಾನೆ. ಕುದುರೆ ಮುಂಗಾಲುಗಳನ್ನು ಮೇಲಕ್ಕೆತ್ತಿ ಹಾರುತ್ತಿರುವಂತೆ ಕಂಡರಿಸಲಾಗಿದೆ. ಈ ಸ್ಮಾರಕದಲ್ಲಿ ಅಶ್ವಾರೂಢನಾಗಿರುವ ವೀರನನ್ನು ಬಲಕ್ಕೆ ಮುಖ ಮಾಡಿರುವಂತೆ ಕೆತ್ತಲಾಗಿದೆ. ಯಡಿಹಳ್ಳಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಅಶ್ವಾರೂಢನಾಗಿರುವುದು ಕಂಡುಬರುತ್ತದೆ.

**ಕತ್ತಿ ಅಥವಾ ಭರ್ಚಿಯನ್ನು ಹಿಡಿದು ನಿಂತ ವೀರರ ಸ್ಮಾರಕ ಶಿಲ್ಪಗಳು**

ದಾವಣಗೆರೆ ತಾಲೂಕು ಆಲೂರು ಗ್ರಾಮದ ಸ್ಮಾರಕಶಿಲ್ಪವೊಂದರಲ್ಲಿ ಮೂವರು ವೀರರು ಹೋರಾಟದಲ್ಲಿ ಮಡಿದಿರುವುದನ್ನು ಚಿತ್ರಿಸಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ವೀರರು ಬಲಗೈಯಲ್ಲಿ ಕತ್ತಿಯನ್ನು ಹಿಡಿದು ತಮ್ಮ ಬಲಭುಜದ ಮೇಲೆ ಇಟ್ಟುಕೊಂಡಿರುವಂತೆ ಕೆತ್ತಲಾಗಿದೆ. ವಸ್ತ್ರದಿಂದ ಮುಡಿಯನ್ನು ನೆತ್ತಿಯ ಮೇಲೆ ಕಟ್ಟಿರುವರು. ಈ ವೀರರು ಧರಿಸಿರುವ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಸ್ಮಾರಕದ ಅಂಚಿನ ಪಟ್ಟಿಯ ಸುತ್ತಲೂ ಹೂಬಳ್ಳಿಯ ಅಲಂಕರಣ ಮಾಡಲಾಗಿದೆ. ಹೊನ್ನಾಳಿ ತಾಲೂಕು ಕಮ್ಮಾರಗಟ್ಟೆ ಶಾಲೆ ಆವರಣದಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಎಡಗೈಯಲ್ಲಿ ಬಾಕು ಹಿಡಿದು, ಬಲಗೈಯಲ್ಲಿರುವ ಕತ್ತಿಯನ್ನು ಭುಜದ ಮೇಲೆ ಇಟ್ಟುಕೊಂಡಂತೆ ಕಂಡರಿಸಲಾಗಿದೆ. ವಸ್ತ್ರದಿಂದ ತಲೆಯಲ್ಲಿ ಮುಡಿಯನ್ನು ಎಡಕ್ಕೆ ಕಟ್ಟಿ, ಉರಿಮೀಸೆ ಬಿಟ್ಟಿರುವಂತೆ ಚಿತ್ರಿಸಲಾಗಿದೆ. ಕಿವಿಯೋಲೆ, ಕೊರಳಲ್ಲಿ ತಾಯಿತವನ್ನು ಹಾಕಿಕೊಂಡಿರುವುದು ಕಂಡುಬರುತ್ತದೆ. ಇದೇ ವಿವರಗಳನ್ನು ಹೊಂದಿರುವ ಮತ್ತೊಂದು ಸ್ಮಾರಕಶಿಲ್ಪ ಅದೇ ಸ್ಥಳದಲ್ಲಿ ಕಂಡುಬರುವುದು. ಆದರೆ ಸ್ಮಾರಕದಲ್ಲಿ ವೀರನ ಬಲಭಾಗದಲ್ಲಿ

ನಾಯಿಯ ಚಿತ್ರಣವಿದೆ. ಮಾಸಡಿ ಗ್ರಾಮದ ಸ್ಮಾರಕಶಿಲ್ಪವೊಂದರಲ್ಲಿ ಇಬ್ಬರು ವೀರರನ್ನು ಕಂಡರಿಸಲಾಗಿದೆ. ಒಬ್ಬ ವೀರನು ಒಂದು ಕೈಯಲ್ಲಿ ಬಾಕು, ಮತ್ತೊಂದು ಕೈಯಲ್ಲಿ ದಂಡ(ಕೋಲು) ಹಿಡಿದಿದ್ದಾರೆ. ಇನ್ನೊಬ್ಬ ವೀರನು ಕತ್ತಿ ಮತ್ತು ಬಾಕು ಆಯುಧಗಳನ್ನು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ. ಇಬ್ಬರೂ ವಸ್ತ್ರದಿಂದ ಮುಡಿಯನ್ನು ಬಲಕ್ಕೆ ಇರುವಂತೆ ಕಟ್ಟಿದ್ದು, ಕೊರಳಲ್ಲಿ ತಾಯಿತ ಮುಂತಾದ ಆಭರಣಗಳು ಹಾಗೂ ಹನುಮಾನ್ ಚಡ್ಡಿಯನ್ನು ಧರಿಸಿಕೊಂಡಿರುವಂತೆ ಬಿಡಿಸಲಾಗಿದೆ. ಕತ್ತಿಗಿ ಗ್ರಾಮದಲ್ಲಿರುವ ಒಂದು ಶಿಲ್ಪದಲ್ಲಿ ವೀರನು ಬಾಕು ಮತ್ತು ಕತ್ತಿಯನ್ನು ಹಿಡಿದು ನಿಂತಿರುವನು. ಅವನ ಎಡ ಮತ್ತು ಬಲಭಾಗದಲ್ಲಿ ಇಬ್ಬರು ಶತ್ರುಗಳನ್ನು ಚಿಕ್ಕದಾಗಿ ಕೆತ್ತನೆ ಮಾಡಲಾಗಿದೆ.

ಚನ್ನಗಿರಿ ತಾಲೂಕು ಮಲಹಾಳ್ ಗ್ರಾಮದ ಒಂದು ಸ್ಮಾರಕದಲ್ಲಿ ವೀರನು ಭರ್ಚಿ ಮತ್ತು ಕತ್ತಿ ಹಿಡಿದು ನಿಂತಿರುವುದನ್ನು ಕಂಡರಿಸಿದೆ. ಕತ್ತಿ ಹಾಗೂ ಸೊಂಟದಲ್ಲಿರುವ ಕಿರುಗತ್ತಿಗಳಿಗೆ ಕಟ್ಟಿರುವ ಕುಚ್ಚುಗಳು ಕೆಳಗೆ ನೇತಾಡುತ್ತಿರುವಂತೆ ಕೆತ್ತಲಾಗಿದೆ. ಸ್ಮಾರಕದಲ್ಲಿ ವೀರನ ಉಡುಪು ಮತ್ತು ಆಭರಣಗಳು ಆಕರ್ಷಕವಾಗಿ ಮೂಡಿಬಂದಿವೆ. ಜಗಲೂರು ತಾಲೂಕು ಕಲ್ಲೇದೇವರಪುರ ಗ್ರಾಮದ ಸ್ಮಾರಕವೊಂದರಲ್ಲಿ ವೀರನು ಎಡಗೈಯಲ್ಲಿ ಬಾಕು ಹಿಡಿದು ಎಡಕ್ಕೆ ಚಾಚಿದ್ದರೆ, ಬಲಗೈಯಲ್ಲಿ ಹಿಡಿದಿರುವ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದಿರುವಂತೆ ಕಂಡರಿಸಲಾಗಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ವೀರನು ಎದೆಗವಚವನ್ನು ಧರಿಸಿರುವಂತೆ ಬಿಡಿಸಿರುವುದು ಈ ಸ್ಮಾರಕಶಿಲ್ಪದ ವಿಶೇಷ ಲಕ್ಷಣವಾಗಿದೆ. ಹರಪನಹಳ್ಳಿ ತಾಲೂಕು ಈಶಾಪುರ ಗ್ರಾಮದ ಸ್ಮಾರಕಶಿಲ್ಪವೊಂದರಲ್ಲಿ ವೀರರಿಬ್ಬರು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಸಮಭಂಗಿಯಲ್ಲಿ ನಿಂತಿರುವಂತೆ ಕಂಡರಿಸಲಾಗಿದೆ. ಕಡತಿ ಗ್ರಾಮದ ಶಿಲ್ಪದಲ್ಲಿ ವೀರನು ಚೂರಿ ಮತ್ತು ಕತ್ತಿಯನ್ನು ಹಿಡಿದು ಯುದ್ಧಸನ್ನದ್ಧನಾಗಿರುವ ರೀತಿ ಚಿತ್ರಿಸಲಾಗಿದೆ. ತೆಲಗಿ ಗ್ರಾಮದ ಕೊಟ್ರೇಶ್ ಎಂಬುವವರ ಮನೆ ಮುಂದಿರುವ ಸ್ಮಾರಕದಲ್ಲಿ ವೀರನು ಭರ್ಚಿಯನ್ನು ಹಿಡಿದು ಯುದ್ಧಸನ್ನದ್ಧನಾಗಿರುವನು. ಅವನ ಎಡಭಾಗದಲ್ಲಿ ನಿಂತಿರುವ ಕುದುರೆಯೊಂದನ್ನು ಕೆತ್ತಲಾಗಿದೆ. ಶಿಲ್ಪದ ಮೇಲ್ಭಾಗದಲ್ಲಿ ಶಿವಲಿಂಗದ ಚಿತ್ರಣವಿದೆ.

**ಬಂದೂಕು ಹಿಡಿದು ನಿಂತಿರುವ ವೀರರ ಸ್ಮಾರಕ ಶಿಲ್ಪಗಳು**

ಪಿರಂಗಿ, ಗುಂಡುಗೋವಿ, ಶತಘ್ನಿ ಮುಂತಾದ ಸಿಡಿಮದ್ದಿನ ಆಯುಧಗಳು ಹದಿನಾರನೆಯ ಶತಮಾನದಿಂದ ಈಚಿನ ಕಾವ್ಯಗಳಲ್ಲಿ ಯಥೇಚ್ಛವಾಗಿ ಕಾಣಿಸಿಕೊಳ್ಳುತ್ತವೆ[೧೧೭] ಎಂಬ ವಿದ್ವಾಂಸ ಎಂ. ಚಿದಾನಂದಮೂರ್ತಿ ಅವರ ಅಭಿಪ್ರಾಯವನ್ನು ವೀರಗಲ್ಲುಗಳು ಸಮರ್ಥಿಸುತ್ತವೆ. ಹದಿನಾರನೆಯ ಶತಮಾನದ ನಂತರದ ಸ್ಮಾರಕಶಿಲ್ಪಗಳಲ್ಲಿ ಕೋವಿ ಹಿಡಿದಿರುವ ಚಿತ್ರಣಗಳು ದೊರೆಯುತ್ತವೆ. ರಾಯಚೂರಿನ ಪ್ರಾಚ್ಯವಸ್ತು ಸಂಗ್ರಹಾಲಯ, ಜಿಲ್ಲಾ ಅಗ್ನಿಶಾಮಕ ದಳದ ಕಛೇರಿ ಮತ್ತು ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್ ಅವರ ಕಛೇರಿ ಆವರಣಗಳಲ್ಲಿ

ಸುಮಾರು ಐವತ್ತಕ್ಕೂ ಮಿಗಿಲಾಗಿ ಬಂದೂಕನ್ನು ಹಿಡಿದು ನಿಂತಿರುವ ವೀರರ ಸ್ಮಾರಕಶಿಲ್ಪಗಳು ಕಂಡುಬರುತ್ತವೆ ಎಂದು ವಿದ್ವಾಂಸರಾದ ಆರ್. ಶೇಷಶಾಸ್ತ್ರಿ ಅವರು ಅಭಿಪ್ರಾಯಿಸಿರುವುದುಂಟು.[೧೧೮] ಪ್ರಸ್ತುತ ಅಧ್ಯಯನ ಪ್ರದೇಶದಲ್ಲೂ ಬಂದೂಕು ಹಿಡಿದಿರುವ ವೀರರ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಹೊನ್ನಾಳಿ ತಾಲೂಕು ಸೊರಟೂರು ಗ್ರಾಮದ ಆಂಜನೇಯ ದೇವಸ್ಥಾನದ ಬಳಿಯಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಎಡಗೈಯಲ್ಲಿ ಬಂದೂಕವನ್ನು ಹಿಡಿದು ನಿಂತಿದ್ದಾನೆ. ಹರಪನಹಳ್ಳಿ ತಾಲೂಕು ಯಡಿಹಳ್ಳಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಎಡಗೈಯಲ್ಲಿ ಬಂದೂಕು ಮತ್ತು ಬಲಗೈಯಲ್ಲಿ ಕತ್ತಿ ಹಿಡಿದು ನಿಂತಿರುವ ಚಿತ್ರಣವಿದೆ. ಚನ್ನಗಿರಿ ತಾಲೂಕು ಬೆಟ್ಟಕಡೂರು ಗ್ರಾಮದ ಸ್ಮಾರಕವೊಂದರಲ್ಲಿ ಅಶ್ವಾರೂಢನಾಗಿರುವ ವೀರನು ಬಲಗೈಯಲ್ಲಿ ಬಂದೂಕನ್ನು ಹಿಡಿದಿರುವುದನ್ನು ಶಿಲ್ಪಿ ಸೊಗಸಾಗಿ ಕೆತ್ತಿದ್ದಾನೆ. ಇದೇ ತಾಲೂಕಿನ ಲಕ್ಷ್ಮೀಸಾಗರ ಗ್ರಾಮದಲ್ಲಿ ಬಂದೂಕು ಹಿಡಿದು ಹೋರಾಡುತ್ತಿರುವ ವೀರನ ಸ್ಮಾರಕಶಿಲ್ಪ ಕಂಡುಬಂದಿದೆ. ಕೊಡಗನೂರು ಗ್ರಾಮದ ಸ್ಮಾರಕದಲ್ಲಿ ಪತಿ ಕೋವಿ ಹಿಡಿದು ನಿಂತುಕೊಂಡಿದ್ದಾನೆ. ಪತ್ನಿ ಬಲಗೈ ಮೇಲೆತ್ತಿ ಹೆಬ್ಬೆರಳುಗಳ ಮಧ್ಯೆ ನಿಂಬೆಹಣ್ಣು ಹಿಡಿದಿದ್ದಾಳೆ.

### ವಿಜಯನಗರೋತ್ತರ ಕಾಲದ ಸ್ಮಾರಕ ಶಿಲ್ಪಗಳು

ವಿಜಯನಗರ ನಂತರದ ಕಾಲದಲ್ಲಿ ದೊರೆಯುವ ಸ್ಮಾರಕಶಿಲ್ಪಗಳ ಮೇಲ್ಭಾಗದಲ್ಲಿ ಸಿಂಹಲಾಟ (ಕೀರ್ತಿಮುಖ)ವನ್ನು ಬಿಡಿಸಿರಲಾಗಿರುತ್ತದೆ.[೧೧೯] ಇಂತಹ ಸ್ಮಾರಕಶಿಲ್ಪಗಳು ಬಹುತೇಕ ಆ ಪ್ರದೇಶದ ಪಾಳೆಯಗಾರರ ಆಳ್ವಿಕೆ ಕಾಲದಲ್ಲಿ ಹಾಕಿಸಿದವುಗಳಾಗಿರುತ್ತವೆ. ಸ್ಮಾರಕಶಿಲ್ಪಗಳನ್ನು ನಡೆಸುವುದು ಪಾಳೆಯಗಾರರ ಕಾಲದಲ್ಲಿ ಒಂದು ಸಂಪ್ರದಾಯವಾಗಿರಲಿಲ್ಲವೆಂದು ತೋರುತ್ತದೆ. ಇದಕ್ಕೆ ಕಾರಣ ಅವರ ಅವಧಿಯ ಸ್ಮಾರಕಶಿಲ್ಪಗಳು ಕಡಿಮೆ ಸಂಖ್ಯೆಯಲ್ಲಿ ದೊರೆಯುವುದು. ಪ್ರಸ್ತುತ ಅಧ್ಯಯನ ಪ್ರದೇಶದ ಕೆಲವು ಗ್ರಾಮಗಳಲ್ಲಿ ವಿಜಯನಗರೋತ್ತರ ಕಾಲದ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಅವುಗಳೆಲ್ಲವೂ ಲಿಪಿರಹಿತವಾಗಿವೆ. ಆದ್ದರಿಂದ ಆ ಸ್ಮಾರಕಶಿಲ್ಪಗಳು ಇದೇ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದವುಗಳೆಂದು ನಿರ್ದಿಷ್ಟವಾಗಿ ಹೇಳಲು ಅಸಾಧ್ಯವಾಗಿದೆ.

ದಾವಣಗೆರೆ ತಾಲೂಕು ಅವರಗೆರೆ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಬಲಗೈಯಲ್ಲಿ ಬಾಕುವನ್ನು ಹಿಡಿದು ಯುದ್ಧಸನ್ನದ್ಧನಾಗಿರುವಂತೆ ಚಿತ್ರಿಸಲಾಗಿದೆ. ವಸ್ತ್ರದಿಂದ ನೆತ್ತಿಯ ಮೇಲೆ ಮುಡಿಯನ್ನು ಕಟ್ಟಿದ್ದು, ಮಲ್ಲಗಚ್ಚೆಯ ಉಡುಪನ್ನು ಧರಿಸಿರುವುದನ್ನು ತೋರಿಸಲಾಗಿದೆ. ಕುದುರೆಯು ದಿಬ್ಬವನ್ನು ಏರಿ ನಿಂತಿದೆ. ಸ್ಮಾರಕದ ಮೇಲ್ಭಾಗದಲ್ಲಿ ಕೀರ್ತಿಮುಖವಿದ್ದು, ಅದರ ಸುತ್ತಲೂ ಹೂಬಳ್ಳಿಯ ಅಲಂಕರಣವಿದೆ. ಹರಿಹರ ತಾಲೂಕು ಹರಳಹಳ್ಳಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಅಶ್ವಾರೂಢನಾಗಿ ಬಲಗೈಯಲ್ಲಿ ಕತ್ತಿ ಹಿಡಿದಿರುವಂತೆ ಕಂಡರಿಸಲಾಗಿದೆ. ಇಲ್ಲಿ ವೀರನು ಆಯುಧವೊಂದನ್ನು ಎಡಗೈಯಲ್ಲಿ ಹಿಡಿದು ಅದರ ಕೊಂಡಿಯ ಮೂಲಕ ಕುದುರೆ ಯನ್ನು ನಿಯಂತ್ರಿಸಿರುವಂತೆ ಕೆತ್ತಿರುವುದು ಸ್ಮಾರಕಶಿಲ್ಪದ ವಿಶೇಷವೆನಿಸಿದೆ. ಸ್ಮಾರಕಶಿಲ್ಪದ ಮೇಲ್ತುದಿಯಲ್ಲಿ

ಕೀರ್ತಿಮುಖ, ಸೂರ್ಯ-ಚಂದ್ರರ ಚಿತ್ರಣಗಳಿವೆ. ಚನ್ನಗಿರಿ ತಾಲೂಕು ಮಲಹಾಳ್ ಗ್ರಾಮದ ವೀರಗಾರರ ಗುಡಿಯಲ್ಲಿರುವ ಸ್ಮಾರಕಶಿಲ್ಪದಲ್ಲಿ ವೀರನು ಬಲಗೈಯಲ್ಲಿ ಬಾಕು ಹಿಡಿದು ನಿಂತಿರುವ ದೃಶ್ಯವಿದೆ. ಇಲ್ಲಿ ವೀರನನ್ನು ಪೀಠದ ಮೇಲೆ ನಿಂತಿರುವಂತೆ ಚಿತ್ರಿಸಿರುವುದು ವಿಶೇಷತೆಯಾಗಿದೆ. ಸ್ಮಾರಕದ ಸುತ್ತಲೂ ಹೂಬಳ್ಳಿಯ ಅಲಂಕರಣವಿದ್ದು, ಮೇಲ್ಭಾಗ ಮಧ್ಯದಲ್ಲಿ ಕೀರ್ತಿಮುಖವನ್ನು ಚಿತ್ರಿಸಲಾಗಿದೆ. ಜಗಲೂರು ತಾಲೂಕು ಹೊಸಕೆರೆ ಗ್ರಾಮದ ಸ್ಮಾರಕಶಿಲ್ಪದಲ್ಲಿ ಇಬ್ಬರು ವೀರರನ್ನು ಚಿತ್ರಿಸಲಾಗಿದೆ. ಒಬ್ಬ ವೀರನನ್ನು ಪ್ರಧಾನವಾಗಿ, ಮತ್ತೊಬ್ಬ ವೀರನನ್ನು ಚಿಕ್ಕದಾಗಿ ತೋರಿಸಲಾಗಿದೆ. ಆದರೆ ಅವರು ಹಿಡಿದಿರುವ ಆಯುಧ, ಕೇಶವಿನ್ಯಾಸ, ಉಡುಪುಗಳು ಒಂದೇ ರೀತಿಯಲ್ಲಿವೆ. ಸ್ಮಾರಕದ ಮೇಲ್ಭಾಗದಲ್ಲಿ ಕೀರ್ತಿಮುಖದ ಚಿತ್ರಣವಿದೆ. ಈ ಸ್ಮಾರಕದ ವೀರರ ಲಕ್ಷಣಗಳನ್ನು ಗಮನಿಸಿದರೆ ಪ್ರಾಯಶಃ ಸಹೋದರರಿಬ್ಬರು ಯಾವುದೋ ಒಂದು ಹೋರಾಟದಲ್ಲಿ ಮಡಿದಿರಬಹುದೆಂದು ತೋರುತ್ತದೆ. ಇದೇ ತಾಲೂಕಿನ ಹಳವದಂಡಿ ಗ್ರಾಮದ ಹೊಲವೊಂದರಲ್ಲಿರುವ ಮೂರು ಸ್ಮಾರಕಶಿಲ್ಪಗಳಲ್ಲಿ ವೀರರು ಅಶ್ವಾರೂಢರಾಗಿ ಭರ್ಚಿಗಳನ್ನು ಹಿಡಿದಿರುವಂತೆ ಕಂಡರಿಸಲಾಗಿದೆ. ಇದೇ ರೀತಿ ಅಶ್ವಾರೂಢನಾಗಿರುವ ವೀರನ ಸ್ಮಾರಕವೊಂದು ಕಣಕುಪ್ಪೆ ಕೋಟೆಯಲ್ಲಿದೆ. ಹರಪನಹಳ್ಳಿ ತಾಲೂಕು ಬಾಡ ಗ್ರಾಮದಲ್ಲಿರುವ ಸ್ಮಾರಕಶಿಲ್ಪವೊಂದನ್ನು ಶಿಲ್ಪಿ ತುಂಬಾ ಸುಂದರವಾಗಿ ಚಿತ್ರಿಸಿದ್ದಾನೆ. ಈ ಸ್ಮಾರಕದಲ್ಲಿರುವ ವೀರನು ಬಿಲ್ಲು ಮತ್ತು ಕತ್ತಿಯನ್ನು ಹಿಡಿದು ನಿಂತಿದ್ದಾನೆ. ಅವನ ಸೊಂಟದಲ್ಲಿರುವ ಕಿರುಗತ್ತಿ ಇದೆ. ನೆತ್ತಿಯ ಮೇಲೆ ಮುಡಿಕಟ್ಟಿ, ಕಿವಿಯೋಲೆ ಹಾಗೂ ಮಲ್ಲಗಚ್ಚೆ ಉಡುಪನ್ನು ಧರಿಸಿರುವಂತೆ ತೋರಿಸಲಾಗಿದೆ. ಶಿಲ್ಪದ ಮೇಲುತುದಿಯ ಮಧ್ಯದಲ್ಲಿ ಕೀರ್ತಿಮುಖ ಮತ್ತು ಅದರ ಎರಡು ಬದಿಯಲ್ಲಿ ಸೂರ್ಯ-ಚಂದ್ರರನ್ನು ಕಂಡರಿಸಲಾಗಿದೆ. ಇದೇ ತಾಲೂಕಿನ ಕಡತಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದು, ಬಲಗೈಯಲ್ಲಿ ಇರುವ ಕತ್ತಿಯನ್ನು ನೆಲಕ್ಕೆ ಬಾಗಿಸಿ ನಿಂತಿರುವನು. ಅವನ ಬೆನ್ನ ಹಿಂದೆ ಕಟ್ಟಿಕೊಂಡಿರುವ ಬಿಲ್ಲುಗಳ ಬತ್ತಳಿಕೆಯ ಚಿತ್ರಣವಿದೆ. ವೀರನು ಧರಿಸಿರುವ ಮಲ್ಲಗಚ್ಚೆಯ ಕುಚ್ಚುಗಳು ಸುತ್ತಲೂ ನೇತಾಡುತ್ತಿರುವ ಹಾಗೆ ಚಿತ್ರಿಸಲಾಗಿದೆ. ಸ್ಮಾರಕದ ಮೇಲ್ಭಾಗದಲ್ಲಿ ಶಿವಲಿಂಗ, ನಂದಿ, ಕರುವಿಗೆ ಹಾಲುಣಿಸುತ್ತಿರುವ ಆಕಳು ಹಾಗೂ ಸೂರ್ಯ-ಚಂದ್ರರ ಚಿತ್ರಣಗಳಿವೆ. ಕೊನೆಯಲ್ಲಿ ಕೀರ್ತಿಮುಖವನ್ನು ಕಂಡರಿಸಲಾಗಿದೆ.

### ಮೀಸೆ ಮತ್ತು ಉದ್ದವಾದ ಗಡ್ಡ ಬಿಟ್ಟಿರುವ ವೀರರ ಸ್ಮಾರಕ ಶಿಲ್ಪಗಳು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ರಾಷ್ಟ್ರಕೂಟ ಕಾಲದಿಂದ ವಿಜಯನಗರೋತ್ತರ ಕಾಲದವರೆಗೆ ಹಲವು ಪ್ರಕಾರದ ಸ್ಮಾರಕಶಿಲ್ಪಗಳು ಕಂಡುಬರುವುದನ್ನು ಗಮನಿಸಿದ್ದೇನೆ. ಆ ಪ್ರಕಾರದ ಸ್ಮಾರಕಶಿಲ್ಪಗಳು ಸಾಮಾನ್ಯವಾಗಿ ಕರ್ನಾಟಕದ ಎಲ್ಲ ಪ್ರದೇಶಗಳಲ್ಲಿ ದೊರೆಯುತ್ತವೆ. ಆದರೆ ದಾವಣಗೆರೆ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಕಂಡುಬರುವ ಸ್ಮಾರಕ ಶಿಲ್ಪಗಳು ವಿಶೇಷವಾಗಿವೆ. ಈ ಸ್ಮಾರಕಶಿಲ್ಪಗಳಲ್ಲಿ ವೀರರು ಮೀಸೆ ಮತ್ತು ಉದ್ದವಾದ ಗಡ್ಡ ಬಿಟ್ಟ ವಿಶಿಷ್ಟ ಶೈಲಿಯಲ್ಲಿರುವುದನ್ನು ಗುರುತಿಸಿದ್ದೇನೆ. ಇಂತಹ ಸ್ಮಾರಕಶಿಲ್ಪಗಳ ಕುರಿತು ಬೇರೆ ಎಲ್ಲಿಯೂ ಅಧ್ಯಯನಗಳಾಗಿರುವ ಬಗ್ಗೆ ಮಾಹಿತಿ

ಇಲ್ಲ. ಆ ಸ್ಮಾರಕಶಿಲ್ಪಗಳ ನಿರ್ಮಾಣಕ್ಕೆ ಬಳಸಿರುವ ಶಿಲೆ ಹಾಗೂ ಅವುಗಳಲ್ಲಿ ಮೂಡಿಬಂದಿರುವ ಕೇಶವಿನ್ಯಾಸ ಮತ್ತು ಉಡುಪುಗಳು ವಿಶಿಷ್ಟವಾಗಿದ್ದು, ಆ ಸ್ಮಾರಕಗಳಲ್ಲಿ ವೀರರು ಧರಿಸಿರುವ ಉಡುಪು ಶಿವಾಜಿಯ ವೇಷಭೂಷಣವನ್ನು ಹೋಲುತ್ತವೆ. ಪ್ರಾಯಶಃ ಈ ಸ್ಮಾರಕಶಿಲ್ಪಗಳು ಈ ಭಾಗದಲ್ಲಿ ವಾಸವಿದ್ದು ಮರಾಠ ಸೈನಿಕರ ಸ್ಮಾರಕಗಳಾಗಿರಬಹುದು. ಆ ಕುರಿತು ಕ್ಷೇತ್ರಕಾರ್ಯವನ್ನು ಕೂಡ ಮಾಡಿ ಅವುಗಳನ್ನು ಯಾರು ಪೂಜೆ ಮಾಡುತ್ತಾರೆ, ಯಾರು ಮಾಡುತ್ತಿಲ್ಲ ಮತ್ತು ಅವುಗಳ ಬಗ್ಗೆ ಕಥೆಗಳೇನಾದರೂ ಇವೆಯೇ ಎಂದು ವಿಚಾರಿಸಿದಾಗ ಚನ್ನಗಿರಿ ತಾಲೂಕು ಉಬ್ರಾಣಿ ಎಂಬ ಒಂದು ಊರಿನಲ್ಲಿ ಮಾತ್ರ ಶೆಟ್ಟಿಭಂಜಗರು(ಮರಾಠರ ಒಳಪಂಗಡ) ಪೂಜೆ ಮಾಡಿಕೊಂಡು ಬರುತ್ತಿರುವುದು ತಿಳಿದುಬಂದಿತು. ಇತರೆ ಗ್ರಾಮಗಳಲ್ಲಿರುವ ಸ್ಮಾರಕಶಿಲ್ಪಗಳನ್ನು ನಾಯಕ ಮತ್ತು ಸಾದರ ಲಿಂಗಾಯಿತರು ಪೂಜೆ ಮಾಡುತ್ತಿರುವುದು ಕಂಡುಬಂದಿದೆ. ಅವರು ಪೂಜಿಸುವುದಕ್ಕೆ ನಿರ್ದಿಷ್ಟ ಕಾರಣ ತಿಳಿದುಬಂದಿಲ್ಲ. ಆದರೂ ಸ್ಮಾರಕಶಿಲ್ಪಗಳನ್ನು ಪೂಜಿಸುವುದಕ್ಕಾಗಿಯೇ ಕೆಲವರನ್ನು ನೇಮಿಸುವ ಸಂಪ್ರದಾಯವಿತ್ತು. ವೀರನ ವಂಶಸ್ಥರು ಕಾಲಾನಂತರದಲ್ಲಿ ಪೂಜೆ ಮಾಡುವುದನ್ನು ನಿಲ್ಲಿಸಿದರೂ ಅದಕ್ಕಾಗಿಯೇ ನೇಮಕಗೊಂಡವರು ಪೂಜೆ ಮಾಡುವುದನ್ನು ಮುಂದುವರಿಸಿಕೊಂಡು ಬರುತ್ತಿದ್ದರು. ಮಲಹಾಳ್, ದಾಗಿನಕಟ್ಟೆ ಮತ್ತು ಕರಿಲೆಕ್ಕೇನಹಳ್ಳಿಯ ಸ್ಮಾರಕಗಳನ್ನು ಪೂಜಿಸುತ್ತಿರುವ ನಾಯಕ ಮತ್ತು ಸಾದರಲಿಂಗಾಯಿತರು ಅದಕ್ಕಾಗಿಯೇ ನೇಮಕಗೊಂಡವರೆಂದು ತೋರುತ್ತದೆ.

ಅಧ್ಯಯನ ಪ್ರದೇಶದ ಇತರೆ ಸ್ಮಾರಕಗಳಲ್ಲಿರುವ ವೀರರು ಸಾಮಾನ್ಯವಾಗಿ ತಲೆಯಲ್ಲಿ ಮುಡಿಯನ್ನು ಕಟ್ಟಿರುವಂತೆ ಚಿತ್ರಿಸಲಾಗಿರುತ್ತದೆ. ಆದರೆ ಈ ಸ್ಮಾರಕಶಿಲ್ಪಗಳಲ್ಲಿ ವೀರರು ಮುಡಿಕಟ್ಟಿ ಟೋಪಿಯನ್ನು ಹಾಕಿಕೊಂಡಂತೆ ಚಿತ್ರಿಸಿ, ಮೀಸೆ ಮತ್ತು ಉದ್ದವಾದ ಗಡ್ಡ ಬಿಟ್ಟಿರುವುದನ್ನು ಕಂಡರಿಸಲಾಗಿದೆ. ಅವರು ಮರಾಠ ಸೈನಿಕರು ಹಾಗೂ ಮಹಾ ಶೂರರಾಗದ್ದರೆಂಬುದನ್ನು ಶಿಲ್ಪಿಯು ಹೀಗೆ ಚಿತ್ರಿಸಿರುವನೆಂದು ತೋರುತ್ತದೆ. ಚನ್ನಗಿರಿ ತಾಲೂಕು ಉಬ್ರಾಣಿಯಲ್ಲಿರುವ ಒಂದು ಸ್ಮಾರಕವನ್ನು ಶಿಲ್ಪಿ ತುಂಬ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಅಶ್ವಾರೂಢನಾಗಿರುವ ವೀರನು ಬಲಗೈಯಲ್ಲಿರುವ ಕತ್ತಿಯನ್ನು ಬಲಭುಜದ ಮೇಲೆ ಇಟ್ಟುಕೊಂಡಿರುವಂತೆ ಕೆತ್ತಲಾಗಿದೆ. ತಲೆಯಲ್ಲಿ ಮುಡಿಕಟ್ಟಿ ಟೋಪಿ ಹಾಕಿದ್ದಾನೆ. ಅವನು ಬಿಟ್ಟಿರುವ ಗಡ್ಡವು ಎದೆ ಭಾಗದವರೆಗೂ ಇಳಿಬಿದ್ದಿರುವಂತೆ ಚಿತ್ರಿಸಲಾಗಿದೆ. ಸೇವಕನೊಬ್ಬ ವೀರನ ತಲೆ ಮೇಲೆ ಬರುವಂತೆ ರಾಜಲಾಂಛನ ಛತ್ರಿ ಹಿಡಿದಿದ್ದಾನೆ. ಮತ್ತೊಬ್ಬ ಸೇವಕ ಧ್ವಜವನ್ನು ಎರಡು ಕೈಯಲ್ಲಿ ಹಿಡಿದು ಮುನ್ನಡೆಯುತ್ತಿರುವುದನ್ನು ಕಂಡರಿಸಲಾಗಿದೆ. ವೀರನ ಹಿಂಬದಿಯಲ್ಲಿರುವ ಅಪ್ಸರೆಯರಿಬ್ಬರು ಚಾಮರ ಮತ್ತು ಭಂಡಾರದ ಕುಂಡ ಹಿಡಿದು ನಿಂತಿರುವ ಚಿತ್ರಣವಿದೆ. ಕುದುರೆಯ ಅಲಂಕಾರಕ್ಕೆ ಶಿಲ್ಪಿ ವಿಶೇಷ ಪ್ರಾಶಸ್ತ್ಯ ನೀಡಿರುವುದು ಕಂಡುಬರುತ್ತದೆ. ಪ್ರಾಯಶಃ ಈ ಸ್ಮಾರಕವು ಶಿವಾಜಿಯ ತಂದೆ ಷಹಾಜಿ ಬೋಸ್ಲೆಯ ನೆನಪಿನಲ್ಲಿ ನಿರ್ಮಾಣ ಮಾಡಿದ್ದಾಗಿರಬಹುದು. ಇದೇ ತಾಲೂಕಿನ ದಾಗಿನಕಟ್ಟೆ ಸ್ಮಾರಕಶಿಲ್ಪದಲ್ಲೂ ವೀರನು ಅಶ್ವಾರೂಢನಾಗಿ ಕತ್ತಿ ಹಿಡಿದಿದ್ದಾನೆ. ಉದ್ದವಾದ ಗಡ್ಡ

ಬಿಟ್ಟಿರುವುದನ್ನು ತೋರಿಸಲಾಗಿದೆ. ಇಲ್ಲಿ ಸೇವಕರಿಬ್ಬರು ವೀರನಿಗೆ ರಾಜಛತ್ರಿಗಳನ್ನು ಹಿಡಿದಿರುವಂತೆ ಕಂಡರಿಸಲಾಗಿದೆ.

ಮಲಹಾಳ್ ಗ್ರಾಮದ ವೀರಗಾರರ ಗುಡಿಯಲ್ಲಿರುವ ಸ್ಮಾರಕವೊಂದನ್ನು ಶಿಲ್ಪಿ ತುಂಬ ಆಲಂಕಾರಿಕವಾಗಿ ಚಿತ್ರಿಸಿರುವುದು ಕಂಡುಬರುತ್ತದೆ. ಈ ಸ್ಮಾರಕದಲ್ಲಿ ವೀರನು ಅಶ್ವಾರೂಢನಾಗಿ ಕತ್ತಿಯನ್ನು ಹಿಡಿದಿದ್ದಾನೆ. ತಲೆಯಲ್ಲಿ ಪೇಟವನ್ನು ಧರಿಸಿ, ಮೀಸೆ ಮತ್ತು ಗಡ್ಡವನ್ನು ಬಿಟ್ಟಿರುವಂತೆ ಚಿತ್ರಿಸಲಾಗಿದೆ. ಸ್ಮಾರಕದ ಕೆಳಭಾಗದಲ್ಲಿ ಎರಡು ಸ್ತಂಭಗಳನ್ನು ಕೆತ್ತಿ ಅದರ ಮೇಲೆ ಕಮಾನಿನಾಕಾರದ ಕೆತ್ತನೆ ವೀರನ ಸುತ್ತಲೂ ಮೂಡಿಬಂದಿದೆ. ಸ್ಮಾರಕದ ಅಂಚಿನ ಸುತ್ತಲೂ ಹೂಬಳ್ಳಿಯ ಅಲಂಕರಣವನ್ನು ಮಾಡಿ ಮೇಲ್ಭಾಗದಲ್ಲಿ ಕೀರ್ತಿಮುಖವನ್ನು ಬಿಡಿಸಲಾಗಿದೆ. ವೀರನು ಧರಿಸಿರುವ ಆಭರಣ ಮತ್ತು ಕುದುರೆಯ ಅಲಂಕರಣವು ಆಕರ್ಷಕವಾಗಿ ಮೂಡಿಬಂದಿವೆ. ಅದೇ ಸ್ಥಳದಲ್ಲಿರುವ ಸ್ಮಾರಕಶಿಲ್ಪವೊಂದರಲ್ಲಿ ವೀರರಿಬ್ಬರನ್ನು ಚಿತ್ರಿಸಲಾಗಿದೆ. ಆ ವೀರರು ಒಂದು ಕೈಯಲ್ಲಿ ಬಾಕು, ಮತ್ತೊಂದು ಕೈಯಲ್ಲಿ ಕತ್ತಿ ಹಿಡಿದಿರುವುದನ್ನು ಕೆತ್ತಲಾಗಿದೆ. ಅವರ ಸೊಂಟದಲ್ಲಿ ಕಿರುಗತ್ತಿಗಳಿವೆ. ವೀರರು ಉರಿಮೀಸೆ ಹಾಗೂ ಗಡ್ಡವನ್ನು ಬಿಟ್ಟು, ತಲೆಯ ಮೇಲೆ ಟೋಪಿ ಹಾಕಿಕೊಂಡಿರುವುದನ್ನು ಚಿತ್ರಿಸಲಾಗಿದೆ. ಈ ಸ್ಮಾರಕದಲ್ಲಿ ಪಕ್ಷಿಯೊಂದರ ಚಿತ್ರಣವಿದೆ. ಈ ದೃಶ್ಯವು ವೀರರಿಬ್ಬರು ಭೀಕರವಾದ ಹೋರಾಟವೊಂದರಲ್ಲಿ ಮಡಿದರೆಂಬುದನ್ನು ಧ್ವನಿಸುತ್ತಿರಬಹುದು. ಸ್ಮಾರಕದಲ್ಲಿ ವೀರರ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಅದೇ ಗುಡಿಯಲ್ಲಿರುವ ಮತ್ತೊಂದು ಸ್ಮಾರಕದಲ್ಲಿ ಸಮಭಂಗಿಯಲ್ಲಿ ನಿಂತಿರುವ ವೀರರಿಬ್ಬರು ಬಲಗೈಯಲ್ಲಿ ಕತ್ತಿಗಳನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಅವರು ವಸ್ತ್ರದಿಂದ ಮುಡಿಕಟ್ಟಿ, ಉರಿಮೀಸೆ ಮತ್ತು ಗಡ್ಡ ಬಿಟ್ಟಿರುವುದನ್ನು ಶಿಲ್ಪಿ ಸುಂದರವಾಗಿ ಕಂಡರಿಸಿದ್ದಾನೆ. ಇಬ್ಬರು ಸಾಲಂಕೃತವಾದ ಉಡುಪು ಮತ್ತು ಆಭರಣಗಳನ್ನು ಧರಿಸಿರುವ ದೃಶ್ಯ ಕಂಡುಬರುತ್ತದೆ. ಸ್ಮಾರಕಶಿಲ್ಪದ ಕೆಳಭಾಗದ ಎರಡು ಬದಿಯಲ್ಲಿ ಸ್ತಂಭಗಳನ್ನು ಕೆತ್ತಿ ಅದರ ಮೇಲೆ ಕಮಾನು ಮಾದರಿಯಲ್ಲಿ ಅಲಂಕರಣವನ್ನು ಮಾಡಿದೆ. ಮಧ್ಯದಲ್ಲಿ ಕೀರ್ತಿಮುಖವನ್ನು ಚಿತ್ರಿಸಲಾಗಿದೆ. ಅಲ್ಲಿರುವ ಇನ್ನೊಂದು ಸ್ಮಾರಕಶಿಲ್ಪದಲ್ಲಿ ವೀರನು ಬಾಕು ಮತ್ತು ಕತ್ತಿಯನ್ನು ಹಿಡಿದು ನಿಂತಿರುವನು. ಅವನ ಸೊಂಟದ ಬಲಭಾಗದಲ್ಲಿ ಕಿರುಗತ್ತಿಯ ಚಿತ್ರಣವಿದೆ. ತಲೆಯಲ್ಲಿ ಮುಡಿಕಟ್ಟಿ, ಗಡ್ಡ ಮೀಸೆ ಬಿಟ್ಟಿರುವುದು ಕಂಡುಬರುತ್ತದೆ. ವೀರನು ಸಾಲಂಕೃತವಾದ ಉಡುಪನ್ನು ಧರಿಸಿದ್ದು, ಅದರ ಕುಚ್ಚುಗಳ ಸುತ್ತಲೂ ನೇತಾಡುತ್ತಿರುವ ಹಾಗೆ ತೋರಿಸಲಾಗಿದೆ.

ಬಸವಪಟ್ಟಣದ ರಾಮೇಶ್ವರ ದೇವಸ್ಥಾನದ ಹಿಂಭಾಗದಲ್ಲಿರುವ ಸ್ಮಾರಕಶಿಲ್ಪದಲ್ಲಿ ವೀರನು ಪಲ್ಲಕ್ಕಿ ಮತ್ತು ಕುದುರೆ ಮಧ್ಯೆ ಇರುವಂತೆ ಚಿತ್ರಿಸಲಾಗಿದೆ. ಅವನಿಗೆ ಆನೆ ಸೊಂಡಲಿನಂತಹ ಉದ್ದವಾದ ಗಡ್ಡವಿದೆ. ಸ್ಮಾರಕದ ಸುತ್ತಲೂ ಮಕರ ತೋರಣದ ಅಲಂಕರಣವನ್ನು ಮಾಡಲಾಗಿದೆ.[೨೦] ದಾವಣಗೆರೆ ತಾಲೂಕು ಕರಿಲೆಕ್ಕೇನಹಳ್ಳಿ ಗ್ರಾಮದ ಹೊಲವೊಂದರಲ್ಲಿರುವ ಸ್ಮಾರಕದಲ್ಲಿ ವೀರನು ಕುದುರೆ ಮೇಲೆ ಕುಳಿತು ಬಲಗೈಯಲ್ಲಿ ಕತ್ತಿ ಹಿಡಿದಿದ್ದಾನೆ. ತಲೆಯಲ್ಲಿ ಮುಡಿಕಟ್ಟಿ ಅದರ ಮೇಲೆ ಟೋಪಿ ಹಾಕಿರುವ ಚಿತ್ರಣವಿದೆ. ಅವನು ಚೂಪಾದ ಗಡ್ಡ

ಬಿಟ್ಟಿರುವಂತೆ ಶಿಲ್ಪಿ ತೋರಿಸಿದ್ದಾನೆ. ಕುದುರೆ ತನ್ನ ಎರಡು ಮುಂಗಾಲುಗಳನ್ನು ಮೇಲಕ್ಕೆತ್ತಿ ಹಾರುತ್ತಿರುವಂತೆ ಕಂಡರಿಸಲಾಗಿದೆ. ಸೇವಕನೊಬ್ಬ ವೀರನಿಗೆ ರಾಜಲಾಂಛನ ಛತ್ರಿ ಹಿಡಿದಿದ್ದಾನೆ. ಜಗಲೂರು ತಾಲೂಕು ಕಣಕುಪ್ಪೆ ಕೋಟೆಯಲ್ಲಿರುವ ಒಂದು ಸ್ಮಾರಕದಲ್ಲಿ ಗಡ್ಡದಾರಿಯಾಗಿರುವ ವೀರನು ಬಾಕು ಮತ್ತು ಕತ್ತಿಯನ್ನು ಹಿಡಿದು ಯುದ್ಧ ಸನ್ನದ್ಧನಾಗಿರುವಂತೆ ಕಂಡರಿಸಲಾಗಿದೆ. ಹೊನ್ನಾಳಿ ತಾಲೂಕು ಕಮ್ಮಾರಗಟ್ಟೆ ಶಾಲೆ ಆವರಣದಲ್ಲಿರುವ ಸ್ಮಾರಕದಲ್ಲಿ ಉರಿಮೀಸೆ ಬಿಟ್ಟಿರುವ ವೀರನು ಬಾಕು ಮತ್ತು ಕತ್ತಿಯನ್ನು ಹಿಡಿದು ನಿಂತಿರುವುದನ್ನು ಚಿತ್ರಿಸಲಾಗಿದೆ. ಇದೇ ತಾಲೂಕಿನ ಮಾಸಡಿ, ಕತ್ತಿಗಿ, ದೊಡ್ಡೇರಹಳ್ಳಿ, ಬೆನಕನಹಳ್ಳಿ ಹಾಗೂ ಚಿಕ್ಕಬಾಸೂರು ಗ್ರಾಮಗಳಲ್ಲಿನ ವೀರಮಾಸ್ತಿ ಸ್ಮಾರಕಶಿಲ್ಪಗಳಲ್ಲಿ ವೀರರು ಮೀಸೆ ಮತ್ತು ಉದ್ದವಾದ ಗಡ್ಡ ಬಿಟ್ಟಿರುವಂತೆ ಕೆತ್ತಿರುವುದು ಕಂಡುಬರುತ್ತದೆ.

### ೪.೨.೨ ತುರುಗಾಳಗದಲ್ಲಿ ಮಡಿದ ವೀರರ ಸ್ಮಾರಕ ಶಿಲ್ಪಗಳು

ಪ್ರಾಚೀನ ಭಾರತೀಯರಿಗೆ ಆಕಳು ದೇವರಾಗಿದ್ದಂತೆ ಆರ್ಥಿಕ ಸಂಪತ್ತಿನ ಪ್ರತೀಕವಾದ ಪ್ರಾಣಿಯೂ ಆಗಿತ್ತು. ಒಬ್ಬ ವ್ಯಕ್ತಿಯ ಶ್ರೀಮಂತಿಕೆ ಅವನು ಹೊಂದಿರುವ ದನಗಳ ಸಂಖ್ಯೆಯನ್ನು ಅವಲಂಬಿಸಿತ್ತು. ಪೌಷ್ಟಿಕ ಆಹಾರವಾದ ಹಾಲು, ತುಪ್ಪ, ಮೊಸರು ಮತ್ತು ವ್ಯವಸಾಯ ಮಾಡಲು ಒಂದು ಶಕ್ತಿಯಾಗಿ ಮಾನವನ ನೆರವಿಗೆ ನಿಂತವು. ಈ ಹಿನ್ನೆಲೆಯಲ್ಲಿ ದನಗಳನ್ನು ಹಣದ ಆಸೆಯಿಂದ ಕದಿಯಲು ಆರಂಭ ಮಾಡಿದರೆಂದು ತೋರುತ್ತದೆ. ಕಳ್ಳರು ಒಂದು ಗ್ರಾಮದ ಅಥವಾ ಒಬ್ಬ ವ್ಯಕ್ತಿಯ ದನಗಳನ್ನು ಅಪಹರಿಸಿದಾಗ ಈ ಕಾರಣಕ್ಕಾಗಿ ನಡೆಯುತ್ತಿದ್ದ ಹೋರಾಟವನ್ನು ತುರುಗೋಳ್ ಅಥವಾ ತುರುಗೋಳ ಎಂದು ಕರೆಯಲಾಗಿದೆ.[೧೨೧] ಯುದ್ಧ ಪ್ರಭೇದಗಳಲ್ಲಿ ಅತಿ ಮುಖ್ಯವಾದುದು 'ತುರುಗೋಳ್' ಹೋರಾಟವಾಗಿದ್ದು ಅದನ್ನು ತುರು+ಕೋಳ್, 'ಕೋಳ್' ಎಂಬುದು ತೆಗೆದುಕೊ ಎಂಬರ್ಥದ 'ಕೊಳ' ಎಂಬ ಧಾತುವಿನ ಭಾವನಾಮ ಎಂದು ವಿದ್ವಾಂಸರಾದ ಚಿದಾನಂದಮೂರ್ತಿಯವರು ಅರ್ಥೈಸಿದ್ದಾರೆ.[೧೨೨] ತುರುಗಾಳಗದ ಮುಖ್ಯ ಉದ್ದೇಶ ದನಗಳನ್ನು ಅಪಹರಿಸುವುದು. ತುರುಗಳನ್ನು ಅಪಹರಿಸುವುದು ಮತ್ತು ತುರುಗಳ ಅಪಹರಣವನ್ನು ತಡೆದು ಅವುಗಳ ರಕ್ಷಣೆಗಾಗಿ ಹೋರಾಡುತ್ತಿರುವುದು ಈ ಎರಡೂ ತುರುಗಾಳಗದ ಹೋರಾಟವೆಂದೇ ಗುರುತಿಸಲ್ಪಟ್ಟಿವೆ. ವಿದ್ವಾಂಸರಾದ ಆರ್. ಶೇಷಶಾಸ್ತ್ರಿಯವರು ತುರುಗಾಳಗದ ಉದ್ದೇಶವನ್ನು ಎರಡು ರೀತಿ ವಿಶ್ಲೇಷಿಸಿದ್ದಾರೆ. ಒಂದು, ಕಳ್ಳರು ಕಳ್ಳತನದ ಉದ್ದೇಶದಿಂದ ಮಾಡಿದ ಗೋಗ್ರಹಣ, ಇನ್ನೊಂದು ರಾಜಕೀಯ ಉದ್ದೇಶದಿಂದ ಮಾಡಿದ ಗೋಗ್ರಹಣ.[೧೨೩] ಇವೆರಡೂ ಮೂಲತಃ ದನಗಳನ್ನು ಅಪಹರಿಸುವುದೇ ಆಗಿದ್ದರೂ ಅವುಗಳ ಉದ್ದೇಶ ಬೇರೆಯಾಗಿರುವುದನ್ನು ಗುರುತಿಸಬಹುದು. ಕಳ್ಳರು ಮಾಡುತ್ತಿದ್ದುದನ್ನು ತಮ್ಮ ಅಗತ್ಯಕ್ಕಾಗಿ ಮಾಡುತ್ತಿದ್ದ ಲೂಟಿ ಎಂದು ಕರೆಯಬಹುದು. ರಾಜಕೀಯ ದೃಷ್ಟಿಯಿಂದ ಮಾಡಿದ ಗೋಗ್ರಹಣ ಯುದ್ಧಕ್ಕೆ ಆಹ್ವಾನ ನೀಡುವ ಇಲ್ಲವೇ ಆ ಊರಿನವರಿಗೆ, ಆ ಪ್ರದೇಶದ ರಾಜನಿಗೆ, ಸಾಮಂತನಿಗೆ ಒಂದು ರೀತಿಯ ಸವಾಲನ್ನು ಒಡ್ಡುವ ಅಥವಾ ಅಪಮಾನಿಸುವ ಉದ್ದೇಶಕ್ಕಾಗಿ ಮಾಡಿರುವುದು

ಕಂಡುಬರುತ್ತದೆ.[೧೨೪] ಉದ್ದೇಶವೇನೇ ಇರಲಿ ತುರುಗಳ ಅಪಹರಣ ಮಾಡಿದವರನ್ನು ಎದುರಿಸುವುದು ವೀರತನವೆಂದೇ ಬಗೆಯಲಾಗಿತ್ತು. ಗೋರಕ್ಷಣೆಯು ತಮ್ಮ ಪರಮ ಕರ್ತವ್ಯವೆಂದು ವೀರರು, ಜನಸಾಮಾನ್ಯರು ಭಾವಿಸಿದ್ದರು. ಅದಕ್ಕಾಗಿ ತಮ್ಮ ಪ್ರಾಣವನ್ನು ನೀಡುತ್ತಿದ್ದರು.

ವೇದ ಸಂಸ್ಕೃತಿಯ ಪರಿಚಯ ಎಂಬ ಕೃತಿಯಲ್ಲಿ ಕೆ.ಎಸ್. ನಾರಾಯಣಾಚಾರ್ಯರು ಗೋವುಗಳಿಗೆ ಸಂಬಂಧಿಸಿದ ಕಥೆಯೊಂದನ್ನು ಋಗ್ವೇದದಿಂದ ಆಯ್ದುಕೊಂಡು ವಿವರಿಸಿದ್ದಾರೆ. ಈ ಘಟನೆಯನ್ನು ಅತ್ಯಂತ ಪ್ರಾಚೀನ ತುರುಗೋಳ್ ಯುದ್ಧ ಎಂದು ಅಭಿಪ್ರಾಯಿಸಬಹುದು. ಆ ಕಥೆ ಹೀಗಿದೆ. 'ಪಣಿ'ಗಳೆಂಬ ದೈತ್ಯರು ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟರು. ಆಗ ಇಂದ್ರನು ಗೋವುಗಳನ್ನು ಹುಡುಕಲು 'ಸರಮೆ' ಎಂಬ ದೇವಶುನಿ(ನಾಯಿ)ಯನ್ನು ಕಳುಹಿಸಿದನು. ಸರಮೆಯು ಗೋವುಗಳು ಇರುವ ಜಾಗವನ್ನು ಪತ್ತೆ ಹಚ್ಚಿ ಇಂದ್ರನಿಗೆ ತಿಳಿಸಿ ಗೋವುಗಳ ಬಿಡುಗಡೆಗೆ ಸಹಾಯ ಮಾಡಿತು. ಸರಮೆಯು ಪಣಿಗಳನ್ನು ಮತ್ತು ಅವರು ಗೋವುಗಳನ್ನು ಬಚ್ಚಿಟ್ಟಿರುವ ಪ್ರದೇಶಗಳನ್ನು ಕಂಡುಹಿಡಿದ ಮೇಲೆ ಅವರು ಸರಮೆಯನ್ನು ವಿವಿಧ ಪ್ರಲೋಭನೆಗೆ ಗುರಿಪಡಿಸಿದರೆಂದು ತಿಳಿದುಬರುತ್ತದೆ.[೧೨೫] ಗೋಗ್ರಹಣದ ಖಚಿತ ಇತಿಹಾಸವನ್ನು ಮಹಾಭಾರತದ ವಿರಾಟಪರ್ವದಲ್ಲಿ ಗುರುತಿಸಬಹುದಾಗಿದೆ. ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದ ಪಾಂಡವರನ್ನು ಹಿಡಿಯುವ ರಾಜಕೀಯ ಉದ್ದೇಶದಿಂದ ದುರ್ಯೋಧನ ವಿರಾಟನ ಗೋವುಗಳನ್ನು ಹಿಡಿಯುವುದು, ಪಾಂಡವರು ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿದ್ದರೂ ಗೋರಕ್ಷಣೆಗೆ ಮುಂದಾಗುತ್ತಾರೆ.[೧೨೬] ವಿರಾಟನ ಕಡೆಯವರು ಹೇಳುವ 'ನಾವು ಬದುಕಿರುವವರೆಗೆ ದನಗಳನ್ನು ಅಪಹರಿಸಲು ಬಿಡುವುದಿಲ್ಲ. ನಾವು ಸತ್ತಮೇಲೆ ಅವು ನಮ್ಮ ಹೆಣಗಳನ್ನು ತುಳಿದು ಹೋಗಬೇಕು. ತುರುಗಾಳಗದಲ್ಲಿಯೇ ನಮ್ಮ ಉಳಿವು-ಅಳಿವುಗಳು ಇರುವುದು' ಎಂಬ ಮಾತುಗಳು ಪಂಪನ ಕಾಲದ ವೀರರ ಉದ್ಘೋಷವಾಗಿತ್ತು. ಈ ಹಿನ್ನೆಲೆಯಲ್ಲಿ ನೋಡಿದಾಗ ಗೋವುಗಳ ರಕ್ಷಣೆಗೆ ಮುಂದಾಗಬೇಕಾದುದು ಆ ಕಾಲದ ಮತ್ತು ಆನಂತರ ಕಾಲದ ಒಂದು ಪ್ರಮುಖ ಮೌಲ್ಯವಾಗಿರುವುದನ್ನು ಶಾಸನಗಳಿಂದಲೂ, ಕಾವ್ಯಗಳಿಂದಲೂ ಗುರುತಿಸಬಹುದು. ಹಿಂದೂ ಮಹಾಭಾರತ, ಜೈನ ಮಹಾಭಾರತ ಕೃತಿಗಳಾದ ಪಂಪಭಾರತ, ಕುಮಾರವ್ಯಾಸ ಭಾರತ ಹಾಗೂ ಕರ್ಣಪಾರ್ಯನ ನೇಮಿನಾಥ ಪುರಾಣ, ಬಂಧುವರ್ಮನ ಹರಿವಂಶಾಭ್ಯುದಯಗಳಲ್ಲಿ ಗೋಗ್ರಹಣ ಪ್ರಸಂಗಗಳು ಉಲ್ಲೇಖಿತಗೊಂಡಿವೆ.

ತುರುಗಳ ರಕ್ಷಣೆಗೆ ಹೋರಾಡದವನು ಹೇಡಿಯೆನಿಸಿಕೊಳ್ಳುತ್ತಿದ್ದನು. ಕನ್ನಡದ ಕವಿ ರನ್ನನು ತನ್ನ ಗದಾಯುದ್ಧ ಕಾವ್ಯದಲ್ಲಿ ಹೀಗೆ ಹೇಳಿರುವನು.

ತುರುಗೋಳೊಳ್ ಪೆಣ್ಬುಯ್ಯಲೊ।
ಳಿಜಿವೆಸದೊಳ್ ನಂಟನೆಡಜೊಳೂರಜಿವಿನೊಳಂ॥
ತಜಿಸಂದು ಗಂಡುತನಮನೆ।
ನೆಜಿಪದವಂ ಗಂಡನಲ್ಲನೆಂತುಂ ಷಂಡಂ॥[೧೨೭]

ಅಂದರೆ ತುರುಗೋಳಿನಲ್ಲಿ, ಹೆಂಗಸರು ಹುಯ್ಯಲಿಡುವಾಗ, ಒಡೆಯನ ಕಾರ್ಯದಲ್ಲಿ, ನೆಂಟರ ಕಷ್ಟದಲ್ಲಿ, ಊರಟಿವಿನಲ್ಲಿ ತನ್ನ ಪೌರುಷವನ್ನು ತೋರ್ಪಡಿಸದವನು ಪುರುಷನಲ್ಲ, ಅವನು ಷಂಡನೆಂಬ ಅರ್ಥದಲ್ಲಿ ಉಲ್ಲೇಖಿಸುತ್ತಾನೆ.

ಮೂರು ಕಾರಣಗಳಿಂದ ತುರುಗಾಳಗವು ಮಹತ್ವ ಪಡೆದುಕೊಂಡಿದೆಯೆಂದು ವಿದ್ವಾಂಸರು ನಿಶ್ಚಯಿಸಿರುವರು. ಮೊದಲನೆಯದಾಗಿ, ಗೋವು ಪೂಜನೀಯವಾದುದು. ಎರಡನೆಯದಾಗಿ ಅದು ಕಳೆದುಕೊಳ್ಳಲಾಗದ ಆಸ್ತಿ. ಮೂರನೆಯದಾಗಿ, ಅವುಗಳನ್ನು ಕಳೆದುಕೊಳ್ಳುವುದರಲ್ಲಿ ಊರಿನ ವ್ಯಕ್ತಿಯ ಮಾನಾಪಮಾನದ ಪ್ರಶ್ನೆಯೂ ಆಗಿತ್ತು.[೧೨೮] ಈ ಕಾರಣಗಳಿಗಾಗಿ ಯೋಧನೊಬ್ಬ ಮಡಿದರೆ ಮರ ಮರ ಮರುಗುತ್ತಿದ್ದ ಸಮಾಜ ಅದು ಪುಣ್ಯ ಮರಣ, ಆತ ದೇವಮಾನವನೆಂದು ಭಾವಿಸುತ್ತಿದ್ದರು. ಹಾಗೆ ಇಹಲೋಕದಲ್ಲಿ ಜೀವಧಾರಣ ಮಾಡಲು ಅವಶ್ಯಕವೆನಿಸಿ ಯುಗ ಮೌಲ್ಯವಾಗಿ ಪರಿಗಣಿಸಿದ ವೀರತನ, ಪರಲೋಕ ಸಾಧ್ಯತೆಯ ಸಾಧನವೆನಿಸಿ ಜೀವನದ ಪರಮ ಆದರ್ಶವಾಗಿ ಪರಿಣಮಿಸಿತು.

ತುರುಗೋಳ್ ಸ್ಮಾರಕಶಿಲ್ಪಗಳ ಚರಿತ್ರೆಯನ್ನು ರಚಿಸುವಾಗ ನಮಗೆ ಅತ್ಯಂತ ಪ್ರಾಚೀನ ತುರುಗಾಳಗದ ಸ್ಮಾರಕಶಿಲ್ಪಗಳು ಕೋಲಾರ ಪರಿಸರದಲ್ಲಿ ದೊರೆತಿವೆ. ಕೋಲಾರ ತಾಲೂಕಿನ ವೆಲಗಲಬುರೆ ಮತ್ತು ನೆನಮನಹಳ್ಳಿ ಗ್ರಾಮಗಳಲ್ಲಿ ಕ್ರಿ.ಶ. ೬ನೇ ಶತಮಾನದ ಅವಧಿಯ ಪೂರ್ವದ ಹಳಗನ್ನಡದಲ್ಲಿರುವ ತುರುಗಾಳದ ಸ್ಮಾರಕಶಿಲ್ಪಗಳು ಪ್ರಾಚೀನತೆಯ ದೃಷ್ಟಿಯಿಂದ (ಪಾಠವಿರುವ ಸ್ಮಾರಕ) ಮೊದಲಿನವುಗಳೆಂದು ವಿದ್ವಾಂಸರು ಪರಿಗಣಿಸಿದ್ದಾರೆ.[೧೨೯]

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಶಾಸನವಿರುವ ೩೨, ಶಾಸನರಹಿತವಾದ ೫೭ ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ರಾಷ್ಟ್ರಕೂಟ ಕಾಲದ ಸ್ಮಾರಕಶಿಲ್ಪಗಳೇ ಜಿಲ್ಲೆಯಲ್ಲಿ ಪ್ರಾಚೀನವಾಗಿರುವ ತುರುಗೋಳ್ ಸ್ಮಾರಕಶಿಲ್ಪಗಳೆಂದು ಗುರುತಿಸಬಹುದು. ಬಹುತೇಕ ಸ್ಮಾರಕಶಿಲ್ಪಗಳು ಸಾಮಾನ್ಯವಾಗಿ ಮೂರು ಹಂತಗಳಲ್ಲಿ ಚಿತ್ರಿತಗೊಂಡಿದ್ದರೆ ಕೆಲವೊಂದು ಸ್ಮಾರಕಶಿಲ್ಪಗಳನ್ನು ನಾಲ್ಕು, ಐದು ಮತ್ತು ಆರು ಹಂತಗಳವರೆಗೂ ಕಂಡರಿಸಿರುವುದನ್ನು ಗುರುತಿಸಬಹುದು. ಮೂರು ಹಂತದ ಸ್ಮಾರಕಶಿಲ್ಪಗಳಲ್ಲಿ ಹೋರಾಟವನ್ನು ಒಂದು ಹಂತದಲ್ಲಿ ತೋರಿಸಿದ್ದರೆ ಐದು ಅಥವಾ ಆರು ಹಂತಗಳಲ್ಲಿರುವ ಸ್ಮಾರಕಶಿಲ್ಪಗಳಲ್ಲಿ ಹೋರಾಟವನ್ನು ಎರಡು ಹಂತಗಳಲ್ಲಿ ಚಿತ್ರಿಸಿರುವುದುಂಟು. ಒಂದೇ ಹಂತದಲ್ಲಿ ಇಬ್ಬರು ಅಥವಾ ಮೂವರು ವೀರರು ಹೋರಾಡುತ್ತಿರುವ ದೃಶ್ಯಗಳನ್ನು ಚಿತ್ರಿಸಿರುವ ಉದಾಹರಣೆಗಳಿವೆ. ಇನ್ನು ಕೆಲವು ಸ್ಮಾರಕಶಿಲ್ಪಗಳಲ್ಲಿ ಇಬ್ಬರು ವೀರರು ಶತ್ರುಗಳೊಂದಿಗೆ ಪ್ರತ್ಯೇಕವಾಗಿ ಹೋರಾಡುತ್ತಿರುವಂತೆ ಭಿನ್ನವಾಗಿ ಕೆತ್ತಿರುವುದನ್ನು ಕಾಣಬಹುದು.

**ತುರುಗೋಳ್ ಸ್ಮಾರಕ ಶಿಲ್ಪಗಳು: ಶಾಸನಸಹಿತ**

ಹರಿಹರ ತಾಲೂಕು ಹಿರೇಹಾಲಿವಾಣ ಗ್ರಾಮದಲ್ಲಿ ರಾಷ್ಟ್ರಕೂಟ ಕಾಲದ ಕ್ರಿ.ಶ. ಸು. ೮ನೇ ಶತಮಾನದ ಒಂದು ಸ್ಮಾರಕಶಿಲ್ಪವಿದೆ. ಸ್ಮಾರಕ ಜಿಲ್ಲೆಯಲ್ಲಿ ಕಂಡುಬರುವ ಅತಿ ಪ್ರಾಚೀನ ತುರುಗೋಳ್ ಸ್ಮಾರಕಶಿಲ್ಪವಾಗಿದೆ. ರಾಷ್ಟ್ರಕೂಟರ ಕನ್ನರದೇವನ ಆಳ್ವಿಕೆ ಕಾಲದಲ್ಲಿ ಗೊಡ್ಡಿಲದೇವನೆಂಬುವನು ರಾಜ್ಯವಾಳುತ್ತಿರಲು ಗಂಗ ವಂಶದ ಎರಗಂಗಯ್ಯ ಎಂಬುವನು ಮರಣ ಹೊಂದಿದ್ದನ್ನು ಉಲ್ಲೇಖಿಸುತ್ತದೆ.[೧೩೦] ಹೊನ್ನಾಳಿ ತಾಲೂಕು ಮಾದೇನಹಳ್ಳಿಯ ಕ್ರಿ.ಶ. ೮೭೦ರ ಸ್ಮಾರಕಶಿಲ್ಪವೊಂದು ಒಂದನೇ ಅಮೋಘವರ್ಷನು(ವಲ್ಲಭ ಮಹಾರಾಜ) ರಾಜ್ಯವಾಳುತ್ತಿದ್ದಾಗ ಇಂದ್ರನು ಬನವಾಸಿ-೧೨೦೦೦ವನ್ನು ಆಳುತ್ತಿದ್ದನು. ಆ ವೇಳೆ ಮಾದೂರಿನ ವೀರನೊಬ್ಬನು ಹಸುಗಳಿಗಾಗಿ ಕಾದಿ ಸ್ವರ್ಗಸ್ಥನಾದಾಗ ಅವನಿಗೆ ಭೂದಾನ ನೀಡಿರುವುದು ತಿಳಿಯುತ್ತದೆ.[೧೩೧] ಇದೇ ತಾಲೂಕಿನ ಅರಕೆರೆ ಗ್ರಾಮದ ಕ್ರಿ.ಶ. ೯೬೩ರ ಸ್ಮಾರಕಶಿಲ್ಪವೊಂದು ಕನ್ನರದೇವನು ಪೃಥ್ವಿಯನ್ನು ಪಾಲಿಸುತ್ತಿದ್ದಾಗ ಸಾಂತಳಿಗೆಯಲ್ಲಿದ್ದ ಅರಿಗೆರೆಯ ನಾಳ್ಗಾವುಂಡನು ದೇವಸ್ಥಾನವೊಂದನ್ನು ಕಟ್ಟಿಸಿದ್ದನ್ನು ಹಾಗೂ ಅವನ ತಮ್ಮ ಬೆಟ್ಟುಗನು ತುರುಗಳಿಗಾಗಿ ಕಾದಾಡಿ ಮಡಿದಾಗ ಗೋವಿನ್ದ ಗಾವುಣ್ಣ ಎಂಬುವನು ಸ್ಮಾರಕಶಿಲ್ಪ ನಿಲ್ಲಿಸಿದನೆಂದು ತಿಳಿದುಬರುತ್ತದೆ.[೧೩೨] ದೊಡ್ಡಬಾತಿ ರೇವಣ್ಣ ಸಿದ್ಧೇಶ್ವರ ದೇವಾಲಯದ ಬಳಿಯಿರುವ ಕ್ರಿ.ಶ. ಸು. ೧೦ನೇ ಶತಮಾನದ ಒಂದು ಸ್ಮಾರಕಶಿಲ್ಪವು ಬಾಲ್ಲತ್ತಿಯಲ್ಲಿ ನಡೆದ ತುರುಗಾಳಗದಲ್ಲಿ ಇಡಿಪದೇವ ಎಂಬುವನು ಕಾದಾಡಿ ಸುರಲೋಕಪ್ರಾಪ್ತನಾದಾಗ ಬಾತಿ ಗೌಡನೊಬ್ಬ ಆ ವೀರನಿಗಾಗಿ ಈ ಸ್ಮಾರಕ ನಿಲ್ಲಿಸಿ ಭೂದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[೧೩೩] ರಾಷ್ಟ್ರಕೂಟ ವಂಶಕ್ಕೆ ಸೇರಿದ ಇಡಿಪದೇವ ಎಂಬ ಅರಸನನ್ನು ಈ ಸ್ಮಾರಕಶಿಲ್ಪವು ಮೊದಲಬಾರಿಗೆ ಉಲ್ಲೇಖ ಮಾಡುತ್ತದೆ. ದೊಡ್ಡಬಾತಿ ಗ್ರಾಮದ ಪ್ರಾಚೀನವಾದ ಹೆಸರು 'ಬಾಲ್ಲತ್ತಿ'ಯಾಗಿರುವುದು ಸ್ಮಾರಕದಿಂದ ತಿಳಿದುಬರುತ್ತದೆ.

ಹರಪನಹಳ್ಳಿ ತಾಲೂಕು ಬಾಗಳಿ ಕಲ್ಲೇಶ್ವರ ದೇವಸ್ಥಾನದ ಬಳಿಯಿರುವ ಕ್ರಿ.ಶ. ೧೧೭೯ರ ಸ್ಮಾರಕಶಿಲ್ಪದಿಂದ ಕಾಳ ಮತ್ತು ಆತನ ಮಗ ತುರುಗಳನ್ನು ಸೆರೆ ಹಿಡಿದುಕೊಂಡು ಬರುವಾಗ ಆಕ್ರಮಣಕ್ಕೆ ಒಳಗಾಗಿ ಮಡಿದಿರುವುದು ತಿಳಿಯುತ್ತದೆ. ಸ್ಮಾರಕದಲ್ಲಿ ಉಲ್ಲೇಖವಾಗುವ 'ಧರ್ಮಮಂ ಕಿಡಿಸೆ' ಎಂಬ ಪದದಿಂದ ಈ ಸ್ಮಾರಕ ಪೆಣ್ಬುಯಲ್‌ನ್ನು ಸಂಕೇತಿಸುತ್ತದೆಂದು ವಿದ್ವಾಂಸರಾದ ಎಂ. ಕೊಟ್ರೇಶ್ ಅವರು ಅಭಿಪ್ರಾಯಿಸಿದ್ದಾರೆ.[೧೩೪] ಆದರೆ ಶಿಲ್ಪದಲ್ಲಿ ಆ ಲಕ್ಷಣಗಳಿಲ್ಲ. ಮೊದಲ ಹಂತದಲ್ಲಿ ಇಬ್ಬರು ವೀರರು ಭರ್ಚಿಗಳನ್ನು ಹಿಡಿದು ಯುದ್ಧಸನ್ನದ್ಧರಾಗಿರುವರು. ಅವರ ದೇಹದ ಮೇಲೆ ಶತ್ರುಗಳು ಪ್ರಯೋಗಿಸಿರುವ ಬಾಣಗಳು ನಾಟಿಕೊಂಡಿವೆ. ಶತ್ರು ಸೈನಿಕರು ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವ ಹಾಗೆ ಚಿತ್ರಿಸಲಾಗಿದೆ. ಹೋರಾಟದಲ್ಲಿ ಇಬ್ಬರು ಮಡಿದಿರುವ ದೃಶ್ಯವಿದೆ. ವೀರರ ಹಿಂಬದಿಯಲ್ಲಿ ಆರು ತುರುಗಳು ಗಾಬರಿಗೊಂಡು ನಿಂತಿರುವಂತೆ ಕಂಡರಿಸಲಾಗಿದೆ. ದಾವಣಗೆರೆ ತಾಲೂಕು ಐಗೂರು ಗ್ರಾಮದ ಮಲ್ಲೇಶಪ್ಪ ಎಂಬುವರ ಹೊಲದಲ್ಲಿ ರಾಷ್ಟ್ರಕೂಟ ಕಾಲದ ಅಪ್ರಕಟಿತ ಒಂದು ಸ್ಮಾರಕಶಿಲ್ಪವಿದೆ. ವೀರನು ಬಿಲ್ಲು ಮತ್ತು

ಕತ್ತಿ ಹಿಡಿದು ಯುದ್ಧ ಸನ್ನದ್ಧನಾಗಿರುವಂತೆ ಚಿತ್ರಿಸಲಾಗಿದೆ. ಅವನ ಸೊಂಟದಲ್ಲಿ ಕಿರುಗತ್ತಿಯಿದೆ. ಶತ್ರುಗಳಿಬ್ಬರು ಬಿಲ್ಲು ಬಾಣಗಳನ್ನು ಹಿಡಿದು ವೀರನಿಗೆ ಅಭಿಮುಖವಾಗಿ ನಿಂತಿರುವ ಹಾಗೆ ಕೆತ್ತಲಾಗಿದೆ. ಓರ್ವನು ಮಡಿದು ಬಿದ್ದಿರುವ ಚಿತ್ರಣವಿದೆ. ವೀರನ ಹಿಂಬದಿಯಲ್ಲಿ ತುರುಗಳು ನಿಂತಿರುವುದನ್ನು ಕಂಡರಿಸಲಾಗಿದೆ.[೧೩೫] ಜಗಲೂರು ತಾಲೂಕು ಚಿಕ್ಕ ಅರಕೆರೆ ಗ್ರಾಮದ ಅಪ್ರಕಟಿತ ಸ್ಮಾರಕಶಿಲ್ಪವೊಂದರಲ್ಲಿ ವೀರನು ಬಿಲ್ಲುಬಾಣವನ್ನು ಹಿಡಿದು ಯುದ್ಧಸನ್ನದ್ಧನಾಗಿ ಕಾಲುಗಳಿಂದ ಒಬ್ಬ ಶತ್ರುವನ್ನು ತುಳಿಯುತ್ತಿರುವ ದೃಶ್ಯವಿದೆ. ಮೂವರು ಶತ್ರುಗಳು ಬಿಲ್ಲು ಬಾಣಗಳನ್ನು ಹಿಡಿದು ವೀರನಿಗೆ ಗುರಿಯಿಟ್ಟಿರುವಂತೆ ಚಿತ್ರಿಸಲಾಗಿದೆ. ವೀರನ ಹಿಂದೆ ನಿಂತಿರುವ ತುರುಗಳ ಚಿತ್ರಣವಿದೆ. ಬಾಗಳಿ ಕಲ್ಲೇಶ್ವರ ದೇವಸ್ಥಾನದ ಬಳಿಯಿರುವ ಸ್ಮಾರಕಶಿಲ್ಪವೊಂದರ ಪಾಠವು ಸಂಪೂರ್ಣ ಸವೆದು ಹೋಗಿದೆ. ಈ ಸ್ಮಾರಕದಲ್ಲಿ ಕತ್ತಿ ಮತ್ತು ಬಾಕುವನ್ನು ಹಿಡಿದಿರುವ ವೀರನನ್ನು ಪ್ರಧಾನವಾಗಿ ಕಂಡರಿಸಲಾಗಿದೆ. ಶತ್ರುಗಳು ಪ್ರಯೋಗಿಸಿದ ಬಾಣಗಳು ಅವನ ದೇಹದ ಮೇಲೆ ನಾಟಿಕೊಂಡಿರುವುದನ್ನು ತೋರಿಸಲಾಗಿದೆ. ಮೂವರು ಶತ್ರುಗಳು ವೀರನನ್ನು ಸುತ್ತುವರಿದಿರುವಂತೆ ಕಂಡರಿಸಲಾಗಿದೆ. ವೀರನ ಹಿಂದೆ ತುರುಗಳು ನಿಂತಿರುವ ದೃಶ್ಯವಿದೆ.

ಹೊನ್ನಾಳಿ ಮಲ್ಲಿಕಾರ್ಜುನ ದೇವಸ್ಥಾನದ ಬಳಿ ಕಲ್ಯಾಣದ ಚಾಲುಕ್ಯರ ಕಾಲದ ಮೂರು ಸ್ಮಾರಕಶಿಲ್ಪಗಳು ಕಂಡುಬಂದಿವೆ. ಕ್ರಿ.ಶ. ೧೦೬೪ರ ಒಂದು ಸ್ಮಾರಕ ಶಾಸನವು ಕ್ರೋಧಿ ಸಂವತ್ಸರದ ವೈಶಾಖ ಶುದ್ಧ ೫ ಶನಿವಾರದಂದು ಎಡತೊರೆಯ ಪೆರ್ಮಾಡಿ ಪರಿಯಿಪ ಹೊನ್ನಾಳಿಯ ತುರುಗಳನ್ನು ಹೊಡೆದುಕೊಂಡು ಹೋದಾಗ ಕರ್ಗೆರೆಯ ಮಾಚಗಾವುಡ್ಡನ ತಮ್ಮ ಸೋಮಗಾವುಂಡನು ತುರುಗಳನ್ನು ಮರಳಿ ಪಡೆದು ಸುರಲೋಕ ಪ್ರಾಪ್ತನಾಗಿರುವುದನ್ನು ಉಲ್ಲೇಖಿಸುತ್ತದೆ.[೧೩೬] ಇಲ್ಲಿರುವ ಮತ್ತೊಂದು ಸ್ಮಾರಕದಿಂದ ಶ್ರೀಶಕೆ ೯೮೬ ಕ್ರೋಧಿ ಸಂವತ್ಸರದ ವೈಶಾಖ ಶುದ್ಧ ೫ ಶನಿವಾರದಂದು ಎಡತೊರೆಯ ಪೆರ್ಮಾಡಿ ಪರಿಯಿಪ ಹೊನ್ನಾಳಿಯ ಮೇಲೆ ದಾಳಿ ಮಾಡಿ ತುರುಗಳನ್ನು ಹೊಡೆದುಕೊಂಡು ಹೋದಾಗ ವೂರೊಡೆಯ ನಾಗಿಲ ಮುದ್ದಯ್ಯನ ಮಗ ಕೇತಣ್ಣನು ಹೋರಾಡಿ ಸುರಲೋಕ ಪ್ರಾಪ್ತನಾದನೆಂದು ತಿಳಿದುಬರುತ್ತದೆ.[೧೩೭] ಅಲ್ಲಿಯೇ ಇರುವ ಇನ್ನೊಂದು ಸ್ಮಾರಕಶಿಲ್ಪವು ಎಡತೊರೆಯ ಪೆರ್ಮಾಡಿ ಹೊನ್ನಾಳಿಯ ತುರುಗಳನ್ನು ಕದ್ದಾಗ, ನಾಗಿಲ ಮಾಳಯ್ಯ ಎಂಬುವನು ಅವನೊಂದಿಗೆ ಕಾದಾಡಿ ಮಡಿಯುತ್ತಾನೆ.[೧೩೮] ಎಡತೊರೆಯ ಪೆರ್ಮಾಡಿ ಎಂಬುವನು ತುರುಗಳಿಗಾಗಿ ಹೊನ್ನಾಳಿಯ ಮೇಲೆ ಮೂರು ದಾಳಿ ಮಾಡಿರುವುದು ಕಂಡುಬರುತ್ತದೆ. ಅವನು ಪ್ರಾಯಶಃ ಎಡವಟ್ಟಿ-೭೦ ಅಥವಾ ಎಡದೊರೆ-೭೦ ಪ್ರದೇಶದಲ್ಲಿ ಆಡಳಿತ ನಡೆಸುತ್ತಿದ್ದನೆಂದು ತೋರುತ್ತದೆ.[೧೩೯] ಕ್ರಿ.ಶ. ೧೧೨೫ರ ನ್ಯಾಮತಿ ಗ್ರಾಮದ ಒಂದು ಸ್ಮಾರಕಶಿಲ್ಪವು ಬೆಳಗವತ್ತಿಯ ದೆಸೆಯ ನೆಲವತ್ತಿ(ನ್ಯಾಮತಿ)ಯ ಅಗ್ರಹಾರದ ತುರುಗಳನ್ನು ಹೊಡೆದುಕೊಂಡು ಹೋದಾಗ ಚಿಪ್ಪಿಗ ಪದ್ಮನ ಮಗ ಚಿಕ್ಕನು ಕುದುರೆ ಮೇಲೆ ಬಂದು ಹೋರಾಡಿ ಮಡಿಯುತ್ತಾನೆ. ಊರ ಮಹಾಜನಗಳ ಸಮ್ಮುಖದಲ್ಲಿ

ಪದ್ಮನಿಗೆ ನೆತ್ತರು ಕೊಡುಗೆಯಾಗಿ ಭೂದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೧೪೦] ಇದೇ ತಾಲೂಕಿನ ಅರಕೆರೆ ಗ್ರಾಮದ ನಾಗೇಶ್ವರ ದೇವಸ್ಥಾನದ ಬಳಿ ಕ್ರಿ.ಶ.ಸು. ೧೨ನೇ ಶತಮಾನಕ್ಕೆ ಸೇರಿದ ಎರಡು ಸ್ಮಾರಕಶಿಲ್ಪಗಳಿವೆ. ಒಂದು ಸ್ಮಾರಕವು ಅರಕೆರೆ ಗ್ರಾಮದ ತುರುಗಳ ರಕ್ಷಣೆಗಾಗಿ ಬೋವನ(ಬೊಮ್ಮನ) ತಮ್ಮ ಮಾದೆಯ ನಾಯಕ್ಕನು ಹೋರಾಟದಲ್ಲಿ ಮಡಿದಾಗ ಕಲೆಯ ನಾಯಕ ಮತ್ತು ಸೆಟ್ಟಿಯ ಚಿಕ್ಕಣ್ಣ ಎಂಬುವವರು ಅರಕೆರೆ ಗ್ರಾಮದ ಪೂರ್ವದಲ್ಲಿ ಕಮ್ಮ ೧೦ ಭೂಮಿಯನ್ನು ನೆತ್ತರು ಕೊಡುಗೆಯಾಗಿ ಕೊಡಮಾಡಿದ ದಾನವನ್ನು ಉಲ್ಲೇಖಿಸುತ್ತದೆ.[೧೪೧] ಇದೇ ಸ್ಥಳದಲ್ಲಿರುವ ತ್ರುಟಿತ ಸ್ಮಾರಕವೊಂದು ವಿಕ್ರಮ ಸಂವತ್ಸರದ ಚೈತ್ರ ಬಹುಳ ೫ ಸೋಮವಾರದಂದು ಅರಕೆರೆಯ ಬೋಮ್ಮಯ ನಾಯಕ ಮತ್ತು ಮಾದೆಯ ನಾಯಕ ಎಂಬುವರು ತುರುಗಾಳಗದಲ್ಲಿ ಮಡಿದ ತರಲಬಯಿಚನಿಗೆ ನೆತ್ತರು ಕೊಡುಗೆಯಾಗಿ ಗ್ರಾಮದ ಮೂಡಣದ ದಿಕ್ಕಿನ ಕಂಬ ೨೦ನ್ನು ದತ್ತಿಯಾಗಿ ನೀಡಿರುವುದು ತಿಳಿಯುತ್ತದೆ.[೧೪೨] ಮೇಲಿನ ಎರಡೂ ಸ್ಮಾರಕಗಳು ನೆತ್ತರು ಕೊಡುಗೆಯಾಗಿ ದಾನ ನೀಡಿರುವುದನ್ನು ಉಲ್ಲೇಖಿಸುತ್ತವೆ. ಹೋರಾಟದಲ್ಲಿ ಮಡಿದ ವೀರರಿಗೆ ಅವರ ಸಂಸಾರದ ನಿರ್ವಹಣೆಗಾಗಿ 'ನೆತ್ತರುಕೊಡುಗೆ' ಹೆಸರಿನಲ್ಲಿ ಭೂದಾನ ಮಾಡುವ ವಿಧಾನವೆಂದು ವಿದ್ವಾಂಸರು ಅಭಿಪ್ರಾಯಿಸಿರುವುದುಂಟು.[೧೪೩]

ಚಿಕ್ಕ ಗೋಣಿಗೆರೆ ಗ್ರಾಮದ ಸ್ಮಾರಕಶಿಲ್ಪವು ಗಾವುಣ್ಡ ಆತನ ಮಗ ಮುಪ್ಪಣ್ಣನು ತುರುಗಾಳಗದಲ್ಲಿ ಮಡಿದನೆಂದು ಉಲ್ಲೇಖಿಸುತ್ತದೆ.[೧೪೪] ಆದರೆ ಹೋರಾಟದಲ್ಲಿ ಮೂವರು ವೀರರು ಮಡಿದಿರುವುದು ಸ್ಮಾರಕಶಿಲ್ಪದಲ್ಲಿರುವ ಚಿತ್ರಣಗಳಿಂದ ತಿಳಿದುಬರುತ್ತದೆ. ಮೂವರು ವೀರರಿಗೆ ಒಂದೇ ಸ್ಮಾರಕ ನೆಟ್ಟಿರುವುದರಿಂದ ಈ ಸ್ಮಾರಕಶಿಲ್ಪವು ವಿಶೇಷವೆನಿಸಿಕೊಳ್ಳುತ್ತದೆ. ಕುಂಕೋವಾ ಗ್ರಾಮದಲ್ಲಿರುವ ಸ್ಮಾರಕವೊಂದು ಅಪರೂಪದ್ದಾಗಿದೆ. ದೇಹದಾರ್ಢ್ಯನಾಗಿರುವ ವೀರನು ಆಳೆತ್ತರ ಬಿಲ್ಲು ಹಿಡಿದು ನಿಂತಿರುವಂತೆ ಪ್ರಧಾನವಾಗಿ ಕಂಡರಿಸಲಾಗಿದೆ. ಅವನು ತಲೆಗೂದಲನ್ನು ಉದ್ದವಾಗಿ ಇಳಿಬಿಟ್ಟಿರುವುದನ್ನು ಶಿಲ್ಪಿ ಸುಂದರವಾಗಿ ತೋರಿಸಿದ್ದಾನೆ. ವೀರನ ಕಾಲುಗಳ ಬಳಿ ಮಡಿದು ಬಿದ್ದಿರುವ ಇಬ್ಬರು ಹೆಣಗಳ ಚಿತ್ರಣವಿದೆ. ತುರುಗಳನ್ನು ಕಳೆದುಕೊಂಡು ದನಗಾಹಿಗನೊಬ್ಬ ಎಡಗೈಯನ್ನು ತಲೆಯ ಮೇಲೆ ಇಟ್ಟುಕೊಂಡು ಚಿಂತಾಗ್ರಸ್ತನಾಗಿ ಕುಳಿತಿರುವಂತೆ ಕೆತ್ತಲಾಗಿದೆ. ಹಸು ಮತ್ತು ಎಮ್ಮೆಗಳು ಹೆದರಿ ಓಡುತ್ತಿರುವ ದೃಶ್ಯವಿದೆ. ಇಲ್ಲಿ ವೀರನು ಅನ್ಯರ ತುರುಗಳ ರಕ್ಷಣೆಗಾಗಿ ಹೋರಾಡಿ ಮಡಿದಿರುವುದು ಕಂಡುಬರುತ್ತದೆ. ರೋಧಿಸುತ್ತಿರುವ ದನಗಾಯಿಗನ ದೃಶ್ಯ ಹಾಗೂ ಹಸುಗಳೊಂದಿಗೆ ಎಮ್ಮೆಗಳನ್ನು ಕಟ್ಟಿರುವುದು ಈ ಎರಡು ಅಂಶಗಳಿಂದ ಸ್ಮಾರಕಶಿಲ್ಪ ಅಪರೂಪದ್ದಾಗಿದೆ. ಹಸುಗಳೊಂದಿಗೆ ಎಮ್ಮೆಗಳನ್ನು ಕದ್ದಿರುವ ಉದಾಹರಣೆಗಳು ನಮಗೆ ಕಂಡುಬರುತ್ತವೆ. ಆದರೆ ತುರುಗಳನ್ನು ಕಳೆದುಕೊಂಡು ರೋದಿಸುತ್ತಿರುವ ದನಗಾಯಿಗನ ಚಿತ್ರಣವಿರುವ ಸ್ಮಾರಕಗಳು ಈವರೆಗೆ ದೊರೆತಿಲ್ಲವೆಂದೇ ಹೇಳಬಹುದು. ಹರಪನಹಳ್ಳಿ ತಾಲೂಕು ನೀಲಗುಂದ ಗ್ರಾಮದ ಮುಕ್ತೇಶ್ವರ ದೇವಸ್ಥಾನದ ಬಳಿಯಿರುವ ಸ್ಮಾರಕ ಶಾಸನವು ಚಯಂದಿಯರಸನ ಮಗ ಮಾರೆಯಾಳ್ವನು ನೀರ್ಗುಂದದ ಗೋವುಗಳನ್ನು ರಕ್ಷಿಸಲು ಬನವಾಸಿ ನಾಡಿನಲ್ಲಿ ಹೋರಾಡಿದಾಗ ನೀರ್ಗುಂದದ ಮೂಲಗ ಕಲ್ಲಗಂಗನು ಮರಣ ಹೊಂದಿರುವುದನ್ನು ತಿಳಿಸುತ್ತದೆ.[೧೪೫]

ಚನ್ನಗಿರಿ ತಾಲೂಕು ನಲ್ಕುದುರೆ ಗ್ರಾಮದ ಕ್ರಿ.ಶ. ೧೨೭೭ರ ಸ್ಮಾರಕಶಿಲ್ಪವೊಂದು ನೆಲ್ಕುದುರೆಯ ಹಿರಿಯ ಬೊಮ್ಮನ ಮಗ ನಾಗಯನಾಯಕ್ಕನು ತುರುಗಳನ್ನು ಮರಳಿ ಪಡೆದು ಸುರಲೋಕ ಪ್ರಾಪ್ತನಾದಾಗ ಆತನ ವೀರತನಕ್ಕೆ ಮೆಚ್ಚಿ ನಲ್ಕುದುರೆಯ ಸಮಸ್ತ ವೂರೊಡೆಯ ಜಯದೇವದಂಣಾಯಕ ಮತ್ತು ಸಮಸ್ತ ಪ್ರಜೆಗಳು ಆತನಿಗೆ ಕೋಗಿಲೂರು ದಾರಿಯ ಇಂಬಡಗಲುತಾಳ ಕಟ್ಟದ ಹಿಂದೆ ಕಂಬ ೧೫ನ್ನು ನೆತ್ತರು ಕೊಡುಗೆಯಾಗಿ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[೧೪೬] ಸ್ಮಾರಕದಲ್ಲಿ ವೀರನು ಆಳೆತ್ತರದ ಬಿಲ್ಲು ಹಿಡಿದು ಅಶ್ವಾರೂಢ ಶತ್ರುಗಳೊಂದಿಗೆ ಹೋರಾಡುತ್ತಿದ್ದಾನೆ. ವೀರನ ಹಿಂದೆ ಐದು ತುರುಗಳು ತಮ್ಮ ಬಾಲಗಳನ್ನು ಮೇಲಕ್ಕೆ ಎತ್ತಿ ಕುತೂಹಲದಿಂದ ಅಥವಾ ಹೆದರುತ್ತಾ ಹೋರಾಟವನ್ನು ನೋಡುತ್ತ ನಿಂತಿವೆ.[೧೪೭] ಇದೇ ಗ್ರಾಮದ ಕ್ರಿ.ಶ. ೧೨೭೯ರ ಸ್ಮಾರಕವು ಮಾರೆಯನಾಯ್ಕ ಎಂಬುವನು ತುರುಗಳನ್ನು ಮರಳಿಸಿ ಸುರಲೋಕ ಪ್ರಾಪ್ತನಾದಲ್ಲಿ ನಲ್ಕುದುರೆಯ ಸಮಸ್ತ ವೂರೊಡೆಯ ಜಯದೇವ ಮತ್ತು ಸಮಸ್ತ ಪ್ರಜೆಗಳು ಆತನ ವೀರತನಕ್ಕೆ ಮೆಚ್ಚಿ ಕೋಗಿಲೂರ ದಾರಿಯ ಇಂಬಡಗಲು ತಾಳಕಟ್ಟದ ತೆಂಕಣಕೋಡಿಯ ಹಿಂದೆ ಗಂನಗಳೆಯಲ್ಲಿ ಕಂಬ ೧೫ನ್ನು ನೆತ್ತರುಕೊಡುಗೆಯಾಗಿ ದಾನ ನೀಡಿರುವುದನ್ನು ತಿಳಿಸುತ್ತದೆ.[೧೪೮] ಈ ಸ್ಮಾರಕವು ನಾಲ್ಕು ಹಂತಗಳಲ್ಲಿದ್ದು, ಹೋರಾಟವನ್ನು ಎರಡು ಪಟ್ಟಿಯಲ್ಲಿ ಚಿತ್ರಿಸಲಾಗಿದೆ. ಒಂದನೇ ಪಟ್ಟಿಯಲ್ಲಿ ವೀರ ಬಿಲ್ಲು ಬಾಣಗಳನ್ನು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಶತ್ರುಗಳಿಬ್ಬರು ಭರ್ಚಿ, ಕತ್ತಿಗಳನ್ನು ಹಿಡಿದು ವೀರನಿಗೆ ಅಭಿಮುಖವಾಗಿ ನಿಂತಿರುವರು. ವೀರನ ಹಿಂಬದಿ ಆರುತುರುಗಳು ಹೋರಾಟವನ್ನು ನೋಡುತ್ತ ನಿಂತಿವೆ. ಶತ್ರುವೊಬ್ಬ ಮಡಿದು ಬಿದ್ದಿದ್ದಾನೆ. ಎರಡನೆಯ ಪಟ್ಟಿಯಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದು, ಬಲಗೈಯಲ್ಲಿನ ಬಾಕುವಿನಿಂದ ಶತ್ರುವಿನ ಹೊಟ್ಟೆಯ ಭಾಗಕ್ಕೆ ಇರಿದಿದ್ದಾನೆ. ಶತ್ರುಪಡೆಯ ಸೈನಿಕರು ಕತ್ತಿ, ಗುರಾಣಿ, ಕಡುಗತ್ತಿ, ಬಿಲ್ಲು ಬಾಣಗಳನ್ನು ಹಿಡಿದು ಹೋರಾಡುವ ದೃಶ್ಯವಿದೆ.

ಹರಿಹರ ತಾಲೂಕು ದೇವರಬೆಳಕೆರೆ ಗ್ರಾಮದ ಸ್ಮಾರಕವು ಚಿಕ್ಕಬೆಳುಕರಿಯ ತುರುಗಳನ್ನು ರಕ್ಷಿಸಲು ಹೋರಾಡಿ ಶಿವಲೋಕ ಸೇರಿದ ಕುರುಬರ ಚಂದ್ರಗೌಡನಿಗೆ ಬೊಮ್ಮಗೌಡ, ಸೋಮಗೌಡ ಮತ್ತು ಮಾಳಿಗೌಡ ಎಂಬುವರು ಬಕ್ಕರೆಗಟ್ಟದ ತೆಂಕಣ(ದಕ್ಷಿಣ) ಕೋಡಿಯ ಹುಣಸೆಯ ವುಂಡಿ ಕಂಬ ೧೦ನ್ನು ಭೂದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ. ದೇವರಬೆಳಕೆರೆ ಗ್ರಾಮದ ಪ್ರಾಚೀನ ಹೆಸರು ಚಿಕ್ಕ ಬೆಳುಕರಿಯಾಗಿರುವುದು ಶಾಸನದಿಂದ ತಿಳಿಯುತ್ತದೆ.[೧೪೯] ವಿಷು ಸಂವತ್ಸರ ಶುದ್ಧ ೭ ಆದಿವಾರದಂದು ಮೂಡಣ(ಪೂರ್ವ)ದ ಸಂಗೆಯನಾಯಕನ ಆಳು ಕುದುರೆಯಲ್ಲಿ ಬಂದು ಬನ್ನಿಕೋಡಿನ ತುರುಗಳನ್ನು ಹೊಡೆದುಕೊಂಡು ಹೋಗಿದ್ದರಿಂದ, ಬನ್ನಿಕೋಡಿನ ಬೀರಬೋವನ ಮಗ ಬೊಮ್ಮಯನಾಯಕನು ಕಬ್ಬಿಣದ ಕೋಲಿನಿಂದ ಅವನೊಂದಿಗೆ ಹೋರಾಡಿ ತುರುಗಳನ್ನು ಮರಳಿಸಿ ಸುರಲೋಕ ಪ್ರಾಪ್ತನಾಗಿರುವನೆಂದು ಬನ್ನಿಕೋಡು ಗ್ರಾಮದ ಒಂದು ಸ್ಮಾರಕದಿಂದ ತಿಳಿದುಬರುತ್ತದೆ.[೧೫೦] ಈ ಸ್ಮಾರಕ ನಾಲ್ಕು ಹಂತಗಳಲ್ಲಿದ್ದು, ಹೋರಾಟದ ದೃಶ್ಯವನ್ನು ಎರಡು ಹಂತಗಳಲ್ಲಿ ಚಿತ್ರಿಸಲಾಗಿದೆ. ಕೆಳಹಂತದಲ್ಲಿ ವೀರ ಎಡಗೈಯಲ್ಲಿ ಆಳೆತ್ತರದ

ಬಿಲ್ಲು, ಬಲಗೈಯಲ್ಲಿ ಕಡುಗತ್ತಿ ಹಿಡಿದು ಯುದ್ಧಸನ್ನದ್ಧನಾಗಿರುವನು. ಸೊಂಟದಲ್ಲಿ ಕಿರುಗತ್ತಿಯಿದೆ. ತಲೆಯಲ್ಲಿ ಮುಡಿ ಕಟ್ಟಿ, ಕಿವಿಯೋಲೆ, ಮಲ್ಲಗಚ್ಚೆ ಉಡುಪನ್ನು ಧರಿಸಿದ್ದಾನೆ. ಶತ್ರುವೊಬ್ಬ ಭರ್ಚಿ ಹಿಡಿದು ವೀರನಿಗೆ ಅಭಿಮುಖವಾಗಿ ನಿಂತಿದ್ದಾನೆ. ಉಳಿದ ಮೂರು ಮಂದಿ ಶತ್ರು ಸೈನಿಕರು ಕತ್ತಿ, ಗುರಾಣಿ, ಬಿಲ್ಲು ಬಾಣ ಮತ್ತು ಭರ್ಚಿಗಳನ್ನು ಹಿಡಿದು ನಿಂತಿದ್ದಾರೆ. ವೀರನ ಹಿಂಬದಿ ಸಾಲಾಗಿ ನಿಂತಿರುವ ತುರುಗಳ ಚಿತ್ರಣವಿದೆ. ಎರಡನೆಯ ಹಂತದಲ್ಲಿ ವೀರ ಹಾಗೂ ಶತ್ರು ಗುಂಪಿನ ಪ್ರಮುಖನೊಬ್ಬ ಆಯುಧಗಳನ್ನು ಹಿಡಿದು ಅಭಿಮುಖವಾಗಿ ನಿಂತಿದ್ದಾರೆ. ಈ ಹಂತದಲ್ಲಿ ಎರಡು ಗುಂಪಿನ ಸೈನಿಕರು ಬಿಲ್ಲು ಬಾಣ, ಕತ್ತಿ, ಭರ್ಚಿಗಳನ್ನು ಹಿಡಿದು ನಿಂತಿರುವುದು ಕಂಡುಬರುತ್ತದೆ. ಇದೇ ತಾಲೂಕಿನ ಗಂಗನರಸಿ ಗ್ರಾಮದ ಅಪ್ರಕಟಿತ ಶಾಸನದಲ್ಲಿ ಕತ್ತಿ ಹಿಡಿದಿರುವ ವೀರನು ಅಶ್ವಾರೂಢ ಶತ್ರುಗಳೊಂದಿಗೆ ಹೋರಾಡುತ್ತಿದ್ದಾನೆ. ವೀರನ ಕಡೆಯ ಸೈನಿಕನೊಬ್ಬ ಪ್ರಯೋಗಿಸಿದ ಬಾಣಗಳು ಶತ್ರುವಿನ ಮುಖ ಮತ್ತು ಕುದುರೆ ತಲೆಯಲ್ಲಿ ನಾಟಿಕೊಂಡಿವೆ. ವೀರನ ಹಿಂದೆ ಗಾಬರಿಗೊಂಡು(ಹೆದರಿ) ನಿಂತಿರುವ ನಾಲ್ಕು ತುರುಗಳ ಚಿತ್ರಣವಿದೆ. ಕುದುರೆ ಮೇಲೆ ಬಂದ ವೀರ ಕೆಳಗಿಳಿದು ಹೋರಾಟ ಮಾಡುತ್ತಿರುವ ದೃಶ್ಯ ಶಿಲ್ಪದಲ್ಲಿ ಕಂಡುಬರುತ್ತದೆ.

ದಾವಣಗೆರೆ ತಾಲೂಕು ಆಲೂರು ಗ್ರಾಮದ ಸ್ಮಾರಕಶಿಲ್ಪವೊಂದು ಆಳಾದಸೆಟ್ಟಿಯರ ಮಗ ಭೂಮಾದಸೆಟ್ಟಿ, ಆತನ ಪುತ್ರ ನಾದಿಯಣ್ಣನು ತುರುಗಾಳಗದಲ್ಲಿ ಮಡಿದಾಗ, ಬೊಮ್ಮಯ್ಯ ಮತ್ತು ನಾಗಯ್ಯ ಎಂಬುವರು ಅವರಿಬ್ಬರ ನೆನಪಿಗಾಗಿ ಸ್ಮಾರಕ ನೆಟ್ಟಿರುವುದನ್ನು ಉಲ್ಲೇಖಿಸುತ್ತದೆ.[೧೫೧] ಶಿಲ್ಪದಲ್ಲಿ ಬಿಲ್ಲು ಬಾಣ, ಕತ್ತಿಗಳನ್ನು ಹಿಡಿದಿರುವ ವೀರರಿಬ್ಬರು ಯುದ್ಧಸನ್ನದ್ಧರಾಗಿರುವರು. ಮೂವರು ಶತ್ರು ಸೈನಿಕರು ಕತ್ತಿ, ಗುರಾಣಿಗಳನ್ನು ಹಿಡಿದು ನಿಂತಿದ್ದಾರೆ. ವೀರನು ಶತ್ರುವೊಬ್ಬನ ತಲೆಯನ್ನು ಕತ್ತರಿಸಿದ್ದು, ಅವನ ರುಂಡ, ಮುಂಡಗಳು ದಿಕ್ಕಿಗೊಂದು ಬಿದ್ದಿರುವಂತೆ ಚಿತ್ರಿಸಲಾಗಿದೆ. ಶಿಲ್ಪದ ಕೆಳಭಾಗದಲ್ಲಿ ದಿಬ್ಬವನ್ನು ಏರಿ ನಿಂತಿರುವ ಆಕಳು, ಕರು, ಎತ್ತುಗಳ ಚಿತ್ರಣಗಳಿವೆ. ಕಕ್ಕರಗೊಳ್ಳ ಗ್ರಾಮದ ಕಲ್ಲೇಶ್ವರ ದೇವಸ್ಥಾನ ಬಳಿಯಿರುವ ಸ್ಮಾರಕವು ತುರುಗಾಳಗದಲ್ಲಿ ಬಿದಿಯಮಗೌಡ ಎಂಬುವನು ಮಡಿದಿರುವುದನ್ನು ತಿಳಿಸುತ್ತದೆ.[೧೫೨] ಸ್ಮಾರಕದಲ್ಲಿ ವೀರ ಆಳೆತ್ತರದ ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯಿದೆ. ಕುದುರೆ ಮೇಲೆ ಕುಳಿತಿರುವ ಇಬ್ಬರು ಶತ್ರುಗಳು ಕತ್ತಿ, ಭರ್ಚಿಗಳನ್ನು ಹಿಡಿದಿದ್ದಾರೆ. ಶತ್ರುವೊಬ್ಬ ಹೋರಾಟದಲ್ಲಿ ಮಡಿದಿರುವುದನ್ನು ಚಿತ್ರಿಸಲಾಗಿದೆ. ವೀರನ ಹಿಂದೆ ಸಾಲಾಗಿ ನಿಂತಿರುವ ತುರುಗಳಿವೆ. ಆವರಗೊಳ್ಳ ಅಪ್ರಕಟಿತ ಸ್ಮಾರಕಶಿಲ್ಪದಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿರುವ ವೀರ ಯುದ್ಧಸನ್ನದ್ಧನಾಗಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯಿದೆ. ತಲೆಯಲ್ಲಿ ಮುಡಿಕಟ್ಟಿ, ಕಿವಿಯೋಲೆ, ಕೊರಳಸರವನ್ನು ಧರಿಸಿದ್ದಾನೆ. ಕತ್ತಿ, ಗುರಾಣಿ ಹಿಡಿದಿರುವ ಶತ್ರುವೊಬ್ಬ ಯುದ್ಧದಿಂದ ಪಲಾಯನಗೈಯುತ್ತಿರುವುದನ್ನು ಚಿತ್ರಿಸಲಾಗಿದೆ. ಮತ್ತೊಬ್ಬ ಶತ್ರು ಭರ್ಚಿಯನ್ನು ಹಿಡಿದು ಯುದ್ಧಕ್ಕೆ ಧಾವಿಸುತ್ತಿರುವಂತೆ ಕಂಡರಣೆ ಮಾಡಲಾಗಿದೆ. ಹೋರಾಟದಲ್ಲಿ ಶತ್ರುವೊಬ್ಬ ಮಡಿದು ಬಿದ್ದಿರುವುದು ಕಂಡುಬರುತ್ತದೆ. ವೀರನ ಹಿಂಭಾಗದಲ್ಲಿ

ಚಿತ್ರಿಸಿರುವ ತುರುಗಳು ಹೆದರಿ ಹೋರಾಟವನ್ನು ನೋಡುತ್ತ ನಿಂತಿವೆ. ಕುಂದುವಾಡ ಆಂಜನೇಯ ದೇವಸ್ಥಾನ ಹಿಂಬದಿಯಲ್ಲಿರುವ ಸ್ಮಾರಕದಲ್ಲಿ ವೀರನು ಒಂದು ಕೈಯಲ್ಲಿ ಬಾಕು ಹಿಡಿದು, ಮತ್ತೊಂದು ಕೈಯಲ್ಲಿ ಶತ್ರುವು ಪ್ರಯೋಗಿಸಿದ ಭರ್ಚಿಯನ್ನು ತಡೆಹಿಡಿದಿದ್ದಾನೆ. ಇಬ್ಬರು ಶತ್ರುಗಳು ಭರ್ಚಿಗಳನ್ನು ಹಿಡಿದಿದ್ದಾರೆ. ಜಗಲೂರು ತಾಲೂಕು ಆಸಗೋಡು ಬಸವೇಶ್ವರ ದೇವಸ್ಥಾನದ ಬಳಿಯಿರುವ ಕ್ರಿ.ಶ. ೧೦೧೦ರ ಸ್ಮಾರಕಶಿಲ್ಪವು ದಶವರ್ಮ ಅರಸನ ಮಗ ಬಣಯತ ಆಳುತ್ತಿದ್ದಾಗ, ಆಸಗೋಡಿನ ರಾಮಣ್ಣ ಅಸಗಕಾಡಚ ಎಂಬುವನ ಮಗ ಕಾಡವಾಸನೆಂಬುವನು ಬಲಾತ್ಕಾರವಾಗಿ ಕೊಂಡೊಯ್ಯುತ್ತಿದ್ದ ಕಿತ್ತೂರಿನ ಗೋವುಗಳನ್ನು ಬಿಡಿಸಿಕೊಂಡು ಬರಲು ಹೋಗಿ ಹೋರಾಡಿ ಸತ್ತನೆಂದು ತಿಳಿಸುತ್ತದೆ. ಈ ಶಾಸನದ ದಶವರ್ಮ ದೊರೆ ಸತ್ಯಾಶ್ರಯನ ಮಗನೆಂದು ಶಾಸನತಜ್ಞ ಬಿ.ಎಲ್. ರೈಸ್‌ರು ಊಹಿಸಿರುತ್ತಾರೆ.[೧೫೩]

ಹೊನ್ನಾಳಿ ತಾಲೂಕು ಅರಕೆರೆ ಗ್ರಾಮದ ನಾಗೇಶ್ವರ ದೇವಸ್ಥಾನದ ಬಳಿ ಹೊಯ್ಸಳರ ಕಾಲದ ಮೂರು ಸ್ಮಾರಕಶಿಲ್ಪಗಳಿವೆ. ವೀರಬಲ್ಲಾಳನ ಕಾಲಕ್ಕೆ ಸಂಬಂಧಿಸಿದ ಸ್ಮಾರಕವೊಂದು ಅರಕೆರೆ ತುರುಗಳನ್ನು ಕಳ್ಳರು ಕೊಂಡುಹೋದಲ್ಲಿ, ಅರಕೆರೆಯ ವೂರೊಡೆಯ ಮಾಳಭೋವನ ತಮ್ಮ ಮಲ್ಲಯನಾಯಕ ಹೋರಾಟದಲ್ಲಿ ಮಡಿದಾಗ ಕಲೆಯ ನಾಯಕ ಎಂಬುವನು ನೆತ್ತರುಗೊಡುಗೆಯಾಗಿ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[೧೫೪] ಇದೇ ಸ್ಥಳದಲ್ಲಿರುವ ತ್ರುಟಿತ ಸ್ಮಾರಕವೊಂದು ಮಹಾಮಂಡಳೇಶ್ವರ ನರಸಿಂಹದೇವ ಮತ್ತು ರಾಯರ ಸೋಮಯ ದಣ್ಣಾಯಕರುಗಳನ್ನು ಉಲ್ಲೇಖಿಸುತ್ತದೆ. ಹೋರಾಟದಲ್ಲಿ ಮಡಿದ ವೀರನಿಗೆ ವಿಕ್ರಮ ಸಂವತ್ಸರದ ಚೈತ್ರ ಬಹುಳ ೫ ಸೋಮವಾರದಂದು ಕಂಬ ೨೫ನ್ನು ದಾನ ನೀಡಿರುವುದು ತಿಳಿಯುತ್ತದೆ.[೧೫೫] ಪ್ರಾಯಶಃ ಹೋರಾಟದಲ್ಲಿ ಸೋಮಯ ದಣ್ಣಾಯಕ ಮಡಿದಿರಬಹುದು. ಇಲ್ಲಿರುವ ಮತ್ತೊಂದು ತ್ರುಟಿತ ಸ್ಮಾರಕವು ಮಂತ್ರಿ ಸೋಮೈಯ ಮತ್ತು ನರಸಿಂಹದೇವನನ್ನು ಉಲ್ಲೇಖಿಸುತ್ತದೆ.[೧೫೬] ಅರಕೆರೆ ಗ್ರಾಮದ ತುರುಗಳಿಗಾಗಿ ಹೋರಾಡಿ ಮಡಿದಿರುವ ವೀರ ಯಾರೆಂಬುದು ಶಾಸನದಿಂದ ಸ್ಪಷ್ಟಗೊಳ್ಳುವುದಿಲ್ಲ. ಚನ್ನಗಿರಿ ತಾಲೂಕು ದೊಂದ್ರಘಟ್ಟ ಗ್ರಾಮದಲ್ಲಿ ವೀರನರಸಿಂಹ ದೇವನ ಕಾಲದ ಸ್ಮಾರಕವಿದೆ. ಈ ಸ್ಮಾರಕಶಿಲ್ಪವು ಸೂಸಲುಗೆರೆಯ ವಿತ್ತಿಯ ದೊಂಡರಗಟ್ಟದ ಶ್ರೀಮಂನಾಳು ಪ್ರಭು ಭೀರಗಾವುಂಡನ ಮಗ ಸಂಕಗಾವುಂಡ, ಆತನ ಮಗ ಬೀರಗವುಡಮಲ್ಲ ಸರ್ವಜಿತು ಸಂವತ್ಸರದ ಶ್ರಾವಣ ಶುದ್ಧ ೧೧ ಸೋಮವಾರದಂದು ತುರುಗಾಳಗದಲ್ಲಿ ಸುರಲೋಕ ಪ್ರಾಪ್ತನಾದುದಕ್ಕೆ, ಬೀರಗವುಡ ಸಂಕಯ್ಯಂಗಳ ಪೂಜೆ ಕಾರ್ಯಕ್ಕಾಗಿ ಗೆದ್ದ ಕಂಬ ೫, ಬೆದ್ದಲ ಭೂಮಿ ಕಂಬ ೧೦ನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ.[೧೫೭] ಭುವನಾಶ್ರಯ, ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ದ್ವಾರತಿಪುರವರಾಧೀಶ್ವರ, ಯಾದವಕುಳಾಂಬರ, ದ್ಯುಮಣಿ ಸರ್ವಜ್ಞ ಚೂಡಾಮಣಿ, ಮಲೆರಾಜರಾಜ, ಮಲಪರೊಳ್‌ಗಂಡ, ಗಂಡಬೇರುಂಡ, ಕದನಪ್ರಚಂಡ, ಸಹಾಯಸೂರ, ಕಾಂಗವೀರ, ಶನಿವಾರಸಿದ್ದ, ಗಿರಿದುರ್ಗಮಲ್ಲ, ಚಲದಂಕರಾಮ, ಚೋಳ ರಾಜ್ಯಪ್ರತಿಷ್ಠಾಚಾರ್ಯ ನಿಸ್ಸಂಕ, ಪ್ರತಾಪ ಚಕ್ರವರ್ತಿ ಎಂಬ ಇತ್ಯಾದಿ ಬಿರುದುಗಳಿಂದ

ವೀರನರಸಿಂಹದೇವನನ್ನು ಸ್ಮಾರಕಶಿಲ್ಪವು ವರ್ಣಿಸುತ್ತದೆ. ಸ್ಮಾರಕವನ್ನು ನಾಲ್ಕು ಹಂತದಲ್ಲಿ ಕಂಡರಿಸಿದ್ದು, ಇಬ್ಬರು ವೀರರು ಶತ್ರುಗಳೊಂದಿಗೆ ಹೋರಾಡುತ್ತಿರುವುದನ್ನು ಪ್ರತ್ಯೇಕವಾಗಿ ಎರಡು ಹಂತಗಳಲ್ಲಿ ಕಂಡರಣೆ ಮಾಡಲಾಗಿದೆ. ವೀರರಿಗೆ ಶತ್ರುಗಳಿಬ್ಬರು ಶರಣಾಗತರಾಗಿದ್ದಾರೆ. ದಿಕ್ಕುಗೊಂಡು ನಿಂತಿರುವ ತುರುಗಳು ತಲೆಗಳನ್ನು ಮೇಲಕ್ಕೆ ಎತ್ತಿ ಹೆದರಿ ಅಥವಾ ಕುತೂಹಲದಿಂದ ಹೋರಾಟವನ್ನು ನೋಡುತ್ತ ನಿಂತಿವೆ. ಮೆದಿಕೆರೆ ಗ್ರಾಮದ ಮಲ್ಲೇಶ್ವರ ದೇವಸ್ಥಾನ ಮುಂಭಾಗದಲ್ಲಿರುವ ಅಪ್ರಕಟಿತ ಸ್ಮಾರಕ ಶಾಸನವೊಂದು ಕ್ರಿ.ಶ. ಸು. ೧೨ನೇ ಶತಮಾನದ್ದಾಗಿದೆ. ನಾಲ್ಕು ಹಂತಗಳಲ್ಲಿರುವ ಈ ಸ್ಮಾರಕಶಿಲ್ಪದಲ್ಲಿ ವೀರರಿಬ್ಬರು ಪ್ರತ್ಯೇಕವಾಗಿ ಶತ್ರುಗಳೊಂದಿಗೆ ಹೋರಾಡುತ್ತಿರುವುದನ್ನು ಚಿತ್ರಿಸಲಾಗಿದೆ. ಮೊದಲ ಹಂತದಲ್ಲಿ ಯುದ್ಧ ಸನ್ನದ್ಧನಾಗಿರುವ ವೀರನು ಬಲಗೈಯಲ್ಲಿನ ಬಾಕುವಿನಿಂದ ಶತ್ರುವಿನ ಹೊಟ್ಟೆಯ ಭಾಗಕ್ಕೆ ಇರಿದಿರುವ ದೃಶ್ಯವಿದೆ. ಹಲವರು ಹೋರಾಟದಲ್ಲಿ ಮಡಿದಿರುವುದನ್ನು ಶಿಲ್ಪದ ಕೆಳಭಾಗದಲ್ಲಿ ಚಿತ್ರಿಸಲಾಗಿದೆ. ವೀರನ ಹಿಂಬದಿ ನಾಲ್ಕು ತುರುಗಳು ಬೆದರಿ ನಿಂತಿವೆ. ಅವುಗಳ ಸುತ್ತಲೂ ಬೇಲಿ ಹಾಕಿರುವಂತೆ ಕಂಡರಿಸಲಾಗಿದೆ. ಈ ದೃಶ್ಯವು ಕಳ್ಳರು ಕಣ(ದೊಡ್ಡಿ)ದಲ್ಲಿದ್ದ ತುರುಗಳನ್ನು ಕದ್ದರೆಂದು ಧ್ವನಿಸುತ್ತದೆ. ಎರಡನೇ ಹಂತದಲ್ಲಿ ಇಬ್ಬರು ವೀರರು ಒಟ್ಟುಗೂಡಿ ಶತ್ರುಗಳನ್ನು ಎದುರಿಸಿದರೆಂದು ತೋರಿಸಲಾಗಿದೆ. ಅವರಿಗೆ ಶತ್ರುಗಳಿಬ್ಬರು ಆಯುಧಗಳನ್ನು ಕೆಳಗಿಳಿಸಿ ಶರಣಾಗತರಾಗಿರುವಂತೆ ಚಿತ್ರಿಸಲಾಗಿದೆ.

ಬೆಳಗುತ್ತಿ ಸಿಂದರ ಕಾಲದ ಏಳು ತುರುಗೋಳ್ ಸ್ಮಾರಕಶಿಲ್ಪಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿವೆ. ಕ್ರಿ.ಶ. ೧೧೭೧ರ ಒಂದು ಸ್ಮಾರಕಶಿಲ್ಪದಿಂದ ಶ್ರೀಮನ್ ಮಹಾಮಂಡಳೇಶ್ವರ ಈಶ್ವರ ದೇವರಸನು ಬೆಳಗುತ್ತಿಯಲ್ಲಿದ್ದು, ಎಡವಟ್ಟೆನಾಡೊಳಗಿನ ಮದುವಲ್ಲ-೩೦ ಮತ್ತು ನರವಳಿಗೆ-೪೦ಗಳನ್ನು ಸುಖಸಂಖಥಾವಿನೋದಿಂದ ರಾಜ್ಯಾಂಗಯುತ್ತಿರುವಾಗ ಸಾಂತಳಿಗೆಯ ನಾಡ ಅರಸ ಸಿಂಗಿದೇವನು ಹತ್ತಿವೂರು ಮತ್ತು ಸೊರಟೂರುಗಳ ಮೇಲೆ ದಾಳಿ ಮಾಡಿ ತುರುಗಳನ್ನು ಕೊಂಡೊಯ್ದುದರಿಂದ, ಮತ್ತಲ ದಾಸಯ್ಯನ ಮಗ ಚೀಲಯ್ಯ ಹಾಗೂ ಮತ್ತಲ ಮಲ್ಲಯ್ಯನ ಮಗ ಕೇತಯ್ಯ ಎಂಬ ಅಣ್ಣತಮ್ಮಂದಿರು ಸಿಂಗಿದೇವನ ವಿರುದ್ಧ ಹೋರಾಡಿ ಕುದುರೆಯನ್ನು ತಿವಿದು, ಹಲವರನ್ನು ಕೊಂದು ಸುರಲೋಕಪ್ರಾಪ್ತರಾಗಿರುವುದು ತಿಳಿಯುತ್ತದೆ. ಈ ಶಾಸನದ ಕೊನೆಯಲ್ಲಿ 'ಜಿತೇನಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗಣ, ಕ್ಷಣವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇರಣೇ'[೧೫೮] ಎಂಬ ಶ್ಲೋಕ ಉಲ್ಲೇಖಗೊಂಡಿದೆ. ಸ್ಮಾರಕ ಉಲ್ಲೇಖಿಸುವ ಸಾಂತಳಿಗೆ ನಾಡು ಎಡಮಲೆ-೭೦, ಮುದುವರ-೩೦ಗಳನ್ನು ಒಳಗೊಂಡು ಶಿವಮೊಗ್ಗ ತಾಲೂಕಿನ ಉತ್ತರ ಭಾಗದ ಪ್ರದೇಶವಾಗಿದೆ.[೧೫೯] ಈ ವಂಶದ ಮಲ್ಲದೇವರಸನ ಕಾಲದ ನಾಲ್ಕು ತುರುಗೋಳ್ ಸ್ಮಾರಕಗಳು ಕಂಡುಬರುತ್ತವೆ. ಮಹಾಮಂಡಳೇಶ್ವರ ಮಲ್ಲದೇವರಸರು ಸುಖಸಂಕಥಾವಿನೋದದಿಂದ ರಾಜ್ಯಂಗೈಯುತ್ತಿರುವಾಗ ಚಟ್ಟನೃಪಾಳ ಕಂಚಿರಸ ಪಾಂಡ್ಯನು ನೆಲವರ್ತ್ತಿಯ ತುರುಗಳನ್ನು ಹೊಡೆದುಕೊಂಡು ಹೋದಾಗ, ಚಟ್ಟೆಯ ನಾಯಕ ಅವನನ್ನು ಬೆನ್ನಟ್ಟಿ ತುರುಗಳನ್ನು ಮರಳಿ ಪಡೆದು ಸುರಕನ್ನೆಯರ ಮೆಚ್ಚುಗೆಗೆ ಪಾತ್ರನಾಗುತ್ತಾನೆ. ಹೋರಾಡಿ

ಮಡಿದ ಈತನ ಮಕ್ಕಳಿಗೆ ಮಲ್ಲದೇವರಸ ಹಾಗೂ ಕನ್ನಗಾವುಂಡ, ಬಮ್ಮಗಾವುಂಡ, ಬಮ್ಮಗಾವುಂಡನಹಳ್ಳಿಯ ಮಾರಗಾವುಂಡ, ಗಂಜಿಯ ಮಾಕಗಾವುಂಡರುಗಳು ಉಬ್ಬರವಾನಿಯ ಸ್ಥಳದ ಗದ್ದೆ ಕಮ್ಮ ೧, ಹೊಸಗೆರೆಯೊಳಗೆ ಕಮ್ಮ ೨೫, ಅಲ್ಲಿನವಣೆಕಮ್ಮ ೫೦ನ್ನು ದಾನವಾಗಿ ನೀಡಿರುವುದು ಕ್ರಿ.ಶ. ೧೧೮೭ರ ಒಂದು ಸ್ಮಾರಕದಿಂದ ತಿಳಿಯುತ್ತದೆ.[೧೬೦] ಇದನ್ನು ಅಳಿಸಿದವರು ತಮ್ಮ ಸ್ವಹಸ್ತದಿಂದ ವಾರಣಾಸಿಯಲ್ಲಿ ಬ್ರಾಹ್ಮಣರನ್ನು ಕೊಂದ ಮಹಾಪಾಪಕ್ಕೆ ಒಳಗಾಗುತ್ತೀರಿ ಎಂಬ ಶಾಪಾಶಯ ಸ್ಮಾರಕದ ಕೊನೆಯಲ್ಲಿ ಉಕ್ತಿಗೊಂಡಿದೆ. ದಾನ ನೀಡಿದ ಸ್ಥಳ ಉಬ್ಬರವಾನಿ ಚನ್ನಗಿರಿ ತಾಲೂಕಿನ ಇಂದಿನ ಉಬ್ರಾಣಿಯಾಗಿತ್ತೆಂದು ತೋರುತ್ತದೆ. ಈ ಶಾಸನದಲ್ಲಿ ಉಲ್ಲೇಖವಾಗುವ 'ತೊಟ್ಟನೆಪಾಯ್ದು' ಎಂಬುದು ಆಕ್ರಮಣವು ಆಕ್ರಮಣಕಾರನಿಗೆ ಪೂರ್ವ ನಿಶ್ಚಿತವಾದುದು. ಎದುರಾಳಿಗೆ 'ತೊಟ್ಟನೆ' ಎನ್ನಿಸುವಂತಹುದು. ಈ ರೀತಿಯ ಆಕ್ರಮಣವನ್ನು 'ಧಾಳಿಯುವರ್ಗ' ಎಂಬುದಾಗಿ ವಿದ್ವಾಂಸರಾದ ಆರ್. ಶೇಷಶಾಸ್ತ್ರಿಯವರು ಅಭಿಪ್ರಾಯಪಟ್ಟಿದ್ದಾರೆ.[೧೬೧] ಕ್ರಿ.ಶ. ೧೧೯೬ರಲ್ಲಿ ಇದ್ದಕ್ಕಿದ್ದಂತೆ ಉಮ್ಮಾಬಾಯಿಯ ಸೈನಿಕರು ಕುದುರೆ ಮೇಲೆ ಒಂದು ತುರುಗಳನ್ನು ಹಿಡಿದಾಗ, ಮಲ್ಲಿದೇವರಸನ ಆಜ್ಞೆಯಂತೆ ಗರಿಕಮಲ್ಲೆಯನಾಯಕ ಮಾಚೆಯನಾಕರ ಮಗ ಗಟ್ಟೆಯನಾಯಕ ವೈರಿಗಳೊಡನೆ ಹೋರಾಡಿ 'ತುರುವಂ ಮಗುರ್ಚ್ಚಿ' ಸುರಲೋಕ ಪ್ರಾಪ್ತನಾಗುತ್ತಾನೆ. ಮಲ್ಲಿದೇವರಸ, ಸಮಸ್ತ ಪ್ರಧಾನರು ಬಮ್ಮಗಾವುಂಡನ ಸಮ್ಮುಖದಲ್ಲಿ ಗಟ್ಟಿಯ ನಾಯಕನ ವೀರತನ ಮೆಚ್ಚಿ ಗದ್ದೆ ಕಂಬ ೧೦, ಬೆದ್ದಲು ಕಂಬ ೨೦ನ್ನು ಭೂದಾನವಾಗಿ ನೀಡಿರುವುದು ತಿಳಿದುಬರುತ್ತದೆ.[೧೬೨] ಕ್ರಿ.ಶ. ೧೧೯೬ರ ಮತ್ತೊಂದು ಸ್ಮಾರಕ ಮಲ್ಲಿದೇವರಸನ ಕಾಲದ್ದಾಗಿದ್ದು, ನಳಸಂವತ್ಸರ ವೈಶಾಖ ಶು. ೧೫ ಶನಿವಾರದಂದು ಉಮ್ಮಬಾಯಿ ತುರುಗಳಿಗಾಗಿ ಮಾಡಿದ ದಾಳಿಯಲ್ಲಿ, ಜೇಡರ ಸೋಮಯ್ಯನ ಮಗ ಅಪ್ಪುಗ ಮಡಿದು ಸುರಲೋಕ ಪ್ರಾಪ್ತನಾಗಿರುವುದನ್ನು ಉಲ್ಲೇಖಿಸುತ್ತದೆ.[೧೬೩] ಸ್ಮಾರಕದಲ್ಲಿ ವೀರನು ಅಶ್ವಾರೂಢರಾಗಿರುವ ಶತ್ರುಸೈನಿಕರೊಂದಿಗೆ ಹೋರಾಡುತ್ತಿದ್ದಾನೆ. ಬಲಗೈಯಲ್ಲಿರುವ ಬಾಕುವಿನಿಂದ ಶತ್ರುವಿನ ಕುದುರೆಯ ಕತ್ತಿನ ಭಾಗಕ್ಕೆ ಇರಿದಿದ್ದಾನೆ. ವೀರನ ಕಾಲುಗಳ ಕೆಳಗೆ ಶತ್ರುವೊಬ್ಬ ಮಡಿದು ಅಂಗಾತವಾಗಿ ಬಿದ್ದಿದ್ದಾನೆ. ತುರುಗಳು ಊರ ಕಡೆ ಹೊರಟಿರುವಂತೆ ಚಿತ್ರಿಸಲಾಗಿದೆ. ಕ್ರಿ.ಶ. ೧೧೯೬ರ ಇನ್ನೊಂದು ಸ್ಮಾರಕಶಿಲ್ಪವು ಹೊಯ್ಸಳ ಉಮಾದೇವಿ ಕವುಡಿವೊಳೆಯಲ್ಲಿ ಬೀಡುಬಿಟ್ಟು, ಬೆಳಗುತ್ತಿಗೆ ಬಂದು ಕಾದಿ ಗೆದ್ದು ಹೋಗುತ್ತಿರುವಾಗ ಕತ್ತಿಗಿಯಲ್ಲಿನ ತುರುಗಳನ್ನು ಹೊಡೆದುಕೊಂಡು ಹೋದಾಗ ಮತ್ತಲ ಮಲ್ಲಯ್ಯನ ಮಗ ಚೀಲಯ್ಯನು ಹತ್ತಿವೂರಿನ ಮೂಡಣ ದಿಕ್ಕಿನ ಕೆರೆಯ ಕೆಳಗೆ ಹೋರಾಡಿ ಕುದುರೆಯನ್ನು ತಿವಿದು, ಹಲವರನ್ನು ಕೊಂದು ಸುರಲೋಕ ಪ್ರಾಪ್ತನಾಗುತ್ತಾನೆ. ಆತನಿಗೆ ಮಲ್ಲವೆಗವುಂಡಿ ಮತ್ತು ಬೀರಯ್ಯನು ಬೀರಗಲ್ಲ ನಿಲ್ಲಿಸಿರುವುದನ್ನು ಉಲ್ಲೇಖಿಸುತ್ತದೆ.[೧೬೪] ಉಲ್ಲೇಖಿತ ಮೂರು ಸ್ಮಾರಕಶಿಲ್ಪಗಳಿಂದ

ಹೊಯ್ಸಳ ಬಲ್ಲಾಳನ ರಾಣಿ ಉಮಾದೇವಿ ಬೆಳಗವರ್ತಿಯ ಮಂಡಳೇಶ್ವರ ಮಲ್ಲದೇವರಸನೊಂದಿಗೆ ತುರುಗಳಿಗಾಗಿ ಒಂದೇ ವರ್ಷದ ಅವಧಿಯಲ್ಲಿ ಮೂರು ಬಾರಿ ದಂಡೆತ್ತಿ ಹೋಗಿರುವುದು ತಿಳಿಯುತ್ತದೆ. ಸ್ತ್ರೀಯೊಬ್ಬಳು ತುರು ಸೆರೆಹಿಡಿದ ಪ್ರಸಂಗಕ್ಕೆ ಈ ಸ್ಮಾರಕಶಿಲ್ಪಗಳು ಕಾರಣವಾಗಿವೆ.[೧೬೫] ಮಾದನಬಾವಿಯ ಬೇಡರು ಬೆಳಗುತ್ತಿಯ ತುರುಗಳನ್ನು ಕದ್ದುಕೊಂಡು ಹೋದಾಗ ಬೆಳಗುತ್ತಿಯ ಅರಸನಾದ ಈಶ್ವರದೇವನ ಡಿಂಗರಿಗನೂ, ಸ್ವಾಮಿಕಾರ್ಯ ಹಿತರತ ಜೀವನೂ ಆದ ಬೆಣ್ಣೆಯ ಸಾಹಣಿ ಹೋರಾಡಿ ಮಡಿಯುತ್ತಾನೆ. ಆಗ ಈಶ್ವರದೇವ 'ಡಿಂಗರಿಗ ವೃತ್ತಿ'ಯಾಗಿ ಬೂತನ ಕೊಂಡದ ಕೆಳಗೆ ಗದ್ದೆ ಮತ್ತ ೧, ಅತ್ತಿಕೆರೆಯ ಕೆಳಗೆ ಬೆದ್ದಲು ಮತ್ತ ೧ನ್ನು ಆತನ ತಮ್ಮ ಯಂಕಯ್ಯನಿಗೆ ಭೂದಾನ ನೀಡಿರುವುದು ಕ್ರಿ.ಶ. ೧೨೧೬ರ ಒಂದು ಸ್ಮಾರಕಶಿಲ್ಪದಿಂದ ತಿಳಿದುಬರುತ್ತದೆ.[೧೬೬] ಕ್ರಿ.ಶ. ೧೨೪೫ರ ಒಂದು ಸ್ಮಾರಕಶಿಲ್ಪವು ಲಖ್ಖಣಪಾಳ ಕಲಿದೇವ ತುರುಗಳಿಗಾಗಿ ದಾಳಿ ಮಾಡಿದಾಗ ಹತ್ತಿವೂರ ಬಳಿ ನಡೆದ ಯುದ್ಧದಲ್ಲಿ ಗುತ್ತನಹಳ್ಳಿಯ ಕಾಳೆಯನ ತಮ್ಮ ಲಂಕೈಚ ಹೋರಾಡಿ ಸುರಲೋಕ ಪ್ರಾಪ್ತನಾದನೆಂದು ಉಲ್ಲೇಖಿಸುತ್ತದೆ.[೧೬೭] ಯಾದವರ ಕಾಲದ ಸ್ಮಾರಕಶಿಲ್ಪವೊಂದು ಕಡ್ಲಬಾಳು ಗ್ರಾಮದ ವುಡಸಲ್ವನ ಗುಡಿ ಮುಂಭಾಗದಲ್ಲಿ ಕಂಡುಬರುವುದು. ಆ ಸ್ಮಾರಕದಿಂದ ಶ್ರೀಮತು ಕಡಲಬಾಳ ಸೋವಣಾವುಂಡನ ಮಗ ಬಟರಿಜ ತುರುಗಾಳಗದಲ್ಲಿ ಮಡಿದು ಸುರಲೋಕ ಪ್ರಾಪ್ತನಾದಾಗ ಆತನ ತಮ್ಮ ಕಲ್ಲಿಯಮಿಟಗ ಅಕ್ಕಸಾಲಿಸಂಕೋಜ ಅಣ್ಣನಿಗಾಗಿ ಸ್ಮಾರಕ ನಿಲ್ಲಿಸಿದನೆಂದು ತಿಳಿದುಬರುತ್ತದೆ.[೧೬೮]

**ತುರುಗೋಳ್ ಸ್ಮಾರಕ ಶಿಲ್ಪಗಳು: ಶಾಸನರಹಿತ**

ಹೊನ್ನಾಳಿ ತಾಲೂಕು ಸೊರಟೂರಿನಲ್ಲಿರುವ ರಾಷ್ಟ್ರಕೂಟರ ಒಂದು ತುರುಗೋಳ್ ಸ್ಮಾರಕಶಿಲ್ಪವು ಶಿಲ್ಪಶೈಲಿಯ ದೃಷ್ಟಿಯಿಂದ ಅತಿ ಮಹತ್ವದ್ದಾಗಿದೆ. ಒಂದೇ ಶಿಲೆಯಲ್ಲಿ ಎರಡು ಸ್ಮಾರಕಗಳು ಕಾಣುವಂತೆ ಬಿಡಿಸಿರುವುದು ವಿಶೇಷವಾಗಿದೆ. ಇಡೀ ಸ್ಮಾರಕವನ್ನು ಎರಡು ಭಾಗ ಮಾಡಿಕೊಂಡು ಎರಡೂ ಕಡೆಯೂ ಪ್ರತ್ಯೇಕವಾದ ಹಂತಗಳನ್ನು ವಿಂಗಡಿಸಿಕೊಂಡು ಸ್ಮಾರಕಶಿಲ್ಪವನ್ನು ಕೆತ್ತಲಾಗಿದೆ. ಕೆಳಗಿನ ಹಂತದ ಎರಡೂ ಭಾಗಗಳಲ್ಲಿ ವೀರರು ಶತ್ರುಗಳೊಂದಿಗೆ ಹೋರಾಡುತ್ತಿರುವುದನ್ನು ಚಿತ್ರಿಸಿ ಇಬ್ಬರ ಹೋರಾಟವನ್ನು ಪ್ರತ್ಯೇಕಿಸುವಂತೆ ಮಧ್ಯದಲ್ಲಿ ತುರುಗಳನ್ನು ಸಾಲಾಗಿ ನಿಂತಿರುವಂತೆ ಕೆತ್ತಲಾಗಿದೆ. ವೀರರು ಪ್ರಯೋಗಿಸಿದ ಬಾಣದಿಂದ ಶತ್ರುಗಳಿಬ್ಬರು ಹತರಾಗಿ ಅಂಗಾತ ಬಿದ್ದಿದ್ದಾರೆ. ಎರಡನೇ ಹಂತದ ಎರಡು ಭಾಗಗಳಲ್ಲಿ ವೀರರು ಅಪ್ಸರೆಯರ ಹೆಗಲ ಮೇಲೆ ಕೈ ಹಾಕಿಕೊಂಡು ಸ್ವರ್ಗಕ್ಕೆ ತೆರಳುತ್ತಿರುವ ದೃಶ್ಯವಿದೆ. ಮೇಲಿನ ಹಂತದ ಎರಡೂ ಭಾಗಗಳಲ್ಲಿ ವೀರರು ಪೀಠದ ಮೇಲೆ ಆಶೀರ್ವಾದ ಭಂಗಿಯಲ್ಲಿ ಕುಳಿತಿದ್ದು, ಅವರ ಎರಡೂ ಬದಿಯಲ್ಲಿ ದೇವಕನ್ಯೆಯರು ಚಾಮರಗಳನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಈ ಸ್ಮಾರಕದ ಹೋರಾಟದ ಹಂತ ಹಾಗೂ ಸ್ವರ್ಗಾರೋಹಣ ಹಂತಗಳ ನಡುವಿನ ಮಧ್ಯ ಪಟ್ಟಿಕೆಯಲ್ಲಿ ರಾಷ್ಟ್ರಕೂಟರ ಅರಸೊತ್ತಿಗೆಯ ಲಾಂಛನವಾದ ನೇಗಿಲಿನ ಚಿತ್ರಣವಿದೆ.

ದಾವಣಗೆರೆ ತಾಲೂಕು ಐಗೂರು ಗ್ರಾಮದ ಹೊಲವೊಂದರಲ್ಲಿ ರಾಷ್ಟ್ರಕೂಟರ ಒಂದು ತುರುಗೋಳ್ ಸ್ಮಾರಕಶಿಲ್ಪವಿದೆ. ಈ ಸ್ಮಾರಕದಲ್ಲಿ ವೀರನು ಬಿಲ್ಲುವನ್ನು ಹಿಡಿದು ಯುದ್ಧಸನ್ನದ್ಧನಾಗಿರುವಂತೆ ಚಿತ್ರಿಸಿ, ತುರುಗಳನ್ನು ಅವನ ಹಿಂದೆ ಸಾಲಾಗಿ ನಿಂತಿರುವ ಹಾಗೆ ಬಿಡಿಸಲಾಗಿದೆ. ವೀರನಿಗೆ ಹೊಟ್ಟೆಯ ಭಾಗದಲ್ಲಿ ಬಾಣಗಳು ಚುಚ್ಚಿಕೊಂಡಿವೆ. ಓರ್ವನು ಹೋರಾಟದಲ್ಲಿ ಮಡಿದಿದ್ದು, ಅವನ ದೇಹದಲ್ಲಿ ಬಾಣಗಳು ನಾಟಿಕೊಂಡಿರುವುದನ್ನು ತೋರಿಸಲಾಗಿದೆ. ಇದೇ ತಾಲೂಕಿನ ದೊಡ್ಡಬಾತಿ ಗ್ರಾಮದ ಸ್ಮಾರಕಶಿಲ್ಪವೊಂದರಲ್ಲಿ ತುರುಗಳಿಗಾಗಿ ಎರಡು ಗುಂಪಿನ ನಡುವೆ ಭೀಕರವಾದ ಯುದ್ಧ ನಡೆದಿರುವಂತೆ ಶಿಲ್ಪಿ ನೈಜವಾಗಿ ಚಿತ್ರಿಸಿದ್ದಾನೆ. ಸ್ಮಾರಕದಲ್ಲಿ ಇಬ್ಬರು ವೀರರು ತಮ್ಮ ಸೈನ್ಯದೊಂದಿಗೆ ಅಶ್ವಾರೂಢ ಶತ್ರುಗಳೊಂದಿಗೆ ಹೋರಾಡುತ್ತಿರುವ ದೃಶ್ಯವಿದೆ. ವೀರರಿಗೆ ಬಾಣಗಳು ಹೊಟ್ಟೆಯ ಭಾಗದಲ್ಲಿ ಚುಚ್ಚಿರುವಂತೆ ಚಿತ್ರಿಸಲಾಗಿದೆ. ಒಬ್ಬ ವೀರನ ಹಿಂಬದಿಯಲ್ಲಿ ತುರುಗಳನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ. ಜಗಲೂರು ತಾಲೂಕು ದೇವಿಕೆರೆ[೯೬] ಗ್ರಾಮದ ಪಾದಗಟ್ಟೆ ಬಳಿ ರಾಷ್ಟ್ರಕೂಟ ಕಾಲದ ಎರಡು ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಒಂದು ಸ್ಮಾರಕದಲ್ಲಿ ವೀರನನ್ನು ಪ್ರಧಾನವಾಗಿ ಚಿತ್ರಿಸಿ ಅವನ ಪಕ್ಕದಲ್ಲಿ ದನಗಳನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ. ಇಲ್ಲಿರುವ ಇನ್ನೊಂದು ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿರುವಂತೆ ಕೆತ್ತಲಾಗಿದೆ. ಹರಪನಹಳ್ಳಿ ತಾಲೂಕು ತೊಗರಿಕಟ್ಟೆ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಶತ್ರುಗಳ ಮಧ್ಯೆ ಇರುವಂತೆ ಕೆತ್ತಲಾಗಿದ್ದು, ದನಗಳನ್ನು ಚಿಕ್ಕದಾಗಿ ಒಂದು ಮೂಲೆಯಲ್ಲಿ ತೋರಿಸಲಾಗಿದೆ. ನಂದಿಬೇವೂರಿನ ತ್ರುಟಿತ ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವನು. ಅವನ ಹಿಂದೆ ಚಿತ್ರಿಸಿರುವ ದನಗಳು ಹಿಂತಿರುಗಿ ಹೊರಟಿರುವಂತೆ ಕೆತ್ತಲಾಗಿದೆ.

ಹರಪನಹಳ್ಳಿ ತಾಲೂಕು ಚಿಗಟೇರಿ ಗ್ರಾಮದಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ನಾಲ್ಕು ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಈ ಶಿಲ್ಪಗಳು ಬಹಳ ಸ್ವಾರಸ್ಯವಾಗಿವೆ. ಒಂದು ಸ್ಮಾರಕಶಿಲ್ಪದಲ್ಲಿ ವೀರನು ಕುದುರೆಯ ಮೇಲಿರುವ ಶತ್ರುವನ್ನು ಬಾಣದಿಂದ ಕೆಳಕ್ಕೆ ಬೀಳಿಸಿ, ಮತ್ತೊಬ್ಬ ಶತ್ರುವನ್ನು ಬಾಣದಿಂದ ಕೆಳಕ್ಕೆ ಬೀಳಿಸಲು ಯತ್ನಿಸಿರುವಂತೆ ಕೆತ್ತಲಾಗಿದೆ. ಹೋರಾಟದ ಹಂತ ಹಾಗೂ ಸ್ವರ್ಗಾರೋಹಣದ ಹಂತಗಳು ನಡುವಿನ ಮಧ್ಯಪಟ್ಟಿಕೆಯಲ್ಲಿ ತುರುಗಳನ್ನು ಬಿಡಿಸಲಾಗಿದೆ. ಅವುಗಳಲ್ಲಿ ಮುಂದಾಗಿ ಹೊರಟಿರುವ ತುರುವೊಂದು ಹಿಂದಕ್ಕೆ ತಿರುಗಿ ನೋಡುತ್ತಿರುವಂತೆ ಚಿತ್ರಿಸಲಾಗಿದೆ. ಅಂದರೆ ತಾವು ಬಿಡುಗಡೆಗೊಂಡೆವಲ್ಲ ಎನ್ನುವ ಅರ್ಥದಲ್ಲಿ ಶಿಲ್ಪಿ ಹಾಗೆ ತೋರಿಸಿರುವುದು ಕಂಡುಬರುತ್ತದೆ. ಇದೇ ರೀತಿ ಸಂತೋಷವನ್ನು ವ್ಯಕ್ತಪಡಿಸುವ ತುರುಗಳನ್ನು ಇಲ್ಲಿರುವ ತ್ರುಟಿತಗೊಂಡಿರುವ ಸ್ಮಾರಕಶಿಲ್ಪದಲ್ಲಿ ಕಾಣುತ್ತೇವೆ. ಅದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಆಳೆತ್ತರದ ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದಾನೆ. ಇವನು ಪ್ರಯೋಗಿಸಿದ ಬಾಣದಿಂದ ಶತ್ರುಗಳು ಹತರಾಗಿ ಅಂಗಾತ ಬಿದ್ದಿದ್ದಾರೆ. ಅವನ ಹಿಂದೆ ಬಿಡಿಸಿರುವ ತುರುಗಳು ಊರಿಗೆ ಮರಳುತ್ತಿರುವಂತೆ ತೋರಿಸಲಾಗಿದೆ. ಅಲ್ಲಿಯೇ ಇರುವ

ಇನ್ನೊಂದು ಸ್ಮಾರಕದಲ್ಲಿ ವೀರನು ಆಳೆತ್ತರದ ಬಿಲ್ಲು ಮತ್ತು ಬಾಕುವನ್ನು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಶತ್ರುಪಕ್ಷದ ಒಬ್ಬನು ಎಡಗಾಲು ಮಂಡಿಯನ್ನು ನೆಲಕ್ಕೆ ಊರಿ, ಬಲಗಾಲನ್ನು ಮಡಚಿ ವೀರನ ಕಾಲಿಗೆ ಶರಣಾಗಿರುವುದನ್ನು ಕೆತ್ತಲಾಗಿದೆ. ವೀರನ ಹಿಂದೆ ದೊಡ್ಡದಾಗಿ ಚಿತ್ರಿಸಿರುವ ತುರುಗಳು ಊರ ಕಡೆ ಮರಳುತ್ತಿರುವುದನ್ನು ತೋರಿಸಲಾಗಿದೆ. ಈ ನಾಲ್ಕು ಸ್ಮಾರಕಶಿಲ್ಪಗಳನ್ನು ಶಿಲ್ಪಿ ಓರ್ವನೇ ಕೆತ್ತಿರುವುದು ಕಂಡುಬರುತ್ತದೆ.

ಬಾಗಳಿ ವಸ್ತುಸಂಗ್ರಹಾಲಯದಲ್ಲಿರುವ ಆರು ತುರುಗೋಳ್ ಸ್ಮಾರಕಶಿಲ್ಪಗಳು ಕಲ್ಯಾಣದ ಚಾಲುಕ್ಯರ ಕಾಲದವಾಗಿವೆ. ಒಂದು ತುರುಗೋಳ್ ಸ್ಮಾರಕವನ್ನು ಬಹಳ ಸುಂದರವಾಗಿ ಕೆತ್ತಲಾಗಿದೆ. ನಾಲ್ಕು ಹಂತದ ಈ ಸ್ಮಾರಕಶಿಲ್ಪದ ಮೊದಲ ಹಂತದಲ್ಲಿ ಇಬ್ಬರು ವೀರರು ಶತ್ರುಗಳೊಂದಿಗೆ ಹೋರಾಡುತ್ತಿರುವಂತೆ, ಅವರ ಕಾಲ ಬಳಿ ಶಿರ ಕತ್ತರಿಸಿದ ಮೂರು ಹೆಣಗಳು ಬಿದ್ದಿರುವಂತೆ ಕಂಡರಿಸಲಾಗಿದೆ. ಎರಡನೇ ಹಂತದಲ್ಲಿ ಲಕ್ಷಣವಾಗಿರುವ ಐದು ದನಗಳು, ಮೂರನೇ ಹಂತದಲ್ಲಿ ಎರಡು ಮಂಟಪದಲ್ಲಿ ಸ್ವರ್ಗಕ್ಕೆ ಹೊರಟ ವೀರರು, ನಾಲ್ಕನೇ ಹಂತದಲ್ಲಿ ಸ್ವರ್ಗಪ್ರಾಪ್ತಿಯನ್ನು ತಿಳಿಸುವ ಅಂಶಗಳನ್ನು ಎರಡು ಮತ್ತು ಮೂರನೇ ಹಂತದ ಮಧ್ಯೆ ಏಳು ಹೂವುಗಳನ್ನು ಚಿತ್ರಿಸಲಾಗಿದೆ. ಇಲ್ಲಿನ ವೀರರ ಉಡುಪು, ಆಭರಣ, ಆಯುಧ, ಅವರ ಹೋರಾಟದ ಭಂಗಿ ಬಹಳ ಸುಂದರವಾಗಿ ಮೂಡಿ ಬಂದಿದೆ.[೧೭೦] ಇಲ್ಲಿರುವ ಎರಡನೆಯ ಸ್ಮಾರಕಶಿಲ್ಪವೊಂದರಲ್ಲಿ ವೀರನು ಕತ್ತಿ ಮತ್ತು ಗುರಾಣಿ ಹಿಡಿದು ಯುದ್ಧಸನ್ನದ್ಧನಾಗಿರುವಂತೆ, ಶತ್ರುಗಳು ನಾಲ್ಕು ದಿಕ್ಕಿನಿಂದಲೂ ಮುತ್ತಿಗೆ ಹಾಕಿರುವ ಹಾಗೆ ಕಂಡರಿಸಲಾಗಿದೆ. ಇಲ್ಲಿ ಯುದ್ಧ ಮಾಡುತ್ತಿರುವುದರ ನಡುವೆಯೇ ತುರುಗಳು ದಿಕ್ಕಿಗೊಂದು ಓಡುತ್ತಿರುವುದನ್ನು ಚಿತ್ರಿಸಲಾಗಿದೆ.[೧೭೧] ಮೂರನೆಯ ಸ್ಮಾರಕಶಿಲ್ಪದಲ್ಲಿ ವೀರನು ಅಶ್ವಾರೂಢನಾಗಿ ಶತ್ರುಸೈನ್ಯದೊಂದಿಗೆ ಹೋರಾಡುತ್ತಿರುವುದನ್ನು ಕೆತ್ತಲಾಗಿದೆ. ವೀರನ ಹಿಂದೆ ತುರುಗಳು ಬೆದರಿ ನಿಂತಿರುವುದನ್ನು ತೋರಿಸಲಾಗಿದೆ.[೧೭೨] ನಾಲ್ಕನೆಯ ಸ್ಮಾರಕದಲ್ಲಿ ಇಬ್ಬರು ವೀರರು ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವಂತೆ ಚಿತ್ರಿಸಿ, ತುರುಗಳು ಊರಿಗೆ ಮರಳುತ್ತಿರುವುದನ್ನು ಕಂಡರಿಸಲಾಗಿದೆ.[೧೭೩] ವಸ್ತುಸಂಗ್ರಹಾಲಯದ ಹೊರಭಾಗದಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಬಾಕುವನ್ನು ಹಿಡಿದು, ತನ್ನ ಎಡಗಾಲಿನಿಂದ ಶತ್ರು ಓರ್ವನ ತಲೆಯನ್ನು ತುಳಿಯುತ್ತಿರುವುದನ್ನು ಕೆತ್ತಲಾಗಿದೆ. ಅವನ ಹಿಂದೆ ಮೂರು ತುರುಗಳು ಊರ ಕಡೆ ಹೊರಟಿರುವಂತೆ, ಮೂರು ತುರುಗಳು ಕುತೂಹಲದಿಂದ ಹೋರಾಟವನ್ನು ನೋಡುತ್ತಿರುವ ರೀತಿ ಬಿಡಿಸಲಾಗಿದೆ. ಇದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲು ಬಾಣವನ್ನು ಹಿಡಿದು ಶತ್ರುಗಳೊಂದಿಗೆ ಹೋರಾಡುತ್ತಿದ್ದಾನೆ. ಅವನ ಹಿಂಬದಿ ಎರಡು ತುರುಗಳು ನಿಂತಿರುವ ಚಿತ್ರಣವಿದೆ.

ಪುನಭಘಟ್ಟ ಗ್ರಾಮದ ಒಂದು ತುರುಗೋಳ್ ಸ್ಮಾರಕಶಿಲ್ಪ ಸುಂದರವಾಗಿ ಮೂಡಿಬಂದಿದೆ. ವೀರನು ಶತ್ರುಗಳ ಜೊತೆ ಹೋರಾಡುತ್ತಿದ್ದು, ಅವನ ಹಾಗೂ ಶತ್ರುಪಕ್ಷದ ಸೈನಿಕರು ಬಿಲ್ಲು ಬಾಣ, ಭರ್ಚಿ, ಕಡುಗತ್ತಿಗಳನ್ನು ಹಿಡಿದಿದ್ದಾರೆ. ಶತ್ರುಪಡೆಯ ಹಿಂದೆ ಚಿತ್ರಿಸಿರುವ ಓರ್ವನು

ಯುದ್ಧಕಹಳೆಯನ್ನು ಊದುತ್ತಿರುವುದನ್ನು ತೋರಿಸಲಾಗಿದೆ. ವೀರನ ಹಿಂಭಾಗದಲ್ಲಿ ಹಾಗೂ ಹೋರಾಟದ ಹಂತ ಮತ್ತು ಸ್ವರ್ಗಾರೋಹಣ ಹಂತಗಳ ನಡುವಿನ ಮಧ್ಯಪಟ್ಟಿಕೆಯಲ್ಲಿ ತುರುಗಳನ್ನು ಕಂಡರಿಸಲಾಗಿದೆ. ಇಲ್ಲಿ ಎರಡು ಗುಂಪಿನವರ ಉಡುಪು, ಆಭರಣ, ಆಯುಧ ಮುಂತಾದವುಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಇದೇ ಗ್ರಾಮದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ವೀರನು ಶತ್ರುವಿನೊಂದಿಗೆ ಹೋರಾಡುತ್ತಿದ್ದು, ಮೇಲ್ಭಾಗದ ಮಧ್ಯಪಟ್ಟಿಕೆಯಲ್ಲಿ ತುರುಗಳು ಓಡುತ್ತಿರುವಂತೆ ಚಿತ್ರಿಸಲಾಗಿದೆ. ಮೈದೂರು ಗ್ರಾಮದ ಈಶ್ವರ ದೇವಸ್ಥಾನದಲ್ಲಿರುವ ಸ್ಮಾರಕವೊಂದರಲ್ಲಿ ವೀರನು ಅಶ್ವಾರೂಢನಾಗಿ ಶತ್ರುಸೈನ್ಯದೊಂದಿಗೆ ಹೋರಾಡುತ್ತಿರುವನು. ಮೇಲಿನ ಮಧ್ಯಪಟ್ಟಿಕೆಯಲ್ಲಿ ದನಗಳು ತಮ್ಮ ಬಾಲಗಳನ್ನು ಮೇಲಕ್ಕೆ ಎತ್ತಿ ಓಡುತ್ತಿವೆ. ಹಗರಿಗುಡಿಹಳ್ಳಿಯ ಒಂದು ತುರುಗೋಳ್ ಸ್ಮಾರಕದಲ್ಲಿ ವೀರನು ಬಿಲ್ಲು ಬಾಣಗಳನ್ನು ಹಿಡಿದು ಹೋರಾಡುತ್ತಿದ್ದಾನೆ. ಒಬ್ಬ ಶತ್ರುವು ಯುದ್ಧದಿಂದ ಪಲಾಯನಗೈಯುತ್ತಿರುವಂತೆ ಕಂಡರಿಸಲಾಗಿದೆ. ಈ ದೃಶ್ಯದ ಮೇಲಿರುವ ಮಧ್ಯಪಟ್ಟಿಕೆಯಲ್ಲಿ ತುರುಗಳು ಗಾಬರಿಗೊಂಡು ಓಡುತ್ತಿರುವುದನ್ನು ಕೆತ್ತಲಾಗಿದೆ. ನೀಲಗುಂದ ಭೀಮೇಶ್ವರ ದೇವಸ್ಥಾನದ ಒಳಾವರಣದಲ್ಲಿರುವ ಸ್ಮಾರಕಶಿಲ್ಪದಲ್ಲಿ ವೀರ ಹಾಗೂ ಓರ್ವ ಶತ್ರು ಬಿಲ್ಲುಗಳನ್ನು ಹಿಡಿದು ಅಭಿಮುಖವಾಗಿ ನಿಂತಿರುವಂತೆ ಕಂಡರಿಸಲಾಗಿದೆ. ಮೇಲಿನ ಚಿಕ್ಕ ಪಟ್ಟಿಕೆಯಲ್ಲಿ ಮೂರು ತುರುಗಳ ಚಿತ್ರಣವಿದೆ.[೧೭೪] ಇದೇ ತಾಲೂಕಿನ ಮುತ್ತಿಗಿ, ಹಳೆಯಲ್ಲಾಪುರ ಗ್ರಾಮಗಳಲ್ಲಿ ತ್ರುಟಿತಗೊಂಡಿರುವ ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬಂದಿವೆ.

ಹರಿಹರ ತಾಲೂಕು ಬನ್ನಿಕೋಡು ಗ್ರಾಮದ ತುರುಗೋಳ್ ಶಿಲ್ಪವೊಂದು ಅಪರೂಪದ್ದಾಗಿದೆ.[೧೭೫] ವೀರನು ಬಿಲ್ಲು ಮತ್ತು ಶತ್ರುವಿನ ಜುಟ್ಟನ್ನು ಎಡಗೈಯಲ್ಲಿ ಹಿಡಿದಿದ್ದಾನೆ. ಮತ್ತೊಬ್ಬ ಶತ್ರುವು ಮಡಿದು ಬಿದ್ದಿದ್ದು, ಅವನ ಕೂದಲು ಹರಡಿಕೊಂಡಿರುವಂತೆ ಕೆತ್ತಲಾಗಿದೆ. ವೀರನ ಹಿಂದೆ ತುರುಗಳನ್ನು ಸಾಲಾಗಿ ಚಿತ್ರಿಸಿ, ಅವುಗಳ ಮುಂದೆ ಕಂಬವೊಂದನ್ನು ಶಿಲ್ಪಿ ತೋರಿಸಿದ್ದಾನೆ. ಇಂತಹ ದೃಶ್ಯವಿರುವ ಶಿಲ್ಪಗಳನ್ನು ಗಮನಿಸಿ ಸಂಶೋಧಕರಾದ ಡಿ.ವಿ. ಪರಮಶಿವಮೂರ್ತಿಯವರು ಅದು ತುರುಹಟ್ಟಿ ಇರಬಹುದು ಎಂದು ಊಹಿಸಿದ್ದಾರೆ. ಗೋವುಗಳನ್ನು ಸಾಕುವ ಕೊಟ್ಟಿಗೆಯ ಮೇಲೂ ದಾಳಿ ಮಾಡುತ್ತಿದ್ದರು ಎಂಬುದನ್ನು ಈ ಸ್ಮಾರಕಶಿಲ್ಪದಿಂದ ಅಭಿಪ್ರಾಯಿಸಬಹುದಾಗಿದೆ. ಬೆಳ್ಳೂಡಿ ಗ್ರಾಮದ ಬಸವಣ್ಣ ದೇವಸ್ಥಾನದ ಬಳಿಯಿರುವ ಒಂದು ಸ್ಮಾರಕದಲ್ಲಿ ವೀರನು ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಬಾಕು ಹಿಡಿದಿದ್ದಾನೆ. ಶತ್ರು ಸೈನಿಕರು ಕತ್ತಿ, ಗುರಾಣಿ, ಬಿಲ್ಲು ಬಾಣಗಳನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ವೀರನ ಹಿಂದೆ ಸಾಲಾಗಿ ಚಿತ್ರಿಸಿರುವ ತುರುಗಳು ಕುತೂಹಲದಿಂದ(ಹೆದರುತ್ತಾ) ಹೋರಾಟವನ್ನು ನೋಡುತ್ತ ನಿಂತಿವೆ. ರಾಜನಹಳ್ಳಿಯಲ್ಲಿ ಎರಡು ತುರುಗೋಳ್ ಸ್ಮಾರಕಶಿಲ್ಪಗಳಿವೆ. ಒಂದು ಸ್ಮಾರಕ ಮಹತ್ವದ್ದಾಗಿದೆ. ಯುದ್ಧಸನ್ನದ್ಧನಾಗಿರುವ ವೀರನು ಬಾಕುವಿನಿಂದ ಶತ್ರುವಿನ ಹೊಟ್ಟೆಯ ಭಾಗದಲ್ಲಿ ಇರಿದಿದ್ದು, ಕರುಳುಗಳು ಹೊರಬಂದಂತೆ ಚಿತ್ರಿಸಲಾಗಿದೆ. ಅವನ ಹಿಂದೆ ಬೆದರಿ

ನಿಂತಿರುವ ತುರುಗಳನ್ನು ಬಿಡಿಸಲಾಗಿದೆ. ಅದೇ ಗ್ರಾಮದಲ್ಲಿ ತೃಟಿತಗೊಂಡಿರುವ ಮತ್ತೊಂದು ತುರುಗೋಳ್ ಸ್ಮಾರಕಶಿಲ್ಪ ಕಂಡುಬರುವುದು.[೧೭೬] ಭಾನುವಳ್ಳಿಯಲ್ಲಿ ಐದು ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ಮೂರು ಸ್ಮಾರಕಗಳಲ್ಲಿ ಚಿತ್ರಿಸಿರುವ ದೃಶ್ಯಗಳು ಒಂದೇ ತೆರನಾಗಿವೆ. ವೀರರು ಬಿಲ್ಲು ಆಯುಧಗಳನ್ನು ಹಿಡಿದು ಅಶ್ವಾರೂಢ ಶತ್ರುಸೈನ್ಯದೊಂದಿಗೆ ಹೋರಾಡುತ್ತಿರುವಂತೆ ಚಿತ್ರಿಸಿ, ಅವರ ಹಿಂಬದಿಯಲ್ಲಿ ಬೆದರಿರುವ ತುರುಗಳು ಹೋರಾಟವನ್ನು ನೋಡುತ್ತಿರುವ ಹಾಗೆ ಕಂಡರಿಸಲಾಗಿದೆ. ಇದೇ ಗ್ರಾಮದ ಬಸವೇಶ್ವರ ದೇವಸ್ಥಾನದ ಬಳಿ ಕಂಡುಬರುವ ಎರಡು ತುರುಗೋಳ್ ಸ್ಮಾರಕಶಿಲ್ಪಗಳು ತ್ರುಟಿತಗೊಂಡಿವೆ.

ಹೊನ್ನಾಳಿ ತಾಲೂಕು ಕಮ್ಮಾರಗಟ್ಟೆ ಸಿದ್ಧೇಶ್ವರ ದೇವಸ್ಥಾನದ ಬಳಿ ಚಾಲುಕ್ಯರ ಕಾಲದ ಎರಡು ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ಇಲ್ಲಿರುವ ಒಂದು ಸ್ಮಾರಕ ಅಪರೂಪದ್ದಾಗಿದೆ. ವೀರನು ಬಿಲ್ಲು ಆಯುಧವನ್ನು ಹಿಡಿದು ನಿಂತಿರುವನು. ಅವನ ಸಾಕು ನಾಯಿಯೊಂದು ಶತ್ರುಗಳ ಮೇಲೆ ದಾಳಿ ಮಾಡಿದೆ. ಶತ್ರುಗಳಿಬ್ಬರು ಹೆದರಿಕೊಂಡು ನಿಂತಿರುವಂತೆ ಕೆತ್ತಲಾಗಿದೆ. ಶತ್ರುಗಳ ಹಿಂಬದಿ ತುರುಗಳು ಮನೆ ಕಡೆ ಹೊರಟುನಿಂತಿವೆ. ಓರ್ವ ಶತ್ರು ಹೋರಾಟದಲ್ಲಿ ಮಡಿದು ಬಿದ್ದಿದ್ದು, ಅವನ ಕೂದಲು ಹರಡಿಕೊಂಡಿರುವ ಹಾಗೆ ಚಿತ್ರಿಸಲಾಗಿದೆ. ವೀರನು ತುರುಗಳ್ಳರನ್ನು ಎದುರಿಸಲು ನಾಯಿಯೊಂದಿಗೆ ಹೋರಾಟ ಮಾಡಿರುವುದು ಕಂಡುಬರುತ್ತದೆ. ತುರುಗಾಳಗದಲ್ಲಿ ನಾಯಿಯೊಂದು ಭಾಗವಹಿಸಿರುವುದು ಈ ಸ್ಮಾರಕಶಿಲ್ಪದ ವಿಶೇಷತೆಯಾಗಿದೆ. ಇಂತಹ ಸ್ಮಾರಕಶಿಲ್ಪಗಳು ಈವರೆಗೆ ದೊರೆತಿಲ್ಲವೆಂದೇ ಹೇಳಬಹುದು. ಇದೇ ವಿವರಗಳನ್ನು ಹೊಂದಿರುವ ಮತ್ತೊಂದು ಸ್ಮಾರಕ ಈ ಗ್ರಾಮದಲ್ಲಿ ಕಂಡುಬರುವುದು. ಆದರೆ ಇಲ್ಲಿ ಹೋರಾಟದ ಚೌಕಟ್ಟಿನಿಂದ ಹೊರಗೆ ನಾಯಿಯನ್ನು ಚಿತ್ರಿಸಲಾಗಿದೆ. ಬೇಲಿಮಲ್ಲೂರು ರಾಮೇಶ್ವರ ದೇವಸ್ಥಾನದಲ್ಲಿರುವ ಒಂದು ತುರುಗೋಳ್ ಶಿಲ್ಪದಲ್ಲಿ ವೀರನು ಬಿಲ್ಲು ಹಿಡಿದು ಕುದುರೆ ಮೇಲಿರುವ ಶತ್ರುಗಳೊಂದಿಗೆ ಹೋರಾಡುತ್ತಿರುವನು. ಅವನ ಹಿಂದೆ ತುರುಗಳು ನಿಂತಿರುವ ಚಿತ್ರಣವಿದೆ. ಹಳೆದೇವರ ಹೊನ್ನಾಳಿ ಗ್ರಾಮದ ಸ್ಮಾರಕಶಿಲ್ಪವೊಂದರಲ್ಲಿ ವೀರನು ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಅವನು ಪ್ರಯೋಗಿಸಿದ ಬಾಣ ದೇಹಕ್ಕೆ ನಾಟಿ ಶತ್ರುವೊಬ್ಬ ಮಡಿದು ಬಿದ್ದಿರುವುದನ್ನು ಚಿತ್ರಿಸಲಾಗಿದೆ. ಮತ್ತೊಬ್ಬ ಶತ್ರುವು ಬಾಣದಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಿರುವಂತೆ ಕೆತ್ತಲಾಗಿದೆ. ವೀರನ ಹಿಂದೆ ಸಾಲಾಗಿ ನಿಂತಿರುವ ತುರುಗಳನ್ನು ಕಂಡರಿಸಲಾಗಿದೆ. ಚನ್ನಗಿರಿ ತಾಲೂಕು ಹಳೆ ಸಾರಥಿಯಲ್ಲಿನ ಸ್ಮಾರಕದಲ್ಲಿ ವೀರನು ಯುದ್ಧ ಸನ್ನದ್ಧನಾಗಿರುವನು. ಅವನ ಕಾಲುಗಳ ಮುಂದೆ ಶತ್ರುಗಳು ಶರಣಾಗತರಾಗಿರುವ ದೃಶ್ಯವಿದೆ.

ದಾವಣಗೆರೆ ತಾಲೂಕು ಕುಂದವಾಡದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಶತ್ರುಗಳ ರುಂಡವನ್ನು ಕಡಿದು ನೆಲಕ್ಕೆ ಚೆಲ್ಲಾಡಿದ್ದಾನೆ. ಶಿಲ್ಪದ ಬಲಭಾಗದ ಅಂಚಿನಲ್ಲಿ ದನಗಳನ್ನು ಚಿತ್ರಿಸಲಾಗಿದೆ. ಇದೇ ತಾಲೂಕಿನ ಅನಗೋಡು ಗ್ರಾಮದ ಆಂಜನೇಯ ದೇವಸ್ಥಾನದಲ್ಲಿ ಎರಡು ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ಒಂದು ಶಿಲ್ಪದಲ್ಲಿ ವೀರನು ಆಳೆತ್ತರದ

ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದಾನೆ. ಅವನ ಹಿಂದೆ ಗಾಬರಿಗೊಂಡು ನಿಂತಿರುವ ದನಗಳನ್ನು ಕಂಡರಿಸಿದೆ. ಈ ಗ್ರಾಮದ ಮತ್ತೊಂದು ಸ್ಮಾರಕದಲ್ಲಿ ಹೋರಾಟದ ದೃಶ್ಯವು ತ್ರುಟಿತಗೊಂಡಿದ್ದು, ವೀರನ ಹಿಂದೆ ತುರುಗಳು ಸಾಲಾಗಿ ನಿಂತಿರುವುದನ್ನು ಚಿತ್ರಿಸಲಾಗಿದೆ. ಕೊಡಗನೂರು ತುರುಗೋಳ್ ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದಾನೆ. ಅವನು ಪ್ರಯೋಗಿಸಿದ ಬಾಣಗಳು ಶತ್ರುಗಳ ತಲೆ ಹಾಗೂ ಸೊಂಟದ ಬಳಿ ನಾಟಿಕೊಂಡಿರುವ ಹಾಗೆ ಕೆತ್ತಲಾಗಿದೆ. ವೀರನ ಹಿಂದೆ ಐದು ತುರುಗಳ ಚಿತ್ರಣವಿದೆ. ವಡೇರಹಳ್ಳಿ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ಇಬ್ಬರು ವೀರರು ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದು, ಓರ್ವ ಶತ್ರು ಶರಣಾಗತನಾಗಿ ಎರಡು ಕೈಗಳನ್ನು ಜೋಡಿಸಿ ಕೈಮುಗಿಯುತ್ತಿರುವ ಚಿತ್ರಣವಿದೆ. ದನಗಳು ದಿಕ್ಕಿಗೊಂದು ಓಡುತ್ತಿರುವುದನ್ನು ವೀರರ ಹಿಂಬದಿಯಲ್ಲಿ ಕಂಡರಿಸಲಾಗಿದೆ. ಇಲ್ಲಿ ತುರುಗಳ ರಕ್ಷಣೆಗಾಗಿ ವೀರರಿಬ್ಬರು ಮಡಿದಿರುವುದು ಕಂಡುಬರುತ್ತದೆ. ಇದೇ ರೀತಿ ತುರುಗಳ ರಕ್ಷಣೆಗಾಗಿ ಇಬ್ಬರು ವೀರರು ಮಡಿದಿರುವ ಸ್ಮಾರಕಶಿಲ್ಪವೊಂದು ಅಣಜಿ ಗ್ರಾಮದ ಕೆರೆ ಏರಿಯದಲ್ಲಿ ಕಂಡುಬರುವುದು. ಜಗಲೂರು ತಾಲೂಕು ಮಲೆಮಾಚಿಕೆರೆ ಗ್ರಾಮದ ತುರುಗೋಳ್ ಸ್ಮಾರಕವೊಂದರಲ್ಲಿ ವೀರನು ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಕಡುಗತ್ತಿ ಹಿಡಿದು ಯುದ್ಧಸನ್ನದ್ಧನಾಗಿರುವನು. ಶತ್ರುಗಳು ಹೋರಾಟದಿಂದ ಪಲಾಯನಗೈಯುತ್ತಿರುವಂತೆ ಕಂಡರಿಸಲಾಗಿದೆ. ವೀರನ ಹಿಂದೆ ಎರಡು ತುರುಗಳು ಹಿಂತಿರುಗಿ ಹೊರಟಿವೆ. ಹೋರಾಡುವವರ ತಲೆಯ ಮೇಲಿನ ಪಟ್ಟಿಕೆಯಲ್ಲಿ ಐದು ತುರುಗಳು ಓಡುತ್ತಿರುವುದನ್ನು ಚಿತ್ರಿಸಲಾಗಿದೆ.[೧೭೭]

ಹೊನ್ನಾಳಿ ತಾಲೂಕು ಹನಗವಾಡಿ ಗ್ರಾಮದಲ್ಲಿ ಹೊಯ್ಸಳರ ಕಾಲದೆನ್ನಬಹುದಾದ ಒಂದು ತುರುಗೋಳ್ ಸ್ಮಾರಕಶಿಲ್ಪ ಕಂಡುಬರುವುದು. ಈ ಸ್ಮಾರಕದಲ್ಲಿ ವೀರನು ಆಳೆತ್ತರದ ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದಾನೆ. ಅವನು ಪ್ರಯೋಗಿಸಿದ ಬಾಣದಿಂದ ಶತ್ರುಗಳು ಹತರಾಗಿ ಅಂಗಾತ ಬಿದ್ದಿದ್ದಾರೆ. ಒಬ್ಬ ಶತ್ರು ವೀರನಿಗೆ ಹಿಮ್ಮುಖದಿಂದ ದಾಳಿ ನಡೆಸುತ್ತಿರುವಂತೆ ಕೆತ್ತಲಾಗಿದೆ. ವೀರನ ಹಿಂದೆ ಬೆದರಿ ನಿಂತಿರುವ ದನಗಳ ಚಿತ್ರಣವಿದೆ. ಹೊಯ್ಸಳರ ಕಾಲದ ಇನ್ನೊಂದು ತುರುಗೋಳ್ ಸ್ಮಾರಕಶಿಲ್ಪವು ಜಗಲೂರು ಕಲ್ಲೇದೇವರಪುರ ಗ್ರಾಮದಲ್ಲಿ ಕಂಡುಬರುವುದು. ಈ ಶಿಲ್ಪದಲ್ಲಿ ವೀರನು ಆಳೆತ್ತರದ ಬಿಲ್ಲು ಹಿಡಿದು ಕುದುರೆ ಮೇಲಿರುವ ಶತ್ರುಗಳೊಂದಿಗೆ ಹೋರಾಡುತ್ತಿರುವನು. ಹೋರಾಡುವವರ ತಲೆಯ ಮೇಲಿನ ಪಟ್ಟಿಕೆಯಲ್ಲಿ ತುರುಗಳನ್ನು ಚಿತ್ರಿಸಲಾಗಿದೆ. ಅವುಗಳಲ್ಲೊಂದು ಬಿಡುಗಡೆಗೊಂಡೆವು ಎಂಬ ಸಂತೋಷದಿಂದ ಹಿಂತಿರುಗಿ ನೋಡುತ್ತಿರುವ ಚಿತ್ರಣವಿದೆ.[೧೭೮]

ಹರಿಹರ ತಾಲೂಕು ಎಳೆಹೊಳೆ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಹಿಂಭಾಗದಲ್ಲಿ ವಿಜಯನಗರ ಕಾಲದ ಎರಡು ತುರುಗೋಳ್ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಸ್ಮಾರಕದಲ್ಲಿ ವೀರರು ಬಿಲ್ಲನ್ನು ಹಿಡಿದು ಹೋರಾಡುತ್ತಿರುವಂತೆ ಚಿತ್ರಿಸಿ ಅವರ ಹಿಂದೆ ಸಾಲಾಗಿ ನಿಂತಿರುವ ತುರುಗಳನ್ನು ಕೆತ್ತಲಾಗಿದೆ. ಇದೇ ವಿವರಗಳು ಜಗಲೂರು ತಾಲೂಕು ದೋಣಿಹಳ್ಳಿ ಗ್ರಾಮದ

ಎರಡು ತುರುಗೋಳ್ ಸ್ಮಾರಕಶಿಲ್ಪಗಳಲ್ಲಿ ಕಂಡುಬರುವುದು. ಈ ತಾಲೂಕಿನ ದಿದ್ದಿಗಿ ಗ್ರಾಮದ ಸ್ಮಾರಕವೊಂದರಲ್ಲಿ ವೀರನು ಬಲಗಾಲು ಮಂಡಿಯನ್ನು ನೆಲಕ್ಕೆ ಊರಿ, ಬಲಗೈಯಲ್ಲಿ ಕತ್ತಿಯನ್ನು ಹಿಡಿದಿರುವ ಚಿತ್ರಣವಿದೆ. ಅವನ ತಲೆಯ ಮೇಲೆ ಎರಡು ದನಗಳನ್ನು ಕಂಡರಿಸಲಾಗಿದೆ. ದಾವಣಗೆರೆ ತಾಲೂಕು ಮಾಯಕೊಂಡ ಗ್ರಾಮದ ಒಂದು ಸ್ಮಾರಕದಲ್ಲಿ ವೀರನು ಆಳೆತ್ತರದ ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದಾನೆ. ಅವನ ಹಿಂದೆ ಎರಡು ತುರುಗಳು ಹಿಂತಿರುಗಿ ಹೊರಟಿರುವಂತೆ ಕಂಡರಿಸಲಾಗಿದೆ.

### ೪.೨.೩. ಊರು ದಾಳಿ ಮತ್ತು ಊರಳಿವುನಲ್ಲಿ ಸತ್ತ ವೀರರ ಸ್ಮಾರಕ ಶಿಲ್ಪಗಳು

ಊರುಗಳ ಮಧ್ಯೆ ಆಗಾಗ್ಗೆ ಗಡಿಗಳ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಮೂಡಿ ಘರ್ಷಣೆಗಳು, ಯುದ್ಧಗಳು ನಡೆದು ಹಲವು ವೀರರು ಮಡಿದಿದ್ದಾರೆ. ಒಂದು ರಾಜ್ಯದ ಅರಸನು ತನ್ನ ಆಡಳಿತ ವಿಧಾನಕ್ಕನುಗುಣವಾಗಿ ರಾಜ್ಯವನ್ನು ಹಲವಾರು ಭಾಗಗಳನ್ನಾಗಿ ವಿಂಗಡಿಸುತ್ತಿದ್ದನು. ಈ ವಿಂಗಡನೆಯಲ್ಲಿ ಹಳ್ಳಿಗಳ ಗಡಿಗಳು ನಿರ್ಣಾಯಕವಾಗಿರುತ್ತಿದ್ದವು. ಕಾರಣಾಂತರಗಳಿಂದ ಗಡಿಯ ಒತ್ತುವರಿಯಾದಾಗ ಘರ್ಷಣೆಗಳು ನಡೆಯುತ್ತಿದ್ದವು. ಈ ರೀತಿಯ ಘರ್ಷಣೆಗಳಲ್ಲಿ ಮಡಿದ ವೀರರ ವೀರಗಲ್ಲುಗಳ ಸಂಖ್ಯೆ ಕಡಿಮೆಯೆಂದು ವಿದ್ವಾಂಸರು ಅಭಿಪ್ರಾಯಿಸಿರುವುದುಂಟು. ಸೀಮಾ ಸಂಬಂಧದ ಕಾಳಗದಲ್ಲಿ ಮಡಿದ ವೀರಗಲ್ಲುಗಳ ಸಂಖ್ಯೆಯನ್ನು ಗಮನಿಸಿದರೆ ಇಂಥ ಭಿನ್ನಾಭಿಪ್ರಾಯಗಳು ಬಹುಪಾಲು ನ್ಯಾಯ ತೀರ್ಮಾನಗಳಲ್ಲಿಯೇ ಮುಕ್ತಾಯವಾಗುತ್ತಿದ್ದವು ಎಂದು ತೋರುತ್ತದೆ.[೧೭೯] ಕೆಲವೊಮ್ಮೆ ಆವೇಶಕ್ಕೆ ಒಳಗಾಗಿ ಜನ ಈ ರೀತಿಯ ಹೋರಾಟಗಳನ್ನು ಮಾಡುತ್ತಿದ್ದರು. ಊರು ದಾಳಿ ಮತ್ತು ಊರಳಿವುಗಳ ಘಟನೆಗಳನ್ನು ಕೇವಲ ಶಾಸನ ಸ್ಮಾರಕಶಿಲ್ಪಗಳಲ್ಲಿ ಮಾತ್ರವೇ ಗುರುತಿಸಲು ಸಾಧ್ಯವಾಗುತ್ತದೆ. ಶಾಸನರಹಿತವಾದ ಸ್ಮಾರಕಶಿಲ್ಪಗಳಲ್ಲಿ ಆ ಅಂಶಗಳು ದೊರೆಯುವುದಿಲ್ಲ. ಕಾರಣ ಈ ಎರಡು ಘಟನೆಗಳ ವಿವರಗಳನ್ನು ಶಿಲ್ಪಿ ಸ್ಮಾರಕಶಿಲ್ಪದಲ್ಲಿ ಸೆರೆಹಿಡಿಯಲು ಅವನಿಗೆ ಕಷ್ಟದ ಕೆಲಸವಾಗಿರಬೇಕು.

ಕ್ರಿ.ಶ. ೯೩೧–೩೨ರ ಸ್ಮಾರಕಶಿಲ್ಪವೊಂದು 'ಪಡಿಗನೊಂಬಾ' ಎಂಬ ವೀರನು ರಾಷ್ಟ್ರಕೂಟ ದೊರೆ ಗೋವಿಂದರವಲ್ಲಭ(ಗೋವಿಂದ–೪)ನ ಕಾಲದಲ್ಲಿ ಊರ ದಾಳಿಯಲ್ಲಿ ಸತ್ತಾಗ ಮಾಸವಾಡಿ–೧೪೦ ಮತ್ತು ಕೋಗಳಿ ನಾಡನ್ನು ಆಳುತ್ತಿದ್ದ ಅಯ್ಯಪ್ಪಯ್ಯ ಎಂಬುವನು ಸತ್ತವನ ಕುಟುಂಬಕ್ಕೆ ಗದ್ದೆ ಮತ್ತು ಹೊಲವನ್ನು ನೀಡಿದ ವಿಷಯ ಉಲ್ಲೇಖಿಸುತ್ತದೆ.[೧೮೦] ಕ್ರಿ.ಶ. ೧೨೪೨ರ ಸ್ಮಾರಕಶಿಲ್ಪವು ಸೋಮಯ್ಯನ ಮಗ ಬೊಂಮೆಯ ನಾಯಕನು ನಲ್ಕುದುರೆ ಗ್ರಾಮದ ಗಡಿಯಲ್ಲಿ ಬೇಡರೊಂದಿಗೆ ಹೋರಾಡಿ ಸುರಲೋಕ ಪ್ರಾಪ್ತನಾದನೆಂದು ದಾಖಲಿಸುತ್ತದೆ.[೧೮೧] ಶ್ರೀ ರಾಮಚಂದ್ರರಾಯರ ಕಾಲದಲ್ಲಿ ಬೀರಾರಿಭೀಮದೇವ ಎಂಬುವನು ಊರ ಮೇಲೆ ದಾಳಿ ಮಾಡಿದಾಗ, ಜಗಜೆಟ್ಟಿ ಶ್ರೀ ವೀರರಾಮದೇವ ರಾಣಿಯ ಮಗ ಭೋಯಿನಾಯ್ಕ, ಅವನ ಮಗ ಪುರುಷೋತ್ತಮನು ತನ್ನ ಸೈನ್ಯದೊಡನೆ ಕುದುರೆಯೊಂದಿಗೆ ಬಂದು ಹೋರಾಡಿ ಊರನ್ನು ರಕ್ಷಿಸಿ ಸ್ವರ್ಗಸ್ಥನಾಗುತ್ತಾನೆ.

ಹೋರಾಡಿ ಮಡಿದ ಅವನಿಗೆ ಬೊಮ್ಮಗೌಡನ ಮಗ ಸೋಮಗವುಡ ಮತ್ತು ಹರಿಪಗವುಂಡನು ಕೊಂಡಂಜಿಯ ದಾರಿಯಲ್ಲಿರುವ ಪಶ್ಚಿಮ ದಿಕ್ಕಿನ ಭೂಮಿಯನ್ನು ಮಸಣಕವ್ವೆಯ ಕೈಯಿಂದ ದಾನ ನೀಡಿರುವುದು ತಿಳಿಯುತ್ತದೆ.[೧೮೨]

'ಊರಟಿವು' ಎಂಬುದನ್ನು ವಿದ್ವಾಂಸರಾದ ಎಂ. ಚಿದಾನಂದಮೂರ್ತಿಯವರು 'ಕಳ್ಳರು ತುರುಗಳನ್ನು ಕದ್ದು, ಸ್ತ್ರೀಯರನ್ನು ಮಾನಭಂಗಗೊಳಿಸಿ, ಊರನ್ನು ನಾಶಪಡಿಸುತ್ತಿದ್ದರು. ಇದನ್ನೆ 'ಊರಟಿವು' ಅಥವಾ ಊರಿನ ನಾಶ ಎಂದಿದ್ದಾರೆ.[೧೮೩] ಮತ್ತೊಬ್ಬ ವಿದ್ವಾಂಸರು 'ಊರಟಿವು' ಎಂದರೆ ಯುದ್ಧದ ನಂತರ ಗೆದ್ದ ಪಕ್ಷದವರು ಸೋತ ಪಕ್ಷದವರ ಗ್ರಾಮಗಳ ಮೇಲೆ ದುರಾಕ್ರಮಣ ಮಾಡುವ ಒಂದು ವಿಷಮ ಪರಿಸ್ಥಿತಿ ಎಂದು ಅಭಿಪ್ರಾಯಿಸಿದ್ದಾರೆ.[೧೮೪] ಅಂದರೆ ಗೆದ್ದ ರಾಜನು ತಾನು ಗೆದ್ದ ಪ್ರದೇಶಗಳನ್ನು ಲೂಟಿ ಮಾಡಿಸುವ, ಸುಡಿಸುವ, ಹೆಂಗಸರ ಮಾನಭಂಗ ಮಾಡಿಸುವಂತಹ ಅಕೃತ್ಯದಲ್ಲಿ ತೊಡಗುತ್ತಿದ್ದಾಗ ಸ್ಥಳೀಯ ವೀರರು ನಡೆಸುತ್ತಿದ್ದ ಹೋರಾಟವನ್ನು ಇದು ತಿಳಿಸುತ್ತದೆ. ಇದನ್ನು ಸ್ಮಾರಕಶಿಲ್ಪಗಳು 'ಊರಿಟಿವು' 'ಊರು ಹುಯ್ಯಲು' ಎಂದು ಉಲ್ಲೇಖಿಸುತ್ತವೆ. ಈ ಬಗೆಯ ಹಲವು ನಿರ್ದೇಶನಗಳು ಕರ್ನಾಟಕದಲ್ಲಿವೆ. ಹೊಯ್ಸಳ ಅರಸ ವಿಷ್ಣುವರ್ಧನನು ಘಟ್ಟ ಪ್ರದೇಶದ ಮೇಲೆ ಆಕ್ರಮಣ ಮಾಡಿದಾಗ ಅಡಿಕೆ, ತೆಂಗು ಮುಂತಾದ ಬೆಳೆಗಳನ್ನೂ, ತೇಗದ ಮರಗಳನ್ನೂ ಸುಟ್ಟ ವಿಷಯ ತಿಳಿಯುತ್ತದೆ.[೧೮೫] ಹಾಗಾಗಿ ಊರಟಿವಿನಲ್ಲಿ ಸಂಪತ್ತಿನ ಸಂಕೇತವಾದ ತುರುಗಳನ್ನು ಕದಿಯುವುದು, ಸ್ತ್ರೀಯರನ್ನು ಅಪಹರಿಸುವುದು ಸರ್ವೇಸಾಮಾನ್ಯವಾಗಿದ್ದವು. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲೂ ಊರಳಿವಿನಲ್ಲಿ ಮಡಿದ ವೀರರ ಸ್ಮಾರಕಶಿಲ್ಪಗಳು ಕಂಡುಬಂದಿವೆ.

ಹಿರೇಮಳಲಿ ಗ್ರಾಮದ ಸ್ಮಾರಕಶಿಲ್ಪ ಶ್ರೀ ಮಾರ್ತಂಡ ನಾಯಕರ ಮುಂದೆ ಮಣಲಿಯೂರಟಿವಿನಲ್ಲಿ ಸಂಕಯ್ಯನ ತಮ್ಮ ಬೊಮ್ಮಯಣ ಎಂಬುವನು ಕಾದಾಡಿ ಸತ್ತಾಗ ತೆಂಕಗೋಡಿಯಲ್ಲಿನ ಗದ್ದೆಯನ್ನು ದಾನವಾಗಿ ನೀಡಿರುವುದು ತಿಳಿಯುತ್ತದೆ.[೧೮೬] ದಾಳಿಕೋರರ ವಿರುದ್ಧ ಬೊಮ್ಮಯಣ ಹೋರಾಡಿ ಸ್ತ್ರೀಯರು ಮತ್ತು ತುರುಗಳನ್ನು ರಕ್ಷಿಸಿರುವುದು ಸ್ಮಾರಕಶಿಲ್ಪದಲ್ಲಿರುವ ಚಿತ್ರಣಗಳಿಂದ ಕಂಡುಬರುತ್ತದೆ. ಕ್ರಿ.ಶ. ೧೩೧೩ರ ಕುಂಬಳೂರಿನಲ್ಲಿರುವ ಒಂದು ಸ್ಮಾರಕಶಿಲ್ಪವು ಊರಿನ ರಕ್ಷಣೆಗಾಗಿ ನಾರಾಯಣಪ್ಪನು ಕಾದಿ ಮರಣ ಹೊಂದಿದಾಗ ಊರೊಡೆಯರಾದ ಗೋಪಯ್ಯನು ಕೆರೆಯ ಬಳಿ ೧೫ ಕಂಬವನ್ನು ದಾನ ನೀಡಿದ್ದ ಬಗ್ಗೆ ತಿಳಿಸುತ್ತದೆ.[೧೮೭] ಊರೊಡೆಯ ಕೆರೆಯ ಬಳಿ ದಾನ ಬಿಟ್ಟ ಎಂಬ ಉಲ್ಲೇಖವಿರುವುದರಿಂದ ಅವನು ಪ್ರಾಯಶಃ ಕೆರೆಯ ಕೆಳಗಿನ ೧೫ ಕಂಬ ಗದ್ದೆಯನ್ನು ದಾನವಾಗಿ ನೀಡಿದ್ದಿರಬಹುದು. ಸ್ಮಾರಕದಲ್ಲಿ ಉಲ್ಲೇಖಿಸುವಂತೆ ದಾಳಿಕೋರರು ಕುಂಬಳೂರು ಗ್ರಾಮವನ್ನು ಹಾಳು ಮಾಡಿ ತುರುಗಳನ್ನು ಕದ್ದಿರುವುದು ಕಂಡುಬರುತ್ತದೆ. ಅವುಗಳ ರಕ್ಷಣೆಗಾಗಿ ನಾರಾಯಣಪ್ಪನು ಹೋರಾಡಿ ಮಡಿದನೆಂದು ತೋರುತ್ತದೆ. ಕ್ರಿ.ಶ. ೧೨೮೪ರ ಮತ್ತೊಂದು ಸ್ಮಾರಕಶಿಲ್ಪವು ಅಲಗಿಲವಾಡದ ಊರಟಿವಿನಲ್ಲಿ ಹೊಳಲಕೆರೆಯ ಬಣಜಿಗ ಸಿಂಗಯ್ಯನ ತಮ್ಮನಾದ ಹಂಪಸೆಟ್ಟಿ ಎಂಬುವನು ಹೋರಾಡಿ ಮಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೧೮೮]

### ೪.೨.೪. ಕೋಟೆ ಕಾಳಗದಲ್ಲಿ ಮಡಿದ ವೀರರ ಸ್ಮಾರಕ ಶಿಲ್ಪಗಳು

ಕೋಟೆಗಳು ಮೂಲತಃ ರಕ್ಷಣಾತ್ಮಕ ಉದ್ದೇಶದಿಂದ ನಿರ್ಮಿತವಾದವುಗಳು. ಕ್ರಮೇಣ ಮಿಲಿಟರಿ ನೆಲೆಯಾಗಿ ಮತ್ತು ಆಡಳಿತ ಕೇಂದ್ರಗಳಾಗಿ ರೂಪುಗೊಂಡವು. ಭದ್ರವಾದ ಕೋಟೆ ರಾಜನಿಗೆ ಅತ್ಯಂತ ಪ್ರಮುಖವಾದದೆಂದು ಪ್ರಾಚೀನ ಕಾಲದಿಂದಲೂ ಶಾಸ್ತ್ರಗ್ರಂಥಗಳು ನಿರೂಪಿಸಿವೆ. ಇದು ಸಪ್ತಾಂಗಗಳಲ್ಲಿ ಒಂದಾಗಿ ಹಲವು ಗ್ರಂಥಗಳಲ್ಲಿ ಮತ್ತು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಪ್ರಜೆಗಳ ಮತ್ತು ಕೋಶದ ರಕ್ಷಣೆಗಾಗಿ ಹಾಗೂ ತನಗಾಗಿ ರಾಜನು ಕೋಟೆಯನ್ನು ನಿರ್ಮಿಸಬೇಕೆಂದು ವಿಜ್ಞಾನೇಶ್ವರನು ತನ್ನ 'ಮಿತಾಕ್ಷರ' ಕೃತಿಯಲ್ಲಿ ಅಭಿಪ್ರಾಯಿಸಿದ್ದಾನೆ.[೧೮೯] ಭದ್ರವಾದ ಕೋಟೆಯಿಲ್ಲದ ರಾಜನು ಬಿರುಗಾಳಿಯ ಮುಂದಿನ ಮೋಡದ ತುಂಡುಗಳಿಗೆ ಸಮಾನನೆಂದು ಕಾಮಂದಕನು ಹೇಳುತ್ತಾನೆ.[೧೯೦] ಇದೇ ವಾಕ್ಯವನ್ನು ದುರ್ಗಸಿಂಹನು ತನ್ನ ಪಂಚತಂತ್ರದಲ್ಲಿ ಉದ್ಧರಿಸಿದ್ದಾನೆ.[೧೯೧] ಆಯಕಟ್ಟಿನ ಸ್ಥಳದಲ್ಲಿ ಬಲವಾಗಿ ನಿರ್ಮಿಸಿದ ಕೋಟೆಯನ್ನು ಹೊಂದಿದ ರಾಜ್ಯವನ್ನು ವಶಪಡಿಸಿಕೊಳ್ಳುವುದು ಸುಲಭಸಾಧ್ಯವಲ್ಲ. ತನ್ನ ರಾಜ್ಯದ ಕೋಟೆ ಬಲವಾಗಿದ್ದಷ್ಟೂ ಅವನ ಸಾಮ್ರಾಜ್ಯ ಬಲವಾಗಿರುತ್ತಿತ್ತು. ಹೀಗಾಗಿ ಪ್ರಾಚೀನ ಕಾಲದಿಂದಲೂ ಕೋಟೆಗಳ ನಿರ್ಮಾಣಕ್ಕೆ ಪ್ರಾಮುಖ್ಯತೆ ನೀಡಲಾಗಿದೆ.

ವೈರಿಗಳು ರಾಜ್ಯವನ್ನು ವಶಪಡಿಸಿಕೊಳ್ಳಲು ಮೊದಲಿಗೆ ಕೋಟೆಯನ್ನು ಮುತ್ತಿ ವಶಪಡಿಸಿಕೊಳ್ಳುತ್ತಿದ್ದರು. ಹೀಗೆ ವಶಪಡಿಸಿಕೊಳ್ಳಲು ಕೋಟೆಯ ಒಳಗಿರುವ ಜನರಿಂದ ತೀವ್ರವಾದ ಪ್ರತಿಭಟನೆಯನ್ನು ಎದುರಿಸಬೇಕಾಗಿತ್ತು. ಅನೇಕ ತಿಂಗಳುಗಳವರೆಗೆ ಕೋಟೆಯು ವಶವಾಗದೆ ಸೈನ್ಯವು ಹಿಂತಿರುಗಿ ಹೋದ ಉದಾಹರಣೆಗಳೂ ಇವೆ. ಪರಿಸರ ಮತ್ತು ವಾಸ್ತು ಹಿನ್ನೆಲೆಯಲ್ಲಿ ವಾಸ್ತುಶಿಲ್ಪ ಗ್ರಂಥಗಳು ಕೋಟೆಗಳನ್ನು ಹಲವು ವಿಧಗಳಾಗಿ ವಿಂಗಡಿಸುತ್ತವೆ. ಕರ್ನಾಟಕ ಪಂಚತಂತ್ರ ಕೃತಿಯಲ್ಲಿ ದುರ್ಗಸಿಂಹನು ದುರ್ಗಗಳಲ್ಲಿ ಮುಖ್ಯವಾಗಿ ನಾಲ್ಕು ವಿಧಗಳೆಂದು (ಸ್ಥಲದುರ್ಗ, ಜಲದುರ್ಗ, ಗಿರಿದುರ್ಗ, ವನದುರ್ಗ), ಪ್ರತಿಯೊಂದರಲ್ಲಿಯೂ ಎರಡು ಉಪ ವಿಧಗಳೆಂದು ಹೀಗೆ ಒಟ್ಟು ಎಂಟು ವಿಧಗಳನ್ನು ಉಲ್ಲೇಖಿಸುತ್ತಾನೆ.[೧೯೨] ಮಾನಸೋಲ್ಲಾಸವು ಒಂಬತ್ತು ವಿಧದ ಕೋಟೆಗಳನ್ನು ಹೇಳಿದೆ. ಅದರೊಂದಿಗೆ ಕೋಟೆಗಳಲ್ಲಿ ಸಂಗ್ರಹಿಸಿಡಬೇಕಾದ ಅಗತ್ಯ ವಸ್ತುಗಳನ್ನು ಉಲ್ಲೇಖಿಸುತ್ತದೆ.[೧೯೩]

ಸ್ಮಾರಕಶಿಲ್ಪಗಳಲ್ಲಿ ಕೋಟೆಗಳ ಚಿತ್ರಣ ಕಡಿಮೆಯೆಂದು ಹೇಳಬಹುದು. ಪ್ರಸ್ತುತ ಅಧ್ಯಯನದ ಪ್ರದೇಶದ ಕೆಲವು ಸ್ಮಾರಕಶಿಲ್ಪಗಳಲ್ಲಿ ಕೋಟೆಗಳ ಕೆತ್ತನೆ ಕಂಡುಬರುತ್ತದೆ. ಅವುಗಳು ಕೋಟೆಯ ಚಿತ್ರವನ್ನು ಸಂಪೂರ್ಣವಾಗಿ ನೀಡುವುದಿಲ್ಲ. ಶಾಸನ ಪಠ್ಯಗಳಲ್ಲಿ ಕೂಡ ಕೋಟೆಯ ವಿವರಣೆ ಮತ್ತು ಕೋಟೆ ಕಾಳಗದ ವಿಧಾನದ ವಿವರಣೆ ಕೂಡ ಅತ್ಯಲ್ಪವಾಗಿದೆ. ಈ ಪ್ರದೇಶದ ಕೆಲವೇ ಸ್ಮಾರಕಶಿಲ್ಪ ಮತ್ತು ಶಾಸನಗಳು ಕೋಟೆ ಕಾಳಗದ ಬಗ್ಗೆ ಉಲ್ಲೇಖಿಸುತ್ತವೆ. ಕ್ರಿ.ಶ. ೧೧೬೬ರ ಒಂದು ಸ್ಮಾರಕಶಿಲ್ಪವು ವಗ್ಗಸೇನೆಯೊಡನೆ ಬೆಳಗುತ್ತಿ ಕೋಟೆಯನ್ನು ಮುತ್ತಿಗೆ ಹಾಕಿದ

ಬಲಿಗೌಡನೊಂದಿಗೆ ಮಲ್ಲನಗೌಡ ಎಂಬ ವೀರನು ಹೋರಾಡಿ ಮಡಿದನೆಂದು ತಿಳಿಸುತ್ತದೆ.[೧೯೪] ಕ್ರಿ.ಶ. ೧೧೭೧ರ ಮತ್ತೊಂದು ಸ್ಮಾರಕಶಿಲ್ಪವು 'ಕೊಂಗಾಳ್ವ ದೇವನ ಬೆಸದಿಂ ಪರಮಮಂಡಳವನಿಟಿದು ಮೆಚ್ಚಿಸಿ ಶ್ರೀ ಕಾಮರದತ್ತಿಯ ಕೋಟೆಹಾಳಂ' ಎಂದು ಉಲ್ಲೇಖಿಸುತ್ತದೆ.[೧೯೫] ಇಲ್ಲಿ ಕೊಂಗಾಳ್ವನ ಮೇಲೆ ಹೊಯ್ಸಳ ಅರಸ ಮುತ್ತಿದಾಗ ಯುದ್ಧದಲ್ಲಿ ತಮ್ಮಡಿಯ ರುದ್ರ ಎಂಬ ವೀರನು ಹೋರಾಡಿ ಮಡಿಯುತ್ತಾನೆ. ಕ್ರಿ.ಶ. ೧೨೧೫ರ ತ್ರುಟಿತಗೊಂಡಿರುವ ಸ್ಮಾರಕಶಿಲ್ಪವೊಂದರಿಂದ ವೀರನೊಬ್ಬ ಕೋಟೆ ಕಾಳಗದಲ್ಲಿ ಮಡಿದ ವಿಷಯ ತಿಳಿಯುತ್ತದೆ.[೧೯೬] ಮಾಕೋಜ ಎಂಬ ವೀರನು ಹೊಯ್ಸಳ ನರಸಿಂಹದೇವನ ಕಾಲದಲ್ಲಿ ತುರುಗಳ ರಕ್ಷಣೆಗಾಗಿ ಕೋಟೆ ಕಾಳಗದಲ್ಲಿ ಮಡಿದನೆಂದು ಕ್ರಿ.ಶ. ೧೨೨೫ರ ಒಂದು ಸ್ಮಾರಕಶಿಲ್ಪವು ಉಲ್ಲೇಖಿಸುತ್ತದೆ.[೧೯೭] ಕ್ರಿ.ಶ. ೧೨೮೨ರ ಮತ್ತೊಂದು ಸ್ಮಾರಕಶಿಲ್ಪ 'ಗಣಿಕಾಮನೋಜಂ ರಯ್ಯಬಳಸಾಧಕಂ ವರ್ಯ್ಯಬಳಿಜಳಧಿಬಡವಾನಳಂ ಕೋಟ ಕಾಳನಳಂ' ಎಂದು ಪ್ರಸ್ತಾಪಿಸುತ್ತದೆ.[೧೯೮] ಇಲ್ಲಿ ಬಯಿರರಸದೇವ ಮಗ ಬಸವದೇವ ಎಂಬ ವೀರನು ಯಾದವ ರಾಮಚಂದ್ರದೇವನ ಕಾಲದಲ್ಲಿ ಕೋಟೆ ಕಾಳಗದಲ್ಲಿ ಮಡಿದಿರುವುದು ತಿಳಿದುಬರುತ್ತದೆ.

ಅಧ್ಯಯನ ಪ್ರದೇಶದಲ್ಲಿ ಶಾಸನರಹಿತವಾಗಿ ಕಂಡುಬರುವ ಕೋಟೆಯ ಸ್ಮಾರಕಶಿಲ್ಪಗಳನ್ನು ಕೋಟೆಗೋಡೆಯ ಚಿತ್ರಣ ಮತ್ತು ಕೋಟೆತೆನೆಗಳ ಚಿತ್ರಣವಿರುವ ಸ್ಮಾರಕಗಳೆಂದು ಎರಡು ರೀತಿಯಲ್ಲಿ ವಿಭಾಗಿಸಿಕೊಂಡು ವಿವರಿಸಲಾಗಿದೆ.

**ಕೋಟೆಗೋಡೆ ಚಿತ್ರಣ:** ಕೆಲವು ಸ್ಮಾರಕಶಿಲ್ಪಗಳಲ್ಲಿ ಕೋಟೆಯ ಒಂದು ಮಗ್ಗುಲಿನ ಗೋಡೆಯನ್ನು ಮಾತ್ರ ಚಿತ್ರಿಸಲಾಗಿದೆ. ಈ ರೀತಿಯ ಚಿತ್ರಣ ಎಲೆಬೇತೂರು, ಗಂಗನರಸಿ, ಬಾಗಳಿ, ಮಂಡಲೂರು, ಭಾನುವಳ್ಳಿಗಳ ಸ್ಮಾರಕಶಿಲ್ಪಗಳಲ್ಲಿ ದೊರೆಯುತ್ತವೆ. ಎಲೆಬೇತೂರಿನ ಒಂದು ಸ್ಮಾರಕಶಿಲ್ಪದಲ್ಲಿ ಕೋಟೆಯನ್ನು ಆಕ್ರಮಿಸಿರುವ ವೀರನ ಹಿಂಭಾಗದಲ್ಲಿ ಕೆಲವು ದನಗಳಿವೆ. ಕೋಟೆಗೋಡೆಯ ಮೇಲಿನ ತೆನೆಗಳ ನಡುವೆ ನಿಂತಿರುವ ಸೈನಿಕರು ವೀರನ ಮೇಲೆ ಭರ್ಚಿ ಮತ್ತು ಕತ್ತಿಯಿಂದ ಆಕ್ರಮಣ ಮಾಡುತ್ತಿದ್ದಾರೆ. ವೀರನು ಉದ್ದವಾದ ಭರ್ಚಿಯನ್ನು ಹಿಡಿದು ಕೋಟೆ ಮೇಲೆ ನಿಂತಿರುವವನಿಗೆ ತಿವಿಯುತ್ತಿದ್ದಾನೆ. ತನ್ನ ಎಡಗಾಲನ್ನು ಶತ್ರು ಪಕ್ಷದವರ ಹೆಣದ ಮೇಲಿಟ್ಟು ಮುನ್ನುಗ್ಗುತ್ತಿದ್ದಾನೆ. ಕೋಟೆಯ ಮೇಲಿರುವವನು ಅವನ ಆಕ್ರಮಣಕ್ಕೆ ಹೆದರಿ ತನ್ನ ರಕ್ಷಣೆಗಾಗಿ ಗುರಾಣಿಯನ್ನು ಮುಂದೆ ಒಡ್ಡಿದ್ದಾನೆ.[೧೯೯] ಗಂಗನರಸಿ ಗ್ರಾಮದ ಸ್ಮಾರಕಶಿಲ್ಪದಲ್ಲಿ ಕೋಟೆಗೋಡೆಯ ಮೇಲಿನ ತೆನೆಗಳ ನಡುವೆ ಸೈನಿಕರು ನಿಂತು ವೀರನ ಮೇಲೆ ಬಿಲ್ಲು ಮತ್ತು ಕತ್ತಿಯಿಂದ ಆಕ್ರಮಣ ಮಾಡುತ್ತಿರುವರು. ವೀರನು ಎಡಗೈಯಲ್ಲಿ ಬೃಹತ್ ಗಾತ್ರದ ಗುರಾಣಿ ಮತ್ತು ಬಲಗೈಯಲ್ಲಿ ಕತ್ತಿ ಹಿಡಿದು ಪ್ರತಿದಾಳಿಗೆ ಮುಂದಾಗಿರುವನು. ಅವನ ಕಾಲುಗಳ ಬಳಿ ಮಡಿದವನೊಬ್ಬನ ಹೆಣವನ್ನು ಚಿತ್ರಿಸಲಾಗಿದೆ. ಬಾಗಳಿ ವಸ್ತುಸಂಗ್ರಹಾಲಯದಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ಕೋಟೆಕಾಳಗವನ್ನು ಶಿಲ್ಪಿ ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿದ್ದಾನೆ. ಕೋಟೆಯ ಒಳಗಿರುವ ಸೈನಿಕರು ಕತ್ತಿ ಮತ್ತು ಬಾಕುಗಳಿಂದ

ವೀರನನ್ನು ಎದುರಿಸುತ್ತಿದ್ದಾರೆ. ವೀರನು ತನ್ನ ಬಲಗಾಲನ್ನು ಶತ್ರುವಿನ ಹೆಣದ ಮೇಲಿಟ್ಟುಕೊಂಡೇ ಕೋಟೆ ದ್ವಾರದಲ್ಲಿರುವ ಸೈನಿಕನೊಬ್ಬನಿಗೆ ಕತ್ತಿಯಿಂದ ಇರಿಯಲು ಮುಂದಾಗಿರುವನು. ಸೈನಿಕ ತನ್ನ ರಕ್ಷಣೆಗಾಗಿ ಗುರಾಣಿಯನ್ನು ಮುಂದೆ ಒಡ್ಡಿರುವಂತೆ ಚಿತ್ರಿಸಲಾಗಿದೆ. ವೀರನ ಕಡೆಯ ಸೈನಿಕರು ಕೋಟೆಯ ಮೇಲೆ ಭರ್ಜಿಗಳನ್ನು ಹಿಡಿದು ನಿಂತಿದ್ದಾರೆ. ವೀರನು ಅಪಾರ ಸೈನಿಕರೊಂದಿಗೆ ಕೋಟೆಗೆ ದಾಳಿ ಮಾಡಿರುವುದು ಕಂಡುಬರುತ್ತದೆ. ಚಿಕ್ಕಬಿದರೆ ಸ್ಮಾರಕಶಿಲ್ಪವೊಂದರಲ್ಲಿ ಕೋಟೆಗೋಡೆಯನ್ನು ಸಣ್ಣದಾಗಿ ಚಿತ್ರಿಸಲಾಗಿದ್ದು ಅದರ ಮೇಲೆ ನಿಂತಿರುವ ಸೈನಿಕರು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ವೀರನನ್ನು ಎದುರಿಸುತ್ತಿದ್ದಾರೆ. ಬಿಲ್ಲು ಹಿಡಿದಿರುವ ವೀರನು ಶತ್ರುವೊಬ್ಬನನ್ನು ತುಳಿದುಕೊಂಡು ಮುನ್ನುಗ್ಗುತ್ತಿದ್ದಾನೆ. ಇಲ್ಲಿ ಕೋಟೆ ಮೇಲಿರುವ ಒಬ್ಬೊಬ್ಬ ಸೈನಿಕರನ್ನು ವೀರನು ಹೊಡೆದು ಉರುಳಿಸಿದ್ದು ಅವರ ಹೆಣಗಳನ್ನು ಮೂರು ಹಂತದಲ್ಲಿರುವ ಕಟ್ಟೆಯ ಮೇಲೆ ಒಂದರ ಮೇಲೆ ಒಂದು ಬಿದ್ದಿರುವಂತೆ ಶಿಲ್ಪಿ ಚಿತ್ರಿಸಿದ್ದಾನೆ. ಈ ದೃಷ್ಟಿಯಿಂದ ಸ್ಮಾರಕಶಿಲ್ಪವು ಅಪರೂಪದ್ದಾಗಿ ಕಂಡುಬರುತ್ತದೆ. ಭಾನುವಳ್ಳಿ ಗ್ರಾಮದ ತ್ರುಟಿತಗೊಂಡಿರುವ ಸ್ಮಾರಕಶಿಲ್ಪದಲ್ಲಿ ಅಶ್ವಾರೂಢನಾಗಿರುವ ವೀರನು ಕೋಟೆಯ ಪ್ರವೇಶದ್ವಾರದ ಬಳಿ ಹಲವು ಸೈನಿಕರನ್ನು ಕೊಂದಿರುವಂತೆ ಚಿತ್ರಿಸಲಾಗಿದೆ. ಮಂಡಲೂರು ಗ್ರಾಮದ ಸ್ಮಾರಕಶಿಲ್ಪದಲ್ಲಿ ವೀರನು ಕತ್ತಿಯಿಂದ ಶತ್ರುವಿನ ಹೊಟ್ಟೆಯ ಭಾಗಕ್ಕೆ ಇರಿದಿದ್ದಾನೆ. ಅವನ ಹಿಂದೆ ಚಿಕ್ಕದಾಗಿ ಕೋಟೆಯ ಗೋಡೆಯನ್ನು ಚಿತ್ರಿಸಲಾಗಿದೆ. ಇಲ್ಲಿ ವೀರನು ಕೋಟೆಯನ್ನು ಮುತ್ತಿಗೆ ಹಾಕಲು ಬಂದ ಸೈನಿಕರನ್ನು ಸಮರ್ಥವಾಗಿ ಎದುರಿಸಿ ಮಡಿದನೆಂದು ತೋರುತ್ತದೆ.

**ಕೋಟೆತೆನೆಯ ಚಿತ್ರಣ:** ಕೆಲವು ಸ್ಮಾರಕಶಿಲ್ಪಗಳಲ್ಲಿ ಕೋಟೆಯನ್ನು ಸಾಂಕೇತಿಕವಾಗಿ ಕೋಟೆಯ ಗೋಡೆಯ ಮೇಲೆ ಸಾಲಾಗಿ ನಿಲ್ಲಿಸಿರುವ ತೆನೆಗಳನ್ನು ಮಾತ್ರ ಚಿತ್ರಿಸಲಾಗಿದೆ. ಈ ರೀತಿಯ ತೆನೆಗಳನ್ನು ಹೋರಾಟದ ಹಂತದ ಯಾವುದಾದರೂ ಒಂದು ಮಗ್ಗುಲಿನಲ್ಲಿ ಚಿತ್ರಿಸಿರುವುದುಂಟು. ಈ ಲಕ್ಷಣವಿರುವ ಸ್ಮಾರಕಶಿಲ್ಪಗಳು ಅಧ್ಯಯನ ಪ್ರದೇಶದ ಎಲೆಬೇತೂರು ಮತ್ತು ಬೆಳಗುತ್ತಿಯಲ್ಲಿ ಕಂಡುಬಂದಿವೆ. ಎಲೆಬೇತೂರಿನ ಒಂದು ಸ್ಮಾರಕಶಿಲ್ಪದ ಹೋರಾಟದ ಹಂತದ ಕೆಳ ಮತ್ತು ಮೇಲಿನ ಪಟ್ಟಿ ಹಾಗೂ ಬಲಭಾಗದ ಹಂಚಿನ ಪಟ್ಟಿಯಲ್ಲಿ ಕೋಟೆಯ ತೆನೆಗಳನ್ನು ಬಿಡಿಸಲಾಗಿದೆ. ಎರಡು ಪಕ್ಷದವರಿಗೂ ಘೋರವಾದ ಕದನ ನಡೆಯುತ್ತಿರುವ ಚಿತ್ರಣವಿದೆ. ಶತ್ರುಪಕ್ಷದ ಕುದುರೆಗೆ ಈಟಿ ಚುಚ್ಚಿಕೊಂಡಿದ್ದು ಕುದುರೆ ಹಿಂದಕ್ಕೆ ತಿರುಗುತ್ತಿದೆ. ಕುದುರೆಯ ಮೇಲೆ ಕುಳಿತ ಯೋಧ ಕೈಯಲ್ಲಿರುವ ಈಟಿಯನ್ನು ಶತ್ರುಗಳತ್ತ ಎಸೆಯುತ್ತಿದ್ದಾನೆ.[೨೦೦] ಇಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದ ಹೋರಾಟ ಹಂತದ ಕೆಳಗೆ ಮತ್ತು ಮೇಲಿನ ಪಟ್ಟಿಕೆಯಲ್ಲಿ ಕೋಟೆಯ ತೆನೆಗಳನ್ನು ಕೆತ್ತಲಾಗಿದೆ. ಎರಡು ಪಕ್ಷದವರಿಗೂ ಕುದುರೆಕಾಳಗ ನಡೆಯುತ್ತದೆ. ಕೆಲವರು ಕಾಲುತುಳಿತಕ್ಕೆ ಒಳಗಾಗಿರುವಂತೆ ಚಿತ್ರಿಸಲಾಗಿದೆ. ವೀರನ ಕುದುರೆಗೆ ಈಟಿ ಚುಚ್ಚಿಕೊಂಡಿದ್ದು ಕುದುರೆ ಹಿಂದಕ್ಕೆ ತಿರುಗುತ್ತಿದೆ. ಮೇಲಿನ ಹಂತದಲ್ಲಿ ಉರಿಯುತ್ತಿರುವ ಅಗ್ನಿಕುಂಡವಿದ್ದು, ಮೂವರು ಅದಕ್ಕೆ ಎಣ್ಣೆಯನ್ನು ಸುರಿಯುತ್ತಿರುವ ದೃಶ್ಯವಿದೆ. ಪ್ರಾಯಶಃ ಸೋಲಿನಿಂದ ಅಪಮಾನಿತನಾದ ವೀರನು ಅಗ್ನಿಕುಂಡದಲ್ಲಿ

ತನ್ನ ದೇಹವನ್ನು ದಹಿಸಿಕೊಂಡಿರಬಹುದು. ಬೆಳಗುತ್ತಿ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ಕೋಟೆಯ ಕಾಳಗವನ್ನು ಶಿಲ್ಪಿ ಸುಂದರವಾಗಿ ಚಿತ್ರಿಸಿದ್ದಾನೆ. ಈ ಸ್ಮಾರಕದ ಹೋರಾಟ ಹಂತದ ಬಲಭಾಗದ ಅಂಚಿನ ಪಟ್ಟಿಯಲ್ಲಿ ಕೋಟೆಯ ತೆನೆಗಳನ್ನು ಕೆತ್ತಲಾಗಿದೆ. ಕತ್ತಿ ಮತ್ತು ಗುರಾಣಿ ಹಿಡಿದಿರುವ ವೀರನು ತನ್ನ ಸೈನ್ಯದೊಂದಿಗೆ ಶತ್ರುಗಳ ಕಡೆ ಮುನ್ನುಗ್ಗುತ್ತಿದ್ದಾನೆ. ಹೆದರಿರುವ ಶತ್ರುಪಡೆಯ ಎಲ್ಲಾ ಸೈನಿಕರು ಯುದ್ಧದಿಂದ ಪಲಾಯನಗೈಯುತ್ತಿರುವಂತೆ ಕಂಡರಿಸಲಾಗಿದೆ. ಇದೇ ಗ್ರಾಮದ ಮತ್ತೊಂದು ಸ್ಮಾರಕಶಿಲ್ಪದ ಹೋರಾಟ ಹಂತದ ಬಲಭಾಗದ ಹಂಚಿನ ಪಟ್ಟಿಕೆಯಲ್ಲಿ ಕೋಟೆಯ ತೆನೆಗಳಿವೆ. ಸ್ಮಾರಕ ತ್ರುಟಿತವಾಗಿರುವುದರಿಂದ ಹೋರಾಟದ ಚಿತ್ರಣ ಅಸ್ಪಷ್ಟವಾಗಿ ಕಂಡುಬರುವುದು.

### ೪.೨.೫. ಪೆಣ್ಬುಯ್ಯಲಿನಲ್ಲಿ ಮಡಿದ ವೀರರ ಸ್ಮಾರಕ ಶಿಲ್ಪಗಳು

ಪೆಣ್ಬುಯಲ್ ಎಂಬ ಪದವು ಪೆಣ್+ಪುಯ್ಯಲ್ ಎಂಬ ಎರಡು ಶಬ್ದಗಳಿಂದ ಕೂಡಿದೆ.[೨೦೧] ಪುಯ್ಯಲ್(ಹುಯ್ಯಲು) ಎಂದರೆ ಕೂಗು, ಆರ್ತನಾದ ಎಂದು ಅರ್ಥ. ನೆರೆ ರಾಜ್ಯದವರು ಅಥವಾ ಕಳ್ಳರು ಒಂದು ಊರನ್ನು ದೋಚಿದಾಗ ಸ್ತ್ರೀಯರನ್ನು ಅಪಹರಿಸುತ್ತಿದ್ದರು. ಅಲ್ಲದೆ ಹೆಣ್ಣುಮಕ್ಕಳ ಮಾನಭಂಗಕ್ಕೂ ತೊಡಗುತ್ತಿದ್ದರು ಅಥವಾ ಸೀರೆ ಸೆಳೆಯುವುದರ ಮೂಲಕ ಯುದ್ಧವನ್ನು ಸಾರುತ್ತಿದ್ದರು.[೨೦೨] ಇಂತಹ ಸಂದರ್ಭದಲ್ಲಿ ಸ್ತ್ರೀಯರು ತಮ್ಮ ರಕ್ಷಣೆಗಾಗಿ ಪುಯ್ಯಲಿಡುತ್ತಿದ್ದರು ಅಥವಾ ಹುಯ್ಯಲಿಡುತ್ತಿದ್ದರು. ಇಂಥ ಸಂದರ್ಭದಲ್ಲಿ ವೀರರು ಆ ಸ್ತ್ರೀಯರ ಮಾನಸಂರಕ್ಷಣೆಗೆ ಧಾವಿಸಿ ಶತ್ರುಗಳೊಂದಿಗೆ ಹೋರಾಡಿರುವುದುಂಟು. ಅದನ್ನೇ ಕವಿ ರನ್ನನು 'ಪೆಣ್ಬುಯ್ಯಲ್' ಎಂದು ಕರೆದಿದ್ದಾನೆ. ಹಲವು ಕನ್ನಡ ಕಾವ್ಯಗಳಲ್ಲೂ ಪೆಣ್ಬುಯ್ಯಲಿನ ಪ್ರಸಂಗಗಳಿವೆ.[೨೦೩] ಆದರೆ ಯಾವ ಶಾಸನಗಳಲ್ಲೂ ಪೆಣ್ಬುಯಲ್ ಎಂಬ ಪದ ಬಳಕೆಯಾಗಿಲ್ಲ. ಅದರ ಬದಲಿಗೆ ಪೆಣ್ದಿರುಡೆಯುರ್ಚಿ, ಪೆಣ್ದಿರ ಉಡೆ ಉರ್ಚ್ಚಲು, ಉಡೆ ಉರ್ಚ್ಚಿ, ಪೆಣ್ದಿರ ಪೆರಗಿಕ್ಕಿ, ಹೆಂಡಿರುಡೆಯುರ್ಚ್ಚಿ ಎಂಬ ಶಬ್ದಗಳು ಬಳಕೆಯಾಗಿವೆಯೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ.[೨೦೪]

ಯುದ್ಧದ ನಂತರ ಸಂಪತ್ತನ್ನು ಕೊಳ್ಳೆ ಹೊಡೆಯುವುದು, ಕಾಣಿಕೆಯನ್ನು ಪಡೆಯುವುದು, ಸಾಮ್ರಾಜ್ಯ ವಿಸ್ತರಿಸುವುದು ಇವೆಲ್ಲ ಸಾಮಾನ್ಯವಾಗಿದ್ದವು. ಇವುಗಳ ಜೊತೆ ಸ್ತ್ರೀಯರನ್ನು ಹೊತ್ತೊಯ್ಯುವುದು ಸಾಮಾನ್ಯವಾಗಿತ್ತೆಂದು ತೋರುತ್ತದೆ. ವೇದಗಳ ಕಾಲದಲ್ಲಿಯೇ ಆರ್ಯರು ತಮ್ಮ ದಾಳಿಯಲ್ಲಿ ದಸ್ಯು ಶತ್ರುಗಳಿಂದ ದಾಸಿಯರನ್ನು ಹೊತ್ತು ತರುತ್ತಿದ್ದರಂತೆ.[೨೦೫] ಈ ರೀತಿ ಸ್ತ್ರೀಯರನ್ನು ಸಂಪತ್ತಿನ ರೂಪದಲ್ಲಿ ವಶಪಡಿಸಿಕೊಳ್ಳುವುದು ಅವರ ಅಧೋಗತಿಯನ್ನು ಸೂಚಿಸುತ್ತದೆ. ಇಂಥ ಹಲವು ಸಂದರ್ಭಗಳಲ್ಲಿ ನಡೆಯುತ್ತಿದ್ದ ಯುದ್ಧಗಳನ್ನು 'ಪೆಣ್ಬುಯ್ಯಲ್' ಎಂದು ಗುರುತಿಸಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲೂ ಸ್ತ್ರೀಯರ ರಕ್ಷಣೆಗಾಗಿ ಹೋರಾಡಿ ಮಡಿದ ವೀರರ ಶಾಸನ ಹಾಗೂ ಸ್ಮಾರಕಶಿಲ್ಪಗಳು ಕಂಡುಬಂದಿವೆ.

ಕ್ರಿ.ಶ. ೧೦೬೪ರ ಸ್ಮಾರಕಶಿಲ್ಪವೊಂದರಲ್ಲಿ ಹೊನ್ನಾಳಿಯನ್ನು ಇಟೆದು, ತುಱುಗಳನ್ನು ಕೊಂದು, ಪೆಣ್ಡಿರುಡೆಯನುರ್ಚುವಾಗ ನಾಗಿಲ ಮಾಳಯ್ಯನು ಅಡ್ಡ ಹೋಗಿ ಹೋರಾಡಿ ಸಾಯುತ್ತಾನೆ.[೨೦೬] ಕ್ರಿ.ಶ. ೧೨೬೫ರ ಮತ್ತೊಂದು ಸ್ಮಾರಕಶಿಲ್ಪವು ಶ್ರೀ ಮತು ಯಾದವನಾರಾಯಣ ವೀರಮಹದೇವರಾಯರ ಕಾಲದಲ್ಲಿ ಬಿಲ್ಲಾಳು ಅಮ್ಮೆನಾಯ್ಕನು ತನ್ನ ತಾಯಿಯನ್ನು ಸಾಂಗಲಿಗೆ ಪುರದಗುಡ್ಡಕ್ಕೆ ಕಳುಹಿಸುವಾಗ ತಮ್ಮನ್ನು ತಡೆದ ಮಲ್ಲಪುಹಾರಿಯ ಎಂಬುವನೊಡನೆ ಕಾದಾಡಿ ಮಡಿದಿರುವುದನ್ನು ಉಲ್ಲೇಖಿಸುತ್ತದೆ.[೨೦೭] ಇಲ್ಲಿ ಮಗನೊಬ್ಬ ತಾಯಿಯ ರಕ್ಷಣೆಗಾಗಿ ಹೋರಾಡಿ ಮಡಿದಿರುವುದು ತಿಳಿಯುತ್ತದೆ. ಈ ಸ್ಮಾರಕಶಿಲ್ಪದಲ್ಲಿ ವೀರನು ಶತ್ರುಗಳೊಂದಿಗೆ ಹೋರಾಡುತ್ತಿರುವುದನ್ನು ಎರಡು ಹಂತಗಳಲ್ಲಿ ಚಿತ್ರಿಸಲಾಗಿದೆ. ಎಲ್ಲಿಯೂ ಹೆಣ್ಣಿನ ಚಿತ್ರಣಗಳಿಲ್ಲ. ಆದರೂ ಶಾಸನ ಪಾಠದಿಂದ ಇದೊಂದು ಪೆಣ್ಬುಯ್ಯಲ್‌ನಲ್ಲಿ ಮಡಿದ ವೀರನ ಸ್ಮಾರಕಶಿಲ್ಪವೆಂಬುದು ದೃಢವಾಗುತ್ತದೆ.

ಸೊರಟೂರು ಗ್ರಾಮದಲ್ಲಿರುವ ರಾಷ್ಟ್ರಕೂಟ ಕಾಲದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಅಶ್ವಾರೂಢರಾಗಿರುವ ಶತ್ರುಗಳ ಜೊತೆ ಹೋರಾಡುತ್ತಿರುವನು. ವೀರನ ಹಿಂದೆ ಅರೆನಗ್ನರಾಗಿ ನಿಂತಿರುವ ಇಬ್ಬರು ಸ್ತ್ರೀಯರನ್ನು ಚಿತ್ರಿಸಲಾಗಿದೆ. ಸವಳಂಗ ಗ್ರಾಮದಲ್ಲಿರುವ ಅವರ ಕಾಲದ ಮತ್ತೊಂದು ಸ್ಮಾರಕಶಿಲ್ಪವು ಪೆಣ್ಬುಯ್ಯಲ್ ಸನ್ನಿವೇಶವನ್ನು ತಿಳಿಸುತ್ತದೆ. ಈ ಸ್ಮಾರಕಶಿಲ್ಪ ನಾಲ್ಕು ಹಂತಗಳಲ್ಲಿದೆ. ಕೆಳ ಹಂತದಲ್ಲಿ ವೀರನು ನಾಲ್ಕು ಜನ ಶತ್ರುಗಳ ಜೊತೆ ಹೋರಾಡುತ್ತಿದ್ದು, ಅವನ ಹಿಂದೆ ಏಳು ಜನ ಸ್ತ್ರೀಯರನ್ನು ಚಿತ್ರಿಸಲಾಗಿದೆ. ಅರೆನಗ್ನರಾಗಿರುವ ಅವರು ಹೆದರಿಕೊಂಡು ಓಡುತ್ತಿರುವಂತೆ ಕಂಡರಿಸಲಾಗಿದೆ. ಹೋರಾಟದ ಕೆಳಭಾಗದಲ್ಲಿ ಮೂರು ತುರುಗಳು ದಿಕ್ಕಿಗೊಂದು ನಿಂತಿರುವುದನ್ನು ಕೆತ್ತಲಾಗಿದೆ. ಈ ಸ್ಮಾರಕಶಿಲ್ಪದಲ್ಲಿ ವೀರನು ಗೋಗ್ರಹಣ ಮತ್ತು ಮಾನಹಾನಿಯನ್ನು ತಡೆದು ಶತ್ರುಗಳನ್ನು ಹಿಮ್ಮೆಟ್ಟಿಸಿದ ಎಂಬ ಅಂಶವನ್ನು ಶಿಲ್ಪಿ, ಮಾನಹಾನಿಗೆ ಒಳಗಾದ ಮಹಿಳೆಯರನ್ನು ವೀರನ ಹಿಂಬದಿಯಲ್ಲೂ, ಶತ್ರುಗಳು ಮತ್ತು ತುರುಗಳನ್ನು ವೀರನ ಮುಂಭಾಗದಲ್ಲಿಯೂ ಬಿಡಿಸಿರುವುದರ ಮೂಲಕ ಧ್ವನಿಸಿದ್ದಾನೆ.

ಹಿರೇಮಳಲಿಯಲ್ಲಿ ಕಂಡುಬರುವ ಎರಡು ಸ್ಮಾರಕಶಿಲ್ಪಗಳಲ್ಲಿ ವೀರರು ತುರುಗಳು ಮತ್ತು ಸ್ತ್ರೀಯರ ರಕ್ಷಣೆಗಾಗಿ ಹೋರಾಡಿದ ವಿಷಯ ತಿಳಿಯುತ್ತದೆ. ಒಂದು ಸ್ಮಾರಕದಲ್ಲಿ ವೀರನು ಭರ್ಜಿಯಿಂದ ಶತ್ರುವಿನ ಎದೆಯ ಭಾಗಕ್ಕೆ ಹಿರಿದು ಕೊಲ್ಲುತ್ತಿರುವ ಚಿತ್ರಣವಿದೆ. ಹೋರಾಟದಲ್ಲಿ ಒಬ್ಬ ಮಡಿದಿದ್ದಾನೆ. ವೀರನ ಹಿಂದೆ ದನಗಳನ್ನು ಹಾಗೂ ಇಬ್ಬರು ಸ್ತ್ರೀಯರನ್ನೂ ಕಂಡರಿಸಲಾಗಿದೆ.[೨೦೮] ಇದೇ ಗ್ರಾಮದಲ್ಲಿರುವ ಮತ್ತೊಂದು ಸ್ಮಾರಕಶಿಲ್ಪದಲ್ಲಿ ಬಿಲ್ಲು ಮತ್ತು ಬಾಣವನ್ನು ಹಿಡಿದ ವೀರನು ಶತ್ರುಗಳೊಂದಿಗೆ ಹೋರಾಡುತ್ತಿರುವನು. ವೀರನ ದಾಳಿಗೆ ಶತ್ರುವಿನ ಕುದುರೆ ತನ್ನ ಮುಖವನ್ನು ಹಿಂದಕ್ಕೆ ತಿರುಗಿಸಿರುವಂತೆ ಕೆತ್ತಲಾಗಿದೆ. ವೀರನ ಹಿಂದೆ ತುರುಗಳನ್ನು ಹಾಗೂ ಇಬ್ಬರು ಸ್ತ್ರೀಯರನ್ನು ಚಿತ್ರಿಸಲಾಗಿದೆ. ಈ ಸ್ಮಾರಕಶಿಲ್ಪಗಳನ್ನು ಗಮನಿಸಿದರೆ ಶಿಲ್ಪಿ ಒಬ್ಬನೇ ಕಂಡರಿಸಿರುವುದು ಕಂಡುಬರುತ್ತದೆ.

ಹನಗವಾಡಿ ಗ್ರಾಮದ ಪೆಣ್ಬುಯ್ಯಲ್ ಸ್ಮಾರಕಶಿಲ್ಪವೊಂದನ್ನು ಶಿಲ್ಪಿ ತುಂಬಾ ಮಾರ್ಮಿಕವಾಗಿ ಚಿತ್ರಿಸಿದ್ದಾನೆ. ವೀರನು ಒಂದು ಕೈಯಲ್ಲಿ ಶತ್ರುವಿನ ತಲೆ ಕೂದಲನ್ನೂ, ಮತ್ತೊಂದು ಕೈಯಲ್ಲಿ ಬಾಕುವನ್ನು ಹಿಡಿದಿದ್ದಾನೆ. ಓರ್ವ ಶತ್ರು ಹೋರಾಟದಲ್ಲಿ ಮಡಿದು ಬಿದ್ದಿರುವ ಚಿತ್ರಣವಿದೆ. ಮತ್ತೊಬ್ಬ ಸೈನಿಕ ಯುದ್ಧದಿಂದ ಪಲಾಯನಗೈಯುತ್ತಿರುವನು. ಹೋರಾಟದ ಮೇಲ್ಭಾಗ ಮತ್ತು ವೀರನ ಹಿಂದೆ ಇಬ್ಬರು ಸ್ತ್ರೀಯರ ಚಿತ್ರವಿದ್ದು, ಒಬ್ಬಳ ಮುಡಿ ಬಿಚ್ಚಿಕೊಂಡಿದೆ. ಅವಳು ವೀರನಿಗೆ ಕೈಮುಗಿದು ತಲೆಬಾಗಿ ನಿಂತಿದ್ದಾಳೆ. ಸ್ತ್ರೀಯೊಬ್ಬಳ ಮುಡಿ ಬಿಚ್ಚಿಕೊಂಡಿರುವುದರಿಂದ ಆ ಸ್ತ್ರೀಯರು ಪುರುಷರ ಆಕ್ರಮಣಕ್ಕೆ ಒಳಗಾಗಿರುವ ಅಂಶ ಇಲ್ಲಿ ಧ್ವನಿಸುತ್ತದೆ. ಅಲ್ಲದೆ ಆಕ್ರಮಣಕ್ಕೆ ಒಳಗಾದ ಸ್ತ್ರೀ ವೀರನಿಗೆ ಕೈಮುಗಿಯುತ್ತಿರುವುದರಿಂದ ಇಲ್ಲಿ ವೀರನು ಅನ್ಯ ಮಹಿಳೆಯರ ರಕ್ಷಣೆಗಾಗಿ ಹೋರಾಡಿ ಮಡಿದಿರುವನೆಂದು ತಿಳಿಯಬಹುದು. ಆಸಗೋಡಿನ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಒಂದು ಕೈಯಲ್ಲಿ ಶತ್ರುವಿನ ಜುಟ್ಟನ್ನು ಹಿಡಿದು, ಇನ್ನೊಂದು ಕೈಯಿಂದ ಮತ್ತೊಬ್ಬ ಶತ್ರುವಿಗೆ ಬಾಕುವಿನಿಂದ ಇರಿಯಲು ಮುಂದಾಗಿರುವನು. ಇಲ್ಲಿ ಚಿತ್ರಿತವಾಗಿರುವ ಮೂವರು ಸ್ತ್ರೀಯರು ನಗ್ನರಾಗಿದ್ದು ಅವರ ತಲೆ ಕೂದಲು ಕೆದರಿಕೊಂಡಿವೆ (ಹರಡಿಕೊಂಡಿವೆ). ಕುಳಿತಿರುವ ಇಬ್ಬರು ಸ್ತ್ರೀಯರು ತಲೆಯ ಮೇಲೆ ಕೈ ಇಟ್ಟುಕೊಂಡು ರೋದಿಸುತ್ತಿರುವಂತೆ ಕೆತ್ತಲಾಗಿದೆ. ಈ ಸ್ತ್ರೀಯರ ಕೂದಲು ಕೆದರಿರುವುದು ಶತ್ರುಗಳ ದಾಳಿಗೆ ಸಿಲುಕಿದ್ದಾರೆ ಎಂಬುದರ ಸೂಚನೆಯಾಗಿದೆ. ನೆಲ್ಲುಕುದುರೆ ಗ್ರಾಮದ ತ್ರುಟಿತ ಸ್ಮಾರಕಶಿಲ್ಪವೊಂದು ಪೆಣ್ಬುಯ್ಯಲ್ ಸನ್ನಿವೇಶವನ್ನು ತಿಳಿಸುತ್ತದೆ. ಈ ಸ್ಮಾರಕದಲ್ಲಿ ಹೋರಾಟ ಹಂತದ ಕೆಳಭಾಗದ ಸಣ್ಣ ಪಟ್ಟಿಯಲ್ಲಿ ಶತ್ರುವೊಬ್ಬ ಸ್ತ್ರೀಯ ಕೈಯನ್ನು ಹಿಡಿದು ಎಳೆದಾಡುತ್ತಿರುವ ಹಾಗೆ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ವೀರನು ಎಡಗೈಯಲ್ಲಿ ಶತ್ರುವಿನ ಕೂದಲನ್ನು ಹಿಡಿದು, ಬಲಗೈಯಲ್ಲಿನ ಕತ್ತಿಯಿಂದ ಅವನನ್ನು ಹೆದರಿಸುತ್ತಿರುವಂತೆ ಕೆತ್ತಲಾಗಿದೆ. ಈ ದೃಶ್ಯದ ಎರಡು ಕಡೆ ಇಬ್ಬರು ಸ್ತ್ರೀಯರನ್ನು ಕಂಡರಿಸಲಾಗಿದೆ. ಆ ಸ್ತ್ರೀಯರು ಪುರುಷರ ಆಕ್ರಮಣಕ್ಕೆ ಒಳಗಾಗಿರುವ ಅಂಶವು ಇಲ್ಲಿ ಕಂಡುಬರುತ್ತದೆ.

### ೪.೨.೬. ಕಳ್ಳರೊಡನೆ ಹೋರಾಡಿ ಮಡಿದ ವೀರರ ಸ್ಮಾರಕ ಶಿಲ್ಪಗಳು

ಪ್ರಾಚೀನ ಕಾಲದಲ್ಲಿ ಸರಕು ಸಾಗಾಣಿಕೆಯನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಗಿಸಲು ಮನುಷ್ಯ ಎತ್ತಿನಗಾಡಿ ಹಾಗೂ ಮತ್ತಿತರ ಪ್ರಾಣಿಗಳನ್ನು ಬಳಸುತ್ತಿದ್ದನು. ಈ ಸರಕುಗಳನ್ನು ಸಾಗಿಸುವಾಗ ದಾರಿಯ ಮಧ್ಯದಲ್ಲಿ ಕಳ್ಳರು ಗಂಟುಬೀಳುತ್ತಿದ್ದರು. ಅವರಿಂದ ತಮ್ಮ ಸಂಪತ್ತು ರಕ್ಷಣೆಗಾಗಿ ವೀರರು ಹೋರಾಡಿ ಮಡಿದ ಉದಾಹರಣೆಗಳಿವೆ. ದಾರಿಗಳ್ಳರ ಹಾವಳಿಯು ಅನಾದಿಕಾಲದಿಂದಲೂ ಇತ್ತು ಎಂಬುದನ್ನು ಸಾಹಿತ್ಯ ಕೃತಿಗಳು ಉಲ್ಲೇಖಿಸುತ್ತವೆ. ಕ್ರಿ.ಪೂ. ೫ನೆಯ ಶತಮಾನದ ವೈದಿಕ, ಜೈನ, ಬೌದ್ಧ ಸಾಹಿತ್ಯ ಕೃತಿಗಳಿಂದ ವ್ಯಾಪಾರಿಗಳನ್ನು ದಾರಿಗಳ್ಳರು ಅಡ್ಡಗಟ್ಟಿ ಅವರ ಸಂಪತ್ತನ್ನು ದೋಚಿ, ಅವರನ್ನು ಕೊಂದು ಹಾಕುತ್ತಿದ್ದ ವಿವರಣೆಗಳು ದೊರೆಯುತ್ತವೆ.[೨೯] ವಡ್ಡಾರಾಧನೆಯಲ್ಲಿನ ಭದ್ರಬಾಹು ಭಟ್ಟರ ಕಥೆಯಲ್ಲಿ ಹಾಗೂ ನಯಸೇನನ

ಧರ್ಮಾಮೃತದಲ್ಲಿನ ವಸುಭೂತಿಯ ಕಥೆಯಲ್ಲಿಯೂ ದಾರಿಗಳ್ಳರ ಪ್ರಸ್ತಾಪಗಳು ಬರುತ್ತವೆ. ಬೌದ್ಧಧರ್ಮದ ಅಧ್ಯಯನಕ್ಕಾಗಿ ಭಾರತಕ್ಕೆ ಬಂದಿದ್ದ ಹ್ಯೂಯೆನ್‌ತ್ಸಾಂಗ್‌ನೂ ಸಹ ದಾರಿಗಳ್ಳರಿಂದ ತೊಂದರೆಯನ್ನು ಅನುಭವಿಸಿದ್ದನೆಂದು ಅವನ ಪ್ರವಾಸಕಥನದಿಂದ ತಿಳಿದುಬರುತ್ತದೆ. 'ಚೆಹ್ ಕಾ ದೇಶದ ಗಡಿಯನ್ನು ಮುಟ್ಟುವ ಮುನ್ನ ನಾವು ದರೋಡೆಕೋರರ ಕೈಗೆ ಸಿಕ್ಕಿಕೊಂಡೆವು. ಐವತ್ತು ಜನ ದರೋಡೆಕೋರರು ನನ್ನ ಮತ್ತು ನನ್ನ ಸಂಗಡಿಗರ ಬಟ್ಟೆಬರೆಗಳನ್ನು ಕಿತ್ತುಕೊಂಡು, ನಮ್ಮನ್ನು ವಧೆ ಮಾಡಲು ಯತ್ನಿಸಿದರು. ಇದನ್ನು ನೋಡಿದ ಹೊಲ ಉಳುತ್ತಿದ್ದ ಬ್ರಾಹ್ಮಣನೊಬ್ಬ ಉಳುವುದನ್ನು ಬಿಟ್ಟು ಊರೊಳಕ್ಕೆ ಓಡಿಹೋಗಿ ಶಂಖ ಊದಿ ತಮಟೆ ಬಡಿದು ಜನಗಳನ್ನೆಲ್ಲಾ ಸೇರಿಸಿದನು. ಅವರು ದರೋಡೆಕೋರರ ಕಡೆ ನುಗ್ಗಿ ಅವರನ್ನು ಓಡಿಸಿ, ನಮ್ಮನ್ನು ಬಿಡುಗಡೆ ಮಾಡಿದರು. ನಮಗೆ ಅವರಲ್ಲಿದ್ದ ಬಟ್ಟೆಗಳನ್ನು ಕೊಟ್ಟು ಊರಿಗೆ ಕರೆದುಕೊಂಡು ಹೋದರು' ಎಂದು ತನ್ನ ಅನುಭವವನ್ನು ಬರೆದಿದ್ದಾನೆ.[೨೧೦] ಇದರಿಂದ ನಮಗೆ ದಾರಿಗಳ್ಳರ ಸೂಕ್ಷ್ಮ ಪರಿಚಯ ದೊರೆಯುತ್ತದೆ. ಈ ಘಟನೆಯಲ್ಲಿ ಹೋರಾಟ ಮಾಡಿದ ವೀರರನ್ನು ವಿದ್ವಾಂಸರು ಎರಡು ಗುಂಪಾಗಿ ವಿಂಗಡಿಸಿಕೊಳ್ಳಬಹುದೆಂದು ಅಭಿಪ್ರಾಯಿಸಿದ್ದಾರೆ.[೨೧೧] ಒಂದು, ದಾರಿಗಳ್ಳರೊಡನೆ ಹೋರಾಡಿ ಮಡಿದ ವೀರರು. ಎರಡನೆಯದು, ಊರಿನ ಮೇಲೆ ಕಳ್ಳತನಕ್ಕಾಗಿ ಬಂದ ಕಳ್ಳರೊಡನೆ ಹೋರಾಡಿ ಮಡಿದ ವೀರರು. ಕಳ್ಳರೊಡನೆ ಹೋರಾಡಿ ಮಡಿದ ವೀರರ ಸ್ಮಾರಕಶಿಲ್ಪಗಳನ್ನು ಕೇವಲ ಅವುಗಳ ಪಾಠದಿಂದ ಮಾತ್ರವೇ ಗುರುತಿಸಲು ಸಾಧ್ಯ. ಶಾಸನರಹಿತವಾದ ಸ್ಮಾರಕಶಿಲ್ಪಗಳಲ್ಲಿ ಈ ಹೋರಾಟದ ವಿಧಾನವನ್ನು ಗುರುತಿಸಲು ಆಗುವುದಿಲ್ಲ ಎಂದು ಸಂಶೋಧಕರೊಬ್ಬರು ಅಭಿಪ್ರಾಯಪಟ್ಟಿದ್ದಾರೆ.[೨೧೨] ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತ ಕೆಲವು ಶಾಸನ ರಹಿತವಾದ ಸ್ಮಾರಕಶಿಲ್ಪಗಳು ಕಳ್ಳರೊಂದಿಗೆ ಹೋರಾಟ ನಡೆಸುತ್ತಿರುವ ವಿವರಗಳು ನೀಡುವುದನ್ನು ಗುರುತಿಸಲಾಗಿದೆ.

ಕ್ರಿ.ಶ. ೧೧೮೯ರ ಒಂದು ಸ್ಮಾರಕಶಿಲ್ಪದಲ್ಲಿ ಶ್ರೀಮತ್ ರಾಜಸೆಟ್ಟಿಯ ಮಗ ದುಗ್ಗಣ ಎಂಬುವನು ಹರಿಹರಕ್ಕೆ ಹೋಗಿ ಬರುತ್ತಿದ್ದಾಗ 'ನಿಟ್ಟೂರ ಹಾರಿವಾಳದೆಡೆಯಣ ಗೊಡ್ಡಿಸಾಲದಲ್ಲಿ ಬಟ್ಟೆಯ ಕಳ್ಳ'ರನ್ನು ತಾಗಿ ಅವರೊಂದಿಗೆ ಹೋರಾಡಿ ಮಡಿಯುತ್ತಾನೆ.[೨೧೩] ಶ್ರೀಮನ್ ಸೋಮಂಣ ದಂಣಾಯಕರು ಶ್ರೀ ಹರಿಹರಕ್ಕೆ ಕಳಸ ತರುವಾಗ ಕಂಚಿಗೆರೆಯ ಬೇಡರು ಬಂದು ತಾಗಿದೆಡೆ ಹಲವರನ್ನು ಕೊಂದು ಸ್ವರ್ಗ ಪಡೆದನೆಂದು ತಿಳಿಯುತ್ತದೆ.[೨೧೪] ಕನವಸೆಟ್ಟಿಯ ಮಗ ಕೊಂಡನಂಬಿ ಎಂಬ ವ್ಯಾಪಾರಿ ಹಲವರನ್ನು ಕೊಂದು ಸುರಲೋಕ ಪ್ರಾಪ್ತನಾದನೆಂದು ಒಂದು ಶಾಸನವು ಉಲ್ಲೇಖಿಸುತ್ತದೆ.[೨೧೫] ಇಲ್ಲಿ ವೀರನು ವ್ಯಾಪಾರ ನಿಮಿತ್ತ ಹೋದಾಗ ಕಳ್ಳರನ್ನು ಎದುರಿಸಿ ಮಡಿದಿರುವುದು ತಿಳಿಯುತ್ತದೆ.

ಚಿಗಟೇರಿ ಗ್ರಾಮದ ಶಾಸನರಹಿತವಾಗಿರುವ ಒಂದು ಸ್ಮಾರಕಶಿಲ್ಪವನ್ನು ಶಿಲ್ಪಿ ಸ್ವಾರಸ್ಯಕರವಾಗಿ ಚಿತ್ರಿಸಿದ್ದಾನೆ. ವೀರನು ಬಲಗೈಯಲ್ಲಿ ಆಳೆತ್ತರದ ಬಿಲ್ಲು ಮತ್ತು ಎಡಗೈಯಲ್ಲಿ ಕಡುಗತ್ತಿಯನ್ನು

ಹಿಡಿದು ಶತ್ರುಗಳೊಂದಿಗೆ ಹೋರಾಡುತ್ತಿರುವನು. ಅವನ ಹಿಂಬದಿಯಲ್ಲಿ ಇಬ್ಬರು ಸ್ತ್ರೀಯರು ಚೌಕಾಕಾರದ ವಸ್ತುವೊಂದನ್ನು(ಪ್ರಾಯಶಃ ಟ್ರಂಕ್ ಇರಬಹುದು) ತಲೆಯ ಮೇಲೆ ಹೊತ್ತಿರುವರು. ಪುರುಷನೊಬ್ಬ ಉದ್ದವಾದ ದಂಡಕ್ಕೆ ಎರಡು ಬದಿಯಲ್ಲಿ ವಸ್ತುಗಳನ್ನು ಕಟ್ಟಿ ತನ್ನ ಬಲಭುಜದ ಮೇಲೆ ಇಟ್ಟುಕೊಂಡಿದ್ದಾನೆ. ಅವರೆಲ್ಲರೂ ಬಲಗೈಯಿಂದ ತಮ್ಮ ವಸ್ತುಗಳನ್ನು ಇಟ್ಟುಕೊಂಡು ಮತ್ತೊಂದು ಕೈಯಿಂದ ತಮ್ಮ ಮರ್ಮಾಂಗಗಳನ್ನು ಮುಚ್ಚಿಕೊಂಡಿರುವಂತೆ ಚಿತ್ರಿಸಲಾಗಿದೆ. ಪ್ರಾಯಶಃ ಕಳ್ಳರು ಸ್ತ್ರೀಯರು ಮತ್ತು ಒಬ್ಬ ಪುರುಷನನ್ನು ವಿವಸ್ತ್ರಗೊಳಿಸಿ ಅವರ ವಸ್ತುಗಳನ್ನು ದೋಚಲು ಯತ್ನಿಸಿರಬಹುದೆಂದು ತೋರುತ್ತದೆ. ಬಾಗಳಿ ವಸ್ತುಸಂಗ್ರಹಾಲಯದಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಬಿಲ್ಲು ಮತ್ತು ಬಾಣಗಳನ್ನು ಹಿಡಿದು ಶತ್ರುಸೈನಿಕರೊಂದಿಗೆ ಹೋರಾಡುತ್ತಿರುವನು. ಹೋರಾಟದಲ್ಲಿ ಮಡಿದವನೊಬ್ಬನ ಹೆಣ ನೆಲದ ಮೇಲೆ ಬಿದ್ದಿದೆ. ವೀರನ ಹಿಂದೆ ಅವನ ಇಬ್ಬರ ಸಹಚರರು, ಮೂರು ಕುದುರೆ ಹಾಗೂ ಕುದುರೆ ಬಂಡಿಯನ್ನು ಓಡಿಸುತ್ತಿರುವ ಸವಾರನನ್ನು ಚಿತ್ರಿಸಲಾಗಿದೆ. ಕುದುರೆ ಬಂಡಿಯಲ್ಲಿ ಬಹುಶಃ ಮಣ್ಣಿನ ಮಡಿಕೆ ಅಥವಾ ಮತ್ತಾವುದೋ ಮೂಟೆಗಳನ್ನು ಸಾಗಿಸುತ್ತಿರಬೇಕು, ಸವಾರನು ಮಾರ್ಗಮಧ್ಯದಲ್ಲಿ ಕಳ್ಳರಿಗೆ ಸಿಕ್ಕಿಹಾಕಿಕೊಂಡಾಗ ಅವನ ರಕ್ಷಣೆಗೆ ಮೂವರು ವೀರರು ಕುದುರೆ ಮೇಲೆ ಬಂದು ಹೋರಾಟ ಮಾಡುತ್ತಿರುವುದು ಕಂಡುಬರುತ್ತದೆ.[೨೧೬] ಆದರೆ ಹೋರಾಟದಲ್ಲಿ ಒಬ್ಬ ವೀರನು ಮಾತ್ರ ಮಡಿದಿರುವುದು ಶಿಲ್ಪದ ಲಕ್ಷಣಗಳಿಂದ ತಿಳಿಯುತ್ತದೆ. ಬಾಗಳಿಯ ಮತ್ತೊಂದು ಸ್ಮಾರಕಶಿಲ್ಪದಲ್ಲಿ ಹೇರುಗಳನ್ನು ಹೊತ್ತ ಎತ್ತುಗಳ ಹಿಂದೆ ಇಬ್ಬರು ನಗ್ನ ಸ್ತ್ರೀಯರ ಚಿತ್ರಣವಿದೆ.[೨೧೭] ವೀರರು ಪರಸ್ಪರ ಒಬ್ಬರಿಗೊಬ್ಬರು ಕೈಕೈ ಮಿಲಾಯಿಸಿ ಹೋರಾಡುತ್ತಿರುವಂತೆ ಕೆತ್ತಲಾಗಿದೆ. ಈ ಸ್ಮಾರಕದಲ್ಲಿ ಕಳ್ಳರು ವಸ್ತುಗಳನ್ನು ಕದಿಯಲು ಯತ್ನಿಸಿರುವುದರ ಜೊತೆಗೆ ಸ್ತ್ರೀಯರ ಮೇಲೂ ಆಕ್ರಮಣಕ್ಕೆ ಮುಂದಾಗಿರುವುದು ಕಂಡುಬರುತ್ತದೆ.

### ೪.೨.೭. ಪ್ರಾಣಿಗಳೊಂದಿಗೆ ಹೋರಾಡಿ ಮಡಿದ ವೀರರ ಸ್ಮಾರಕ ಶಿಲ್ಪಗಳು

ಮಾನವನು ಪ್ರಾಣಿಗಳನ್ನು ಬೇಟೆಯಾಡುವುದು ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಪದ್ಧತಿಯಾಗಿದೆ. ಇದು ಅವನು ಬದುಕಲು ಕಂಡುಕೊಂಡ ಮೊದಲ ವಿದ್ಯೆ. ಈ ಪರಂಪರೆ ಎರಡು ಸ್ತರಗಳಲ್ಲಿ ಬೆಳೆದುಬಂದಿರುವುದನ್ನು ಗಮನಿಸಬಹುದು. ಮೊದಲನೆಯದಾಗಿ ಆಹಾರಕ್ಕಾಗಿ (ಮಾಂಸ) ಅಥವಾ ಸ್ವರಕ್ಷಣೆಯ ಸಲುವಾಗಿ ಬೇಟೆಯಾಡುತ್ತಿದ್ದರು. ಎರಡನೆಯದಾಗಿ ಕೆಲವರು ಮೋಜಿಗಾಗಿ, ಕಾಲಾಹರಣೆಗಾಗಿ ಅಥವಾ ತಮ್ಮ ಶೌರ್ಯ ಪ್ರದರ್ಶನಕ್ಕಾಗಿ ಬೇಟೆಯಾಡುತ್ತಿದ್ದರು. ಇಂತಹ ಬೇಟೆಯ ವಿಷಯಗಳನ್ನು ಹಲವು ಸಾಹಿತ್ಯ ಕೃತಿಗಳಲ್ಲಿ ವರ್ಣಿಸಲಾಗಿದೆ. ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಬೇಟೆಯ ವಿಧಾನಗಳನ್ನು ತಿಳಿಸಿದ್ದಾನೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಜನರ ರಕ್ಷಣೆಗಾಗಿ ಮತ್ತು ಅವರು ಬೆಳೆದ ಬೆಳೆಯನ್ನು ಉಳಿಸಲು ಬೇಟೆಯಾಡಲಾಗುತ್ತಿತ್ತೆಂದು ವಿವರಿಸಲಾಗಿದೆ.

ಸ್ಮಾರಕಶಿಲ್ಪಗಳಲ್ಲೂ ಕೂಡ ಹಲವಾರು ಪ್ರಾಣಿಗಳ ಬೇಟೆ ಚಿತ್ರಣಗಳನ್ನು ಗಮನಿಸಬಹುದು. ಬೇಟೆಯಾಡಲು ಮುಖ್ಯ ಉದ್ದೇಶ ಯಾವುದಾದರೂ ದುಷ್ಟ ಮೃಗವೊಂದು ಊರಿಗೆ ನುಗ್ಗಿ ಜನರಿಗೋ, ದನಗಳಿಗೋ ಅಥವಾ ಅವನು ಬೆಳೆದ ಬೆಳೆಗಳಿಗೋ ಹಾನಿಯನ್ನುಂಟು ಮಾಡುತ್ತಿದ್ದರೆ ಅಂತಹ ದುಷ್ಟ ಮೃಗಗಳನ್ನು ಬೇಟೆಯಾಡಲು ಹೋಗಿ ಮಡಿದ ವೀರರ ಸ್ಮಾರಕಶಿಲ್ಪಗಳು ನಮಗೆ ದೊರೆಯುತ್ತವೆ. ದುಷ್ಟ ಮೃಗಗಳು ಎಂದರೆ ಮುಖ್ಯವಾಗಿ ಹುಲಿ, ಚಿರತೆ ಮತ್ತು ಕಾಡುಹಂದಿ. ಈ ರೀತಿ ಮರಣವನ್ನು ಹೊಂದಿದವರೂ ಕೂಡ ವೀರರು ಎಂದು ನಮ್ಮ ಪ್ರಾಚೀನ ಜನ ನಂಬಿದ್ದರು. ಹೀಗಾಗಿ ಇವರಿಗೂ ಸ್ಮಾರಕಶಿಲ್ಪಗಳನ್ನು ನೆಡುವ ರೂಢಿ ಬೆಳೆದು ಬಂದಿತು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದ ಪ್ರಾಣಿಬೇಟೆ ಸ್ಮಾರಕಶಿಲ್ಪಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಹುಲಿಯೊಂದಿಗೆ ಹೋರಾಡಿ ಮಡಿದ ವೀರರು**

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಹುಲಿಯ ಬೇಟೆ ಪ್ರಚಲಿತವಾಗಿತ್ತು. ಗುಪ್ತರ ಕಾಲದ ಕೆಲವಾರು ನಾಣ್ಯಗಳ ಮೇಲೆ ಹುಲಿಯೊಡನೆ ಹೋರಾಡುತ್ತಿರುವ ಚಿತ್ರಣಗಳಿವೆ. ಒಂದು ಚಿನ್ನದ ನಾಣ್ಯದಲ್ಲಿ ಸಮುದ್ರಗುಪ್ತನು ಹುಲಿಯನ್ನು ಕೊಲ್ಲುತ್ತಿರುವಂತೆ ತೋರಿಸಲಾಗಿದೆ. ಇದರಲ್ಲಿ 'ವ್ಯಾಘ್ರ ಪರಾಕ್ರಮ' ಎನ್ನುವ ಬ್ರಾಹ್ಮೀ ಲಿಪಿಯ ಸಂಸ್ಕೃತ ಬರಹವಿದೆ.[೨೧೮] ಭಾರತಕ್ಕೆ ಬಂದಿದ್ದ ಫ್ರಾನ್ಸ್ ಪ್ರವಾಸಿಗ ಫಾನ್ಸುವಾ ಪಿರಾರ್ದ್‌ದೆ ಲವಲ್ ಎಂಬುವನು ಹೀಗೆ ಬರೆಯುತ್ತಾನೆ. 'ಈ ದೇಶದಲ್ಲಿ ಹುಲಿಗಳು ಹೆಚ್ಚು, ಅವುಗಳನ್ನು ನಾಯರುಗಳು ಬೇಟೆಯಾಡುತ್ತಾರೆ. ಯಾವ ಆಯುಧಗಳೂ ಇಲ್ಲದೆ ನಾಯರುಗಳು ಹುಲಿಗಳ ಮೇಲೆ ಬಿದ್ದು, ಅವನ್ನು ಕೊಂದದ್ದನ್ನು ನಾನು ನೋಡಿದ್ದೇನೆ. ಕೆಲವರು ತಮ್ಮ ಮೈಕೈ ಪರಚಿಸಿಕೊಂಡು ರಕ್ತ ಸುರಿಸುತ್ತಾ ಕೊಂದ ಹುಲಿಯನ್ನು ರಾಜನ ಮುಂದಕ್ಕೆ ಎಳೆದುಕೊಂಡು ಬಂದದ್ದನ್ನು ನೋಡಿದ್ದೇನೆ' ಎಂದು ಹೇಳುತ್ತಾನೆ.[೨೧೯] ಈ ಅಂಶಗಳು ಹುಲಿಯ ಬೇಟೆಯ ವಾಸ್ತವಿಕ ಚಿತ್ರಣಗಳನ್ನು ನಮ್ಮ ಮುಂದೆ ತೆರೆದಿಡುತ್ತವೆ.

ಹುಲಿಯನ್ನು ಬೇಟೆಯಾಡುವವನು ನಿಜವಾಗಿಯೂ ಬಹಳ ಧೈರ್ಯಶಾಲಿಯಾಗಿರಬೇಕು. ಹಂದಿಯನ್ನು ಕೊಲ್ಲುವಷ್ಟು ಸುಲಭವಾಗಿ ಹುಲಿಯನ್ನು ಕೊಲ್ಲಲು ಸಾಧ್ಯವಿಲ್ಲ. ಅದು ಮನುಷ್ಯನಿಗಿಂತಲೂ ಬಲಿಷ್ಮವಾದ ಪ್ರಾಣಿ. ಇಂತಹ ಬಲಿಷ್ಠವಾದ ಪ್ರಾಣಿಯೊಂದಿಗೆ ಹೋರಾಡಿ ಮಡಿದ ವೀರರ ಬಗ್ಗೆ ಸ್ಮಾರಕಶಿಲ್ಪಗಳು ತಿಳಿಸುತ್ತವೆ.

ಕ್ರಿ.ಶ. ೧೭೧೮ರ ಒಂದು ಶಾಸನದಲ್ಲಿ ಗಲುಲೋಜಿ ಎಂಬುವನು ಹೊನ್ನಾಳಿ ಸೀಮೆಯಲ್ಲಿ ರಾವುಡಿ ಮಾಡುತ್ತಿದ್ದ ಹುಲಿಯನ್ನು ಕೊಂದು ತಾನೂ ಸತ್ತಾಗ, ಅವನ ಮಕ್ಕಳು ಉಂಬಳಿಗಾಗಿ ಸೋಮಶೇಖರ ನಾಯಕರಲ್ಲಿ ಅರಿಕೆ ಮಾಡಿಕೊಂಡಿದ್ದರ ವಿವರ ದೊರೆಯುತ್ತದೆ.[೨೨೦] ಕ್ರಿ.ಶ. ೧೯೩೮ನೇ ವರ್ಷದಂದು ಚನ್ನಗಿರಿ ತಾಲೂಕು ದಾಗಿನಕಟ್ಟೆ ವಾಸಿ ಕಜಾಕಿದೇವರಹಳ್ಳಿ ಕೆಂಪರಂಗಪ್ಪನ ಮಗ ಸಣ್ಣರಂಗಪ್ಪನು ಹುಲಿಯ ಬಾಯಿಗೆ ತುತ್ತಾಗಿ ಮಡಿದನೆಂದು ತಿಳಿದುಬರುತ್ತದೆ. ಈ ಸ್ಮಾರಕಶಿಲ್ಪವನ್ನು ಸುಮಾರು ೮೦ ವರ್ಷಗಳ ಹಿಂದೆ ನಿರ್ಮಿಸಲಾಗಿದೆ. ಬಲಗೈಯಲ್ಲಿ ಕುಡಗೋಲು ಹಿಡಿದು ನಿಂತಿರುವ ವೀರನಿಗೆ ಹುಲಿಯು ಬೆನ್ನ ಮೇಲೆ ಎರಗಿರುವಂತೆ ಚಿತ್ರಸಲಾಗಿದೆ. ಇದರಿಂದಾಗಿ ಸ್ಮಾರಕವನ್ನು ನಿರ್ಮಿಸುವ ಪರಂಪರೆ ೨೦ನೇ ಶತಮಾನದ ಆದಿ ಭಾಗದವರೆಗೂ ಜೀವಂತವಾಗಿ ಇದ್ದುದನ್ನು ಈ ಸ್ಮಾರಕಶಿಲ್ಪ ಪುಷ್ಟೀಕರಿಸುತ್ತದೆ.

ಬಾಗಳಿ ವಸ್ತುಸಂಗ್ರಹಾಲಯದಲ್ಲಿರುವ ಒಂದು ಸ್ಮಾರಕಶಿಲ್ಪವು ಬಹಳ ಅಪರೂಪದ ಹುಲಿ ಬೇಟೆ ಸನ್ನಿವೇಶವನ್ನು ಸೆರೆಹಿಡಿದಿದೆ. ಈ ಸ್ಮಾರಕಶಿಲ್ಪ ಮೂರು ಹಂತವನ್ನು ಹೊಂದಿದ್ದು ಕೆಳಗಿನ ಹಂತ ಬಹಳ ಪ್ರಮುಖವಾಗಿದೆ. ಇಲ್ಲಿ ವೀರನು ಬಲಿಷ್ಠವಾದ ಹುಲಿಯನ್ನು ಎದುರಿಸುತ್ತಿದ್ದಾನೆ. ಅವನು ಬಲಗೈಯಲ್ಲಿ ಹಿಡಿದಿರುವ ಈಟಿಯಿಂದ ಹುಲಿಯ ಬಾಯಿಗೆ ತಿವಿದಿದ್ದಾನೆ. ಅದರ ತುದಿಯು ಕತ್ತಿನ ಹಿಂಭಾಗದಲ್ಲಿ ಬಂದಿರುವಂತೆ ತೋರಿಸಲಾಗಿದೆ. ವೀರನ ಹಿಂದೆ ಆರು ಜನ ಸೈನಿಕರದ್ದು, ಎಲ್ಲರ ಕೈಯಲ್ಲಿ ಗುರಾಣಿ ಹಾಗೂ ಕತ್ತಿಗಳಿವೆ. ವೀರನೂ ಸಹ ಎಡಗೈಯಲ್ಲಿ ಕತ್ತಿ ಹಿಡಿದಿದ್ದಾನೆ. ಹುಲಿಯು ಒಬ್ಬನನ್ನು ಕೊಂದುಹಾಕಿದೆ. ಆ ಹೆಣವು ಹುಲಿಯ ಕಾಲುಗಳ ಮಧ್ಯೆ ಬಿದ್ದಿದೆ. ಹುಲಿಯ ಹಿಂಭಾಗ ಮರದ ಮೇಲೆ ಬಿಲ್ಲು ಹಿಡಿದವನೊಬ್ಬನು ಕುಳಿತು ಹುಲಿಯತ್ತ ಬಾಣವನ್ನು ಗುರಿಯಿಟ್ಟಿದ್ದಾನೆ. ಈ ದೃಶ್ಯವು ಹುಲಿಯನ್ನು ನೇರವಾಗಿ ಎದುರಿಸುವುದೇ ಅಲ್ಲದೆ, ಅದನ್ನು ನೇರವಾಗಿ ಎದುರಿಸುವ ಮುನ್ನ ಈ ರೀತಿಯ ವಿಧಾನಗಳಿಂದ ಸಾಯಿಸಲು ಪ್ರಯತ್ನಿಸುತ್ತಿದ್ದರೆಂದು ತೋರುತ್ತದೆ.[೨೨೧] ಹಳೆಜೋಗದ ಸ್ಮಾರಕಶಿಲ್ಪವೊಂದು ಹುಲಿ ಬೇಟೆಯ ವಿವರವನ್ನು ಸುಂದರವಾಗಿ ಅಭಿವ್ಯಕ್ತಿಸಿದೆ. ಈ ಸ್ಮಾರಕದ ಎರಡನೆಯ ಹಂತದಲ್ಲಿ ಕುದುರೆ ಮೇಲೆ ಕುಳಿತಿರುವ ವೀರನು ತನ್ನ ಮೇಲೆ ಎರಗಲು ಬಂದ ಹುಲಿಯ ಬಾಯಿಗೆ ಈಟಿಯಿಂದ ಇರಿದಿದ್ದಾನೆ. ಮೊದಲ ಹಂತದಲ್ಲಿ ಅವನ ಸತಿಯರಿಬ್ಬರನ್ನು ಚಿತ್ರಿಸಲಾಗಿದೆ. ವೀರನು ಹುಲಿಯೊಂದಿಗೆ ಹೋರಾಡಿ ಮಡಿದಾಗ ಅವನ ಇಬ್ಬರು ಪತ್ನಿಯರು ಸತ್ತುಹೋಗಿರುವುದು ಇಲ್ಲಿ ಕಂಡುಬರುತ್ತದೆ.

ಮತ್ತೂರು ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಹುಲಿಯೊಡನೆ ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ. ಮೇಲಿನ ಹಂತದಲ್ಲಿ ದಂಡವನ್ನು ಹಿಡಿದು ನಿಂತಿರುವವನ ಮುಂದೆ ಎರಡು ಎತ್ತುಗಳನ್ನು ಕಂಡರಿಸಿದೆ. ಇಲ್ಲಿ ದನ ಕಾಯುವವ ಮತ್ತು ತುರುಗಳನ್ನು ಹುಲಿಯ ಆಕ್ರಮಣದಿಂದ ರಕ್ಷಿಸಿ, ವೀರನು ಮಡಿದಿರುವನೆಂದು ತೋರುತ್ತದೆ. ಚಿರಸ್ತಹಳ್ಳಿಯ ಸ್ಮಾರಕಶಿಲ್ಪದಲ್ಲಿ ಬಿಲ್ಲು ಮತ್ತು ಬಾಣ ಹಿಡಿದ ವೀರನು ಹುಲಿಯೊಡನೆ ಹೋರಾಡುತ್ತಿರುವನು. ಅವನ ಹಿಂದೆ ಎತ್ತುಗಳು ನಿಂತಿರುವಂತೆ ಕೆತ್ತಲಾಗಿದೆ.[೨೨೨] ಹುಲಿಯು ಆಕ್ರಮಿಸಿದಾಗ ವೀರನೊಬ್ಬನು ಅದರೊಂದಿಗೆ ಹೋರಾಡಿ ಎತ್ತುಗಳನ್ನು ರಕ್ಷಿಸಿರುವುದು ಈ ಸ್ಮಾರಕದಲ್ಲಿ ಗೋಚರವಾಗುತ್ತದೆ. ಸಂಶೋಧಕರಾದ ಡಿ.ವಿ. ಪರಮಶಿವಮೂರ್ತಿ ಅವರು ನಾಲ್ಕು ಹಂತದ 'ಹುಲಿ ಹೋರಾಟದ ವೀರಗಲ್ಲು ಇದುವರೆಗೂ ಬೇರೆಲ್ಲೂ ದೊರಕಿಲ್ಲ' ಎಂದು ತಮ್ಮ ಕೃತಿಯಲ್ಲಿ ಉಲ್ಲೇಖಿಸಿರುತ್ತಾರೆ.[೨೨೩] ಆದರೆ ಅಧ್ಯಯನದ ಪ್ರದೇಶದಲ್ಲಿ ಕಂಡುಬರುವ ಈ ಸ್ಮಾರಕಶಿಲ್ಪವು ನಾಲ್ಕು ಹಂತಗಳಲ್ಲಿರುವುದು ವಿಶೇಷವಾಗಿದೆ. ಕುಣಿಬೆಳಕೆರೆ ಗ್ರಾಮದ ಒಂದು ಸ್ಮಾರಕಶಿಲ್ಪ ಅಪರೂಪದ್ದಾಗಿದೆ. ಹೋರಾಟದ ಹಂತದಲ್ಲಿ ವೀರನು ಹುಲಿಯನ್ನು ಎದುರಿಸುತ್ತಿರುವನು, ಅವನ ಹಿಂದೆ ಸ್ತ್ರೀಯೊಬ್ಬಳ ಚಿತ್ರಣವಿದೆ. ಇಲ್ಲಿ ವೀರನು ಹುಲಿ ದಾಳಿಯಿಂದ ಮಹಿಳೆಯನ್ನು ರಕ್ಷಿಸಿ ಮಡಿದಿರುವುದು ಕಂಡುಬರುತ್ತದೆ.

**ಚಿರತೆ ಹಾಗೂ ಹಂದಿ ಬೇಟೆಯಲ್ಲಿ ಮಡಿದ ವೀರನ ಸ್ಮಾರಕಶಿಲ್ಪ**

ಮಲಹಾಳ್ ಗ್ರಾಮದ ಸ್ಮಾರಕಶಿಲ್ಪವೊಂದರಲ್ಲಿ ಚಿರತೆ ಮತ್ತು ಹಂದಿ ಬೇಟೆಯ ಅಪರೂಪದ ಸನ್ನಿವೇಶವನ್ನು ಶಿಲ್ಪಿ ಸೆರೆಹಿಡಿದಿದ್ದಾನೆ. ಒಂದು ಹಂತದಲ್ಲಿರುವ ಸ್ಮಾರಕದಲ್ಲಿ ವೀರನು ಅಶ್ವರೂಢನಾಗಿದ್ದು, ಬಲಗೈಯಲ್ಲಿ ಭರ್ಚಿಯನ್ನು ಮೇಲಕ್ಕೆತ್ತಿ ಹಿಡಿದಿದ್ದಾನೆ. ಅವನ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಕೆಳಭಾಗದಲ್ಲಿ ಸಣ್ಣದಾಗಿರುವ ಎರಡು ಪಟ್ಟಿಯನ್ನು ಮಾಡಿ, ಅದರೊಳಗೆ ಚಿರತೆ ಹಾಗೂ ಹಂದಿ ಪ್ರತ್ಯೇಕವಾಗಿರುವಂತೆ ಕಂಡರಿಸಲಾಗಿದೆ. ಈ ಪಟ್ಟಿಯ ಮೇಲ್ಭಾಗದಲ್ಲಿ ನಾಯಿಯೊಂದನ್ನು ಕುದುರೆಯ ಕಾಲುಗಳ ಮಧ್ಯ ಇರುವಂತೆ ಕೆತ್ತಲಾಗಿದೆ. ಇದೇ ಸ್ಮಾರಕದಲ್ಲಿ ಸಹಗಮನಗೊಂಡಿರುವ ವೀರನ ಪತ್ನಿಯು ನಿಂಬೆಹಣ್ಣು ಮತ್ತು ಕಳಸವನ್ನು ಹಿಡಿದು ನಿಂತಿರುವುದನ್ನು ಚಿತ್ರಿಸಲಾಗಿದೆ. ಸ್ಮಾರಕಶಿಲ್ಪದ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಈ ಸ್ಮಾರಕದಲ್ಲಿನ ಲಕ್ಷಣಗಳನ್ನು ಗಮನಿಸಿದರೆ ವೀರನು ತನ್ನ ನಾಯಿಯೊಂದಿಗೆ ಹಂದಿ ಹಾಗೂ ಚಿರತೆ ಎರಡನ್ನೂ ಬೇಟೆಯಾಡಿರುವುದು ಕಂಡುಬರುತ್ತದೆ. ಅವನ ಮರಣಾನಂತರ ಎರಡು ಪ್ರಾಣಿಗಳ ಬೇಟೆಯನ್ನು ಶಿಲ್ಪಿಯು ಒಂದೇ ಸ್ಮಾರಕಶಿಲ್ಪದಲ್ಲಿ ಅಪೂರ್ವವಾಗಿ ಚಿತ್ರಿಸಿದ್ದಾನೆ. ಹಳೆಬಾತಿ ಭೀಮಣ್ಣ ಮನೆ ಮುಂದಿರುವ ಸ್ಮಾರಕವೊಂದರಲ್ಲಿ ಚೂರಿ ಮತ್ತು ಭರ್ಚಿಗಳನ್ನು ಹಿಡಿದಿರುವ ವೀರನು ಹಂದಿಯನ್ನು ಕೊಲ್ಲಲು ಮುಂದಾಗಿದ್ದಾನೆ. ಹಂದಿಯು ಬೆನ್ನು ಕೆಳಗೆ ಮಾಡಿ ಬಿದ್ದಿರುವಂತೆ ಚಿತ್ರಿಸಲಾಗಿದೆ. ಮಡಿದ ವೀರನ ಇಬ್ಬರು ಪತ್ನಿಯರು ಸಹಗಮನಗೊಂಡಿರುವುದು ಕಂಡುಬರುತ್ತದೆ. ಚಿಗಟೇರಿ ಗ್ರಾಮದ ಒಂದು ಸ್ಮಾರಕದಲ್ಲಿ ವೀರನು ನಾಯಿಯೊಂದಿಗೆ ಹಂದಿ ದಾಳಿಯಲ್ಲಿ ಮಡದಿರುವುದು ಕಂಡುಬರುತ್ತದೆ. ವೀರನ ವೇಷಭೂಷಣಗಳು ಅವನು ಪ್ರಮುಖ ವ್ಯಕ್ತಿ ಎಂಬುದನ್ನು ಸೂಚಿಸುತ್ತವೆ.

**ಕರಡಿಯೊಂದಿಗೆ ಹೋರಾಡಿ ಮಡಿದ ನಾಯಿ ಹಾಗೂ ವೀರನ ಸ್ಮಾರಕಶಿಲ್ಪ**

ಸ್ಮಾರಕಶಿಲ್ಪಗಳಲ್ಲಿ ಮಾನವನು ಹಲವು ಪ್ರಾಣಿಗಳ ಜೊತೆ ಹೋರಾಡಿ ಬಲಿಯಾಗಿರುವ ವಿವರಗಳು ಸಿಗುತ್ತವೆ. ಆದರೆ ಪ್ರಾಚೀನ ಕಾಲದಿಂದಲೂ ಮಾನವನಿಗೆ ತೊಂದರೆ ನೀಡುತ್ತಿದ್ದ ಮತ್ತೊಂದು ಪ್ರಾಣಿ ಕರಡಿ. ಕರ್ನಾಟಕದಲ್ಲಂತು ಅವುಗಳ ಸಂಖ್ಯೆ ಹೆಚ್ಚಿದೆ. ಪ್ರಸ್ತುತ ದಿನಮಾನಗಳಲ್ಲಿಯೂ ಸಹ ಅಲ್ಲಲ್ಲಿ ಕರಡಿ ದಾಳಿಗೊಳಗಾದವರ ಬಗ್ಗೆ ಮಾಹಿತಿಯನ್ನು ಕೇಳುತ್ತಿರುತ್ತೇವೆ. ಅರಣ್ಯ ಕಡಿಮೆ ಇರುವ ಈಗಲೇ ಹೀಗಾದರೆ ಇನ್ನು ಹಿಂದಿನ ದಿನಗಳ ಪರಿಸ್ಥಿತಿ ಹೇಗಿರಬೇಡ? ಆದರೆ ಯಾವ ಶಾಸನಪಾಠದಲ್ಲೇ ಆಗಲಿ, ಶಾಸನಶಿಲ್ಪದಲ್ಲೇ ಆಗಲಿ ಕರಡಿಯ ಬಗೆಗೆ ಉಲ್ಲೇಖ ಇಲ್ಲದಿರುವುದು ಯೋಚಿಸಬೇಕಾದ ಸಂಗತಿಯಾಗಿದೆ. ಸಮಗ್ರವಾಗಿ ಶಾಸನ ಶಿಲ್ಪಗಳು ಪ್ರಕಟವಾದಾಗ ಯಾವ ಪ್ರದೇಶದಲ್ಲಾದರೂ ಕರಡಿ ಬೇಟೆಯ ಶಾಸನ ಶಿಲ್ಪ ದೊರಕಬಹುದೆಂಬ ಆಶಾಭಾವನೆಯಿಂದ ಕಾಯಬೇಕಷ್ಟೇ ಎಂದು ಸಂಶೋಧಕರಾದ ಡಿ.ವಿ. ಪರಮಶಿವಮೂರ್ತಿ ಅವರು ಅಭಿಪ್ರಾಯಿಸಿರುವರು.[೨೨೪] ಅವರ ಅಭಿಪ್ರಾಯಕ್ಕೆ ಪುಷ್ಟಿ ನೀಡುವ ಸ್ಮಾರಕಶಿಲ್ಪವೊಂದು ಅಧ್ಯಯನ ಪ್ರದೇಶದ ಮುದಿಗೆರೆ ಗ್ರಾಮದಲ್ಲಿ ಕಂಡುಬಂದಿದೆ. ಆ ಸ್ಮಾರಕದ ವಿವರಗಳನ್ನು ಗಮನಿಸುವುದಕ್ಕೂ ಪೂರ್ವದಲ್ಲಿ ಸ್ಮಾರಕದಲ್ಲಿರುವ ವೀರ ಹಾಗೂ ನಾಯಿ ಬಗೆಗೆ ಇರುವ ಕಥೆಯೊಂದನ್ನು ಪ್ರಸ್ತಾಪಿಸುವುದು ಸೂಕ್ತವೆಂದು ತೋರುತ್ತದೆ.

"ಅಂದಿನ ಕಾಲದಲ್ಲಿ ಈ ಗ್ರಾಮದ ಗೌಡಿಕೆಯನ್ನು ನಡೆಸುತ್ತಿದ್ದ ಹಿರಿಯಜ್ಜ ಚಿಕ್ಕಣ್ಣನು ಬೇಟೆಯಲ್ಲಿ ಪರಿಣತಿ ಪಡೆದಿದ್ದನಂತೆ. ಒಮ್ಮೆ ಮೈಸೂರು ಮಹಾರಾಜರು ಚನ್ನಗಿರಿಗೆ ಬರುತ್ತಾರೆ ಎಂಬ ವಿಷಯ ತಿಳಿದು ಹುಲಿ ಚರ್ಮವನ್ನು ಅವರಿಗೆ ಉಡುಗೊರೆಯಾಗಿ ನೀಡಲು ನಿರ್ಧರಿಸಿರುತ್ತಾರೆ. ಅದರಂತೆ ಒಂದು ದಿನ ಚಿಕ್ಕಣ್ಣನು ತನ್ನ ಸಾಕು ನಾಯಿಯೊಂದಿಗೆ ಬೇಟೆಗಾಗಿ ಗ್ರಾಮದ ಹತ್ತಿರವಿರುವ ಅರಣ್ಯಕ್ಕೆ ಹೋಗಿ ಅಲ್ಲಿದ್ದ ಹೊಂಡದ ಬಳಿ ಹುಲಿ ಬರುವಿಕೆಗಾಗಿ ಕಾದು ಕುಳಿತಿರುತ್ತಾನೆ. ನಿತ್ಯವೂ ಅಲ್ಲಿಗೆ ಬರುತ್ತಿದ್ದ ಹುಲಿ ಆ ದಿನ ಬರುವುದಿಲ್ಲ. ಬದಲಾಗಿ ಹಂದಿ(ಸ್ಮಾರಕದಲ್ಲಿ ಕರಡಿ ಚಿತ್ರವಿದೆ)ಯೊಂದು ನೀರು ಕುಡಿಯಲು ಬರುತ್ತದೆ. ಅದನ್ನು ಗಮನಿಸಿದ ನಾಯಿ ಹಂದಿಯೊಡನೆ ಕಾದಾಡುತ್ತದೆ. ಹೋರಾಡುತ್ತಲೇ ಈ ಎರಡೂ ಪ್ರಾಣಿಗಳು ಹೊಂಡದಲ್ಲಿ ಬಿದ್ದು ಸತ್ತುಹೋಗುತ್ತವೆ. ನನ್ನ ಪ್ರೀತಿಯ ನಾಯಿ ಸತ್ತ ಮೇಲೆ ಯಾಕೆ ನಾನು ಇರಬೇಕೆಂದು ಅಜ್ಜ ನಿರ್ಧರಿಸಿ ಬಂದೂಕು ಮತ್ತು ಚಪ್ಪಲಿಯನ್ನು ಬದುವಿನ ಮೇಲೆ ಬಿಟ್ಟು, ಹೊಂಡದಲ್ಲಿ ಬಿದ್ದು ಮಡಿಯುತ್ತಾನೆ. ಆಗ ಅಜ್ಜಿ ನನ್ನ ಯಜಮಾನ ಯಾಕೆ ಇನ್ನೂ ಬರಲಿಲ್ಲವೆಂದು ಹುಡುಕಿಕೊಂಡು ಆ ಸ್ಥಳಕ್ಕೆ ಹೋಗುತ್ತಾಳೆ. ಬಂದೂಕು ಮತ್ತು ಚಪ್ಪಲಿ ಮೇಲಿರುವುದನ್ನು ಗಮನಿಸಿದ ಅಜ್ಜಿ ತನ್ನ ಗಂಡ ಸತ್ತಿರುವನೆಂದು ಹೊಂಡದಲ್ಲಿ ಬಿದ್ದು ತಾನು ಸಾಯುತ್ತಾಳೆ. ಕೆಲವು ದಿನಗಳ ನಂತರ ಗ್ರಾಮದವರೊಬ್ಬರ ಕನಸಲ್ಲಿ ಬಂದು ನಮಗೆ ಶಿಲ್ಪಗಳನ್ನು ಮಾಡಿ ಹಿರಿಯರೆಂದು ಪೂಜಿಸಬೇಕು ಎಂದು ಹೇಳಿದ್ದರಿಂದ ಈ ಶಿಲ್ಪಗಳನ್ನು ಕೆತ್ತಿ ಪೂಜೆ ಮಾಡಿಕೊಂಡು ಬರಲಾಗುತ್ತದೆ" ಎಂದು ಹೇಳುತ್ತಾರೆ.[೨೨೫]

ಉಲ್ಲೇಖಿತ ಕಥೆಯನ್ನು ಹೀಗೆ ಅರ್ಥೈಸಬಹುದು. ಮೊದಲನೆಯದಾಗಿ ಈ ಘಟನೆ ನಡೆದಿರುವುದು ಹಂದಿಯೊಂದಿಗೆ ಅಲ್ಲ, ಕರಡಿಯೊಂದಿಗೆ; ಇದು ಶಿಲ್ಪದ ಲಕ್ಷಣದಿಂದ ಸ್ಪಷ್ಟವಾಗುತ್ತದೆ. ಎರಡನೆಯದಾಗಿ ಮೊದಲ ನಾಯಿ ಕರಡಿ ದಾಳಿಗೆ ಒಳಗಾಗಿ ಮಡಿದಿದೆ, ಅನಂತರ ವೀರನೂ ಕೂಡ ಅದರೊಂದಿಗೆ ಮಡಿದಿರಬಹುದು. ಮೂರನೆಯದಾಗಿ, ಚಿಕ್ಕಣ್ಣನು ಹೋರಾಟದಲ್ಲಿ ಮಡಿದಾಗ ಆತನ ದೇಹದೊಂದಿಗೆ ಪತ್ನಿಯೂ ಸಹಗಮನಗೊಂಡಿರಬೇಕು. ಈ ಎಲ್ಲಾ ವಿವರಗಳನ್ನು ಒಂದೇ ಸ್ಮಾರಕದಲ್ಲಿ ಚಿತ್ರಿಸಲು ಶಿಲ್ಪಿಗೆ ಶಿಲೆಯ ಅಭಾವವಾಗಿರಬೇಕು. ಅದಕ್ಕಾಗಿ ಅವನು ಏಕಕಾಲಕ್ಕೆ ಸಂಭವಿಸಿರುವ ಈ ಘಟನೆಯನ್ನು ಎರಡು ಪ್ರತ್ಯೇಕವಾದ ಬೆಣಚು ಶಿಲೆಯಲ್ಲಿ ಚಿತ್ರಿಸಿದ್ದಾನೆ. ಬೆಣಚುಕಲ್ಲು ಹಾಗೂ ಕೆತ್ತನೆ ಶೈಲಿಯಿಂದ ಈ ಘಟನೆ ಕ್ರಿ.ಶ. ೧೭–೧೮ನೇ ಶತಮಾನದಲ್ಲಿ ನಡೆದಿರಬಹುದೆಂದು ಊಹಿಸಬಹುದು.

ಇಲ್ಲಿರುವ ಒಂದು ಶಿಲೆಯಲ್ಲಿ ಕರಡಿ ಮತ್ತು ನಾಯಿಯನ್ನು ಕೆತ್ತಲಾಗಿದೆ. ಕರಡಿ ತಲೆಯನ್ನು ಬಾಗಿಸಿಕೊಂಡು ಚಲಿಸುತ್ತಿರುವಂತೆ, ಅದನ್ನು ನಾಯಿ ಬೆನ್ನಟ್ಟಿರುವುದನ್ನು ಕಂಡರಿಸಲಾಗಿದೆ. ನಾಯಿ ತನ್ನ ಬಾಲವನ್ನು ಮೇಲಕ್ಕೆತ್ತಿರುವಂತೆ ಕೆತ್ತಲಾಗಿದೆ. ಇದರಿಂದ ನಾಯಿಯು ಕರಡಿಯನ್ನು ಸಮರ್ಥವಾಗಿ ಎದುರಿಸಿರುವುದು ಕಂಡುಬರುತ್ತದೆ. ಮತ್ತೊಂದು ಸ್ಮಾರಕದಲ್ಲಿ ವೀರ ಹಾಗೂ ಆತನ ಪತ್ನಿಯನ್ನು ಕಂಡರಿಸಲಾಗಿದೆ. ವೀರನು ಬಲಗೈಯಲ್ಲಿ ಕತ್ತಿ ಹಿಡಿದು, ಮತ್ತೊಂದು ಕೈಯಿಂದ ತನ್ನ ಎದೆಯ ಎಡಭಾಗವನ್ನು ಹಿಡಿದುಕೊಂಡಂತೆ ಕೆತ್ತಲಾಗಿದೆ. ಪ್ರಾಯಶಃ ಕರಡಿ ವೀರನ ಎದೆಯನ್ನು ಬಗೆದು ಕೊಂದಿರಬಹುದು. ವೀರನ ಎಡಭಾಗದಲ್ಲಿ

ಸತಿಯು ಬಲಗೈಯನ್ನು ಮೇಲಕ್ಕೆತ್ತಿ, ಮತ್ತೊಂದು ಕೈಯಲ್ಲಿ ಕಳಸ ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಎರಡು ಸ್ಮಾರಕಗಳನ್ನು ಗಮನಿಸಿ ಹೇಳುವುದಾದರೆ ಕರಡಿಯೊಂದಿಗೆ ಹೋರಾಡಿ ಮಡಿದ ನಾಯಿ ಹಾಗೂ ವೀರನ ಎರಡು ಸ್ಮಾರಕಶಿಲ್ಪಗಳು ಕಂಡುಬಂದಿರುವುದು ವಿಶೇಷವಾಗಿದೆ. ಇದರೊಂದಿಗೆ ಮೊದಲ ಬಾರಿಗೆ ವಿಶಿಷ್ಟವಾದ ಸ್ಮಾರಕಶಿಲ್ಪಗಳನ್ನು ಇಲ್ಲಿ ಶೋಧಿಸಿದಂತಾಗಿದೆ.

**ಗೂಳಿಯೊಡನೆ ಹೋರಾಡಿ ಮಡಿದ ವೀರರ ಸ್ಮಾರಕ ಶಿಲ್ಪಗಳು**

ಗೂಳಿಯನ್ನು ಪಳಗಿಸಲು ಹೋಗಿ ಅದರೊಂದಿಗೆ ಹೋರಾಡಿ ಮಡಿದ ವೀರನ ಸ್ಮಾರಕಶಿಲ್ಪಗಳು ಜಿಲ್ಲೆಯಲ್ಲಿ ವಿಶೇಷವಾಗಿ ಕಂಡುಬಂದಿವೆ. ಇಂತಹ ಸ್ಮಾರಕಗಳು ಕರ್ನಾಟಕದ ಯಾವುದೇ ಭಾಗದಲ್ಲಿ ಈವರೆಗೆ ದೊರೆತ ಉದಾಹರಣೆಗಳಿಲ್ಲ. ಆಲೂರು ಗ್ರಾಮದ ಕ್ರಿ.ಶ. ೧೨೦೦ರ ಒಂದು ಸ್ಮಾರಕಶಿಲ್ಪದಲ್ಲಿ ಗೂಳಿಯೊಂದು ಹಲವರನ್ನು ಕೊಂದ ವಿಷಯವಿದೆ. ಆ ಗೂಳಿಯೊಡನೆ ಅಲ್ಲಿಯ ಭೂಮಾದ ಸೆಟ್ಟಿ ಹಾಗೂ ಆತನ ಮಗ ನಾದಿಯಣ್ಣ ಎಂಬುವರು ಹೋರಾಡಿ ಮಡಿಯುತ್ತಾರೆ. ಆಗ ಅವನ ಮಕ್ಕಳಾದ ಬೊಮ್ಮಯ್ಯ ಹಾಗೂ ನಾಗಯ್ಯ ವೀರಗಲ್ಲನ್ನು ಹಾಕಿಸಿದ ವಿಷಯ ತಿಳಿಯುತ್ತದೆ.[೨೨೬] ಗೂಳಿಯನ್ನು ಪಳಗಿಸಲು ಹೋಗಿ ಮಡಿದ ವೀರನ ಮತ್ತೊಂದು ಸ್ಮಾರಕ ಸಿದ್ಧಮ್ಮನಹಳ್ಳಿಯಲ್ಲಿ ಕಂಡುಬರುವುದು. ಈ ಶಿಲ್ಪದಲ್ಲಿ ನಿಂತಿರುವ ಗೂಳಿಯನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಅದರ ಮುಂದೆ ಕತ್ತಿಯನ್ನು ಹಿಡಿದಿರುವ ವೀರ ಬಲಗಾಲು ಮಂಡಿಯನ್ನು ಊರಿ ನಿಂತಿರುವಂತೆ ಕೆತ್ತಲಾಗಿದೆ. ಗೂಳಿಯ ಕಾಲುಗಳಿಗೆ ದಪ್ಪವಾಗಿರುವ ಕಡಗ ಹಾಗೂ ಅದರ ಬಾಯಿ ಸುತ್ತ ಹಗ್ಗ ಕಟ್ಟಿರುವುದು ಕಂಡುಬರುತ್ತದೆ. ಅದನ್ನು ಪಳಗಿಸಲು ಅವುಗಳನ್ನು ಹಾಕಿದ್ದರೋ ಅಥವಾ ಅದೊಂದು ದೇವರಿಗೆ ಬಿಟ್ಟ ಗೂಳಿ ಎಂದು ಸೂಚಿಸಲು ಶಿಲ್ಪಿ ಆ ರೀತಿ ಶೃಂಗರಿಸಿದ್ದಾನೋ ತಿಳಿಯದು. ಸ್ಥಳೀಯವಾಗಿ ಅದನ್ನು ಕತ್ತೆ ಕಲ್ಲು ಎಂದು ಕರೆಯುತ್ತಾರೆ.

**ಹಾವು ಬೇಟೆಯಲ್ಲಿ ಮಡಿದ ವೀರರ ಸ್ಮಾರಕ ಶಿಲ್ಪಗಳು**

ಹಾವನ್ನು ಬೇಟೆಯಾಡಲು ಹೋದ ಅಥವಾ ಅದರಿಂದ ಕಚ್ಚಿಸಿಕೊಂಡು ಮಡಿದ ವಿಷಯವನ್ನು ತಿಳಿಸುವ ಸ್ಮಾರಕಶಿಲ್ಪಗಳು ಕಂಡುಬರುವುದು ಅತಿ ವಿರಳ. ಈ ಹಾವಿನ ಬೇಟೆ ಶಿಲ್ಪಗಳ ಬಗ್ಗೆ ಈಗಾಗಲೇ ವಿದ್ವಾಂಸರಾದ ಆರ್. ಶೇಷಶಾಸ್ತ್ರಿ ಹಾಗೂ ಡಿ.ವಿ. ಪರಮಶಿವಮೂರ್ತಿ ಅವರು ತಮ್ಮ ಗ್ರಂಥಗಳಲ್ಲಿಯೂ ಚರ್ಚಿಸಿದ್ದಾರೆ. 'ಸರ್ಪವನ್ನು ಕೊಲ್ಲಲು ಹೋಗಿ ಅದರಿಂದ ಕಚ್ಚಿಸಿಕೊಂಡು ವೀರನು ಮೃತನಾಗಿರಬೇಕು. ಅಥವಾ ಅನ್ಯಕಾರ್ಯದಲ್ಲಿ ಮಗ್ನನಾಗಿದ್ದಾಗ ಹಾವು ಕಚ್ಚಿ ಮಡಿದಿರಬೇಕೆಂದು' ವಿದ್ವಾಂಸರೊಬ್ಬರು ಅಭಿಪ್ರಾಯಿಸಿದ್ದಾರೆ.[೨೨೭] ಮತ್ತೊಬ್ಬ ವಿದ್ವಾಂಸರು ಈ ಶಿಲ್ಪಗಳು ಒಂದು ಸಮುದಾಯದ ಕುಟುಂಬ ಅಥವಾ ಗೋತ್ರವನ್ನು ಮಾತ್ರ ಸೂಚಿಸುತ್ತವೆ ಎಂದಿದ್ದಾರೆ. ಅದಕ್ಕೆ ಅವರು ನೀಡುವ ಸಮರ್ಥನೆ ಹೀಗಿದೆ. 'ದೊಡ್ಡ ಹುಲ್ಲೂರಿನ ವೀರರ ಗುಡಿಯಲ್ಲಿ ನೂರಕ್ಕೂ ಹೆಚ್ಚು ವೀರಗಲ್ಲುಗಳಿವೆ. ಅವುಗಳನ್ನು ಮೂವತ್ತಾರು ಗುಂಪುಗಳಾಗಿಯೂ ವಿಂಗಡಿಸಲಾಗಿದೆ. ಇದು ಕುರುಬ ಜನಾಂಗದ ಸುಮಾರು ೬೦೦ ಕುಟುಂಬಗಳಿಗೆ

ಸಂಬಂಧಿಸಿದ್ದಾಗಿದೆ. ವೀರಗಲ್ಲುಗಳ ೩೬ ಗುಂಪುಗಳಲ್ಲಿ ಒಂದು ಗುಂಪು ಅಥವಾ ಕುಟುಂಬದವರು ಸರ್ಪ ಗೋತ್ರದವರಾಗಿದ್ದಾರೆ. ಆ ಕುಟುಂಬದವರು ಮಾತ್ರ ಹಾವಿನ ಶಿಲ್ಪವಿರುವ ಕಲ್ಲನ್ನು ಪೂಜಿಸುತ್ತಾರೆ. ಈ ಹಿನ್ನೆಲೆಯಲ್ಲಿ ಹಾವಿನ ಶಿಲ್ಪವಿರುವುದು ಅವರ ಕುಟುಂಬವನ್ನು ಅಥವಾ ಗೋತ್ರವನ್ನು ಮಾತ್ರ ಸೂಚಿಸುತ್ತದೆ. ಇದರ ಸಂಕೇತವಾಗಿ ಹಾವಿನ ಚಿತ್ರವನ್ನು ಚಿತ್ರಿಸಿರುತ್ತಾರೆ. ಇದರಿಂದಾಗಿ ವೀರರ ಕುಟುಂಬ ಅಥವಾ ವೀರನು ಸರ್ಪ ಗೋತ್ರದವರೆಂದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಆ ಶಿಲ್ಪಗಳು ಕುಟುಂಬ ಮೂಲವನ್ನು ಸೂಚಿಸುತ್ತವೆಯೇ ಹೊರತು ಹಾವಿನ ಬೇಟೆ ಶಿಲ್ಪಗಳಲ್ಲ' ಎಂದು ತರ್ಕಿಸಿದ್ದಾರೆ.[೨೨೮] ಆದರೆ ವಿದ್ವಾಂಸರ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಿಲ್ಲ. ಸರ್ಪ ಗೋತ್ರದವರು ಪೂಜಿಸುತ್ತಾರೆ ಎಂದಮಾತ್ರಕ್ಕೆ ಅವು ಕುಟುಂಬದ ಮೂಲವನ್ನು ಸೂಚಿಸುತ್ತವೆಂಬ ತೀರ್ಮಾನಕ್ಕೆ ಬರುವುದು ಸಮಂಜಸವಲ್ಲವೆಂದು ತೋರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದ ಮಾದಿಹಳ್ಳಿ, ಯಡಿಹಳ್ಳಿ, ನಿಬಗೂರು ಮತ್ತು ನೀರ್ಥಡಿ ಗ್ರಾಮಗಳಲ್ಲಿ ಹಾವು ಬೇಟೆ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಈ ನಾಲ್ಕು ಗ್ರಾಮಗಳಲ್ಲಿ ಕುರುಬ ಸಮುದಾಯದವರು ಇದ್ದಾಗಿಯೂ ಸರ್ಪ ಗೋತ್ರದವರು ಇಲ್ಲದಿರುವುದು ವಿಶೇಷವಾಗಿದೆ. ಅಲ್ಲದೇ ಉಳಿದ ಗೋತ್ರದ ಕುರುಬರು ಸಹ ಆ ಶಿಲ್ಪಗಳನ್ನು ಪೂಜಿಸುವುದು ಕಂಡುಬರುವುದಿಲ್ಲ. ಮಾದಿಹಳ್ಳಿ, ನಿಬಗೂರು, ನೀರ್ಥಡಿಯಲ್ಲಿರುವ ಸ್ಮಾರಕಗಳು ಅನಾಥವಾಗಿ ಬಿದ್ದಿದ್ದರೆ, ಯಡಿಹಳ್ಳಿ ಗ್ರಾಮದಲ್ಲಿ ಮಾತ್ರ ನಾಯಕ ಸಮುದಾಯದವರು ಪೂಜಿಸುವುದು ಕಂಡುಬರುತ್ತದೆ. ಸೊರಬ ತಾಲೂಕು ದೂಗೂರು ಗ್ರಾಮದ ಕ್ರಿ.ಶ. ೧೩೮೮ರ ಮಾಸ್ತಿಗಲ್ಲೊಂದು ೧೩೧೦ ವಿಭವ ಸಂವತ್ಸರದಂದು ಮುಟ್ಟುಗುಪ್ಪೆಯ ಚಿಕ್ಕಗೊಂಡನ ಮಗ ದೇವಯನಯ್ಕ ಸರ್ಪದುಷ್ಟವಾದಲ್ಲಿ ಆತನ ಸತಿ ಮುದ್ದೊನಕೆತಿ ಮಹಾಸತಿಯಾಗಿ ವಯಕುಂಟ ಪ್ರಾಪ್ತಿಯಾದಳೆಂದು ಉಲ್ಲೇಖಿಸುತ್ತದೆ. ಇಲ್ಲಿ ಹಾವು ಕಚ್ಚಿ ಮಡಿದ ವೀರನ ಪತ್ನಿ ಸತಿ ಹೋಗಿರುವುದು ತಿಳಿಯುತ್ತದೆ.[೨೨೯] ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಆ ಸ್ಮಾರಕಶಿಲ್ಪಗಳು ಕುಟುಂಬದ ಮೂಲ ಅಥವಾ ಗೋತ್ರವನ್ನು ಸೂಚಿಸುವುದಿಲ್ಲವೆಂದು ತೋರುತ್ತದೆ. ಬದಲಾಗಿ ರಾಜ ಮನೆತನಗಳಲ್ಲಿ ಮೋಜಿಗಾಗಿ, ಕಾಲಾಯಾಪನೆಗಾಗಿ ಅಥವಾ ತಮ್ಮ ಶೌರ್ಯ ಪ್ರದರ್ಶನಕ್ಕಾಗಿ ಬೇಟೆಯಾಡುತ್ತಿದ್ದ ವಿಷಯ ನಮಗೆ ತಿಳಿದೇ ಇದೆ. ಹಾಗಾಗಿ ಅರಸುಮನೆತನಗಳಿಗೆ ಸೇರಿದ ವೀರರು ಬೇಟೆಯಾಡಲು ತೆರಳಿ ಅದರಲ್ಲಿ ಮಗ್ನನಾಗಿದ್ದಾಗ ಆಕಸ್ಮಿಕವಾಗಿ ಹಾವು ಕಚ್ಚಿ ವೀರರು ಮಡಿದಿರಬಹುದು. ಅವನ ವೀರತ್ವದಿಂದ ಉಪಕೃತರಾಗಿದ್ದ ಜನ ಅಥವಾ ಆಡಳಿತದ ಪ್ರಮುಖರು ಅವನಿಗಾಗಿ ಸ್ಮಾರಕಶಿಲ್ಪಗಳನ್ನು ನೆಟ್ಟಿರುವ ಸಾಧ್ಯತೆಯಿದೆ. ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ಸ್ಮಾರಕಶಿಲ್ಪಗಳಲ್ಲಿನ ಉಡುಪು, ಆಭರಣ ಮತ್ತು ಆಯುಧಗಳು ಆ ವೀರರ ವೀರತ್ವವನ್ನು ಅರ್ಥೈಸುತ್ತಿವೆ. ವೀರನು ಹಾವು ಕಚ್ಚಿ ಮಡಿದನೆಂದು ತೋರಿಸಲು ಶಿಲ್ಪಿ ಸ್ಮಾರಕದ ಯಾವುದಾದರೂ ಒಂದು ಮೂಲೆಯಲ್ಲಿ ಅದನ್ನು ಸಾಂಕೇತಿಕವಾಗಿ ತೋರಿಸಿರುವುದು ತಿಳಿಯುತ್ತದೆ. ಪ್ರಸ್ತುತ

ದಿನಮಾನಗಳಲ್ಲೂ ಸಹ ಹಾವು ಕಚ್ಚಿ ಮಡಿದವರ ವಿಷಯಗಳನ್ನು ನಾವು ಆಗಾಗ ಕೇಳುತ್ತೇವೆ. ಆಧುನಿಕ ಕಾಲಘಟ್ಟದಲ್ಲೇ ಹೀಗಾದರೆ ಇನ್ನು ಹಿಂದಿನ ದಿನಗಳಲ್ಲಿ ಅದಕ್ಕೆ ತಕ್ಷಣ ಚಿಕಿತ್ಸೆ ದೊರೆತಿತೇ? ಹಾಗಾಗಿ ಇಂತಹ ಸ್ಮಾರಕಶಿಲ್ಪಗಳು ಹಾವು ಕಚ್ಚಿ ಮಡಿದಿರುವ ವೀರರನ್ನು ನೆನಪಿಸುತ್ತೇವೆ ಎಂಬುದು ನನ್ನ ಅಭಿಪ್ರಾಯವಾಗಿದೆ.

ಯಡಿಹಳ್ಳಿಯ ಗುಡಿಯಲ್ಲಿರುವ ಒಂದು ಸ್ಮಾರಕಶಿಲ್ಪದಲ್ಲಿ ವೀರನೊಬ್ಬನು ಬಲಗೈಯಲ್ಲಿ ಕತ್ತಿ, ಮತ್ತೊಂದು ಕೈಯಲ್ಲಿ ಬಂದೂಕು ಹಿಡಿದು ನಿಂತಿದ್ದಾನೆ. ಅವನ ಎಡಭಾಗದಲ್ಲಿ ಸ್ಮಾರಕದಿಂದ ಹೊರಬಂದಿರುವ ಪಟ್ಟಿಯಲ್ಲಿ ಹಾವೊಂದು ಹೆಡೆಯನ್ನು ಬಿಚ್ಚಿರುವಂತೆ ಕೆತ್ತಲಾಗಿದೆ. ಮಾದಿಹಳ್ಳಿಯ ಒಂದು ವೀರಮಾಸ್ತಿ ಕಲ್ಲಿನಲ್ಲಿ ವೀರನು ಎಡಗೈಯಲ್ಲಿ ಬಾಕುವೊಂದನ್ನು ಹಿಡಿದು, ಬಲಗೈಯನ್ನು ಸತಿಯ ಕಡೆ ಚಾಚಿದ್ದಾನೆ. ಅವನ ಪಕ್ಕದಲ್ಲಿರುವ ಸತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು, ಬಲಗೈಯನ್ನು ವೀರನ ಕಡೆ ಚಾಚಿ ನಿಂತಿರುವಂತೆ ಕೆತ್ತಲಾಗಿದೆ. ಸ್ಮಾರಕದ ಎಡಭಾಗ ಅಂಚಿನ ಪಟ್ಟಿಯಲ್ಲಿ ಹೆಡೆ ಬಿಚ್ಚಿರುವ ಹಾವನ್ನು ಚಿತ್ರಿಸಲಾಗಿದೆ. ವೀರನ ಬಲಭಾಗದಲ್ಲಿ ಕುದುರೆಯೊಂದು ನಿಂತಿದೆ. ನಿಬಗೂರಿನ ವೀರಮಾಸ್ತಿಕಲ್ಲಿನಲ್ಲಿ ಅಶ್ವಾರೂಢನಾಗಿರುವ ವೀರನ ಕೈಯಲ್ಲಿ ಕಿರುಗತ್ತಿಯಿದೆ. ಅವನ ಬೆನ್ನ ಹಿಂದೆ ದೊಡ್ಡದಾದ ಹಾವೊಂದು ಹೆಡೆಯನ್ನು ಬಿಚ್ಚಿ ನಿಂತಿದೆ. ಕುದುರೆ ಮುಂದೆ ನಿಂತಿರುವ ಸತಿಯು ಎರಡು ಕೈಯಲ್ಲಿ ನಿಂಬೆಹಣ್ಣು ಹಿಡಿದು ಬಲಗೈಯನ್ನು ಮೇಲಕ್ಕೆತ್ತಿ ಹಿಡಿದಿರುವಳು. ನೀರ್ಥಡಿಯಲ್ಲಿರುವ ಮತ್ತೊಂದು ವೀರಮಾಸ್ತಿಕಲ್ಲಿನಲ್ಲಿ ವೀರನು ಬಿಲ್ಲುವಿಗೆ ಬಾಣವನ್ನು ಹೂಡಿ ನಿಂತಿದ್ದಾನೆ. ಅವನ ಬದಿಯಲ್ಲಿರುವ ಸತಿಯು ಬಲಗೈಯನ್ನು ಮೇಲಕ್ಕೆತ್ತಿ ನಿಂಬೆಹಣ್ಣು ಹಿಡಿದಿರುವಳು. ಇವರಿಬ್ಬರ ತಲೆಗಳ ಮಧ್ಯದಲ್ಲಿ ಹೆಡೆ ಬಿಚ್ಚಿಕೊಂಡಿರುವ ಹಾವೊಂದನ್ನು ಚಿತ್ರಿಸಲಾಗಿದೆ. ಈ ಸ್ಮಾರಕಶಿಲ್ಪಗಳಲ್ಲಿರುವ ಹಾವು ಆ ವೀರರನ್ನು ಕಡಿದು ಸಾಯಿಸಿರಬಹುದು. ಅವರ ಮರಣದ ನಂತರ ಅವರ ಸತಿಯರೂ ಸಹಗಮನಗೊಂಡಿರುವುದು ತಿಳಿಯುತ್ತದೆ. ಈ ಹೇಳಿಕೆಯನ್ನು ಸೊರಬ ತಾಲೂಕು ದೂಗೂರಿನ ಸತಿಗಲ್ಲು ಪುಷ್ಟೀಕರಿಸುತ್ತದೆ. ಮೇಲಿನ ಸ್ಮಾರಕಶಿಲ್ಪಗಳಲ್ಲಿ ಕಂಡುಬರುವ ಹಾವೆಂದರೆ ನಾಗರಹಾವು. ಅದು ನಾಗರಹಾವೆ ಎಂದು ಹೇಳಲು ಆ ಶಿಲ್ಪಗಳಲ್ಲಿರುವ ಹಾವು ಹೆಡೆಯನ್ನು ಅಗಲಿಸಿದಂತೆ ಚಿತ್ರಿತವಾಗಿರುವುದೇ ಸಾಕ್ಷಿಯಾಗಿದೆ.

**ಅಡಿಟಿಪ್ಪಣಿಗಳು**

೧. ಮಂಜುನಾಥ ಸಿ.ಯು., ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೩೮೮.

೨. ಚಿದಾನಂದಮೂರ್ತಿ ಎಂ., ೨೦೧೫, ಕ.ಶಾ.ಸಾ.ಅ., ಪು. ೨೭೨.

೩. ಶೇಷಶಾಸ್ತ್ರಿ ಆರ್., ೨೦೧೭, ಕರ್ನಾಟಕದ ವೀರಗಲ್ಲುಗಳು, ಪು. ೨೨.

೪. ಸಂಕ್ಷಿಪ್ತ ಕನ್ನಡ ನಿಘಂಟು, ೨೦೧೬, ಪು. ೧೧೭೬-೧೧೭೭.

೫. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೨೭೨.

೬. ಹಿರೇಮಠ ಎಸ್.ಎಂ., ೧೯೯೮, ಶಾಸನಾಧ್ಯಯನ, ಪು. ೪೫.

೭. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೨೭೮.

೮. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೩೭

೯. ಕಲಬುರ್ಗಿ ಎಂ.ಎಂ., ೨೦೧೧, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು. ೭೨.

೧೦. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೨೭೬.

೧೧. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೭೧.

೧೨. ಅದೇ, ಪು. ೭೨.

೧೩. ಅದೇ, ಪು. ೭೨.

೧೪. ಶ್ರೀ., ೨೦೧೬, ಗದಾಯುದ್ಧ ನಾಟಕಂ, ಪು. ೪.

೧೫. ಹಿರೇಮಠ ಎಸ್.ಎಂ., ೨೦೧೪, ಶಾಸನಾನುಸಂಧಾನ, ಪು. ೧೨೪.

೧೬. ಪಂಪಭಾರತ ೫.೭೫, ಕೆ.ವಿ. ಪುಟ್ಟಪ್ಪ

೧೭. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೭೩.

೧೮. ಪಂಪಭಾರತಂ ಆಶ್ವಾಸ ೧೦-ಪದ್ಯ ೩೯.

೧೯. ಎ.ಕ.ಸಂ.೫, ಹಾನಗಲ್ಲು, ಶಾ.ಸಂ. ೯೭, ಕ್ರಿ.ಶ. ೧೧೪೧ ಹಾಗೂ ಶೇಷಶಾಸ್ತ್ರಿ ಆರ್., ೨೦೦೫, ಶಾಸನ ಪರಿಚಯ, ಪು. ೨೦.

೨೦. S.I.I. IX(i), ಹರಪನಹಳ್ಳಿ ೩೮೬, ಕ್ರಿ.ಶ. ೧೨೯೨-೯೩ ಹಾಗೂ ತಿಪ್ಪೇರುದ್ರಸ್ವಾಮಿ ಎಚ್., ೨೦೧೫, ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ, ಪು. ೨೪೨.

೨೧. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೪೦-೧೪೧.

೨೨. ತಿಪ್ಪೇರುದ್ರಸ್ವಾಮಿ ಎಚ್., ೨೦೧೫, ಪೂರ್ವೋಕ್ತ, ಪು. ೨೪೦.

೨೩. ಮಂಜುನಾಥ ಎಂ.ಜಿ.(ಲೇ), ೨೦೧೧, ಮಾಸ್ತಿಗಲ್ಲು ವೀರಗಲ್ಲು ಮತ್ತು ನಿಸಿದಿ ಶಾಸನಗಳು, ಪು. ೧೪-೧೫.

೨೪. ಎ.ಕ.ಸಂ.೧೧, ಜಗಲೂರು, ಶಾ.ಸಂ. ೧೯, ಬಸವನಕೋಟೆ ಹಾಗೂ Rajan K., 2000, South Indian Memorial stones, P. 83.

೨೫. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೨೭೮.

೨೬. ಗಂಗನಾಯಕ್ ಕೆ.ಎನ್. (ಪ್ರಸಂ), ೨೦೧೧, ರಾಷ್ಟ್ರಕೂಟರ ಶಾಸನಗಳು, ಸಂ-೧, ಪು. ೪೧೦.

೨೭. ಅದೇ, ಪು. ೪೧೧.

೨೮. ಚನ್ನಬಸವಯ್ಯ ಹಿರೇಮಠ, ೨೦೧೪, ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು, ಪು. ೧೪೬.

೨೯. ಅದೇ, ಪು. ೯೭.

೩೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ.೨೧, ಸೊರಟೂರು.

೩೧. ಅದೇ, ಶಾ.ಸಂ. ೨೨, ಸೊರಟೂರು.

೩೨. ಚನ್ನಬಸವಯ್ಯ ಹಿರೇಮಠ, ೨೦೧೪, ಪೂರ್ವೋಕ್ತ, ಪು. ೨೦೯.

೩೩. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ.೨೩, ಸೊರಟೂರು.

೩೪. ಕೊಟ್ರೇಶ ಉತ್ತಂಗಿ ನಾ., ೨೦೧೩, ಹರಿಹರದೆಳೆಗಳು, ಪು. ೪೨೭.

೩೫. M.A.R., 1935/39, ಹಿರೇಕೋಗಲೂರು.

೩೬. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ೨೦೧೦, ದಾವಣಗೆರೆ ಜಿಲ್ಲೆ: ಇತಿಹಾಸದ ಕೆಲವು ಹೆಜ್ಜೆಗಳು, ಪು. ೫೮.

೩೭. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ.೯೯, ಬೇಲಿಮಲ್ಲೂರು.

೩೮. M.A.R., 1942/68.

೩೯. ಎ.ಕ.ಸಂ.೭, ಚನ್ನಗಿರಿ, ಶಾ.ಸಂ.೭, ತ್ಯಾವಣಿಗಿ.

೪೦. ಅದೇ, ಹೊನ್ನಾಳಿ ಶಾ.ಸಂ. ೩೦, ಚಿಕ್ಕಯರೆಹಳ್ಳಿ.

೪೧. ಅದೇ, ಶಾ.ಸಂ. ೩೧, ಚಿಕ್ಕಯರೆಹಳ್ಳಿ.

೪೨. ಅದೇ, ಶಾ.ಸಂ. ೬೬, ನ್ಯಾಮತಿ.

೪೩. ಅದೇ, ಶಾ.ಸಂ. ೬೭, ನ್ಯಾಮತಿ.

೪೪. ಎ.ಕ.ಸಂ.೧೧, ಜಗಲೂರು, ಶಾ.ಸಂ.೫, ಬಿಳಿಚೋಡು.

೪೫. ರಾಜಶೇಖರಪ್ಪ ಬಿ., ೨೦೦೧, ಇತಿಹಾಸ ಕಥನ, ಪು. ೧೨೮.

೪೬. ಎ.ಕ.ಸಂ.೧೧, ಜಗಲೂರು, ಶಾ.ಸಂ.೬, ಬಿಳಿಚೋಡು.

೪೭. ರಾಜಶೇಖರಪ್ಪ ಬಿ., ೨೦೧೧, ಪೂರ್ವೋಕ್ತ, ಪು. ೧೨೮-೧೨೯.

೪೮. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೯೨, ಶಾಮನೂರು.

೪೯. ಅದೇ, ಶಾ.ಸಂ. ೯೩, ಶಾಮನೂರು.

೫೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೩, ಹೊನ್ನಾಳಿ.

೫೧. ಅದೇ, ಚನ್ನಗಿರಿ, ಶಾ.ಸಂ. ೫೯, ಚನ್ನಗಿರಿ.

೫೨. ಅದೇ, ಶಾ.ಸಂ. ೫೩, ನೆಲ್ಲುದುರೆ.

೫೩. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೫, ವಾಸನ.

೫೪. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೭೩, ಕಂಚಿಗನಹಳ್ಳಿ.

೫೫. ಕ.ವಿ.ಶಾ.ಸಂ.೧, ೧೯೯೮, ಹರಪನಹಳ್ಳಿ, ಶಾ.ಸಂ. ೨೦೫, ಚಿಗಟೇರಿ.

೫೬. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೩೭, ಬಿಲ್ಲಹಳ್ಳಿ.

೫೭. ಅದೇ, ಹೊನ್ನಾಳಿ, ಶಾ.ಸಂ. ೯೮, ಬೇಲಿಮಲ್ಲೂರು.

೫೮. ಅದೇ, ಚನ್ನಗಿರಿ, ಶಾ.ಸಂ. ೩೬, ಬಿಲ್ಲಹಳ್ಳಿ.

೫೯. ಕೊಟ್ರೇಶ್ ಉತ್ತಂಗಿ ನಾ., ೨೦೧೩, ಪೂರ್ವೋಕ್ತ, ಪು. ೪೨೬-೪೨೭.

೬೦. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೩೭, ಮಾಯಕೊಂಡ.

೬೧. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೧೩, ಅರಕೆರೆ.

೬೨. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೫೦, ಅಲಗಿಲವಾಡ.

೬೩. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೩೮, ಹರಿಹರ.

೬೪. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೧೭, ಹನಗವಾಡಿ.

೬೫. ಅದೇ, ಶಾ.ಸಂ. ೨೬, ಚಿಕ್ಕಯರೆಹಳ್ಳಿ.

೬೬. ರಾಜಾರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್(ಸಂ), ೨೦೦೧, ಮಲೆಕರ್ನಾಟಕದ ಅರಸುಮನೆತನಗಳು, ಪು. ೧೨೧.

೬೭. ಅದೇ, ಪು. ೧೨೧.

೬೮. M.A.R., 1942/46.

೬೯. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೫೧, ಬೆಳಗುತ್ತಿ.

೭೦. ಚನ್ನಬಸವಯ್ಯ ಹಿರೇಮಠ, ೨೦೧೪, ಪೂರ್ವೋಕ್ತ, ಪು. ೨೦೯.

೭೧. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೩೮, ಬೆಳಗುತ್ತಿ.

೭೨. ಅದೇ, ಶಾ.ಸಂ. ೩೯, ಬೆಳಗುತ್ತಿ.

೭೩. ಅದೇ, ಶಾ.ಸಂ. ೪೧, ಬೆಳಗುತ್ತಿ.

೭೪. ಅದೇ, ಶಾ.ಸಂ. ೪೨, ಬೆಳಗುತ್ತಿ.

೭೫. ಅದೇ, ಶಾ.ಸಂ. ೪೪, ಬೆಳಗುತ್ತಿ.

೭೬. ಅದೇ, ಶಾ.ಸಂ. ೪೩, ಬೆಳಗುತ್ತಿ.

೭೭. ಅದೇ, ಶಾ.ಸಂ. ೫೪, ಕುಳ್ಳಹಳ್ಳಿ.

೭೮. ರಾಜರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್(ಸಂ), ೨೦೦೧, ಪೂರ್ವೋಕ್ತ, ಪು. ೧೩೪.

೭೯. ಎ.ಕ.ಸಂ. ೭, ಹೊನ್ನಾಳಿ, ಶಾ.ಸಂ. ೫೮, ಕುಳ್ಳಹಳ್ಳಿ.

೮೦. ಅದೇ, ಶಾ.ಸಂ. ೫೫, ಕುಳ್ಳಹಳ್ಳಿ.

೮೧. ಅದೇ, ಶಾ.ಸಂ. ೫೬, ಕುಳ್ಳಹಳ್ಳಿ.

೮೨. ಅದೇ, ಶಾ.ಸಂ. ೫೭, ಕುಳ್ಳಹಳ್ಳಿ.

೮೩. ಅದೇ, ಚನ್ನಗಿರಿ, ಶಾ.ಸಂ. ೨೪, ಹಿರೇಕೋಗಲೂರು.

೮೪. ಚನ್ನಬಸವಯ್ಯ ಹಿರೇಮಠ, ೨೦೧೪, ಪೂರ್ವೋಕ್ತ, ಪು. ೧೫೪.

೮೫. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೨೩, ಹಿರೇಕೋಗಲೂರು.

೮೬. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೮೩.

೮೭. ಎ.ಕ.ಸಂ. ೭, ಹೊನ್ನಾಳಿ, ಶಾ.ಸಂ. ೧೩, ಕುರುವದಗಡ್ಡೆ.

೮೮. ಚನ್ನಬಸವಯ್ಯ ಹಿರೇಮಠ, ೨೦೧೪, ಪೂರ್ವೋಕ್ತ, ಪು. ೧೯೮.

೮೯. ಕ.ವಿ.ಶಾ.ಸಂ.೧, ಹರಪನಹಳ್ಳಿ ಶಾ.ಸಂ. ೬೮, ಹಲುವಾಗಿಲು.

೯೦. ಅದೇ, ಶಾ.ಸಂ. ೫೬, ಕಡತಿ.

೯೧. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೮೮, ಗಂಗನರಸಿ.

೯೨. ಅದೇ, ಶಾ.ಸಂ. ೮೭, ಗಂಗನರಸಿ.

೯೩. ಅದೇ, ಶಾ.ಸಂ. ೮, ಬೇತೂರು.

೯೪. ಅದೇ, ಶಾ.ಸಂ. ೭೯, ಕೊಂಡಜ್ಜಿ.

೯೫. ಅದೇ, ಶಾ.ಸಂ. ೧೦೨, ಚಿಕ್ಕಬಿದರೆ.

೯೬. ಅದೇ, ಶಾ.ಸಂ. ೧೦೧, ಚಿಕ್ಕಬಿದರೆ.

೯೭. ಅದೇ, ಶಾ.ಸಂ. ೯, ಬೇತೂರು.

೯೮. ಅದೇ, ಶಾ.ಸಂ. ೧೦, ಬೇತೂರು.

೯೯. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೬೩, ನಿಟ್ಟೂರು.

೧೦೦. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೫೬, ಇಟಗಿ.

೧೦೧. ಎಂ.ಎ.ಆರ್., ೧೯೪೨-೪೭.

೧೦೨. ಎಂ.ಎ.ಆರ್., ೧೯೪೨, ಪು. ೬೯.

೧೦೩. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೭೨, ಕಂಚಿಗನಹಳ್ಳಿ.

೧೦೪. ಅದೇ, ಶಾ.ಸಂ. ೯೪, ಚಿಕ್ಕಹಾಲಿವಾಣ.

೧೦೫. ಸೇವನಾಯ್ಕ ಆರ್., ೨೦೧೫, ಹರಪನಹಳ್ಳಿ ಪರಿಸರದ ವೀರಗಲ್ಲು ಮತ್ತು ಮಾಸ್ತಿಗಲ್ಲುಗಳ ಅಧ್ಯಯನ(ಅಪ್ರಕಟಿತ ಎಂ.ಫಿಲ್. ನಿಬಂಧ), ಪು. ೩೯.

೧೦೬. ಚನ್ನಬಸಪ್ಪ ಎಸ್., ೨೦೦೭, ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ(ಅಪ್ರಕಟಿತ ಎಂ.ಫಿಲ್. ನಿಬಂಧ), ಪು. ೩೯.

೧೦೭. ಸೇವನಾಯ್ಕ ಆರ್., ೨೦೧೫, ಪೂರ್ವೋಕ್ತ, ಪು. ೪೧.

೧೦೮. ಸಿದ್ದಪ್ಪ ಜಿ., ೨೦೧೦, ಜಗಳೂರು ತಾಲೂಕು: ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೩೯೯-೪೦೦.

೧೦೯. ಮಲ್ಲೇಶಪ್ಪ ಪಿ., ೨೦೧೩, ಬಿಳಿಚೋಡು ಪರಿಸರದ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಎಂ.ಫಿಲ್. ನಿಬಂಧ), ಪು. ೫೧-೫೨.

೧೧೦. ಸಿದ್ದಪ್ಪ ಜಿ., ೨೦೧೦, ಪೂರ್ವೋಕ್ತ, ಪು. ೪೦೨.

೧೧೧. ಚನ್ನಬಸಪ್ಪ ಎಸ್., ೨೦೦೭, ಪೂರ್ವೋಕ್ತ, ಪು. ೩೯.

೧೧೨. ಅದೇ, ಪು. ೪೦.

೧೧೩. ಕನ್ನಡಪ್ರಭ ದಿನಪತ್ರಿಕೆ.

೧೧೪. ಕನ್ನಡಪ್ರಭ ದಿನಪತ್ರಿಕೆ, ೧೩.೧೦.೨೦೧೨, ಪು. ೩.

೧೧೫. ಸಿದ್ದಪ್ಪ ಜಿ., ೨೦೧೦, ಪೂರ್ವೋಕ್ತ, ಪು. ೪೦೧-೪೦೨.

೧೧೬. ಅದೇ, ಪು. ೩೯೮-೩೯೯.

೧೧೭. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೧೦.

೧೧೮. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೫೧.

೧೧೯. ಅದೇ, ಪು. ೨೬೪.

೧೨೦. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ೨೦೧೦, ಪೂರ್ವೋಕ್ತ, ಪು. ೧೦೮.

೧೨೧. ಪರಮಶಿವಮೂರ್ತಿ ಡಿ.ವಿ., ೨೦೧೧, ತುರುಗೋಳ್ ಸಂಕಥನ, ಪು. ೧೪.

೧೨೨. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೧೨.

೧೨೩. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೨೪.

೧೨೪. ಮಂಜುನಾಥ ಸಿ.ಯು., ೨೦೧೨, ಪೂರ್ವೋಕ್ತ, ಪು. ೪೧೨.

೧೨೫. ಗುರುಪ್ರಸಾದ್ ಟಿ.ಆರ್., ೨೦೦೭, ಗೋಗ್ರಹಣ: ಒಂದು ಅಧ್ಯಯನ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೪೬.

೧೨೬. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೭೬.

೧೨೭. ಕುಲಕರ್ಣಿ ಆರ್.ವಿ.(ಗದ್ಯಾನುವಾದ), ೨೦೧೫, ಸಾಹಸಭೀಮ ವಿಜಯಂ, ಪು. ೩೪.

೧೨೮. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೧೩.

೧೨೯. ಪರಮಶಿವಮೂರ್ತಿ ಡಿ.ವಿ., ೨೦೧೧, ಪೂರ್ವೋಕ್ತ, ಪು. ೧೮.

೧೩೦. ಕೊಟ್ರೇಶ್ ಉತ್ತಂಗಿ ನಾ., ೨೦೧೩, ಪೂರ್ವೋಕ್ತ, ಪು. ೪೨೭.

೧೩೧. ಗಂಗಾನಾಯಕ್ ಕೆ.ಎನ್.(ಪ್ರಸಂ.), ೨೦೧೧, ಪೂರ್ವೋಕ್ತ, ಪು. ೨೫೬.

೧೩೨. ಅದೇ, ಪೂರ್ವೋಕ್ತ, ಪು. ೬೨೯.

೧೩೩. ಜನತಾವಾಣಿ ಪತ್ರಿಕೆ, ದಾವಣಗೆರೆ, ೩.೭.೨೦೧೪.

೧೩೪. ಕೊಟ್ರೇಶ್ ಎಂ., ೨೦೧೭, ಬಾಗಳಿ ಅಪ್ರಕಟಿತ ತುಜೆಗೋಳ್ ವೀರಗಲ್ಲು ಶಾಸನ, ಇ.ದ.ಸಂ. ೩೩, ಪು. ೬೯-೭೧.

೧೩೫. ರಾಘವೇಂದ್ರಚಾರಿ ಎಂಬುವರ ಬಳಿಯಿರುವ ಅಪ್ರಟಿತ ಶಾಸನ.

೧೩೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೨, ಹೊನ್ನಾಳಿ.

೧೩೭. ಅದೇ, ಶಾ.ಸಂ. ೩, ಹೊನ್ನಾಳಿ.

೧೩೮. ಅದೇ, ಶಾ.ಸಂ. ೧, ಹೊನ್ನಾಳಿ.

೧೩೯. ರಾಜಾರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್(ಸಂ), ೨೦೦೧, ಪೂರ್ವೋಕ್ತ, ಪು. ೧೨೧ ಹಾಗೂ ಚನ್ನಬಸವಯ್ಯ ಹಿರೇಮಠ, ೨೦೧೪, ಪೂರ್ವೋಕ್ತ, ಪು. ೧೯೭.

೧೪೦. ಎ.ಕ.ಸಂ. ೭, ಹೊನ್ನಾಳಿ, ಶಾ.ಸಂ. ೬೫, ನ್ಯಾಮತಿ ಹಾಗೂ ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೨೪.

೧೪೧. ಅದೇ, ಹೊನ್ನಾಳಿ, ಶಾ.ಸಂ. ೧೧೦, ಅರಕೆರೆ.

೧೪೨. ಅದೇ, ಶಾ.ಸಂ. ೧೧೨, ಅರಕೆರೆ.

೧೪೩. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೨೪.

೧೪೪. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೦೨, ಚಿಕ್ಕಗೋಣಿಗೆರೆ.

೧೪೫. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ(ಸಂ), ೧೯೯೯, ಕರ್ನಾಟಕ ಶಾಸನಗಳು, ಸಂ.೨ ಬಳ್ಳಾರಿ ಜಿಲ್ಲೆಯ ಶಾಸನಗಳು, ಪು. ೧೨೫.

೧೪೬. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೫೪, ನಲ್ಲುದುರೆ.

೧೪೭. ಪರಮಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನಶಿಲ್ಪ, ಪು. ೭೯.

೧೪೮. ಎ.ಕ.ಸಂ. ೭, ಚನ್ನಗಿರಿ, ಶಾ.ಸಂ. ೫೫, ನಲ್ಲುದುರೆ.

೧೪೯. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೭೫, ದೇವರಬೆಳಕೆರೆ.

೧೫೦. ಅದೇ, ಶಾ.ಸಂ. ೭೬, ಬನ್ನಿಕೋಡು.

೧೫೧ ಅದೇ, ಶಾ.ಸಂ. ೧೬೯, ಆಲೂರು ಹಾಗೂ ರಾಜನ್ ಕೆ., ೨೦೦೦, ಪೂರ್ವೋಕ್ತ, ಪು. ೯೨.

೧೫೨. ಅದೇ, ಶಾ.ಸಂ. ೯೮, ಕಕ್ಕರಗೊಳ್ಳ.

೧೫೩. ಅದೇ, ಜಗಲೂರು, ಶಾ.ಸಂ. ೧೩, ಆಸಗೋಡು.

೧೫೪. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೧೧, ಅರಕೆರೆ.

೧೫೫. ಅದೇ, ಶಾ.ಸಂ. ೧೧೩, ಅರಕೆರೆ.

೧೫೬. ಅದೇ, ಶಾ.ಸಂ. ೧೧೪, ಅರಕೆರೆ.

೧೫೭. ಅದೇ, ಚನ್ನಗಿರಿ, ಶಾ.ಸಂ. ೪೫, ದೊಂದ್ರಘಟ್ಟ.

೧೫೮. ಅದೇ, ಹೊನ್ನಾಳಿ, ಶಾ.ಸಂ. ೨೭, ಚಿಕ್ಕಯರೆಹಳ್ಳಿ.

೧೫೯. ರಾಜಾರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್(ಸಂ), ೨೦೦೧, ಪೂರ್ವೋಕ್ತ, ಪು. ೧೨೨.

೧೬೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೩೫, ಬೆಳಗುತ್ತಿ.

೧೬೧. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೩೨

೧೬೨. ಎ.ಕ.ಸಂ. ೭, ಹೊನ್ನಾಳಿ, ಶಾ.ಸಂ. ೩೭, ಬೆಳಗುತ್ತಿ.

೧೬೩. ಅದೇ, ಶಾ.ಸಂ. ೪೦, ಬೆಳಗುತ್ತಿ.

೧೬೪. ಅದೇ ಶಾ.ಸಂ. ೨೮, ಚಿಕ್ಕಯರೆಹಳ್ಳಿ.

೧೬೫. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೭೭.

೧೬೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೪೮, ಬೆಳಗುತ್ತಿ.

೧೬೭. ಅದೇ, ಶಾ.ಸಂ. ೪೯, ಬೆಳಗುತ್ತಿ.

೧೬೮. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೮೨, ಕಡ್ಲಬಾಳು.

೧೬೯. ಸಿದ್ದಪ್ಪ ಜಿ., ೨೦೧೦, ಪೂರ್ವೋಕ್ತ, ಪು. ೪೦೭-೪೦೮.

೧೭೦. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೮೩.

೧೭೧. ಸೇವನಾಯ್ಕ ಆರ್., ೨೦೧೫, ಪೂರ್ವೋಕ್ತ, ಪು. ೫೧-೫೨.

೧೭೨. ಅದೇ, ಪು. ೪೯-೫೦.

೧೭೩. ಅದೇ, ಪು. ೫೩.

೧೭೪. ಅದೇ, ಪು. ೫೧.

೧೭೫. ರಮೇಶ ಹೆಚ್., ೨೦೧೭, ಹರಿಹರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೮೩.

೧೭೬. ಅದೇ, ಪು. ೧೮೨-೧೮೩.

೧೭೭. ಸಿದ್ದಪ್ಪ ಜಿ., ೨೦೧೦, ಪೂರ್ವೋಕ್ತ, ಪು. ೪೦೬.

೧೭೮. ಸೋಮಶೇಖರ್ ಎಸ್.ವೈ. (ಸಂ), ೨೦೧೦, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೪, ಜಗಲೂರು, ಪು. ೯೫.

೧೭೯. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೦೯.

೧೮೦. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೫೩, ಚಿರಸ್ತಹಳ್ಳಿ.

೧೮೧. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೫೩, ನಲ್ಕುದುರೆ.

೧೮೨. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೮೧, ಕಡ್ಲಬಾಳು.

೧೮೩. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೧೫.

೧೮೪. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೧೨.

೧೮೫. William Coclho, 1950, The Hoysala Vamsa, P. 259.

೧೮೬. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೫೭, ಹಿರೇಮಳಲಿ.

೧೮೭. ನಾಗರಾಜಪ್ಪ ಎಸ್., ೨೦೧೫, ಕುಂಬಳೂರು ಗ್ರಾಮದ ಅಪ್ರಕಟಿತ ತುರುಗೋಳ್ ಊರಳಿವಿನ ಸ್ಮಾರಕಗಳು, ಇ.ದ.ಸಂ. ೩೦, ಪು. ೬೪-೬೬

೧೮೮. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೫೦, ಅಲಗಿಲವಾಡ.

೧೮೯. ಗಾರ್ಪುರೆ ಜೆ.ಆರ್.(ಅನು), ೧೯೩೭, ಮಿತಾಕ್ಷರ ಆಚಾರ ಅಧ್ಯಾಯ, ಅಧ್ಯಾಯ-೧೩, ಶ್ಲೋಕ-೩೨೧, ಪು. ೫೮೩.

೧೯೦. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೧೭.

೧೯೧. ಗುಂಡ್ಮಿ ಚಂದ್ರಶೇಖರ ಐತಾಳ(ಅನು), ೨೦೦೩, ದುರ್ಗಸಿಂಹನ ಕರ್ಣಾಟಕ ಪಂಚತಂತ್ರಂ, ವಿಶ್ವಾಸ ಪ್ರಕರಣ, ಪು. ೨೯೩.

೧೯೨. ಅದೇ, ಪು. ೨೯೩.

೧೯೩. ಕಲಬುರ್ಗಿ ಎಂ.ಎಂ. (ಅನು), ಮಾನಸೋಲ್ಲಾಸ, ದ್ವಿತೀಯ ವಿಂಶತಿ, ಶ್ಲೋಕ ೫೪೦ ರಿಂದ ೫೪೯.

೧೯೪. ಎಂ.ಎ.ಆರ್., ೧೯೪೨-೪೬.

೧೯೫. ಎ.ಕ.ಸಂ.೧೫, ಹೊನ್ನಾಳಿ, ಶಾ.ಸಂ. ೯೦.

೧೯೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೪೨, ಬೆಳಗುತ್ತಿ.

೧೯೭. ಅದೇ, ಚನ್ನಗಿರಿ, ಶಾ.ಸಂ. ೪೦, ಕಾಶೀಪುರ.

೧೯೮. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೫೫, ಕಡತಿ.

೧೯೯. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೧೯೭.

೨೦೦. ಅದೇ, ಪು. ೧೯೯.

೨೦೧. ಪರಮಶಿವಮೂರ್ತಿ ಡಿ.ವಿ., ೨೦೧೦, ಪೆಣ್ಬುಯ್ಯಲ್, ಪು. ೨.

೨೦೨. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೮೦.

೨೦೩. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೦೬

೨೦೪. ಪರಮಶಿವಮೂರ್ತಿ ಡಿ.ವಿ., ೨೦೧೦, ಪೂರ್ವೋಕ್ತ, ಪು. ೨.

೨೦೫. ಭಗವತ್ ಶರಣ ಉಪಾಧ್ಯಾಯ(ಮೂಲ), ಪ್ರಧಾನ ಗುರುದತ್ತ(ಅನು), ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ಪು. ೧೯೬.

೨೦೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೪, ಹೊನ್ನಾಳಿ.

೨೦೭. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೦೦, ಚಿಕ್ಕಬಿದರೆ.

೨೦೮. ಯೋಗಾನಂದ ಎಸ್.ಕೆ., ೨೦೧೮, ಚನ್ನಗಿರಿ ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೦೯.

೨೦೯. ಪಾಟೀಲ ಎಚ್.ಎಸ್.(ಅನು), ೧೯೭೨, ಸಾರ್ಥವಾಹ, ಪು. ೫೭, ೭೨,೨೨೭.

೨೧೦. ನಾಗೇಗೌಡ ಎಚ್.ಎಲ್., ೧೯೯೮, ಪ್ರವಾಸಿ ಕಂಡ ಇಂಡಿಯಾ, ಸಂ.೧, ಪು. ೨೧೪.

೨೧೧. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೦೦.

೨೧೨. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೯೨.

## ಅಧ್ಯಾಯ: ಐದು

# ಆತ್ಮಬಲಿದಾನದ ಸ್ಮಾರಕ ಶಿಲ್ಪಗಳು: ಲೌಕಿಕ ಮತ್ತು ಧಾರ್ಮಿಕ

**ಅ. ಲೌಕಿಕ ಆತ್ಮಬಲಿದಾನದ ಸ್ಮಾರಕ ಶಿಲ್ಪಗಳು**

೫.೧. ಮಹಾಸತಿ(ಮಾಸ್ತಿ) ಮರಣ

೫.೧.೧. ಸತಿ ಪದ್ಧತಿಯ ಹುಟ್ಟು ಮತ್ತು ಬೆಳವಣಿಗೆ

೫.೧.೨. ಮಹಾಸತಿ ಆಚರಣೆ ವಿಧಗಳು

೫.೧.೨.೧. ಸಹಗಮನ ಪದ್ಧತಿ

೫.೧.೨.೧.೧. ಸಹಗಮನ ಸತಿ ಸ್ಮಾರಕ ಶಿಲ್ಪಗಳು

೫.೧.೨.೨. ಅನುಗಮನ ಪದ್ಧತಿ

೫.೧.೨.೨.೧ ಅನುಗಮನ ಸತಿ ಸ್ಮಾರಕ ಶಿಲ್ಪಗಳು

೫.೨. ವೆಳವಾಳಿ ಮರಣ

೫.೨.೧ ಕೀಳ್ಗುಂಟೆ

೫.೨.೨. ವೇಳವಾಳಿ

**ಆ. ಧಾರ್ಮಿಕ ಆತ್ಮಬಲಿದಾನದ ಸ್ಮಾರಕ ಶಿಲ್ಪಗಳು**

೫.೩. ಹಿಂದೂ ಧಾರ್ಮಿಕ ಆತ್ಮಬಲಿದಾನ

೫.೪. ಜೈನ ಧಾರ್ಮಿಕ ಆತ್ಮಬಲಿದಾನ

# ಅಧ್ಯಾಯ: ಐದು

# ಆತ್ಮಬಲಿದಾನದ ಸ್ಮಾರಕ ಶಿಲ್ಪಗಳು: ಲೌಕಿಕ ಮತ್ತು ಧಾರ್ಮಿಕ

## ಆತ್ಮಬಲಿದಾನ

ಪ್ರಾಚೀನ ಕರ್ನಾಟಕದಲ್ಲಿ 'ಆತ್ಮಬಲಿದಾನ'ವು ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಯ ಮೌಲ್ಯವಾಗಿತ್ತು. ಧಾರ್ಮಿಕ ಬಲಿದಾನದ ಆಚರಣೆಯಿಂದಲೇ ಹಲವು ಆತ್ಮಬಲಿದಾನಗಳು ಹುಟ್ಟಿಗೆ ಕಾರಣವೆಂದು ವಿದ್ವಾಂಸರ ಅಭಿಮತವಾಗಿದೆ. ಬಲಿ ಕೊಡುವುದು ಎಂದರೆ ಅರ್ಪಣೆ ಮಾಡುವುದು, ವಸ್ತುಗಳನ್ನು, ಸಂಪತ್ತೆಂದು ಪರಿಗಣಿಸಿದ್ದೆಲ್ಲವನ್ನು ಅರ್ಪಿಸುವುದು ಎಂಬರ್ಥಗಳಿವೆ. ಈ ಬಲಿ ಅಥವಾ ಅರ್ಪಿಸುವಿಕೆ ಎನ್ನುವುದು ಪ್ರಾಚೀನ ಕಾಲದಲ್ಲಿ ದೇವರಿಗೆ ಪ್ರೀತ್ಯರ್ಥವಾಗಲಿ ಎಂಬ ಕಾರಣಕ್ಕೆ ಮಾನವ ಪ್ರಾಣಿಬಲಿ ಕೊಡುತ್ತಿದ್ದನು. ಹೀಗೆ ಬಲಿ ಕೊಡುವುದರಿಂದ ದೇವರು ತೃಪ್ತನಾಗುತ್ತಾನೆ ಹಾಗೂ ನಮ್ಮ ಬಯಕೆಗಳು ಈಡೇರುತ್ತವೆ ಎಂಬ ನಂಬಿಕೆ ಮಾನವನದ್ದಾಗಿತ್ತು. ಈ ಉತ್ಕೃಷ್ಟ ನಂಬಿಕೆಯೇ ದೇವರನ್ನು ತೃಪ್ತಿಪಡಿಸಲು ಪ್ರಾಣಿಗಳಂತೆ ತನ್ನನ್ನೇ ಬಲಿ ಕೊಡುವುದಕ್ಕೆ ಮೂಲ ಕಾರಣವಿರಬೇಕೆಂದು ತೋರುತ್ತದೆ. ತನ್ನನ್ನು ತಾನು ಹತ್ಯೆ ಮಾಡಿಕೊಳ್ಳುವುದು ಸಾಮಾನ್ಯವಾದ ವಿಚಾರವಲ್ಲ. ಆದರೂ ಧಾರ್ಮಿಕ ಭಾವನೆಗಳು ಎಷ್ಟೊಂದು ಬಲವಾಗಿದ್ದವು, ಅವುಗಳೆಂದರೆ ಮನುಷ್ಯ ಎಷ್ಟು ಕಟಿಬದ್ಧವಾದ ನಂಬಿಕೆಯನ್ನಿಟ್ಟುಕೊಂಡಿದ್ದ ಎಂಬುದು ಇಲ್ಲಿ ಗೋಚರವಾಗುತ್ತದೆ.

'ಆತ್ಮಹತ್ಯೆ' ಹಾಗೂ 'ಆತ್ಮಬಲಿ' ಎರಡು ಭಿನ್ನವಾಗಿವೆ. ಆತ್ಮಹತ್ಯೆಗೆ ಅಶಕ್ತ ಮನಸ್ಸು ಮುಖ್ಯವಾಗುತ್ತದೆ. ಒಬ್ಬ ವ್ಯಕ್ತಿ ವೈಯಕ್ತಿಕ ನಿರ್ಧಾರದಿಂದ ತನ್ನ ಬದುಕನ್ನು ತಾನಾಗಿ ಕೊನೆಗೊಳಿಸಿಕೊಳ್ಳುವುದು 'ಆತ್ಮಹತ್ಯೆ'(Soicide) ಎಂದು ಕರೆಯಲಾಗಿದೆ. ಇಲ್ಲಿ ತನ್ನ ಬದುಕನ್ನು ಕೊನೆಗೊಳಿಸಿಕೊಳ್ಳುವುದಕ್ಕಿಂತ ದೊಡ್ಡ ಧ್ಯೇಯ ಇರಲಾರದು. ಇದಕ್ಕೆ ಧರ್ಮ, ಸಮಾಜ ಮತ್ತು ಕಾನೂನುಗಳ ಸಮ್ಮತಿ ಇರುವುದಿಲ್ಲ. ಎರಡನೆಯದಾಗಿ ವ್ಯಕ್ತಿಯೊಬ್ಬ ತನಗೆ ಅತ್ಯಂತ ಪ್ರಿಯವಾದ ಪ್ರಾಣದ ಆಸೆಯನ್ನು ತೊರೆದು ತಾನು ನಂಬಿದ ಆದರ್ಶಕ್ಕೆ ಮತ್ತು ಉದಾತ್ತವೆಂದು ನಂಬಿದ ಭಾವನೆಗಾಗಿ ಬದುಕನ್ನು ತಾನಾಗಿ ಕೊನೆಗೊಳಿಸಿಕೊಳ್ಳುವುದು, ಇದಕ್ಕೆ ಧರ್ಮ ಮತ್ತು ಸಮಾಜದ ಸಮ್ಮತಿ ಇರುತ್ತದೆ. ಇದು ಅಜ್ಞಾತವಾಗಿ ಆತ್ಮಹತ್ಯೆಯಂತೆ ಮರೆಯಲ್ಲಿ ನಡೆಯುವುದಾಗಿರದೆ

ಸಾರ್ವಜನಿಕವಾಗಿ ನಡೆಯುವಂತಹುದಾಗಿದೆ. ಇದನ್ನು 'ಆತ್ಮಬಲಿ' ಅಥವಾ 'ದೇಹತ್ಯಾಗ'(Self immolation) ಎಂದು ಕರೆದಿರುವುದುಂಟು. ಆತ್ಮಬಲಿದಾನದಿಂದ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂದು ನಮ್ಮ ಪ್ರಾಚೀನರ ನಂಬಿಕೆಯಾಗಿತ್ತು. ನಮ್ಮ ಪೂರ್ವಜರು ಆತ್ಮಬಲಿದಾನಕ್ಕೆ ಧಾರ್ಮಿಕ ಲೇಪನವನ್ನು ಕೊಟ್ಟು ಅದನ್ನು ಸಮರ್ಥಿಸಿಕೊಂಡಿದ್ದಾರೆ. ಮುಖ್ಯವಾಗಿ ಒಡೆಯನ ಅನ್ನದ ಋಣಕ್ಕಾಗಿ, ದೇವರ ಹರಕೆಗಾಗಿ ಈ ಆತ್ಮಬಲಿದಾನಗಳು ನಡೆದಿವೆ. ಇಂಥ ಪದ್ಧತಿಯನ್ನು ಅನುಸರಿಸಿದವರ ಸ್ಮರಣಾರ್ಥವಾಗಿ ಸಮಾಜ ಅವರ ವೀರತ್ವದ ಉದಾತ್ತ ಕಾರ್ಯವೆಂದು ಭಾವಿಸಿ ನಿರ್ಮಿಸಿದ ಸ್ಮಾರಕಶಿಲ್ಪಗಳೇ ಆತ್ಮಬಲಿದಾನ ಶಿಲ್ಪಗಳು.

ಈ ಆತ್ಮಬಲಿದಾನದ ಸ್ವರೂಪ ಮತ್ತು ಅದರ ಹಿಂದಿರುವ ಪ್ರೇರಣೆಗಳ ದೃಷ್ಟಿಯಿಂದ 'ಧಾರ್ಮಿಕ' ಮತ್ತು 'ಲೌಕಿಕ' ಆತ್ಮಬಲಿದಾನವೆಂದು ವಿದ್ವಾಂಸರು ಎರಡು ರೀತಿಯಲ್ಲಿ ಗುರುತಿಸಿದ್ದಾರೆ. ಮುಕ್ತಿಯನ್ನು ಪಡೆಯುವುದಕ್ಕಾಗಿ ದೇವರ ಹೆಸರಿನಲ್ಲಿ ಅಗ್ನಿಪ್ರವೇಶ, ಜಲಪ್ರವೇಶಗಳ ಮೂಲಕ ಪ್ರಾಣಾರ್ಪಣೆ ಮಾಡಿಕೊಳ್ಳುವುದನ್ನು ಧಾರ್ಮಿಕ ಆತ್ಮಬಲಿದಾನವೆಂದು ಕರೆದರೆ, ತನ್ನನ್ನು ಪೋಷಿಸಿದ ಮತ್ತು ದೇವ ಸಮಾನರಾದ ವ್ಯಕ್ತಿಗಳ ಮರಣದ ಸಂದರ್ಭದಲ್ಲಿ ಪ್ರಾಣತ್ಯಾಗ ಮಾಡುವುದನ್ನು ಲೌಕಿಕ ಬಲಿದಾನ ಎಂದು ಕರೆಯಲಾಗಿದೆ. ಅಧ್ಯಯನದ ಅನುಕೂಲಕ್ಕೆ ಮೊದಲು ಲೌಕಿಕ ಬಲಿದಾನವನ್ನು ಇಲ್ಲಿ ವಿವರಿಸಲಾಗಿದೆ.

### ಅ. ಲೌಕಿಕ

ಲೌಕಿಕ ಎಂದರೆ ಪ್ರಾಪಂಚಿಕವಾದ ಎನ್ನುವ ಅರ್ಥವಿದೆ. ಈ ಲೌಕಿಕ ಶಿಲ್ಪಗಳು ಧಾರ್ಮಿಕ ಶಿಲ್ಪಗಳಿಗೆ ತದ್ವಿರುದ್ಧವಾದವು. ಮಾನವನ ಐಹಿಕ ಜೀವನಕ್ಕೆ ಸಂಬಂಧಪಟ್ಟ ಶಿಲ್ಪಗಳನ್ನು ಲೌಕಿಕ ಶಿಲ್ಪಗಳು ಎಂದು ಕರೆಯಲಾಗುತ್ತದೆ. ಪ್ರತಿ ಲೌಕಿಕ ಶಿಲ್ಪಗಳ ಹಿಂದೆ ಅನೇಕ ಭಾವನೆಗಳು ಅಡಕವಾಗಿರುತ್ತವೆ. ಲೌಕಿಕ ಶಿಲ್ಪಗಳಿಗೆ ಶಾಸ್ತ್ರದ ಗೊಂದಲವಿರುವುದಿಲ್ಲ. ಅವುಗಳನ್ನು ಶಿಲ್ಪಗಳ 'ಯಥಾರುಚಿ'ಗೆ ಬಿಟ್ಟಿದ್ದು ಎಂದು ಶಾಸ್ತ್ರ ಗ್ರಂಥಗಳು ತಿಳಿಸುತ್ತವೆ.[೧] ಇಲ್ಲಿ ಧರ್ಮವು ಪ್ರೇರಣೆ ನೀಡಿದರೂ ಸಮಾಜದ ಉದ್ದೇಶ, ಆಶಯಗಳು, ಸ್ಥಿತಿಗತಿಗಳು ಹಾಗೂ ಸಾಮಾಜಿಕ ಕಟ್ಟಳೆಗಳೇ ಮುಖ್ಯವಾಗುತ್ತವೆ. ಸಹಗಮನ ಮತ್ತು ವೇಳವಾಳಿಗಳು ಈ ಲೌಕಿಕ ಕಾರಣಗಳಿಂದ ಹುಟ್ಟಿದವುಗಳಾಗಿವೆ. ದೇವರ ಹೆಸರಿನಲ್ಲಿ ಪ್ರಾಣೋತ್ಕ್ರಮಣ ಮಾಡಿಕೊಳ್ಳುವ ಧಾರ್ಮಿಕ ಬಲಿದಾನ, ಆಮೇಲೆ ಪ್ರಿಯವ್ಯಕ್ತಿಯ ಹೆಸರಿನಲ್ಲಿ ಪ್ರಾಣೇತ್ಕ್ರಮಣ ಮಾಡಿಕೊಳ್ಳುವ ಲೌಕಿಕ ಬಲಿದಾನಕ್ಕೆ ದಾರಿ ಮಾಡಿಕೊಟ್ಟಿತೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೨] ಈ ಲೌಕಿಕ ಬಲಿದಾನವು ಪತಿಗಾಗಿ ಪ್ರಿಯಸತಿಯ ಪ್ರಾಣೋತ್ಕ್ರಮಣ, ವ್ಯಕ್ತಿಗಾಗಿ ಪ್ರಿಯವ್ಯಕ್ತಿಯ ಪ್ರಾಣೋತ್ಕ್ರಮಣವೆಂದು ಎರಡು ವಿಧವಾಗಿದ್ದು ಅವುಗಳಿಗೆ ಕ್ರಮವಾಗಿ ಸಹಗಮನ ಮತ್ತು ವೇಳಾವಳಿ ಎಂದು ಹೆಸರಿಸಲಾಗಿದೆ. ಪತಿಯ ಮೇಲಿನ ಉತ್ಕಟ ಪ್ರೀತಿ, ಪಾವಿತ್ರತೆ, ಮಾನರಕ್ಷಣೆ, ವಿಧವೆಯ ನಿಕೃಷ್ಟ ಜೀವನ, ಪತ್ನಿ ಅಗಲಬಾರದೆಂಬ ಪುರುಷನ ಸ್ವಾರ್ಥ, ಪತ್ನಿ ಇನ್ನೊಬ್ಬರ ವಶವಾಗಬಾರದೆಂಬ

ಪುರುಷನ ಇಚ್ಛೆ, ಸಂಪತ್ತು ಪಡೆಯುವ ಸಂಚು ಮೊದಲಾದ ಸಾಮಾಜಿಕ ಕಾರಣಗಳು ಪತಿಯ ಮರಣದ ನಂತರ ಸತಿ ಹೋಗುವುದಕ್ಕೆ ಕಾರಣವಾಗಿದ್ದರೆ, ರಾಜರು ಪ್ರತ್ಯಕ್ಷ ದೇವರೆಂದೇ ನಂಬಿ ಭಾವಿಸಿದ್ದ ವೀರರು ರಾಜ ಅಥವಾ ಒಡೆಯ ಮರಣ ಹೊಂದಿ ಪರಲೋಕಕ್ಕೆ ಹೋದರೆ ಅಲ್ಲಿಯೂ ಅವನನ್ನು ಹಿಂಬಾಲಿಸಿ ಸೇವೆ ಸಲ್ಲಿಸುವ ನಿಷ್ಠೆಯಿಂದ ತಾವೂ ಪ್ರಾಣವನ್ನು ಅರ್ಪಿಸಿಕೊಳ್ಳುವುದು ವೇಳವಾಳಿ ಮರಣಕ್ಕೆ ಕಾರಣವಾಗಿದೆ. ಈ ಎರಡು ಆಚರಣೆಗಳನ್ನು ಅಂದಿನ ಸಮಾಜ ಅಂಗೀಕರಿಸಿದ್ದು ಕಂಡುಬರುತ್ತದೆ.

## ೫.೧. ಮಹಾಸತಿ(ಮಾಸ್ತಿ) ಮರಣ

### ೫.೧.೧. ಸತಿ ಪದ್ಧತಿಯ ಹುಟ್ಟು ಮತ್ತು ಬೆಳವಣಿಗೆ

ಸತಿ ಪದ್ಧತಿ ಆಚರಣೆಗೆ ಬರುವುದಕ್ಕೂ ಪೂರ್ವದಲ್ಲಿ ಮದುವೆಯಾದ ಹೆಣ್ಣಿಗೆ 'ಸತಿ' ಎಂದು ಕರೆಯುವ ವಾಡಿಕೆಯಿತ್ತು. ಮದುವೆಯ ನಂತರ ಹೆಣ್ಣನ್ನು ಇಂಥವರ ಸತಿ ಎಂದು ಹೇಳಲಾಗುತ್ತಿತ್ತು. ಹೆಂಡತಿ ಪದಕ್ಕೆ ಸಮಾನ ಅರ್ಥದಲ್ಲಿ ಸತಿ, ಪತ್ನಿ ಎಂದು ಸಂಬೋಧಿಸಲಾಗುತ್ತದೆ. ಇಲ್ಲಿ ಸತಿ ಎಂದ ತಕ್ಷಣ ಪರಿಮಿತ ಅರ್ಥದಲ್ಲಿ ಪತಿಯ ಶವ ಉರಿಯುವ ಚಿತೆಯಲ್ಲಿ ಸತಿ ಧುಮುಕಿ ಸಾಯುವ ಕಲ್ಪನೆಯ ಚಿತ್ರ ನಮ್ಮ ಕಣ್ಣ ಮುಂದೆ ಗೋಚರವಾಗುತ್ತದೆ. ಈ ಘಟನೆಯನ್ನು ಕಣ್ಣಾರೆ ಕಾಣದೇ ಇದ್ದರೂ 'ಸತಿ' ಎನ್ನುವ ಪರಿಕಲ್ಪನೆ ನಮ್ಮ ಕಣ್ಣ ಮುಂದೆ ಬರದೇ ಇರದು. ಅತೀ ವೈಭವಯುತವಾಗಿ ಭಾರತದಲ್ಲಿ ಈ ಪದ್ಧತಿ ಅಸ್ತಿತ್ವದಲ್ಲಿ ಇತ್ತೆಂದು ತೋರುತ್ತದೆ. ಕರ್ನಾಟಕದಲ್ಲಿಯೂ ಸತಿ ಘಟನೆಗಳ ಸಂಖ್ಯೆಯೇನು ಕಡಿಮೆ ಇಲ್ಲ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತ ಸತಿ ಸ್ಮಾರಕ ಶಿಲ್ಪಗಳ ಸಂಖ್ಯೆಯನ್ನು ಗಮನಿಸಿದರೆ ಅದು ಎಷ್ಟು ವಿಸ್ತಾರವಾಗಿ ಹರಡಿಕೊಂಡಿತ್ತೆಂಬುದು ತಿಳಿಯುತ್ತದೆ.

'ಸತಿ' ಎಂಬ ಪದದ ವಿಶಾಲಾರ್ಥ 'ಸ್ತ್ರೀ' ಎಂದೂ ಸೀಮಿತ ಅರ್ಥದಲ್ಲಿ ಗಂಡನ ಮರಣದ ನಂತರ ಪತ್ನಿ ಸ್ವ ಇಚ್ಛೆಯಿಂದ ಮರಣ ಹೊಂದುವುದನ್ನು ಸೂಚಿಸುತ್ತದೆ. ಇಂಗ್ಲೀಷಿನ Sati, Suttee ಶಬ್ದಗಳೂ ಈ ಅರ್ಥವನ್ನೇ ಇಟ್ಟುಕೊಂಡು ಬಳಕೆಯಾಗುತ್ತಿವೆ.[೩] ಹೀಗೆ ಮರಣ ಹೊಂದಿದ ಸ್ತ್ರೀಯನ್ನು 'ಸತಿ ಹೋದಳು' ಅಥವಾ 'ಮಹಾಸತಿಯಾದಳು' ಎಂದು ಕರೆಯಲಾಗುತ್ತದೆ. ಸಂಸ್ಕೃತದ 'ಮಹಾಸತಿ' ಎಂಬುದರ ಸಂಕ್ಷಿಪ್ತ ರೂಪವೇ 'ಮಾಸ್ತಿ'ಯಾಗಿದೆ.[೪] ಪತಿಯ ವೀರಮರಣದ ನಂತರ ಅವನೊಡನೆ ಪ್ರಾಣ ತ್ಯಾಗ ಮಾಡುತ್ತಿದ್ದ ಸ್ತ್ರೀಯರನ್ನು 'ಮಹಾಸತಿ' ಎಂದು ಕರೆಯುತ್ತಿದ್ದರು.

ಸತಿಪದ್ಧತಿ ಇಂದಿನ ಸಮಾಜಕ್ಕೆ ಕ್ರೂರ ಎನಿಸುತ್ತದೆ. ಆದರೆ ಪ್ರಾಚೀನ ಕಾಲದಲ್ಲಿ ಮಹಿಳೆ ಇದನ್ನು ವೈಭವಪೂರ್ಣವಾಗಿ, ತನಗೆ ದೊರೆತ ಸೌಭಾಗ್ಯವೆಂದು, ಪೂಜನೀಯವಾಗಿ ಭಾವಿಸಿ ಸಂತೋಷದಿಂದ ಸ್ವೀಕರಿಸಿದ್ದಾಳೆ. ಈ ಪದ್ಧತಿ ಒಮ್ಮೆಲೆ ಹುಟ್ಟಿ, ತನ್ನ ಸ್ವರೂಪವನ್ನು ಏಕ ಕಾಲದಲ್ಲೇ ಜಗತ್ತಿನಾದ್ಯಂತ ಹರಡಿಕೊಂಡಿದ್ದಲ್ಲ. ಯಾವುದೋ ಒಂದು ಜನಾಂಗದಲ್ಲಿ ಅನಿರೀಕ್ಷಿತ ಕಾರಣಗಳಿಂದ ಸತಿ ಪತಿಯ ಜೊತೆ ಮರಣಿಸಿರುವುದು ಈ ಪರಂಪರೆಗೆ ಮೂಲವೆಂದು

ಕಾಣುತ್ತದೆ. ಇಂತಹ ಕೆಲವು ಆಧಾರಗಳನ್ನಿಟ್ಟುಕೊಂಡು ವಿದ್ವಾಂಸರು ಅದರ ಪ್ರಾಚೀನತೆಯನ್ನು ಗುರುತಿಸುವಲ್ಲಿ ಪ್ರಯತ್ನಿದ್ದಾರೆ. ಜಗತ್ತಿನ ವಿವಿಧ ಭಾಗಗಳಲ್ಲಿ, ವಿವಿಧ ಜನಾಂಗಗಳಲ್ಲಿ ಈ ಆಚರಣೆ ಇದ್ದುದರಿಂದ ವಿದ್ವಾಂಸರೂ ಸಹ ಸತಿಪದ್ಧತಿಯ ಉಗಮದ ಮೂಲದ ಬಗ್ಗೆ ನಿಶ್ಚಿತ ನಿರ್ಧಾರಕ್ಕೆ ಬರಲು ಸಾಧ್ಯವಾಗಿಲ್ಲ. ಸುಮೇರಿಯನ್ನರ 'ಉರ್' ನಗರದ ಭೂಶೋಧನೆಯಲ್ಲಿ ಕ್ರಿ.ಶ.ಪೂ. ೪೦೦೦ ವರ್ಷಗಳ ಪ್ರಾಚೀನವಾದ ರಾಜರ ಸಮಾಧಿಗಳು ದೊರೆತಿದ್ದು ಅವುಗಳಲ್ಲಿ ಸತಿಪದ್ಧತಿಯ ಕುರುಹುಗಳು ದೊರೆತಿವೆ. ಇಲ್ಲಿ ರಾಜ ಸತ್ತ ನಂತರ ಅವನ ಆಸ್ಥಾನದ ಎಲ್ಲ ವರ್ಗದವರೂ ಅವನೊಂದಿಗೆ ಸಮಾಧಿ ಹೊಕ್ಕಿರುವ ಆಧಾರಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.[೫] ಕ್ರಿ.ಶ.ಪೂ. ೩೦೦೦ ವರ್ಷಗಳ ಕಾಲ ಪ್ರಾಚೀನವಾದ ಚೆಪ್ಸೋ(Cheops) ಪಿರಾಮಿಡ್ಡಗಳು ರಾಣಿಯರಿಗಾಗಿ ಬೇರೆ ಕೋಣೆಯನ್ನು ಹೊಂದಿವೆ.[೬] ಈಜಿಪ್ಟಿನ ರಾಜ 'ಝುರ್'ನ ಗೋರಿಯ(Zer stomb) ಸುತ್ತ ಹೊಂದಿಕೊಂಡ ಹಾಗೆ ಇರುವ ಸಮಾಧಿಯಲ್ಲಿ ೨೭೫ ಅಂತಪುರದ ರಾಣಿಯರೂ, ರಾಜಮನೆತನದ ೪೩ ಜನರೂ ಮತ್ತು ಒಂದು ಮೈಲಿ ದೂರದಲ್ಲೇ ೨೬೯ ಜನರು ಹುಗಿಯಲ್ಪಟ್ಟಿದ್ದಾರೆ.[೭] ಪ್ರಾಚೀನ ಗ್ರೀಕರಲ್ಲಿ 'ಎವಡ್ನೆ'(Evadne) ರಾಣಿಯ ಕುರಿತು ಒಂದು ಐತಿಹ್ಯವಿದೆ. ಈ ಐತಿಹ್ಯ ಪ್ರಕಾರ 'ಎವಡ್ನೆ' ರಾಣಿಯು ತನ್ನ ಗಂಡನ ಚಿತೆಯಲ್ಲಿ ಹಾರಿಕೊಂಡು ಪ್ರಾಣ ಬಿಡುತ್ತಾಳೆ.[೮] ಈ ಉಲ್ಲೇಖವು ಗ್ರೀಕ್ ರಾಜರ ಆಡಳಿತದಲ್ಲಿ ಸತಿಯ ಘಟನೆಗಳು ನಡೆದಿರುವುದನ್ನು ಸೂಚಿಸುತ್ತದೆ. ರಾವಿ ನದಿಯ ದಡದಲ್ಲಿದ್ದ ಕಥೈಓ(Kathaioi) ಎಂಬ ಜನಾಂಗದವರಲ್ಲೂ ಸತಿಯ ಆಚರಣೆ ಇತ್ತೆಂದು ತಿಳಿದುಬರುತ್ತದೆ.[೯] ಚೀನಾದಲ್ಲಿ ವಿಧವೆಯಾದವಳು ತನ್ನ ಗಂಡನೊಡನೆ ಸ್ವರ್ಗಕ್ಕೆ ಹೋಗಲೆಂದು ತನ್ನನ್ನು ತಾನು ಕೊಂದುಕೊಂಡರೆ, ಅವಳ ಶವವನ್ನು ದೊಡ್ಡ ಮೆರವಣಿಗೆಯಲ್ಲಿ ತೆಗೆದುಕೊಂಡು ಹೋಗಲಾಗುತ್ತಂತೆ.[೧೦] ಪ್ರವಾಸಿಗ ಫಾಯನ್ ವೋಲ್ಲಾಗ್ದ ಬಲ್ಗೇರಿಯನ್ ಜನಾಂಗದಲ್ಲಿ ಸತಿ ಹೋಗುವುದನ್ನು ಕಂಡುಕೊಂಡಿದ್ದಾನೆ.[೧೧]

ಇಂಡೋ-ಯುರೋಪಿಯನ್ ಜನಾಂಗಗಳಾದ ಗೋಲರು, ನಾರ್ವೆಜಿಯನ್ನರು, ಗೋಥರು, ಕೆಲ್ಪರು, ಸ್ಲಾವ್ಹರು ಮತ್ತು ಥ್ರೇಶಿಯನ್ನರಲ್ಲಿ ಸತಿ ಪದ್ಧತಿ ಆಚರಣೆ ಇದ್ದ ಹಿನ್ನೆಲೆಯಲ್ಲಿ ಈ ಪದ್ಧತಿ ಇಂಡೋ-ಯುರೋಪಿಯನ್ನರಲ್ಲಿ ಇತ್ತೆಂದು ವಿದ್ವಾಂಸರಾದ ಎ.ಎಸ್. ಅಲ್ತೇಕರ್ ಗುರುತಿಸಿದ್ದಾರೆ.[೧೨] ಸ್ಲಾವೊನಿಕ್ ಪ್ರದೇಶದ ವಿಧವೆಯರು ಸತ್ತ ಗಂಡನೊಡನೆ ಮರಣಹೊಂದಲು ಇಷ್ಟಪಡುತ್ತಿದ್ದರೆಂದು ರಾಲ್ಸ್‌ನ್ ಎಂಬ ವಿದ್ವಾಂಸ ತಿಳಿಸುತ್ತಾನೆ.[೧೩] ಪ್ರಾಚೀನ ಇಂಡೋ-ಜರ್ಮನ್ನರಲ್ಲಿ ಸತ್ತ ಗಂಡನೊಡನೆ ವಿಧವೆಯನ್ನು ದಹನ ಮಾಡುವುದು ಒಂದು ಪ್ರಾಚೀನ ಆಚರಣೆ ಎಂದು ಪೆಂಜೇರ್ ಹೇಳುತ್ತಾರೆ.[೧೪] ಮೇಲಿನ ಆಧಾರಗಳಿಂದ ಸತಿ ಪದ್ಧತಿ ಯಾವುದೋ ಜನಾಂಗ ಅಥವಾ ಪ್ರದೇಶಕ್ಕೆ ಸೀಮಿತವಾಗಿಲ್ಲವೆಂಬುದು ಸ್ಪಷ್ಟವಾಗುವುದರ ಜೊತೆಗೆ ನಿರ್ದಿಷ್ಟ ಕಾಲದಲ್ಲಿ ಇದು ಅಸ್ತಿತ್ವದಲ್ಲಿ ಬಂದದ್ದಲ್ಲವೆಂದೂ ತಿಳಿಯುತ್ತದೆ.

ಭಾರತದಲ್ಲಿ ಇದರ ಉಗಮದ ಬಗ್ಗೆ ನಿರ್ದಿಷ್ಟವಾದ ಉಲ್ಲೇಖಗಳಿಲ್ಲ. ಆದರೆ ಭಾರತದಲ್ಲಿ ಇದರ ವ್ಯಾಪಕ ಸ್ವರೂಪವನ್ನು ಕಂಡುಕೊಳ್ಳಲು ಕೆಲವು ವಿದ್ವಾಂಸರು ಅಧ್ಯಯನಗಳ ಮೂಲಕ ಚರ್ಚಿಸಿದ್ದಾರೆ. ವಿದ್ವಾಂಸರಾದ ವಿ.ಎ. ಸ್ಮಿತ್ ಅವರು 'ಸತಿ ಪದ್ಧತಿ ಮೂಲತಃ ಸಿಥಿಯನ್ನರದಾಗಿರಬೇಕು ಎಂದು ವಾದಿಸುತ್ತಾರೆ. ಮುಂದುವರೆದು ಸಿಥಿಯನ್ ರಾಜರು ಕ್ರಿಸ್ತಶಕದ ಪ್ರಾರಂಭದಲ್ಲಿ ಸತಿಪದ್ಧತಿಯನ್ನು ಅನುಸರಿಸುತ್ತಿದ್ದರು. ಅವರ ಪ್ರಭಾವವಾದಂಥ ಭಾರತದ ಭಾಗಗಳಲ್ಲಿ ಸತಿ ಆಚರಣೆ ಪ್ರಾರಂಭವಾಗಿರಬೇಕೆಂದು' ಅವರು ಹೇಳುತ್ತಾರೆ ಹಾಗೂ ತಕ್ಷಶಿಲೆಯ ಜನರ ನಾಗರಿಕತೆಯಲ್ಲಿ ಸಿಥಿಯನ್ನರ ಪ್ರಭಾವವನ್ನು ಗುರುತಿಸಿ ತಮ್ಮ ವಾದವನ್ನು ಸಮರ್ಥಿಸುತ್ತಾರೆ.[೧೫] ದುಬೈ ಅವರ ಪ್ರಕಾರ 'ಸತಿ ಆಚರಣೆ ಸಿಥಿಯನ್ನರ ಪ್ರಭಾವದಿಂದ ಬಂದದ್ದಲ್ಲ. ಅದು ಭಾರತದ್ದೇ ಆಗಿದೆ. ಅದು ಹೊರಗಿನಿಂದ ಬಂದದ್ದಲ್ಲ, ಅದು ಹೊರಗಿನಿಂದ ಬಂದದ್ದಾಗಿದ್ದರೆ. ಅದಕ್ಕೆ ಬ್ರಾಹ್ಮಣರು ಒಪ್ಪಿಗೆಯನ್ನು ಕೊಡಬೇಕಾಗಿತ್ತು. ಅಲ್ಲದೆ ಅವರಲ್ಲಿಯೂ ಸತಿ ಪದ್ಧತಿ ಆಚರಣೆಯಲ್ಲಿರಬೇಕಾಗಿತ್ತು. ಆದರೆ ಬ್ರಾಹ್ಮಣರು ಹತ್ಯಾವಿಧಿಗಳ ಪೌರೋಹಿತ್ಯವಹಿಸಿ ದಕ್ಷಿಣೆಯನ್ನು ವಸೂಲು ಮಾಡುತ್ತಿದ್ದರೇ ಹೊರತು ಈ ಸತಿ ಆಚರಣೆ ಅವರಲ್ಲಿರಲಿಲ್ಲ.' ಈ ರೀತಿ ಚರ್ಚಿಸುತ್ತಾ ಸತಿಪದ್ಧತಿ ಭಾರತದಲ್ಲೇ ಉಗಮಗೊಂಡಿದ್ದೆಂದು ಹೇಳುತ್ತಾರೆ.[೧೬] ಎಡ್ವರ್ಡ್ ಥಾಮ್ಸನ್ ಅವರು 'ಸತಿ ಆಚರಣೆ ಮೊದಲು ಭಾರತದ ಪ್ರಾಚೀನ ಬುಡಕಟ್ಟು ಬಣಗಳಲ್ಲಿ ಇತ್ತು, ಈ ಬಣಗಳು ಹಿಂದೂ ಧರ್ಮದಲ್ಲಿ ಕೂಡಿಕೊಂಡಾಗ ಅವರ ಆಚರಣೆಗಳು ಇಲ್ಲಿಗೂ ಬಂದವು' ಎಂದು ಅಭಿಪ್ರಾಯಪಡುತ್ತಾರೆ.[೧೭] ವಿದ್ವಾಂಸರ ಅಭಿಪ್ರಾಯಗಳಿಂದ ಸತಿಪದ್ಧತಿ ಉಗಮದ ಕುರಿತು ನಿಖರವಾಗಿ ನಿರ್ಧಾರಕ್ಕೆ ಬರಲು ಸಾಧ್ಯವಾಗಿಲ್ಲ. ಆದರೆ ಲೋಥಾಲ್ ಭೂಶೋಧನೆಯಲ್ಲಿ ಗಂಡು-ಹೆಣ್ಣಿನ ಜೋಡಿ ಶವಗಳು ಪತ್ತೆಯಾಗಿವೆ. ಈ ನಿದರ್ಶನಗಳಿಂದ ಎಸ್.ಆರ್. ರಾವ್ ಅವರು ಆರ್ಯಪೂರ್ವ ಜನಾಂಗದವರಲ್ಲಿ 'ಸತಿ ಆಚರಣೆ' ಇರುವುದನ್ನು ಸೂಚಿಸುತ್ತವೆ ಎಂದಿದ್ದಾರೆ. ಕ್ರಿ.ಶ. ೧೯೭೮ರ ಭೂಶೋಧನೆಯ ಕಾಲಕ್ಕೆ ಉತ್ತರ ಪ್ರದೇಶದ ಪ್ರತಾಪನಗರ ಜಿಲ್ಲೆಯ ಮಹಾದಹ(Mahadaha) ಎಂಬ ಹಳ್ಳಿಯಲ್ಲಿ ಎರಡು ಗೋರಿಗಳಲ್ಲಿ ಗಂಡು-ಹೆಣ್ಣಿನ ಎರಡು ಜೊತೆಗಳ ಅಸ್ಥಿಪಂಜರಗಳು ಸಿಕ್ಕ ಹಿನ್ನೆಲೆಯಲ್ಲಿ ಸತಿ ಪದ್ಧತಿಯು ಕ್ರಿ.ಶ.ಪೂ. ೧೦,೦೦೦ ಅಂದರೆ 'ಮೆಸೋಲಿಥಿಕ್ ಯುಗ'ದಲ್ಲಿ ಇತ್ತೆಂದು ಅಭಿಪ್ರಾಯಪಡಲಾಗಿದೆ.[೧೮] ಈ ಅಂಶವು ಸ್ಮಿತ್ ಹೇಳುವ ಸಿಥಿಯನ್ನರ ಸತಿ ಆಚರಣೆಯ ಪ್ರಭಾವವು ಭಾರತದಲ್ಲಿ ಆ ಮೊದಲೇ ನೆಲೆಯೂರಿದ್ದ ಸತಿ ಆಚರಣೆಯನ್ನು ಮತ್ತಷ್ಟು ಬಲಪಡಿಸುತ್ತದೆ. ಎಸ್.ಆರ್. ರಾವ್ ಅವರು ಆರ್ಯಪೂರ್ವ ಸತಿಯ ನಿದರ್ಶನಗಳೆಂದು ಗುರುತಿಸಲಾಗುವ ಹೂಳುವ ವಿಧಾನಗಳ ದಾಖಲೆಗಳಿದ್ದರೂ ಸತಿ ಪದ್ಧತಿ ಯಾವ ಸ್ವರೂಪದಲ್ಲಿತ್ತೆಂದು ಹೇಳುವುದು ಕಷ್ಟವೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ.

ಮೇಲಿನ ವಿದ್ವಾಂಸರ ಅಭಿಪ್ರಾಯಗಳು ಏನೇ ಇದ್ದರೂ ಪತಿನಿಂದನೆಯ ಪಾಪವನ್ನು ಸಹಿಸದೇ ತಂದೆ ದಕ್ಷಬ್ರಹ್ಮನ ಯಜ್ಞಕುಂಡಕ್ಕೆ ತನ್ನನ್ನರ್ಪಿಸಿಕೊಂಡಳೆಂಬ ಸತಿದೇವಿಯ ಘಟನೆಯೇ ಭಾರತದ ಸತಿ ಪರಂಪರೆಗೆ ಮೂಲ ಕಾರಣವೆಂದು ತೋರುತ್ತದೆ.[೧೯] ಈ ಪದ್ಧತಿಯ ಬಗ್ಗೆ ಪ್ರಾಚೀನ ಭಾರತದ ಸಾಹಿತ್ಯ ಆಕರಗಳೇ ಉಲ್ಲೇಖಿಸುತ್ತವೆ. ವಿಧವೆ ಸಹಗಮನ ಹೊಂದಲು ಇಚ್ಛಿಸಿ ಮಡಿದ ಪತಿಯೊಂದಿಗೆ ಚಿತೆಯ ಮೇಲೆ ಮಲಗಿದಂತೆಯೂ ಅವಳಿಗೆ ಮರಣ ಹೊಂದಲು ಆಸ್ಪದ ಕೊಡದೆ 'ಚಿತೆ ಬಿಟ್ಟು ಕೆಳಗಿಳಿದು ಬಂದು ನಿನ್ನ ಮಕ್ಕಳ ಸಂಪತ್ತಿನೊಂದಿಗೆ ಸುಖವಾಗಿ ಬಾಳು' ಎಂದು ಉಳಿದವರು ಪ್ರಾರ್ಥನೆ ಮಾಡಿದಂತೆಯೂ ಅಥರ್ವವೇದದಲ್ಲಿ ಉಲ್ಲೇಖವಿದೆ.[೨೦] ಇದನ್ನು ಹೊರತುಪಡಿಸಿ ವೇದಗಳಲ್ಲಿ ಸಹಗಮನದ ಬಗ್ಗೆ ಹೆಚ್ಚಿನ ಉಲ್ಲೇಖಗಳಿಲ್ಲ. ಬೌದ್ಧ ಸಾಹಿತ್ಯ ಈ ಆಚರಣೆಯನ್ನು ಪುರಸ್ಕರಿಸಲಿಲ್ಲ. ಜೈನ ಧರ್ಮದಲ್ಲಿ ಸತಿ ಆಚರಣೆ ಇರಲಿಲ್ಲವಾದರೂ ಅನ್ಯ ಧರ್ಮಗಳ ಪ್ರಭಾವದಿಂದ ಕಾಲಾಂತರದಲ್ಲಿ ಈ ಆಚರಣೆಯ ಬಲಿಗೆ ಜೈನರು ಸಿಲುಕಿದಂತೆ ಕಾಣುತ್ತದೆ. ಕೌಟಿಲ್ಯನು ಸಹ 'ಸತಿ ಪದ್ಧತಿ' ಕುರಿತು ಪ್ರಸ್ತಾಪಿಸುವುದಿಲ್ಲ. ರಾಮಾಯಣದಲ್ಲಿ 'ಸತಿ'ಯ ಆಚರಣೆಯ ಬಗೆಗೆ ಅತಿ ಸ್ಪಷ್ಟವಾದ ವಿವರಗಳು ದೊರಕಲಾರವು. ಮಹಾಭಾರತದಲ್ಲಿ ಮಾದ್ರಿಯ ಸಹಗಮನ ಪ್ರಸಂಗ ಬಿಟ್ಟರೆ ಅಲ್ಲಿಯೂ ಈ ಪದ್ಧತಿಗೆ ಅಂಥ ಬೆಂಬಲವಿರಲಿಲ್ಲವೆಂಬುದನ್ನು ಸೂಚಿಸುತ್ತದೆ.[೨೧] 'ಮಡಿದ ಗಂಡನ ಜೊತೆಯಲ್ಲಿ ಅಗ್ನಿಪ್ರವೇಶ ಮಾಡಿದ ವಿಧವೆಯು ಪತಿಸಹಿತ ಸ್ವರ್ಗಕ್ಕೆ ಹೋಗುತ್ತಾಳೆ' ಎಂದು ಅಗ್ನಿಪುರಾಣದಲ್ಲಿದೆ.[೨೨] 'ಯಾರಾದರೂ ಬ್ರಾಹ್ಮಣ ವಿಧವೆಯ ಸಹಗಮನಕ್ಕೆ ಸಹಾಯ ಮಾಡಿದರೆ ಒಬ್ಬ ಬ್ರಾಹ್ಮಣನನ್ನು ಕೊಂದ ಪಾಪಕ್ಕೆ ಗುರಿಯಾಗುತ್ತಾರೆ' ಎಂದು ಪದ್ಮಪುರಾಣದಲ್ಲಿ ಹೇಳಲಾಗಿದೆ.[೨೩] ಗ್ರೀಕ್ ಇತಿಹಾಸಕಾರರು ಕ್ರಿ.ಪೂ. ೩೨೬-೩೧೬ರ ಸುಮಾರಿಗೆ ಭಾರತದಲ್ಲಿ ಸತಿಯ ಆಚರಣೆ ಗುರುತಿಸಿದ್ದರೂ ಕ್ರಿ.ಶ.ದ ಆರಂಭಕ್ಕೆ ಭಾರತೀಯ ಶಾಸ್ತ್ರ ಪುರಾಣದ ಗ್ರಂಥಗಳು ಸತಿ ಪದ್ಧತಿಗೆ ತಮ್ಮ ಒಪ್ಪಿಗೆಯನ್ನು ಕೊಟ್ಟಂತೆ ತಿಳಿದುಬರುತ್ತದೆ.[೨೪]

ಭಾರತದಲ್ಲಿ ಈ ಪದ್ಧತಿ ಆರಂಭಗೊಂಡಿದ್ದು ಧಾರ್ಮಿಕ ಆಚರಣೆಯ ಅಂಗವಾಗಿ ಇದು ಮೊದಲು ಕಾಣಿಸಿಕೊಂಡಿದ್ದು ಕ್ಷತ್ರಿಯರಲ್ಲಿ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೨೫] ಕ್ಷತ್ರಿಯರಿಗೆ ತಾವು ಇಂಥ ಆಚರಣೆಗಳಲ್ಲಿ ಹಿಂದೆ ಬೀಳಬಾರದು ಎನ್ನುವ ಕಾರಣಕ್ಕಾಗಿ ಕ್ರಿ.ಶ. ೧೦೦೦ ವೇಳೆಗೆ ಕೆಲವು ಬ್ರಾಹ್ಮಣ ಮನೆತನಗಳಲ್ಲಿ ಸಹಗಮನ ಕ್ರಿಯೆ ಆರಂಭಗೊಂಡಿತೆಂದು ಹೇಳಲಾಗುತ್ತಿದೆ. ಕ್ರಿ.ಶ. ೧೦ನೇ ಶತಮಾನದ ನಂತರ ಈ ಪದ್ಧತಿ ಹೆಚ್ಚು ಪ್ರಚಾರಕ್ಕೆ ಬಂದಿತು. ಕ್ಷತ್ರಿಯ ವಿಧವೆಯರೊಂದಿಗೆ ಬ್ರಾಹ್ಮಣ, ವೈಶ್ಯ, ಶೂದ್ರ ಮಹಿಳೆಯರೂ ಇದರಲ್ಲಿ ಪಾಲ್ಗೊಳ್ಳತೊಡಗಿದರು.[೨೬] ಕ್ರಿ.ಶ. ಪೂರ್ವದಿಂದಲೂ ಉತ್ತರ ಭಾರತದಲ್ಲಿ ಹೀಗೆ ವ್ಯಾಪಿಸುತ್ತ ಬಂದ ಪದ್ಧತಿ ಕ್ರಮೇಣ ದಕ್ಷಿಣದತ್ತ ಪ್ರಸಾರವಾಗತೊಡಗಿತು.

ಕರ್ನಾಟಕದಲ್ಲಿ ಸುಮಾರು ಐದನೆಯ ಶತಮಾನದಿಂದ ಈ ಪದ್ಧತಿ ಕಾಣಿಸಿಕೊಂಡಿದ್ದರೂ, ಎಲ್ಲಿಯೂ ಬಲವಂತದಿಂದ ಸಹಗಮನ ಮಾಡಿಸಿದ ಉದಾಹರಣೆ ಇಲ್ಲ ಎಂಬ ಅಭಿಪ್ರಾಯಗಳುಂಟು.[೨೭] ಕ್ರಿ.ಶ. ೪೫೦ರಲ್ಲಿ ಕದಂಬ ರವಿವರ್ಮನ ರಾಣಿ ತನ್ನ ಪತಿಯೊಂದಿಗೆ ಮುಕ್ತಳಾದಂತೆ ಕಂಡುಬರುತ್ತದೆ. ಇದು ಕರ್ನಾಟಕದಲ್ಲಿ ದೊರೆಯುವ ಸಹಗಮನದ ಪ್ರಥಮ ಉಲ್ಲೇಖವಾಗಿದೆ.[೨೮] ಇದಾದ ನಂತರ ಕ್ರಿ.ಶ. ೯ನೇ ಶತಮಾನದವರೆಗೆ ಸತಿ ಹೋದವರ ಶಾಸನೋಕ್ತ ಮಾಹಿತಿ ದೊರೆತಿಲ್ಲ. ಆ ೪೦೦ ವರ್ಷಗಳ ಮಧ್ಯಂತರದ ಅವಧಿಯಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಮತ್ತು ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಹಲವು ಶಾಸನೋಕ್ತ ಮಾಹಿತಿಗಳು ನಮಗೆ ಸಾಕಷ್ಟು ದೊರೆಯುತ್ತವೆ. ಆದರೆ ಸತಿ ಹೋದವರ ಬಗ್ಗೆ ಆಧಾರಗಳು ಏಕೆ ದೊರೆತಿಲ್ಲ ಎಂಬುದು ಪ್ರಶ್ನೆಯಾಗಿದೆ. ಅನಂತರ ಈ ಪದ್ಧತಿ ಒಮ್ಮೆಲೇ ಕಾಣಿಸಿಕೊಳ್ಳುವುದು ಕ್ರಿ.ಶ. ೯೦೮ರಲ್ಲಿ. ಹೆಗ್ಗಡೆ ತೊಮ್ಮನೆಂಬವನು ಯುದ್ಧದಲ್ಲಿ ಮಡಿಯಲು ಅವನ ಮಡದಿ ಬಳಕ್ಕ ಕೈಗೊಂಡ ಸಹಗಮನದ ಉಲ್ಲೇಖ[೨೯] ಮತ್ತು ೯೭೨ರಲ್ಲಿ ಕಕ್ಕಲದೇವನ ಆಳ್ವಿಕೆಯಲ್ಲಿ ಬದಿಯಣ್ಣನೆಂಬುವನು ಮಡಿದಾಗ ಅವನ ಮಡದಿ ಜಕ್ಕಬ್ಬೆ ಮಹಾಸತಿಯಾಗಲು ಅವಳ ತಂಗಿ ಜಾಬೆ ಮಾಸ್ತಿ ಶಿಲೆ ನಿಲ್ಲಿಸಿದಳೆಂಬ ಉಲ್ಲೇಖ.[೩೦] ಮುಂದೆ ಕ್ರಿ.ಶ. ೧೧ ಮತ್ತು ೧೨ನೆಯ ಶತಮಾನಗಳಲ್ಲಿ ಸಹಗಮನದ ಅನೇಕ ಉದಾಹರಣೆಗಳು ಕಂಡುಬರುತ್ತವೆ. ಹೆಗ್ಗಡೆ ದೇವನಕೋಟೆಯ ಶಾಸನವೊಂದರಲ್ಲಿ ನವಲಷಿರಾಜನ ಎಳೆಯ ಹೆಂಡತಿಯೊಬ್ಬಳ ಅಗ್ನಿಪ್ರವೇಶ ಕಂಡುಬಂದರೆ, ಕ್ರಿ.ಶ. ೧೧೫೦ರ ಶಾಸನದಲ್ಲಿ ಮಹದೇವಿ ಎಂಬುವಳ ಸಹಗಮನದ ವಿಷಯವಿದೆ. ಕ್ರಿ.ಶ. ೧೨೮೬ರ ಶಿವಮೊಗ್ಗದ ಶಾಸನವೊಂದರಲ್ಲಿ ಬೊಮ್ಮಿನಾಯ್ಕನ ಹೆಂಡತಿ ಬವೆನಾಯಕಿತ್ತಿ ಸಹಗಮನಗೊಂಡಿರುವುದು ಕಂಡುಬರುತ್ತದೆ.[೩೧] ವಿದ್ವಾಂಸರಾದ ಬಸವರಾಜ ಕಲ್ಗುಡಿ ಅವರು ೧೧ ಮತ್ತು ೧೨ನೇ ಶತಮಾನದಲ್ಲಿ ಸತಿಯ ಘಟನೆಯನ್ನು ವಿವರಿಸುವ ಉಲ್ಲೇಖಗಳು ಬಹಳ ಕಡಿಮೆ ಎಂದು ಅಭಿಪ್ರಾಯಿಸಿದ್ದಾರೆ.[೩೨] ಆದರೆ ಮೇಲಿನ ಉಲ್ಲೇಖಗಳು ಮತ್ತು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬರುವ ಶಾಸನ ರಹಿತವಾದ ಸತಿಗಲ್ಲುಗಳ ಸಂಖ್ಯೆಯನ್ನು ನೋಡಿದರೆ ಅವರ ಅಭಿಪ್ರಾಯವನ್ನು ಒಪ್ಪಲು ಸಾಧ್ಯವಿಲ್ಲವೆಂದು ತೋರುತ್ತದೆ. ಹತ್ತನೆಯ ಶತಮಾನದ ಕನ್ನಡದ ಕಾವ್ಯಗಳಾದ ಪಂಪಭಾರತ, ಅಜಿತಪುರಾಣ ಗ್ರಂಥಗಳೂ ಸತಿ ಪದ್ಧತಿಯ ಬಗ್ಗೆ ಉಲ್ಲೇಖಿಸುತ್ತವೆ.

ಹದಿಮೂರನೇ ಶತಮಾನದಿಂದ ಹದಿನೈದನೆಯ ಶತಮಾನದ ಅವಧಿಯಲ್ಲಿ ಕರ್ನಾಟಕದಲ್ಲಿ ಹೆಚ್ಚು ಸತಿಯ ಘಟನೆಗಳು ನಡೆದಿವೆ. ಅದರಲ್ಲೂ ಹೆಚ್ಚಿನ ಸಂಖ್ಯೆಯ ಸತಿಯ ಶಾಸನಗಳು ಹದಿನೈದನೆಯ ಶತಮಾನದವುಗಳೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಸಹಗಮನ ಅಧಿಕ ಸಂಖ್ಯೆಯಲ್ಲಿ ಕಂಡುಬರಲು ದಂಡೆತ್ತಿ ಬಂದ ಪರಕೀಯರ ದೌರ್ಜನ್ಯವೇ ಮುಖ್ಯವಾಗಿದೆ. ವಿದ್ವಾಂಸರಾದ ಎ.ಎಸ್. ಅಲ್ತೇಕರ್ ಅವರು ಕ್ರಿ.ಶ. ೧೪೦೦ರಿಂದ ೧೬೦೦ರವರೆಗೆ ಕರ್ನಾಟಕದಲ್ಲಿ ಸುಮಾರು ೪೧ ಸತಿಯ ಶಾಸನಗಳು ಸಿಗುತ್ತವೆ

ಎಂದಿದ್ದಾರೆ.[೩೩] ಮುಂದೆ ಬ್ರಿಟಿಷರ ಕಾಲದಲ್ಲಿಯೂ ಈ ಪದ್ಧತಿ ಸಾಗಿಬಂದುದನ್ನು ಬಾರ್ಬೋಸ್(೧೫೦೦), ನ್ಯೂನಿಝ್, ಸೀಜರ್ ಫ್ರೆಡರಿಕ್(೧೫೬೩)[೩೪], ಪಿಯೆಟ್ರಡೆಲ್ಲೆವಲ್ಲೆ(೧೬೨೩)[೩೫] ಮೊದಲಾದ ಪ್ರವಾಸಿಗರ ದಿನಚರಿಗಳು ತಿಳಿಸುತ್ತವೆ. ಶಾಸನ ಹಾಗೂ ಕಾವ್ಯಗಳಲ್ಲದೆ ಜನಪದ ಸಾಹಿತ್ಯದಲ್ಲಿಯೂ ಸತಿ ಪ್ರಸಂಗಗಳು ಗುರುತಿಸಲ್ಪಟ್ಟಿವೆ. ಈರೋಬಿ, ವಡ್ಡಗೆರೆ ನಾಗಮ್ಮ, ನಾಗವ್ವ[೩೬] ಮೊದಲಾದವರ ಕಥೆಗಳು ಈ ಕಾಲದ ಸತಿ ಆಚರಣೆಯ ಬಗ್ಗೆ ಅಮೂಲ್ಯ ವಿವರಗಳನ್ನು ಒದಗಿಸುತ್ತವೆ. ಬ್ರಿಟಿಷರ ಕಾಲದಲ್ಲಿ ಸಹಗಮನ ಮಾಡಲಿರುವ ಸ್ತ್ರೀಯ ವಿಷಯವನ್ನು ಸರ್ಕಾರಕ್ಕೆ ತಿಳಿಸಿ ಅಪ್ಪಣೆ ಪಡೆಯಬೇಕಾಗಿತ್ತು. ಸರಕಾರದಿಂದ ಅರಿಷಿಣ, ಕುಂಕುಮ, ಹಳದಿ ಸೀರೆ ಮುಂತಾದವುಗಳನ್ನು ಕಳುಹಿಸುತ್ತಿದ್ದುದು ಮಾತ್ರವಲ್ಲದೆ ಬೆಂಕಿಗೆ ಹೆದರಿ ಓಡಿ ಬಂದ ಹೆಣ್ಣಿಂದ ದೇಶಕ್ಕೆ ಹಾನಿಯಾಗುತ್ತದೆಯೆಂದು ಸೂಕ್ತ ಏರ್ಪಾಡು ಮಾಡುತ್ತಿದ್ದರಂತೆ. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಟಿ. ನರಸೀಪುರ ತಾಲೂಕಿನ ಬ್ರಾಹ್ಮಣ ಹೆಂಗಸೊಬ್ಬಳು ಸತಿಯಾಗುವುದಾಗಿ ಹಠ ಹಿಡಿದಾಗ ಅದು ಶಾಸ್ತ್ರವಿರುದ್ಧವಾದರೂ ಅವಳು ತೀರಾ ಹಠ ಹಿಡಿದರೆ ಅದಕ್ಕೆ ಅವಕಾಶ ಕೊಡಬೇಕೆಂದು ಆ ಬಗ್ಗೆ ಮೈಸೂರು ಸರ್ಕಾರಕ್ಕೆ ಬರೆದ ಅರ್ಜಿ ಅದಕ್ಕೆ ನೀಡಿದ ಒಪ್ಪಿಗೆಗಳು ಎಂ.ಎ.ಆರ್. ೧೯೩೮ರಲ್ಲಿ ಪ್ರಕಟಗೊಂಡಿವೆ.[೩೭] ಹೀಗೆ ಸಾಗಿಬಂದ ಸತಿ ಪದ್ಧತಿ ರಾಜಾರಾಮ ಮೋಹನರಾಯರ ಪ್ರಯತ್ನದಿಂದಾಗಿ ಲಾರ್ಡ್ ಬೆಂಟಿಂಕನ ಕಾಲದ ೧೮೨೯ರ ಸತಿ ನಿಷೇಧ ಕಾನೂನು ಮೂಲಕ ನಿಂತುಹೋಗಿದೆ. ಈ ಕಾಯ್ದೆ ಜಾರಿಗೊಂಡ ನಂತರವೂ ಒಂದು ಸತಿ ಘಟನೆ ನಡೆದಿದೆ. ಸುಮಾರು ೧೨೫ ವರ್ಷಗಳ ಹಿಂದೆ ತುಮಕೂರು ಜಿಲ್ಲೆ ಕೈದಾಳ ಗ್ರಾಮದಲ್ಲಿದ್ದ ಸ್ಮಾರ್ತ ಬ್ರಾಹ್ಮಣರಾಗಿದ್ದ ಶಿವರಾಮಯ್ಯನವರು ಮಡಿದಾಗ ಅವರ ಹೆಂಡತಿ ಲಕ್ಷ್ಮಿದೇವಮ್ಮ ಸಹಗಮನ ಕೈಗೊಳ್ಳಲು ನಿರ್ಧರಿಸುತ್ತಾಳೆ. ಈ ವಿಷಯ ತಿಳಿದ ಬ್ರಿಟಿಷ್ ಅಧಿಕಾರಿಗಳು ಊರಿಗೆ ಬರುವ ಮೊದಲೇ ಅಗ್ನಿಪ್ರವೇಶ ಮಾಡಿದ ವಿಷಯ ತಿಳಿದುಬರುತ್ತದೆ.[೩೮] ಈ ಘಟನೆಯೇ ಕರ್ನಾಟಕದಲ್ಲಿ ಸ್ತ್ರೀಯೊಬ್ಬಳು ಸಹಗಮನಗೊಂಡ ಇತ್ತೀಚಿನ ಪ್ರಕರಣವಾಗಿದೆ.

ಈ ಪದ್ಧತಿ ದಕ್ಷಿಣ ಕರ್ನಾಟಕದಲ್ಲಿ ಹೆಚ್ಚು ಪ್ರಭಾವಿಸಿರುವುದು ಕಂಡುಬರುತ್ತದೆ. ಈ ಹೇಳಿಕೆಯನ್ನು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ಸತಿಗಲ್ಲುಗಳು ಸಾಕ್ಷೀಕರಿಸುತ್ತವೆ. ಉತ್ತರ ಕರ್ನಾಟಕದಲ್ಲಿ ಸತಿ ಹೋದ ಆಧಾರಗಳು ವಿರಳವಾಗಿ ಕಂಡುಬರುತ್ತವೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಕಾರಣ ೧೨ನೇ ಶತಮಾನದಲ್ಲಿ ಆರಂಭವಾದ ಶರಣರ ಚಳುವಳಿಗಳ ಪ್ರಭಾವದಿಂದಾಗಿ ಈ ಭಾಗದಲ್ಲಿ ಸತಿ ಘಟನೆಗಳು ಕ್ಷೀಣಿಸಿರಬಹುದು.[೩೯] ಶರಣರ ಚಳುವಳಿಗಳ ಹಿನ್ನೆಲೆಯಲ್ಲಿ ನೋಡಿದಾಗ ಅದೊಂದು ತಡೆಗಟ್ಟಬಹುದಾದ ಪದ್ಧತಿಯಾಗಿತ್ತೆಂದು ಅರ್ಥವಾಗುತ್ತದೆ. ಇಂತಹ ಪ್ರಯತ್ನಗಳನ್ನು ದಕ್ಷಿಣ ಕರ್ನಾಟಕದಲ್ಲಿ ಯಾರು ಮಾಡಲಿಲ್ಲವೆಂದು ತೋರುತ್ತದೆ. ಅದನ್ನು ತಡೆಯುವುದು ಅವರಿಗೆ ಬೇಕಿರಲಿಲ್ಲ. ಏಕೆಂದರೆ ಇದೊಂದು ಪ್ರಯತ್ನಪೂರ್ವಕವಾಗಿ ರೂಪಿಸಿಕೊಂಡಿದ್ದ ಪದ್ಧತಿಯಾಗಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಸತಿಹೋಗುವ ಹೆಣ್ಣಿಗಿದ್ದ ಸಾಮಾಜಿಕ ಒತ್ತಾಸೆಗಳನ್ನು ಮನಗಂಡ ವಿದ್ವಾಂಸರು ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ವಿದ್ವಾಂಸರಾದ ಬಿ.ಎ. ಸಾಲೆತೊರೆ ಅವರು 'ಸಂಘಟಿತ ಕಾರ್ಯಾಚರಣೆ ಯಶಸ್ಸು ಹೊಂದದೇ ಇದ್ದಾಗ, ರಾಣಿಯರು ಮತ್ತು ಸಾಮಾನ್ಯ ಸ್ತ್ರೀಯರು ಮಹಮ್ಮದಿಯರ ಕೈಯಲ್ಲಿ ಅಪಮಾನಪಡುವುದನ್ನು ತಪ್ಪಿಸಿಕೊಳ್ಳಲಿಕ್ಕೆ ಸಹಗಮನವನ್ನು ಆಚರಿಸಲೇಬೇಕಾಗುತ್ತಿದ್ದಿತ್ತು' ಎಂದಿದ್ದಾರೆ.[೪೦] ಎ.ಎಸ್. ಅಲ್ತೇಕರ್ ಅವರು 'ಮರಣ ಹೊಂದಿದ ರಾಜ ಅಥವಾ ಯೋಧ ತನ್ನ ಹೆಂಡಂದಿರು, ಕುದುರೆಗಳು ಹಾಗೂ ಸೇವಕರನ್ನು ಪರಲೋಕದಲ್ಲಿ ಬಯಸುತ್ತಿದ್ದ ಕಾರಣ ಇವನ್ನೆಲ್ಲ ಕೊಲ್ಲುವುದು ಅವಶ್ಯ ಹಾಗೂ ಅಪೇಕ್ಷಣೀಯವಾಗಿತ್ತು. ಆದುದರಿಂದ ಅವುಗಳನ್ನು ಅವನೊಡನೆ ಸುಡುತ್ತಿದ್ದರು ಅಥವಾ ಹೂಳುತ್ತಿದ್ದರು' ಎಂದಿರುವರು.[೪೧] ಎಚ್. ತಿಪ್ಪೇರುದ್ರಸ್ವಾಮಿಯವರು 'ಪತಿಯೇ ಪರದೈವನೆಂಬ ಭಾವನೆಯಲ್ಲಿ ಬೆಳೆದ ಹೆಣ್ಣು, ಪತಿಯ ಮರಣವನ್ನು ಸಹಿಸಲಾರದೆ, ಏಕೈಕ ನಿಷ್ಠೆಯಿಂದ ಆತನನ್ನು ಹಿಂಬಾಲಿಸಿದ ಸ್ವಸಂತೋಷದ ನಿರ್ಧಾರವೇ ಈ ಸಹಗಮನ ಪದ್ಧತಿಯ ಪ್ರಾರಂಭಕ್ಕೆ ಮೂಲವಾಗಿದ್ದಿರಬೇಕು' ಎಂದು ಅಭಿಪ್ರಾಯಪಟ್ಟಿದ್ದಾರೆ.[೪೨] ಎಂ. ಚಿದಾನಂದಮೂರ್ತಿ ಅವರು 'ತಾನು ಸತ್ತಮೇಲೆ ತನ್ನ ಪ್ರೇಯಸಿಯು ಇನ್ನೊಬ್ಬನ ವಶಳಾಗುವ ಸಾಧ್ಯತೆಯನ್ನು ಕಲ್ಪಿಸಿಕೊಂಡ ಪುರುಷನ ಅಸೂಯೆಯೂ ಕಾರಣವಿರಬಹುದು' ಎಂದಿದ್ದಾರೆ.[೪೩] ಎಂ.ಎಂ. ಕಲಬುರ್ಗಿ ಅವರು 'ಪತಿಯ ಮರಣದ ತರುವಾಯ ತನ್ನ ಬದುಕುವಿಕೆ ಮತ್ತು ಪಾವಿತ್ರ್ಯಗಳ ಅನಿಶ್ಚಿತತೆ ಕಾರಣವಾಗಿ ಸ್ತ್ರೀವರ್ಗವೇ ಇದನ್ನು ರೂಪಿಸಿಕೊಂಡಿರಬಹುದು' ಅಥವಾ 'ಪತಿಯ ಮರಣದ ತರುವಾಯ ಸತಿಯನ್ನು ಮರಣಕೂಪಕ್ಕೆ ತಳ್ಳಿ, ಅವಳ ಆಸ್ತಿಯನ್ನು ಸೆಳೆಯಲು ಪ್ರಭುವರ್ಗ ಇಲ್ಲವೆ ಪುರೋಹಿತವರ್ಗ ಈ ಯೋಜನೆಯನ್ನು ರೂಪಿಸಿರಬಹುದು' ಎಂದಿರುವರು.[೪೪] ಬಸವರಾಜ ಕಲ್ಗುಡಿಯವರು 'ಧರ್ಮ-ನೀತಿಗಳ ಪ್ರಭಾವ, ಸ್ತ್ರೀಯರಲ್ಲಿ ಕಂಡರಿಯದ ಅಲೌಕಿಕ ಶಕ್ತಿಯ ಕುರಿತಾದ ಭಯ ಮತ್ತು ಒಂಟಿಯಾಗಿ ಎದುರಿಸಬೇಕಾದ ಆರ್ಥಿಕ-ಸಾಮಾಜಿಕ ಪರಿಸ್ಥಿತಿಗಳ ಒತ್ತಡಗಳಿರಬಹುದು' ಎಂದಿದ್ದಾರೆ.[೪೫] ಚೆನ್ನಕ್ಕ ಎಲಿಗಾರ ಅವರು 'ಹೀಗೆ ಸಾಯುವುದರಿಂದ ಗಂಡನಿಗೆ ಸ್ವರ್ಗ ಪ್ರಾಪ್ತಿಯಾಗುವುದಲ್ಲದೆ, ತಾನು ಸ್ವರ್ಗ ಪಡೆದು ಮುಂದಿನ ಜನ್ಮದಲ್ಲಿ ಮತ್ತೆ ಪತಿ-ಪತ್ನಿಯರಾಗಿ ಹುಟ್ಟುವವೆಂಬ ಕಲ್ಪನೆ' ಎಂದು ಅಭಿಪ್ರಾಯಿಸಿದ್ದಾರೆ.[೪೬] ವಿದ್ವಾಂಸರ ಅಭಿಪ್ರಾಯಗಳು ಏನೇ ಇದ್ದರೂ ಸ್ತ್ರೀಯರ ಒತ್ತಾಸೆಗಳಿಂದಾಗಿ ಈ ಪದ್ಧತಿ ಸಮಾಜದಲ್ಲಿ ಜರುಗಿರಬಹುದು ಮತ್ತು ಬಲಾತ್ಕಾರದ ಅಂಶವೂ ಅಲ್ಲಿರಲಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಈ ಅಂಶವನ್ನು ಶಾಸನ, ಜನಪದ ಸಾಹಿತ್ಯ ಹಾಗೂ ವಿದೇಶಿಯರ ಬರವಣಿಗೆಗಳಿಂದಲೂ ಗಮನಿಸಬಹುದು. ಯಾವ ಮಹಿಳೆಯೂ ಸತಿ ಹೋಗುವುದಕ್ಕೆ ಬಹಿರಂಗವಾಗಿ ವಿರೋಧಿಸಿದ ಉದಾಹರಣೆಗಳಿಲ್ಲ. ಆದರೆ ಅವರ ಸಮ್ಮತಿಯ ಹಿಂದೆ ಸಮಾಜದ ಒತ್ತಡವಿತ್ತು ಎಂಬುದನ್ನು ವಿದ್ವಾಂಸರ ಅಭಿಪ್ರಾಯಗಳಿಂದ ಗ್ರಹಿಸಬಹುದು. ಸ್ವಂತ ಇಚ್ಛೆಯಿಂದ ಸಹಗಮನ ಮಾಡುವ ಹೆಣ್ಣು ದೇಹಕ್ಕಾಗುವ ನೋವನ್ನು ಸಹಿಸಲಾಗದೆ ಭಯದಿಂದ ಹಿಂದೆ ಸರಿಯುವುದಿಲ್ಲ. ಆದರೆ ಈ ರೀತಿ ಹಿಂದೆ ಸರಿಯುವ ಸಾಧ್ಯತೆ ಇದ್ದ ಕಾರಣಕ್ಕೆ ಅವರು ಭಯಂಕರವಾಗಿ ಉರಿಯುವ ಬೆಂಕಿಯನ್ನು ನೋಡಬಾರದೆಂದು ಅವರಿಗೂ ಬೆಂಕಿಗೂ ಮಧ್ಯೆ ಗಂಡಸರು ಒಂದು ಪರದೆ ಹಿಡಿದು ನಿಂತಿರುತ್ತಿದ್ದರಂತೆ.[೪೭]

ಸತಿ ಆಚರಿಸುವವಳು ಮೊದಲು ಎಣ್ಣೆ, ಅರಿಶಿಣ ಹಚ್ಚಿಕೊಂಡು ತಲೆಯಲ್ಲಿ ಕೇದಗೆಯ ಹೂವನ್ನು ಮುಡಿದು ಹಳದಿ ಸೀರೆಯನ್ನುಟ್ಟು ವಧುವಿನಂತೆ ಸಿದ್ಧಗೊಳ್ಳುತ್ತಿದ್ದಳು. ಒಂದು ಕೈಯಲ್ಲಿ ನಿಂಬೆಹಣ್ಣು, ಮತ್ತೊಂದು ಕೈಯಲ್ಲಿ ಕನ್ನಡಿ ಹಿಡಿದಿರುತ್ತಾಳೆ. ನಿಂಬೆಹಣ್ಣು ಶುಭದ ಸಂಕೇತವಾಗಿತ್ತು. ತನ್ನ ಅಲಂಕಾರವನ್ನು ಅಂತಿಮವಾಗಿ ಕಣ್ತುಂಬ ನೋಡುವ ಉದ್ದೇಶದಿಂದ ಕನ್ನಡಿಯನ್ನು ಹಿಡಿದಿರುತ್ತಿದ್ದಳು. ಹೀಗೆ ಸಿದ್ಧಗೊಂಡ ನಂತರ ಊರ ಮಹಾಜನರ ಸಮ್ಮುಖದಲ್ಲಿ ಮನೆ ಮನೆಗೆ ಕಾಲು ನಡಿಗೆಯಿಂದ ಹೋಗಿ ಕೋರೊಟ ಮಾಡಿ ಅಗ್ನಿ ಪ್ರವೇಶದ ಸ್ಥಳಕ್ಕೆ ತೆರಳುತ್ತಿದ್ದಳು. ಅನುಕೂಲಸ್ಥಳಾದವಳು ಚಿತೆಗೆ ತೆರಳುವ ಮುನ್ನ ನೆಂಟರಿಷ್ಟರನ್ನೆಲ್ಲಾ ಸೇರಿಸಿ ಊಟೋಪಚಾರ ಮಾಡಿ ಕುದುರೆ ಮೇಲೆ ಮೆರವಣಿಗೆ ಹೊರಡುತ್ತಾಳೆ. ಕುದುರೆ ಬಿಳಿ ಇಲ್ಲವೇ ಬೂದು ಬಣ್ಣದ್ದಾಗಿರಬೇಕಿತ್ತು. ಚಿತೆ ಬಳಿಗೆ ಬಂದು ಪೂರ್ವಾಭಿಮುಖವಾಗಿ ನಿಂತು ಮೂರು ಸಲ ನಮಸ್ಕಾರ ಮಾಡಿ ತೊಟ್ಟ ಆಭರಣಗಳನ್ನೆಲ್ಲಾ ನೆಂಟರಿಷ್ಟರಿಗೆ ಹಂಚಿ ಸೇರಿದ್ದ ಜನಕ್ಕೆ ಹೀಗೆ ಹೇಳುತ್ತಾಳೆ. ಗಂಡಸರನ್ನು ಕುರಿತು 'ನೋಡಿ ಗಂಡನೊಡನೆ ಸಾಯುವ ಹೆಂಗಸಿಗೆ ನೀವೆಷ್ಟು ಕೃತಜ್ಞರಾಗಿರಬೇಕು' ಎಂದು ಹೇಳುತ್ತಾಳೆ. ಹೆಂಗಸರನ್ನು ಕುರಿತು 'ನಿಮ್ಮ ಪತಿ ಭಕ್ತಿ ಎಷ್ಟಿರಬೇಕು ಎಂಬುದನ್ನು ನೆನಪಿಸಿಕೊಳ್ಳಿ, ನನ್ನಂತೆ ನೀವೂ ನಿಮ್ಮ ಪತಿಯರನ್ನು ಅನುಸರಿಸಬೇಕು' ಎನ್ನುತ್ತಾಳೆ. ಇಷ್ಟು ಹೇಳಿದ ಮೇಲೆ ಆಕೆಯ ಕೈಗೆ ಎಣ್ಣೆಯ ಗಡಿಗೆಯನ್ನು ಕೊಡುತ್ತಾರೆ. ಆಕೆ ಅದನ್ನು ತಲೆಯ ಮೇಲಿಟ್ಟುಕೊಂಡು ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಾಳೆ. ಚಿತೆಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ, ಆಮೇಲೆ ಗಡಿಗೆಯ ಎಣ್ಣೆಯನ್ನು ಉರಿಯುವ ಚಿತೆಗೆ ಸುರಿದು, ಗಡಿಗೆಯನ್ನು ಅದರೊಳಗೆ ಎಸೆದು ಅಗ್ನಿಕುಂಡಕ್ಕೆ ಧುಮುಕುತ್ತಾಳೆ. ಆಕೆ ಮೇಲೆ ಎಣ್ಣೆ, ತುಪ್ಪ, ಒಣ ಸೌದೆಗಳನ್ನು ಹಾಕುತ್ತಿದ್ದರಂತೆ.[೪೮] ಚಿತೆ ಹಾಯುವ ಕೊನೆ ಘಳಿಗೆಯಲ್ಲೂ ಅವಳಿಂದ ಇತರೆ ಮಹಿಳೆಯರಿಗೆ ಆದರ್ಶದ ಮಾತುಗಳನ್ನು ಸಮಾಜ ಆಡಿಸಿರುವುದು ಕಂಡುಬರುತ್ತದೆ. ಹೀಗೆ ಅಸ್ತಿತ್ವದಲ್ಲಿದ್ದ ಈ ಮಹಾಸತಿ ಆಚರಣೆಯು ಎರಡು ವಿಧಾನದಲ್ಲಿ ನಡೆದುಕೊಂಡು ಬಂದಿದೆ. ಒಂದು ಸಹಗಮನ ಪದ್ಧತಿ, ಮತ್ತೊಂದು ಅನುಗಮನ ಪದ್ಧತಿ.

**೫.೧.೨ ಮಹಾಸತಿ ಆಚರಣೆ ವಿಧಗಳು**

**೨.೧. ಸಹಗಮನ ಪದ್ಧತಿ**

ಸಹಗಮನ ಪದದ ಅರ್ಥವೇ ಹೆಂಡತಿಯೊಬ್ಬಳು ಸತ್ತ ಗಂಡನ ಜೊತೆಗೆ ಸಾಯುವುದನ್ನು ತಿಳಿಸುವ ಪದ, ಸಹಗಮನ, ಸಹಮರಣ, ಅನ್ವಾರೋಹಣ ಎಂಬ ಪದಗಳನ್ನು ವಿದ್ವಾಂಸರು ಸಮಾನಾರ್ಥದಲ್ಲಿ ಬಳಸಿದ್ದಾರೆ. 'ಸಹಗಮನ' ಎಂಬ ಪದವನ್ನು ಶಾಸನಗಳು ವಿಪುಲವಾಗಿ ಬಳಸಿದ್ದರೂ ಹೇಗೆ ಸಹಗಮನ ಮಾಡಿದಳು ಎನ್ನುವುದನ್ನು ಹೇಳುವುದಿಲ್ಲ. ಸಹಗಮನದ ಮೊದಲನೆಯ ಐತಿಹಾಸಿಕ ನಿದರ್ಶನವೆಂದರೆ ಕ್ರಿ.ಪೂ. ೩೧೬ರಲ್ಲಿ ಗ್ರೀಕರೊಡನೆ ಹೋರಾಡಿ ಮಡಿದ ಕೆತ್ಯೂಸನ ಕಿರಿಯ ಹೆಂಡತಿಯ ಸಹಗಮನವೆಂದು ವಿದ್ವಾಂಸರು ಗುರುತಿಸಿದ್ದಾರೆ.[೪೯] ಕರ್ನಾಟಕದಲ್ಲಿ ಸಹಗಮನದ ಅತ್ಯಂತ ಪ್ರಾಚೀನ ಉಲ್ಲೇಖವೆಂದರೆ ಕ್ರಿ.ಶ.ಸು. ೪೦೦ರ

ಸೊರಬ ತಾಲೂಕಿನ ಶಾಸನ. ಕದಂಬ ವಂಶದ ರಾಣಿಯೊಬ್ಬಳು ರವಿವರ್ಮನೊಡನೆ ಮುಕ್ತಳಾದಂತೆ ಆ ಶಾಸನವು ಉಲ್ಲೇಖಿಸುತ್ತದೆ.[೫೦] ಮಾಸ್ತಿಗಲ್ಲುಗಳ ಅಧ್ಯಯನದಲ್ಲಿ ನಮಗೆ ತೊಡಕಾಗುವ ಅಂಶವೆಂದರೆ ಬಹುತೇಕ ಮಾಸ್ತಿ ಸ್ಮಾರಕಶಿಲ್ಪಗಳಲ್ಲಿ ಬರಹವಿಲ್ಲದಿರುವುದು ಇಲ್ಲಿ ನಮಗೆ ಶಿಲ್ಪದ ವಿವರಗಳೇ ಮುಖ್ಯವಾಗುತ್ತವೆ. ಅನುಗಮನ ಮಾಸ್ತಿಗಲ್ಲುಗಳಲ್ಲಿ ಸತಿಯನ್ನು ಮಾತ್ರವೇ ಕಂಡರಿಸಲಾಗಿರುತ್ತದೆ. ಆದರೆ ಸಹಗಮನ ಮಾಸ್ತಿಗಲ್ಲುಗಳಲ್ಲಿ ಸತಿ–ಪತಿಗಳಿಬ್ಬರನ್ನೂ ಕೆತ್ತಲಾಗಿರುತ್ತದೆ. ಆದ್ದರಿಂದ ಸಹಗಮನದ ಶಿಲ್ಪಗಳನ್ನು ವೀರಮಾಸ್ತಿ ಸ್ಮಾರಕಗಳೆಂತಲೂ ಗುರುತಿಸಲಾಗುತ್ತದೆ. 'ರಾಮಂಣನು ಆಯಿಸೂರ ಹುಯಲಿ ಬಿದ್ದನು. ಆತನ ಮದವಳಿಗೆ ರಾಮಾಯಿ ವೀರಮಾಸ್ತಿಯಾದಲಿ ನಿಲಿಸಿದ ವೀರಗಲ್ಲು' ಎಂಬಲ್ಲಿ[೫೧] ವೀರಸ್ವರ್ಗವೇರಿದ ಗಂಡನೊಡನೆ ಸತ್ತವಳ ಮಾಸ್ತಿ ಪ್ರಸಂಗವನ್ನು 'ವೀರಮಾಸ್ತಿ' ಎಂದು ಕರೆದಿರುವುದು ಸತಿ–ಪತಿಗಳಿಬ್ಬರನ್ನು ಸ್ಮಾರಕದಲ್ಲಿ ಚಿತ್ರಿಸಿರುವುದನ್ನೇ ಸೂಚಿಸುತ್ತದೆ ಎನ್ನಬಹುದು. ಅಂದರೆ ಯುದ್ಧ ಮತ್ತ್ಯಾವುದೋ ಹೋರಾಟದಲ್ಲಿ ವ್ಯಕ್ತಿ ಮಡಿದಾಗ ಆತನ ಶವದ ಜೊತೆಯಲ್ಲಿಯೇ ಪತ್ನಿಯು ಸಹಗಮನ ಮಾಡಿರುವುದರಿಂದ ಆ ಮಹಾಸತಿಗೂ ಪ್ರಾಮುಖ್ಯತೆಯಿರುತ್ತದೆ. ಆ ವೀರ ಮತ್ತು ಆತನ ಪತ್ನಿ ಇಬ್ಬರ ಶಿಲ್ಪಗಳಿಗೂ ಪ್ರಾಮುಖ್ಯತೆಯಿರುವಂತೆ ಸ್ಮಾರಕವನ್ನು ಕೆತ್ತಿರುತ್ತಾರೆ. ಇಲ್ಲಿ ವೀರನು ಆಯುಧಪಾಣಿಯಾಗಿ ಹೋರಾಟದ ಭಂಗಿಯಲ್ಲಿ, ಆತನ ಪತ್ನಿಯು ತನ್ನ ಬಲಗೈಯನ್ನು ಮೇಲೆತ್ತಿ ಅಭಯ ಹಸ್ತವನ್ನು ತೋರುತ್ತಿರುವಂತೆ ನಿಂತಿರುತ್ತಾಳೆ. ಇಂತಹ ಸ್ಮಾರಕ ಶಿಲ್ಪಗಳನ್ನು ಸಹಗಮನ ಮಾಸ್ತಿಗಲ್ಲು ಅಥವಾ ವೀರಮಾಸ್ತಿಗಲ್ಲು ಎಂದು ಕರೆಯಲಾಗುತ್ತದೆ.[೫೨] ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ಬಹುಪಾಲು ಸಹಗಮನ ಸತಿಗಲ್ಲುಗಳು ಲಿಪಿರಹಿತವಾಗಿವೆ. ಇಲ್ಲಿ ಶಿಲ್ಪದ ಲಕ್ಷಣಗಳೇ ನಮಗೆ ಮುಖ್ಯವಾಗುತ್ತವೆ. ಶಿಲ್ಪಿ ಸತಿಘಟನೆಗಳನ್ನು ತಾನು ಕಂಡಂತೆ ಕಲ್ಲಿನಲ್ಲಿ ಕಂಡರಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಮಡಿದ ಗಂಡನೊಡನೆ ಸತಿ ಹೋದವಳು ಆಚರಿಸುತ್ತಿದ್ದ ರೀತಿ–ನೀತಿಗಳನ್ನು ಶಿಲ್ಪದ ಮೂಲಕ ಬಿಡಿಸಲು ಪ್ರಯತ್ನಿಸದೇ ಸತಿ ಹಾಗೂ ಅವಳ ಗಂಡ ಮಡಿದ ಕಾರಣವನ್ನು ಸಂಕ್ಷಿಪ್ತವಾಗಿ ಅಭಿವ್ಯಕ್ತಿಗೊಳಿಸಲು ಮುಂದಾಗಿರುವುದು ಗೋಚರವಾಗುತ್ತದೆ. ಈ ಪ್ರಯತ್ನದಿಂದಾಗಿ ಸಹಗಮನ ಸತಿಗಲ್ಲುಗಳಲ್ಲಿ ತಕ್ಕಮಟ್ಟಿಗೆ ವೈವಿಧ್ಯತೆ ಕಾಣಿಸಿಕೊಂಡಿವೆ. ಪ್ರಸ್ತುತ ಅಧ್ಯಯನ ಪ್ರದೇಶದ ಸಹಗಮನ ಸತಿಗಲ್ಲುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಕಂಡಂತೆ ಗುರುತಿಸಿಕೊಂಡು ವಿವರಿಸಲಾಗಿದೆ.

### ೧.೧. ಸಹಗಮನ ಸ್ಮಾರಕ ಶಿಲ್ಪಗಳು

#### ಅ. ಶಾಸನವಿರುವ ಸಹಗಮನ ಸ್ಮಾರಕ ಶಿಲ್ಪಗಳು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬರಹಗಳಿರುವ ಸಹಗಮನ ಸ್ಮಾರಕಶಿಲ್ಪಗಳು ಕಡಿಮೆ ಸಂಖ್ಯೆಯಲ್ಲಿ ಕಂಡುಬಂದಿವೆ. ಈ ಶಾಸನಗಳು ಸತಿಯು ಹೇಗೆ ಸಹಗಮನಗೊಂಡಳು ಎಂಬುದನ್ನು ವಿವರವಾಗಿ ತಿಳಿಸುವ ಬದಲು ವಿಷಯಗಳನ್ನು ಸಂಕ್ಷಿಪ್ತವಾಗಿ ವಿವರಿಸಲು ಮಾತ್ರ ಸಾಕಾರಗೊಂಡಿವೆಯೆಂದು ಅಭಿಪ್ರಾಯಿಸಬಹುದು. ಕ್ರಿ.ಶ. ೧೩೮೨ರಲ್ಲಿ ಶ್ರೀ ಮುದೆಯ ಹೆಗ್ಗಡೆಯರ

ಮಗ ಬಯಿಚೆಯ ಹೆಗ್ಗಡೆ ಆತನ ಮಗ ನುಂಕಗವುಡನು ಹೋರಾಟವೊಂದರಲ್ಲಿ ಸ್ವರ್ಗಸ್ತನಾದನು. ಆ ಉಂಕಗೌಡನ ಅರಸಿಯರಲ್ಲಿನ ಮಹಾಸತಿ ದೇಮಾಯಿಯು ಅಗ್ನಿಪ್ರವೇಶ ಮಾಡಿ ಸುರಲೋಕ ಪ್ರಾಪ್ತಳಾದಳು.[೫೩] ಇಲ್ಲಿ ವೀರನ ಹಿರಿಯ ಪತ್ನಿ ಸತಿ ಹೋದಳೆಂದು ತಿಳಿದುಬರುತ್ತದೆ. ಕ್ರಿ.ಶ. ೧೩೯೮ರ ಒಂದು ಸ್ಮಾರಕಶಿಲ್ಪದಿಂದ ಬೊಂಮಿಯಗವುಡ ಎಂಬುವನು ಸತ್ತಾಗ, ಆತನ ಹೆಂಡತಿ 'ಮಹಾಸತಿ ಲಖಮಾಯಿ' ಅಗ್ನಿಪ್ರವೇಶ ಮಾಡಿ ಸುರಲೋಕ ಪ್ರಾಪ್ತಿಯಾದರು. ಇದಾದ ದಿನ ೧೧ಕ್ಕೆ ಓಸನದ ಹಿರಿಯಗವುಡನ ತಮ್ಮ ಬಯಿಚಗೌಡ ಮಗ ಕೇತಗವುಡ ಕಲ್ಲನೆಡಸಿ ಪ್ರತಿಷ್ಠೆಯ ಮಾಡಿದರು ಎಂಬುದಾಗಿ ತಿಳಿದುಬರುತ್ತದೆ.[೫೪] ಕ್ರಿ.ಶ. ೧೪೦೨ರಲ್ಲಿ (ಶ್ರೀಶಕೆ ೧೩೨೪ ಚಿತ್ರಭಾನು ಸಂವತ್ಸರ ಸೋಮವಾರದಂದು) ಬಯಿರಗೌಡನ ಮಗ ಅರಿಯಪ ಎಂಬುವನು ಹೋರಾಟವೊಂದರಲ್ಲಿ ಮಡಿದಾಗ ಆತನ ಪತ್ನಿಯರಾದ ದೇಮಾಯಿ ಮತ್ತು ಮಲ್ಲಾಯಿಗಳು ಸತಿಹೋದಾಗ ಚೀಲಗೌಡನೆಂಬುವನು ಈ ಕಲ್ಲು ನಿರ್ಮಿಸಿದನೆಂದು ತಿಳಿಯುತ್ತದೆ.[೫೫] ಶ್ರೀ ಶಕೆ ೧೩೪೨ (ಕ್ರಿ.ಶ. ೧೪೨೦) ಚಿತ್ರಭಾನು ಸಂವತ್ಸರ ಮಾಘ ಬಹುಳ ೧೪ ಸೋಮವಾರದಂದು ಶಂಕಣ ಎಂಬುವನು ಮಡಿದಾಗ ಆತನ ಪತ್ನಿ ದೇವನಾಕಿತ್ತಿ ಸಹಗಮನ ಗೊಂಡಿದ್ದಾಳೆ.[೫೬] ಇದೇ ಕಾಲಕ್ಕೆ ಸೇರಿದ ಒಂದು ಸ್ಮಾರಕವು ಚಿಕ್ಕರ ಸಿಂಗಬಾಯಿಯು ಮಾಡಿಕೊಂಡ ಸಹಗಮನವನ್ನು ಉಲ್ಲೇಖಿಸುತ್ತದೆ.[೫೭] ಇನ್ನೊಂದು ಸ್ಮಾರಕದಿಂದ ಬೊಂಮನಾಯಕನ ಮಗಳು ಕಾಳದೇವಿಯು ಸಹಗಮನಗೊಂಡಿರುವುದು ತಿಳಿಯುತ್ತದೆ.[೫೮] ಹರಿಹರದ ಕ್ರಿ.ಶ. ೧೬೯೨ರ ಸ್ಮಾರಕವೊಂದು ಶ್ರೀ ಶುಭ ಮತ್ತು ಪ್ರಜ್ಯೋತ್ಪತಿ ಸಂವತ್ಸರದ ಪುಶ್ಯ ಬ ೧೦ ಲು ಶ್ರೀ ಮಹಾಮಂಡಳೇಶ್ವರಾದ ರಂಗಪ್ಪರಸ ಜಯದೇವ ಮಹಾ ಅರಸುಗಳ ಕಾರ್ಯಕರ್ತರಾದ ಪ್ರಸಂನ ವೊಡೇರು ತಳವಾರಕೆ ಹಳಿ ನಾಯಕಿ ಕೊಟ ಸತಿ ಅಯ ಉಂಬುಳಿ ಹೊಲವೊಕುಳದ ಹೊಲಸ್ತಳ ಚಿಲಮಾಗೆರೆ ಸ್ತಳಯಿದಕೆ ತಪಿದರೆ ತಾಯಿಗೆ ಅಳುಪಿದರು ಎಂದು ಉಲ್ಲೇಖಿಸುತ್ತದೆ.[೫೯] ಇಲ್ಲಿ ಸತಿಗೆ ಉಂಬಳಿ ಬಿಟ್ಟ ಹಾಗೆ ಶಾಸನದ ವಿವರವಿದ್ದಂತೆ ತೋರುತ್ತದೆ. ಸೊರಟೂರು ಗ್ರಾಮದ ತ್ರುಟಿತ ಸ್ಮಾರಕವೊಂದು ಶುಕ್ಲ ಸಂವತ್ಸರ ಮಾರ್ಗಶಿರ ಬಹುಳ ೧೪ ಭಾನುವಾರದಂದು ಸಂಕಮ್ಮ ಎಂಬಾಕೆ ಸಹಗಮನಗೊಂಡಾಗ ಸಂಕಗೌಡನು ಕೊಡಮಾಡಿದ ಭೂ ದಾನವನ್ನು ಉಲ್ಲೇಖಿಸುತ್ತದೆ.[೬೦] ಗುಂಡಿಚಟ್ನಿಹಳ್ಳಿಯ ಅಪ್ರಕಟಿತ ಸ್ಮಾರಕವೊಂದು ನಾಲ್ಕು ಹಂತದಲ್ಲಿದೆ. ಮೊದಲ ಹಂತದಲ್ಲಿ ಕುದುರೆ ಮೇಲಿರುವ ವೀರನು ಭರ್ಚಿಯನ್ನು ಹಿಡಿದಿದ್ದಾನೆ. ಅವನ ಹಿಂದೆ ಸತಿಯರಿಬ್ಬರು ಬಲಗೈಯನ್ನು ಮೇಲಕ್ಕೆತ್ತಿ ನಿಂಬೆಹಣ್ಣು ಹಿಡಿದಿರುವರು. ಎರಡನೇ ಹಂತದಲ್ಲಿ ವೀರನು ಪಲ್ಲಕ್ಕಿಯಲ್ಲಿ ಯುದ್ಧಕ್ಕೆ ಹೋಗುವ ಚಿತ್ರಣವಿದ್ದರೆ, ಮೂರನೇ ಹಂತದಲ್ಲಿ ವೀರನು ಮಂಗಳವಾದ್ಯಗಳೊಂದಿಗೆ ಸ್ವರ್ಗಾರೋಹಣ ಮಾಡುವ ಚಿತ್ರಣವಿದೆ. ನಾಲ್ಕನೇ ಹಂತದಲ್ಲಿ ವೀರನು ತನ್ನ ಇಬ್ಬರು ಪತ್ನಿಯರೊಂದಿಗೆ ಸ್ವರ್ಗದಲ್ಲಿರುವುದನ್ನು ತೋರಿಸಲಾಗಿದೆ. ಈ ಸ್ಮಾರಕದ ಮಧ್ಯಪಟ್ಟಿಕೆಗಳಲ್ಲಿ ಶಾಸನವಿದೆ. ಎಲೆಬೇತೂರಿನ ವೀರಮಾಸ್ತಿಕಲ್ಲಿನ ಎರಡನೆಯ ಹಂತದಲ್ಲಿ ಸತಿಯು ದೊಡ್ಡದಾಗಿ ಉರಿಯುತ್ತಿರುವ ಬೆಂಕಿಯ ಕುಂಡಕ್ಕೆ ಬೀಳಲು ನಿಂತಿದ್ದಾಳೆ. ವಾದ್ಯಕಾರರು ಡೋಲು, ಜಾಗಟೆಗಳನ್ನು ಬಡಿಯುತ್ತಿರುವರು.[೬೧] ಬೆಂಕಿಗೆ ಬಿದ್ದ ಸತಿಯ ಆಕ್ರಂದನ ಬೇರೆಯವರಿಗೆ ಕೇಳಿಸದಿರುವ ದೃಷ್ಟಿಯಿಂದ ವಾದ್ಯಗಳನ್ನು ನುಡಿಸುತ್ತಿದ್ದರೆಂದು ತೋರುತ್ತದೆ.

**ಆ. ಪತಿಯ ಮರಣ ಕಾರಣವನ್ನು ಅಭಿವ್ಯಕ್ತಿಸುವ(ಹಂತಗಳಿರುವ) ಸತಿಯ ಶಿಲ್ಪಗಳು**

ಸತಿ ಹೋದವಳು ಮತ್ತು ಆಕೆಯ ಪತಿ ಮರಣ ಹೊಂದಿದ ಕಾರಣವನ್ನು ಈ ಸ್ಮಾರಕಶಿಲ್ಪಗಳು ಅಭಿವ್ಯಕ್ತಪಡಿಸುತ್ತಿವೆ. ಇವುಗಳನ್ನು ಸಾಮಾನ್ಯವಾಗಿ ಮೂರು ಅಥವಾ ನಾಲ್ಕು ಹಂತಗಳಲ್ಲಿ ಚಿತ್ರಿಸಲಾಗಿರುತ್ತದೆ. ಮೊದಲ ದೃಶ್ಯದಲ್ಲಿ ಗಂಡನು ಹೋರಾಟದಲ್ಲಿ ನಿರತನಾಗಿರುವಂತೆ, ಅವನ ಹಿಂದೆ ಸತಿಯು ನಿಂತಿರುವಂತೆ ಕೆತ್ತಲಾಗಿರುತ್ತದೆ. ಕೆಲವೊಂದು ಸ್ಮಾರಕಗಳಲ್ಲಿ ಸತಿಯನ್ನು ಎರಡನೆಯ ಹಂತದಲ್ಲಿ ಚಿತ್ರಿಸಿರುವುದುಂಟು. ಎರಡನೇ ದೃಶ್ಯದಲ್ಲಿ ಸತಿಪತಿಗಳಿಬ್ಬರೂ ಸ್ವರ್ಗಾರೋಹಣ ಮಾಡುವ ಚಿತ್ರಣವಿರುತ್ತದೆ. ಇನ್ನೂ ಕೆಲವು ಸ್ಮಾರಕಗಳಲ್ಲಿ ವೀರನೊಬ್ಬನೇ ಸ್ವರ್ಗಾರೋಹಣ ಮಾಡುತ್ತಿರುವಂತೆ ತೋರಿಸಲಾಗಿದೆ. ಸತಿ ಹೋಗುವುದರ ಮುಖ್ಯ ಗುರಿ ಅಥವಾ ಆದರ್ಶವೆಂದರೆ ದೇವಲೋಕ ಸಂಪಾದಿಸುವುದಾಗಿತ್ತು. ಈ ಕಾರಣದಿಂದಾಗಿ ಪತಿ-ಪತ್ನಿಯರಿಬ್ಬರೂ ದೇವಲೋಕದಲ್ಲಿರುವಂತೆ ಮೂರನೇ ದೃಶ್ಯದಲ್ಲಿ ತೋರಿಸಿರುವುದು ಸಾಮಾನ್ಯವಾಗಿದೆ. ಅಧ್ಯಯನದ ದೃಷ್ಟಿಯಿಂದ ಈ ಸ್ಮಾರಕಶಿಲ್ಪಗಳನ್ನು ಸತಿಗೊಂಡಿರುವವರ ಸಂಖ್ಯೆಯನ್ನು ಆಧರಿಸಿ ವಿವರಿಸಲಾಗಿದೆ.

**ಸಹಗಮನಗೊಂಡ ಒಬ್ಬ ಸತಿ**

ಒಬ್ಬ ಸತಿಯು ತನ್ನ ಗಂಡನೊಡನೆ ಸಹಗಮನಗೊಂಡಿರುವ ಸ್ಮಾರಕ ಶಿಲ್ಪಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿವೆ. ಚಿಕ್ಕಹಾಲಿವಾಣದ ಮೂರು ಶಿಲ್ಪಗಳಲ್ಲಿ ಒಬ್ಬ ಸತಿಯು ತನ್ನ ಪತಿಯೊಂದಿಗೆ ಸಹಗಮನಗೊಂಡಿರುವುದು ಗೋಚರವಾಗುತ್ತದೆ. ಈ ಸ್ಮಾರಕಗಳ ಮೊದಲ ಹಂತದಲ್ಲಿ ವೀರರು ಕುದುರೆಯ ಮೇಲೆ ಕುಳಿತು ಹೋರಾಟ ಮಾಡುವ ದೃಶ್ಯಗಳು ಅತಿ ಸುಂದರವಾಗಿವೆ. ಇದೇ ಹಂತಗಳಲ್ಲಿ ಸೇವಕರು ರಾಜನಿಗೆ ಛತ್ರಿ ಹಿಡಿದಿರುವುದನ್ನು, ಶತ್ರುಗಳು ಆಯುಧಗಳನ್ನು ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಮೂರನೆಯ ಹಂತದಲ್ಲಿ ಸತಿಪತಿಗಳಿಬ್ಬರು ಅಪ್ಸರೆಯರೊಂದಿಗೆ ಸ್ವರ್ಗಕ್ಕೆ ತೆರಳುತ್ತಿರುವ ಚಿತ್ರಣಗಳಿವೆ. ಈ ಹಂತದಲ್ಲಿ ವೀರನನ್ನು ಎತ್ತರವಾದ ಪೀಠದ ಮೇಲೆ ಕುಳಿತಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ. ಈ ಸ್ಮಾರಕಗಳ ಕೊನೆಯ ಹಂತದಲ್ಲಿ ವೀರರು ತಮ್ಮ ಸತಿಹೋದ ಪತ್ನಿಯರೊಂದಿಗಿರುವುದನ್ನು ತೋರಿಸಲಾಗಿದೆ.[೮] ಗುಂಡಿಚಟ್ನಹಳ್ಳಿಯ ಒಂದು ಸ್ಮಾರಕದ ಮೊದಲ ಹಂತದಲ್ಲಿ ವೀರನು ಕುದುರೆ ಮೇಲೆ ಕುಳಿತಿರುವನು. ಕುದುರೆ ದಿಬ್ಬವನ್ನು ಏರಿ ಮುನ್ನಡೆಯುತ್ತಿರುವಂತೆ ಕೆತ್ತಲಾಗಿದೆ. ಇಲ್ಲಿ ವೀರನು ಬಲಗೈಯಲ್ಲಿ ಕುದುರೆ ಲಗಾಮು, ಎಡಗೈಯಲ್ಲಿ ಆಯುಧವನ್ನು ಹಿಡಿದಿರುವುದು ಇತರೆ ಶಿಲ್ಪಗಳಿಗಿಂತ ಭಿನ್ನವೆನಿಸಿದೆ. ಕುದುರೆ ಹಿಂಬದಿಯಲ್ಲಿ ಸತಿಯೊಬ್ಬಳು ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು, ಬಲಗೈಯನ್ನು ಮೇಲೆತ್ತಿ ಹರಸುತ್ತಿರುವಂತೆ ಕಂಡರಿಸಲಾಗಿದೆ. ಆಕೆಯ ಉಡುಪು ಮತ್ತು ಆಭರಣಗಳು ಗಮನ ಸೆಳೆಯುತ್ತವೆ. ಎರಡನೆಯ ಭಾಗದಲ್ಲಿ ವೀರನು ಅಪ್ಸರೆಯರು, ನಾಟ್ಯ ಮಾಡುವವರು ಮತ್ತು ವಾದ್ಯಗಾರರೊಂದಿಗೆ ಇದ್ದಾನೆ. ಈ ದೃಶ್ಯವು

ವೀರನನ್ನು ಹರ್ಷದಿಂದ ಸ್ವರ್ಗಕ್ಕೆ ಹೋದುದನ್ನು ಸೂಚಿಸುತ್ತದೆ. ಇಲ್ಲಿ ವೀರನೊಬ್ಬನೇ ಸ್ವರ್ಗಕ್ಕೆ ತೆರಳುತ್ತಿರುವಂತೆ ಬಿಡಿಸಲಾಗಿದೆ. ಸತಿಯನ್ನು ಒಮ್ಮೆಲೇ ಪತಿಯೊಂದಿಗೆ ಸ್ವರ್ಗದಲ್ಲಿರುವಂತೆ ತೋರಿಸಲಾಗಿದೆ. ಇದಕ್ಕೆ ನಿರ್ದಿಷ್ಟ ಕಾರಣ ತಿಳಿಯದು. ಪ್ರಾಯಶಃ ಅವನ ಶೂರತ್ವ ಅಥವಾ ಪುರುಷಪ್ರಧಾನ ವ್ಯವಸ್ಥೆ ಕಾರಣವಿರಬಹುದು. ಈ ಸ್ಮಾರಕದ ಮೇಲ್ಭಾಗದಲ್ಲಿ ಕೀರ್ತಿಮುಖ ಚಿತ್ರಣವಿದೆ. ಕೋಟೆಮಲ್ಲೂರಿನ ಒಂದು ಸ್ಮಾರಕದಲ್ಲಿ ವೀರನು ಕುದುರೆ ಮೇಲಿಂದ ಕೆಳಗಿಳಿದು ಹೋರಾಡುವ ದೃಶ್ಯವಿದೆ. ಎರಡನೆಯ ಪಟ್ಟಿಯಲ್ಲಿ ಮಾಸ್ತಿಯನ್ನು ಬಹಳ ದೊಡ್ಡದಾಗಿ ಮೂರನೆಯ ಪಟ್ಟಿಕೆಯನ್ನೂ ಆವರಿಸಿಕೊಳ್ಳುವಂತೆ ಕೆತ್ತಲಾಗಿದೆ. ಇದೇ ಹಂತದಲ್ಲಿ ಪಲ್ಲಕ್ಕಿಯಲ್ಲಿ ಸ್ವರ್ಗಾರೋಹಣ ಮಾಡಿರುವುದನ್ನು ತೋರಿಸಿದೆ. ಇಲ್ಲಿ ವೀರನಿಗಿಂತ ಮಾಸ್ತಿಯ ಶಿಲ್ಪಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿರುವುದನ್ನು ಗಮನಿಸಬಹುದು.[೨]

ಹಳೆಜೋಗ ಗ್ರಾಮದ ಅಗಸಿಕಟ್ಟೆ ಬಳಿಯಿರುವ ಎರಡು ಸ್ಮಾರಕಗಳು ಒಂದೇ ಲಕ್ಷಣಗಳನ್ನು ಹೊಂದಿವೆ. ಈ ಶಿಲ್ಪಗಳ ಮೊದಲ ಪಟ್ಟಿಕೆಯ ಬಲಭಾಗದಲ್ಲಿ ವೀರರು ಬಿಲ್ಲನ್ನು ಎಡಗೈ ಹೆಗಲಿಗೆ ಹಾಕಿಕೊಂಡು ನಿಂತಿರುವ ಹಾಗೆ ಕೆತ್ತಲಾಗಿದೆ. ಅವರ ಬೆನ್ನ ಹಿಂದೆ ಬಿಲ್ಲುಗಳ ಬತ್ತಳಿಕೆಯನ್ನು ಕಟ್ಟಿದ್ದಾರೆ. ಒಂದು ಶಿಲ್ಪದ ಸತಿಯು ಎಡಗೈಯಲ್ಲಿ ಕನ್ನಡಿ ಹಿಡಿದಿದ್ದರೆ, ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು ಮೇಲೆತ್ತಿರುವಳು. ಇನ್ನೊಂದು ಶಿಲ್ಪದಲ್ಲಿ ಸತಿಯು ಎಡಗೈಯಲ್ಲಿ ಕಳಸವನ್ನು ಹಿಡಿದಿದ್ದರೆ, ಬಲಗೈಯನ್ನು ಮೇಲಕ್ಕೆತ್ತಿ ಹರಸುತ್ತಿರುವಂತೆ ತೋರಿಸಲಾಗಿದೆ. ಸತಿಯರು ಧರಿಸಿರುವ ಬಳೆ, ಕಿವಿಯೋಲೆ, ಮುತ್ತಿನ ಸರ, ತಲೆಯಲ್ಲಿ ಕೆದಗೆ ಹೂ ಮುಡಿದಿರುವುದನ್ನು ಕೆತ್ತಲಾಗಿದೆ. ಈ ಶಿಲ್ಪಗಳ ಎರಡನೆಯ ಪಟ್ಟಿಯಲ್ಲಿ ವೀರರ ಹೋರಾಟವನ್ನು ಚಿತ್ರಿಸಲಾಗಿದೆ. ಒಂದು ಸ್ಮಾರಕದಲ್ಲಿ ಅಶ್ವರೂಢ ವೀರನು ಕತ್ತಿಯಿಂದ ವೀರನಿಗೆ ಇರಿದಿರುವಂತೆ, ಮತ್ತೊಂದು ಸ್ಮಾರಕದಲ್ಲಿ ವೀರನಿಗೆ ಶತ್ರು ಪ್ರಯೋಗಿಸಿದ ಬಾಣಗಳು ದೇಹದ ಎಲ್ಲ ಭಾಗದಲ್ಲಿ ನಾಟಿಕೊಂಡಿರುವ ಹಾಗೆ ಕಂಡರಿಸಲಾಗಿದೆ. ಕೊನೆಯ ಪಟ್ಟಿಯಲ್ಲಿ ಸತಿ–ಪತಿಗಳು ಲಿಂಗದ ಸಾನ್ನಿಧ್ಯ ಪಡೆದಿರುವುದನ್ನು ತೋರಿಸಲಾಗಿದೆ. ಈ ಸ್ಮಾರಕಗಳಲ್ಲಿ ಸತಿ ಹೋದ ಮಹಿಳೆ ಹಾಗೂ ಪತಿ ಮಡಿದ ಕಾರಣವನ್ನು ಶಿಲ್ಪಿ ಸ್ಪಷ್ಟವಾಗಿ ನಿರೂಪಿಸಿರುವುದು ಕಂಡುಬರುತ್ತದೆ. ಇದೇ ದೃಶ್ಯವನ್ನು ಅಭಿವ್ಯಕ್ತಿಸುವ ಶಿಲ್ಪಗಳೆರಡು ಈ ಗ್ರಾಮದ ಹೊಲವೊಂದರಲ್ಲಿವೆ. ಆದರೆ ಈ ಸ್ಮಾರಕಗಳಲ್ಲಿ ವೀರರ ಹೋರಾಟವನ್ನು ಮೊದಲ ಹಂತದಲ್ಲೇ ತೋರಿಸಲಾಗಿದೆ. ಇಲ್ಲಿ ವೀರರು ಬಾಕುವಿನಿಂದ ಶತ್ರುಗಳ ಎದೆಗೆ ಇರಿದಿರುವಂತೆ ಕೆತ್ತಲಾಗಿದೆ. ಎರಡನೆಯ ಹಂತದಲ್ಲಿ ಸತಿಯರನ್ನು ಬಹಳ ದೊಡ್ಡದಾಗಿ ಚಿತ್ರಿಸಿ ಅವರು ಎಡಗೈಯಲ್ಲಿ ಗಿಂಡಿಯನ್ನು ಹಿಡಿದು, ಬಲಗೈಯನ್ನು ಮೇಲೆತ್ತಿ ಹೆಬ್ಬೆರಳುಗಳ ನಡುವೆ ನಿಂಬೆಹಣ್ಣು ಹಿಡಿದಿರುವುದನ್ನು ಬಿಡಿಸಲಾಗಿದೆ. ಸತಿಯರ ಬಲಭಾಗದಲ್ಲಿ ವೀರರು ಕೈಮುಗಿದುಕೊಂಡು ಪದ್ಮಾಸನದಲ್ಲಿ ಕುಳಿತಿರುವಂತೆ ಚಿಕ್ಕದಾಗಿ ಕೆತ್ತಲಾಗಿದೆ. ಕೊನೆಯ ಹಂತದಲ್ಲಿ ಪತಿ–ಪತ್ನಿಯರು ಸ್ವರ್ಗದಲ್ಲಿರುವುದನ್ನು ಕಂಡರಿಸಲಾಗಿದೆ.

ಹುಚ್ಚವನಹಳ್ಳಿಯ ಒಂದು ಸ್ಮಾರಕವು ಭಿನ್ನವಾಗಿ ಕೆತ್ತಲ್ಪಟ್ಟಿದೆ. ಇದು ಮೂರು ಹಂತದಲ್ಲಿ ನಿರ್ಮಾಣಗೊಂಡಿದ್ದರೂ ಒಂದೇ ಹಂತದ ಸ್ಮಾರಕದಂತೆ ಕಂಡುಬರುವುದು. ಇಲ್ಲಿ ಸತಿಯನ್ನು ಶಿಲ್ಪದ ಮುಕ್ಕಾಲು ಭಾಗ ಆವರಿಸಿಕೊಂಡಿರುವಂತೆ ಚಿತ್ರಿಸಿ, ಆಕೆಯ ಎಡಭಾಗದಲ್ಲಿ ಪತಿಯು ಆಯುಧಗಳನ್ನು ಹಿಡಿದು ನಿಂತಿರುವಂತೆ ಗೌಣವಾಗಿಸಿ ಕೆತ್ತಲಾಗಿದೆ. ಎರಡನೆಯ ಭಾಗವನ್ನು ಸಣ್ಣದಾಗಿಸಿ ಸತಿಪತಿಗಳಿಬ್ಬರು ಕುಳಿತಿರುವಂತೆ ಅವರ ಎರಡು ಬದಿಯಲ್ಲಿ ಇಬ್ಬರು ಬಿಲ್ಲುವಿಗೆ ಬಾಣವನ್ನು ಹೂಡಿ ನಿಂತಿರುವಂತೆ ಕಂಡರಿಸಿದೆ. ವೀರನು ಮಡಿದ ಕಾರಣ, ಸತಿಪತಿಗಳ ಸ್ವರ್ಗಾರೋಹಣ ಹಾಗೂ ಸತಿಪತಿಗಳಿಬ್ಬರ ಸ್ವರ್ಗ ಪ್ರಾಪ್ತಿ ದೃಶ್ಯಗಳನ್ನು ಈ ಹಂತದಲ್ಲಿ ಕಂಡರಿಸಲಾಗಿದೆ. ಸೂರಗೊಂಡನಕೊಪ್ಪ ಗ್ರಾಮದ ಸ್ಮಾರಕದಲ್ಲಿ ವೀರನು ಬಿಲ್ಲನ್ನು ಹಿಡಿದು ನಿಂತಿದ್ದಾನೆ. ವೀರನ ಎಡಭಾಗದಲ್ಲಿ ಸತಿಯು ಎಡಗೈಯಲ್ಲಿ ಕಳಸವನ್ನು ಹಿಡಿದು, ಬಲಗೈಯನ್ನು ಮೇಲೆತ್ತಿ ಹರಸುತ್ತಿರುವಂತೆ ಕೆತ್ತಲಾಗಿದೆ. ಕೊರಳಲ್ಲಿ ಮುತ್ತಿನ ಸರ, ಕಿವಿಯೋಲೆಗಳನ್ನು ಧರಿಸಿದ್ದಾಳೆ. ಎರಡನೆಯ ಪಟ್ಟಿಯಲ್ಲಿ ವೀರನ ಹೋರಾಟವನ್ನು ಚಿತ್ರಿಸಿದೆ.

ಹತ್ತೂರು ಗೋಪಗೊಂಡನಹಳ್ಳಿಯ ಸ್ಮಾರಕವನ್ನು ಕಲಾತ್ಮಕವಾಗಿ ಚಿತ್ರಿಸಲಾಗಿದೆ. ವೀರನು ಕುದುರೆ ಮೇಲೆ ಕುಳಿತು ಬಲಗೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ. ಸೇವಕನೊಬ್ಬ ವೀರನಿಗೆ ಛತ್ರಿ ಹಿಡಿದಿದ್ದಾನೆ. ಸತಿಯು ಎಡಗೈಯಲ್ಲಿ ಕನ್ನಡಿ ಹಿಡಿದು, ಬಲಗೈಯನ್ನು ಮೇಲೆತ್ತಿ ಹೆಬ್ಬೆರಳುಗಳ ಮಧ್ಯೆ ನಿಂಬೆಹಣ್ಣು ಹಿಡಿದಿರುವ ಚಿತ್ರಣವಿದೆ. ಇಲ್ಲಿ ಸತಿ ಧರಿಸಿರುವ ಬಳೆ, ಮುತ್ತಿನ ಸರ, ಕಂಠಿಹಾರ, ಕೇದಗೆ ಹೂ ಹಾಗೂ ಸೀರೆಯ ನೆರಿಗೆಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಎರಡನೆಯ ದೃಶ್ಯದಲ್ಲಿ ಮಂಟಪದೊಳಗಿರುವ ಸತಿ ಪತಿಗಳಿಬ್ಬರು ಅಪ್ಸರೆಯರು, ಮಂಗಳ ವಾದ್ಯದೊಂದಿಗೆ ಸ್ವರ್ಗಾರೋಹಣ ಮಾಡುತ್ತಿರುವ ವಿವರಗಳಿವೆ.

ಬಳ್ಳೇಶ್ವರದ ಎರಡು ಸ್ಮಾರಕಶಿಲ್ಪಗಳು ಅಪೂರ್ವವಾಗಿ ಚಿತ್ರಣಗೊಂಡಿವೆ. ಒಂದು ಸ್ಮಾರಕವು ನಾಲ್ಕು ಹಂತಗಳನ್ನು ಒಳಗೊಂಡಿದೆ. ಮೊದಲನೆಯ ಭಾಗದಲ್ಲಿ ಸತಿಯನ್ನು ಬಹಳ ದೊಡ್ಡದಾಗಿ ಚಿತ್ರಿಸಲಾಗಿದೆ. ಎಡಗೈಯಲ್ಲಿ ಕನ್ನಡಿ ಹಿಡಿದು ಬಲಗೈಯನ್ನು ಮೇಲೆತ್ತಿ ಹರಸುತ್ತಿರುವಳು. ಸತಿ ಮುಡಿದಿರುವ ಕೇದಗೆ ಹೂ ಆಕರ್ಷಕವಾಗಿ ಮೂಡಿಬಂದಿದೆ. ಸತಿಯ ಬಲಭಾಗದ ಅಂಚಿನ ಸಣ್ಣ ಪಟ್ಟಿಕೆಯಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದು ನಿಂತಿರುವುದನ್ನು ಗೌಣವಾಗಿ ಚಿತ್ರಿಸಲಾಗಿದೆ. ಇಲ್ಲಿ ಸ್ತ್ರೀಯ ಶಿಲ್ಪಕ್ಕೆ ವಿಶೇಷ ಪ್ರಾಶಸ್ತ್ಯ ನೀಡಲಾಗಿದೆ. ಎರಡನೆಯ ಭಾಗದಲ್ಲಿ ಹೋರಾಟದ ದೃಶ್ಯವಿದೆ. ವೀರನು ಒಂದು ಕೈಯಲ್ಲಿ ಬಿಲ್ಲು ಹಿಡಿದು, ಬಲಗೈಯಲ್ಲಿರುವ ಬಾಕುವಿನಿಂದ ಶತ್ರುವಿನ ಕುದುರೆಯ ಕತ್ತಿನ ಭಾಗದಲ್ಲಿ ಇರಿದಿದ್ದಾನೆ. ಕುದುರೆ ತನ್ನ ಮುಖವನ್ನು ಹಿಂದಕ್ಕೆ ತಿರುಗಿಸಿದೆ. ಶಿಲ್ಪಿ ತನ್ನ ಮಿತಿಯಲ್ಲಿ ಹೋರಾಟವನ್ನು ಸುಂದರವಾಗಿ ಚಿತ್ರಿಸಿದ್ದಾನೆ. ಮೂರನೆಯ ಭಾಗದಲ್ಲಿ ಮಡಿದ ವೀರನು ದೇವಕನ್ಯೆಯರು, ಮಂಗಳವಾದ್ಯಗಳೊಂದಿಗೆ ದೇವಲೋಕಕ್ಕೆ ಹೋಗುವ ಚಿತ್ರಣವಿದೆ. ಸತಿಯನ್ನು ನೇರವಾಗಿ ಪತಿಯೊಂದಿಗೆ ಶಿವಲೋಕದಲ್ಲಿರುವಂತೆ

ತೋರಿಸಲಾಗಿದೆ. ಇದೇ ವಿವರಗಳನ್ನು ಹೊಂದಿರುವ ಮತ್ತೊಂದು ಸ್ಮಾರಕ ಈ ಗ್ರಾಮದಲ್ಲಿ ಕಂಡುಬಂದಿರುವುದು. ಈ ಎರಡು ಶಿಲ್ಪಗಳ ಮೇಲ್ಭಾಗದಲ್ಲಿ ಸಿಂಹ ವ್ಯಾಳಿಯನ್ನು ಕೆತ್ತಲಾಗಿದೆ. ದಾಸರಹಳ್ಳಿಯ ಸ್ಮಾರಕಶಿಲ್ಪವೊಂದು ನಾಲ್ಕು ಹಂತಗಳಲ್ಲಿ ನಿರ್ಮಾಣಗೊಂಡಿದೆ. ಮೊದಲನೆಯ ಪಟ್ಟಿಕೆಯಲ್ಲಿ ಸತಿಯೊಬ್ಬಳನ್ನೇ ಪ್ರಧಾನವಾಗಿ ಚಿತ್ರಿಸಲಾಗಿದೆ. ಸತಿಯ ಬಲಗೈ ಭಾಗವು ತ್ರುಟಿತಗೊಂಡಿದ್ದು, ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿರುವಳು. ಪತಿಯ ಮರಣವನ್ನು ಎರಡನೆಯ ಪಟ್ಟಿಕೆಯಲ್ಲಿ ತೋರಿಸಲಾಗಿದೆ. ವೀರನು ಅಶ್ವರೂಢನಾಗಿ ಯುದ್ಧಕ್ಕೆ ಹೋಗುವುದನ್ನು, ಸೇವಕನೊಬ್ಬ ವೀರನಿಗೆ ಛತ್ರಿ ಹಿಡಿದಿರುವಂತೆ ಕಂಡರಿಸಲಾಗಿದೆ. ಮೂರನೆಯ ಪಟ್ಟಿಕೆಯಲ್ಲಿ ವೀರನೊಬ್ಬನ ಸ್ವರ್ಗಾರೋಹಣದ ದೃಶ್ಯವಿದೆ. ಕೊನೆಯ ಪಟ್ಟಿಕೆಯಲ್ಲಿ ಸತಿಪತಿಗಳಿಬ್ಬರೂ ಸ್ವರ್ಗದಲ್ಲಿರುವುದನ್ನು ಮಂಟಪದೊಳಗೆ ಕುಳಿತಿರುವಂತೆ ಕೆತ್ತಿರುವುದು ವಿಶೇಷವಾಗಿದೆ.

**ಸಹಗಮನಗೊಂಡ ಇಬ್ಬರು ಸತಿಯರು**

ವೀರನೊಬ್ಬ ಯಾವುದೋ ಹೋರಾಟದಲ್ಲಿ ಮಡಿದಾಗ ಆತನ ಇಬ್ಬರು ಪತ್ನಿಯರು ಅವನೊಂದಿಗೆ ಸಹಗಮನಗೊಂಡಿರುವುದನ್ನು ಕೆಲವು ಸ್ಮಾರಕಶಿಲ್ಪಗಳು ನಿರೂಪಿಸುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದ ಚಿಕ್ಕಹಾಲಿವಾಣದ ಒಂದು ಸ್ಮಾರಕದಲ್ಲಿ ವೀರನು ಕುದುರೆಯ ಮೇಲೆ ಕುಳಿತು ಹೋರಾಟ ಮಾಡುವ ದೃಶ್ಯವಿದೆ. ಈ ಭಾಗದ ಎಡಬದಿಯಲ್ಲಿನ ಚಿತ್ರಣವನ್ನು ಸಂಶೋಧಕರಾದ ಬಿ.ಎಸ್. ಶೇಠೆಯವರು ಹೀಗೆ ಅರ್ಥೈಸಿದ್ದಾರೆ. "ಮೇಲೆ ಕೆಳಗೆ ಎರಡು ಚಿಕ್ಕದಾಗಿ ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಕೆಳಗಿನ ಭಾಗದಲ್ಲಿ ವೀರನು ವಾದ್ಯ ಊದುತ್ತಿರುವ ವಾದ್ಯಗಾರನೊಡನೆ ಇದ್ದಾನೆ. ಮೇಲಿನ ಭಾಗದಲ್ಲಿ ಅವನು ವಾದ್ಯ ಬಾರಿಸುವವರೊಡನೆ ಮತ್ತು ನಾಟ್ಯ ಮಾಡುವವರ ಜೊತೆಗೆ ಇದ್ದಾನೆ. ಬಹುಶಃ ಈ ವೀರನು ಯುದ್ಧಭೂಮಿಗೆ ಊದುವ, ಬಾರಿಸುವ, ನಾಟ್ಯಮಾಡುವ ಸಡಗರದೊಂದಿಗೆ ಹೋದುದನ್ನು ಸೂಚಿಸುತ್ತಿರಬೇಕು" ಎಂದಿದ್ದಾರೆ.[೬೪] ಆದರೆ ಆ ಚಿತ್ರಣಗಳು ಯುದ್ಧ ವಾದ್ಯಕಾರರನ್ನು ಸಂಕೇತಿಸುತ್ತಿದ್ದು, ಅದು ಯುದ್ಧದ ಭೀಕರತೆಯನ್ನು ಧ್ವನಿಸುತ್ತಿದೆ ಎನ್ನಬಹುದು. ಎರಡನೆಯ ಹಂತದಲ್ಲಿ ವೀರನು ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದಾನೆ. ಅವನ ಎರಡು ಬದಿಯಲ್ಲಿ ಇಬ್ಬರ ಸತಿಯರು ಎಡಗೈಯಲ್ಲಿ ಗಿಂಡಿಯನ್ನು ಹಿಡಿದು ಬಲಗೈಯನ್ನು ಮೇಲೆತ್ತಿ ಹರಸುತ್ತಿರುವಂತೆ ಕಂಡರಿಸಲಾಗಿದೆ. ಮೂರನೆಯ ಹಂತದಲ್ಲಿ ವೀರನು ಎತ್ತರದ ಪೀಠದ ಮೇಲೆ ಕೈಮುಗಿದು ಕುಳಿತಿದ್ದಾನೆ. ಅವನ ಎರಡು ಕಡೆ ಸತಿಯರು ಕೈಮುಗಿದುಕೊಂಡು ನಿಂತಿರುವ ಹಾಗೆ ಕಂಡರಿಸಲಾಗಿದೆ. ಕೋಟೆ ಮಲ್ಲೂರಿನ ಸಹಗಮನ ಶಿಲ್ಪವೊಂದು ಅಪರೂಪದ ದೃಶ್ಯಗಳನ್ನು ಸೆರೆಹಿಡಿದಿದೆ. ಮೊದಲ ಪಟ್ಟಿಕೆಯಲ್ಲಿ ವೀರರು ಶತ್ರುಗಳೊಂದಿಗೆ ಪ್ರತ್ಯೇಕವಾಗಿ ಹೋರಾಡುವಂತೆ ಕೆತ್ತಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ಸಣ್ಣದಾದ ಎರಡು ಪಟ್ಟಿಕೆಗಳನ್ನು ಮಾಡಿ ವೀರರು ತಮ್ಮ ಇಬ್ಬರು ಪತ್ನಿಯರೊಂದಿಗೆ ಪ್ರತ್ಯೇಕವಾಗಿ ಸ್ವರ್ಗಾರೋಹಣ ಕೈಗೊಂಡಿರುವಂತೆ ಕೆತ್ತಲಾಗಿದೆ. ಕೊನೆಯ ಹಂತದಲ್ಲಿ ಅವರು ಸ್ವರ್ಗಪ್ರಾಪ್ತಿಯಾಗಿರುವುದನ್ನು ತೋರಿಸಲಾಗಿದೆ.[೬೫] ಈ ಸ್ಮಾರಕದಲ್ಲಿ ಇಬ್ಬರು ವೀರರು, ನಾಲ್ವರು ಸತಿಯರನ್ನು ಚಿತ್ರಿಸಿರುವುದು ವಿಶೇಷತೆಯಾಗಿದೆ. ಸೊರಟೂರಿನ ಶಿಲ್ಪವೊಂದು ಇಬ್ಬರು ಪತ್ನಿಯರು

ಸತಿಹೋದುದನ್ನು ಅಭಿವ್ಯಕ್ತಿಸುತ್ತದೆ. ಸತಿಯರಿಬ್ಬರು ಬಲಗೈ ಎತ್ತಿ ನಿಂತುಕೊಂಡಿದ್ದಾರೆ. ಅವರ ತಲೆಗೆ ಮುಡಿದಿರುವ ಕೇದಗೆಯ ಗರಿಯನ್ನು ಸುಂದರವಾಗಿ ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಶಿವಲಿಂಗದ ಬಳಿ ಪತಿಯೊಂದಿಗೆ ಇಬ್ಬರು ಸತಿಯರು ಕೈಮುಗಿದುಕೊಂಡು ಕುಳಿತಿದ್ದಾರೆ.[೬೬]

ವಾಸನ ಗ್ರಾಮದ ಹಾಳೂರಿನಲ್ಲಿ ಕಂಡುಬರುವ ಎರಡು ಸಹಗಮನ ಸ್ಮಾರಕಶಿಲ್ಪಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಈ ಶಿಲ್ಪಗಳು ಒಂದರ ಪ್ರತಿ ಇನ್ನೊಂದು ಎನ್ನುವ ರೀತಿಯಲ್ಲಿ ನಿರ್ಮಾಣಗೊಂಡಿವೆ. ಮೊದಲ ಹಂತದಲ್ಲಿ ವೀರರು ತನ್ನ ಇಬ್ಬರು ಪತ್ನಿಯರ ಹೆಗಲ ಮೇಲೆ ಕೈಹಾಕಿಕೊಂಡು ನಿಂತಿರುವ ಹಾಗೆ ಕೆತ್ತಲಾಗಿದೆ. ಈ ಶಿಲ್ಪಗಳಲ್ಲಿ ಬಲಭಾಗದಲ್ಲಿರುವ ಸತಿ ಮಾತ್ರವೇ ಬಲಗೈಯನ್ನು ಮೇಲೆತ್ತಿ ಹರಸುವಂತೆ ಕಂಡರಿಸಲಾಗಿದೆ. ಎಡಭಾಗದಲ್ಲಿರುವ ಸತಿಯ ಭುಜದ ಮೇಲೆ ಪತಿ ಕೈ ಹಾಕಿರುವುದರಿಂದ ಅವಳು ಬಲಗೈ ಎತ್ತಿ ನಿಂತಿರಲು ಅಸಾಧ್ಯವೆಂಬುದನ್ನು ಶಿಲ್ಪಿ ಇಲ್ಲಿ ಸೂಕ್ಷ್ಮವಾಗಿ ಚಿತ್ರಿಸಿದ್ದಾನೆ. ಎರಡನೆಯ ಹಂತದಲ್ಲಿ ಮಂಟಪದೊಳಗೆ ಕೈ ಮುಗಿದುಕೊಂಡು ಕುಳಿತಿರುವ ಪತಿಯನ್ನು ಸತಿಯರೇ ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತೆ ಚಿತ್ರಿಸಿರುವುದು ಇತರೆ ಶಿಲ್ಪಗಳಿಗಿಂತ ವಿಶೇಷವಾಗಿ ಕಂಡುಬರುವುದು. ಇವು ಸಹಗಮನಗೊಂಡ ಸ್ಮಾರಕಗಳಾಗಿದ್ದರೂ ಸತಿಯರನ್ನು ಪತಿಯೊಂದಿಗೆ ಸ್ವರ್ಗದಲ್ಲಿರುವಂತೆ ಕಂಡರಿಸಿರುವುದಿಲ್ಲ. ಸ್ಥಳದ ಅಭಾವದಿಂದ ಶಿಲ್ಪಿ ಆ ರೀತಿ ಕೆತ್ತಿರಬಹುದು. ಆದರೆ ಅದನ್ನು ಲಿಪಿಯ ಮೂಲಕ ಧ್ವನಿಸಿದ್ದಾನೆ. ಸವಳಂಗ ಗ್ರಾಮದ ಒಂದು ಸ್ಮಾರಕವು ಅಪರೂಪದ್ದಾಗಿದೆ. ಮೊದಲ ಪಟ್ಟಿಕೆಯಲ್ಲಿ ಸತಿಯರಿಬ್ಬರು ಎರಡು ಕೈಗಳಲ್ಲಿ ನಿಂಬೆಹಣ್ಣು ಹಿಡಿದು ಬಲಗೈಯನ್ನು ಮೇಲೆತ್ತಿ ನಿಂತಿರುವಂತೆ ಬಿಡಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ಪತಿ ಮರಣದ ಕಾರಣವನ್ನು ತಿಳಿಸದೇ ಅವನು ಸಂಗೀತದ ಆಲಯಾಪನೆಯಲ್ಲಿ ತೊಡಗಿರುವ ಹಾಗೆ ಕಂಡರಿಸಿರುವುದು ವಿಶೇಷವಾಗಿದೆ. ಇಲ್ಲಿ ವೀರನು ಪೀಠದ ಮೇಲೆ ಕುಳಿತು ಬಲಗೈಯನ್ನು ಆಡಿಸುತ್ತಿರುವಂತೆ, ಅವನ ಮುಂದೆ ಕುಳಿತಿರುವ ಇಬ್ಬರಲ್ಲಿ ಒಬ್ಬ ವೀಣೆಯನ್ನು ನುಡಿಸುತ್ತಿರುವಂತೆ ಶಿಲ್ಪಿ ಚಿತ್ರಿಸಿದ್ದಾನೆ. ಮಡಿದ ವೀರನಿಗೆ ಸಂಗೀತದಲ್ಲೂ ವಿಶೇಷವಾದ ಆಸಕ್ತಿ ಇತ್ತು ಎಂಬುದನ್ನು ಇಲ್ಲಿ ತೋರಿಸಿದಂತೆ ಕಂಡುಬರುವುದು. ಕೊನೆಯಲ್ಲಿ ಸತಿಯರು ಪತಿಯೊಂದಿಗೆ ಸ್ವರ್ಗದಲ್ಲಿ ಕೈಮುಗಿದುಕೊಂಡು ಕುಳಿತಿರುವುದನ್ನು ಚಿತ್ರಿಸಿದೆ. ಇದೇ ಲಕ್ಷಣವಿರುವ ಮತ್ತೊಂದು ಸ್ಮಾರಕಶಿಲ್ಪ ತುಗ್ಗಲಹಳ್ಳಿ ಗ್ರಾಮದಲ್ಲಿ ಕಂಡುಬರುವುದು. ಈ ಶಿಲ್ಪದ ಮೊದಲ ಭಾಗದಲ್ಲಿ ವೀರರು ಬಿಲ್ಲುಗಳನ್ನು ಹಿಡಿದು ಅಭಿಮುಖವಾಗಿ ನಿಂತಿರುವಂತೆ ಕೆತ್ತಲಾಗಿದೆ. ಎರಡನೆಯ ಭಾಗದಲ್ಲಿ ಸತಿಯರಿಬ್ಬರು ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು, ಬಲಗೈ ಮೇಲೆತ್ತಿ ಹರಸುತ್ತಿರುವುದನ್ನು ಕಂಡರಿಸಲಾಗಿದೆ. ಸತಿಯರು ಧರಿಸಿರುವ ಕಿವಿಯ ರಿಂಗು ಮತ್ತು ಕೇದಗೆ ಹೂಗಳು ಆಕರ್ಷಣೀಯವಾಗಿ ಮೂಡಿಬಂದಿವೆ.

ಗುಂಡಿಚಟ್ನಹಳ್ಳಿಯ ಸ್ಮಾರಕಶಿಲ್ಪವೊಂದು ವಿಶೇಷ ಗಮನ ಸೆಳೆಯುತ್ತದೆ. ಮೊದಲ ಹಂತದಲ್ಲಿ ಎಡಗಡೆ ವೀರನು ಕುದುರೆಯ ಮೇಲೆ ಯುದ್ಧಕ್ಕೆ ಹೊರಟಿದ್ದು ಅವನ ಹಿಂದೆ ಒಬ್ಬ ಛತ್ರಿ ಹಿಡಿದಿದ್ದಾನೆ. ಶಿಲ್ಪದ ಎಡಭಾಗದಲ್ಲಿ ಇಬ್ಬರು ಸತಿಯರು ಎಡಗೈಯಲ್ಲಿ ಕನ್ನಡಿ ಹಿಡಿದು,

ಬಲಗೈಯನ್ನು ಮೇಲೆತ್ತಿ ಹೆಬ್ಬೆರಳುಗಳ ಮಧ್ಯೆ ನಿಂಬೆಹಣ್ಣು ಹಿಡಿದಿರುವುದನ್ನು ಚಿತ್ರಿಸಲಾಗಿದೆ. ಸತಿಯರು ಕಟ್ಟಿಕೊಂಡಿರುವ ತುರುಬು, ಕಿವಿಯೋಲೆ, ಕೊರಳ ಆಭರಣಗಳು ಮನೋಹರವಾಗಿ ಮೂಡಿಬಂದಿವೆ. ಎರಡನೆಯ ಹಂತದಲ್ಲಿ ಇಬ್ಬರು ಪಲ್ಲಕ್ಕಿಯನ್ನು ಹೊತ್ತಿರುವರು. ಅದರಲ್ಲಿ ವೀರನು ಓರೆಯಲ್ಲಿ ಹಾಯಾಗಿ ಮಲಗಿರುವಂತೆ ಶಿಲ್ಪಿ ಆಕರ್ಷಕವಾಗಿ ಚಿತ್ರಿಸಿದ್ದಾನೆ. ಪಲ್ಲಕ್ಕಿ ಹೊತ್ತವರು ಮುಂದೆ ಹಾಗೂ ಹಿಂದೆ ಇಬ್ಬರು ಬಿಲ್ಲುಗಳನ್ನು ಹಿಡಿದಿದ್ದಾರೆ. ಈ ದೃಶ್ಯವು ಸೈನಿಕರ ಸರ್ಪಗಾವಲಿನಲ್ಲಿ ವೀರನನ್ನು ಯುದ್ಧಕ್ಕೆ ಕರೆದೊಯ್ಯುತ್ತಿರುವಂತೆ ತೋರುತ್ತದೆ. ಮೂರನೆಯ ಹಂತದಲ್ಲಿ ಮಂಟಪದೊಳಗೆ ಕುಳಿತಿರುವ ವೀರನನ್ನು ಅಪ್ಸರೆಯರು ಮಂಗಳವಾದ್ಯ ಹಾಗೂ ನೃತ್ಯದೊಂದಿಗೆ ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಇಲ್ಲಿ ಅಪ್ಸರೆಯರ ಉಡುಪು, ಆಭರಣ ಮತ್ತು ಮಂಟಪದ ಅಲಂಕಾರ ಗಮನ ಸೆಳೆಯುತ್ತದೆ. ದಾಸರಹಟ್ಟಿಯ ಒಂದು ಸ್ಮಾರಕ ಸತಿಯರಿಬ್ಬರು ಬಲಗೈಯನ್ನು ಮೇಲೆತ್ತಿ ನಿಂತಿರುವರು. ಎರಡನೆಯ ಭಾಗದಲ್ಲಿ ಪಲ್ಲಕ್ಕಿಯನ್ನು ಹೊತ್ತು ನಿಂತವರ ಮುಂದೆ ವೀರನು ಅಶ್ವರೂಢನಾಗಿ ಕತ್ತಿ ಹಿಡಿದಿದ್ದಾನೆ. ಕುದುರೆ ದಿಬ್ಬವನ್ನು ಏರಿನಿಂತಿದೆ. ವೀರನಿಗೆ ಒಬ್ಬ ಛತ್ರಿ ಹಿಡಿದಿದ್ದಾನೆ. ಕುದುರೆ ಮುಂದೆ ನಿಂತಿರುವ ಜಟಧಾರಿಯೊಬ್ಬ ಯುದ್ಧ ಕಹಳೆಯನ್ನು ಊದುತ್ತಿದ್ದಾನೆ. ಈ ದೃಶ್ಯವು ಶತ್ರುಪಡೆಗೆ ಯುದ್ಧ ಸಂದೇಶ ನೀಡಿದ್ದನ್ನು ಸೂಚಿಸುತ್ತದೆ. ಇದೇ ಹಂತದಲ್ಲಿ ಬಲಮೂಲೆಯಲ್ಲಿ ಶತ್ರುಗಳಿಬ್ಬರು ಕತ್ತಿ ಗುರಾಣಿಗಳನ್ನು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ. ಈ ಶಿಲ್ಪದ ಲಕ್ಷಣವು ವೀರನು ಮೊದಲು ಪಲ್ಲಕ್ಕಿಯಲ್ಲಿ ಮೆರವಣಿಗೆ ಬಂದು ಆನಂತರ ಕುದುರೆಯನ್ನೇರಿ ಯುದ್ಧಕ್ಕೆ ಹೊರಟಿರುವಂತೆ ತೋರುತ್ತದೆ. ಈ ಶಿಲ್ಪದ ಕೊನೆಯಲ್ಲಿ ಪತಿಯೊಂದಿಗೆ ಸತಿಯರು ಸ್ವರ್ಗದಲ್ಲಿರುವ ಚಿತ್ರಣವಿದೆ. ಬಿದಿರಹಳ್ಳಿಯ ತ್ರುಟಿತ ಸ್ಮಾರಕವೊಂದರಲ್ಲಿ ವೀರನು ಅಶ್ವರೂಢನಾಗಿ ಕತ್ತಿ ಹಿಡಿದಿರುವನು. ಅವನ ಬಲಭಾಗದಲ್ಲಿ ಇಬ್ಬರು ಸತಿಯರು ಬಲಗೈಯನ್ನು ಮೇಲೆತ್ತಿ ಹರಸುತ್ತಿರುವ ಚಿತ್ರಣವಿದೆ. ಫಲವನಹಳ್ಳಿಯ ಒಂದು ಶಿಲ್ಪದ ಮೊದಲ ಭಾಗದಲ್ಲಿ ಇಬ್ಬರು ಸತಿಯರು ನಿಂತಿರುವ ಚಿತ್ರಣವಿದೆ. ಅವರಲ್ಲಿ ಒಬ್ಬಳು ಎಡಗೈ ಎತ್ತಿದ್ದರೆ, ಇನ್ನೊಬ್ಬಳು ಬಲಗೈ ಎತ್ತಿದ್ದಾಳೆ. ಸ್ಥಳದ ಅಭಾವದಿಂದ ಶಿಲ್ಪಿ ಈ ರೀತಿ ಚಿತ್ರಿಸಿದ್ದಾನೆಂದು ತೋರುತ್ತದೆ. ಎರಡನೆಯ ಭಾಗದಲ್ಲಿ ವೀರನು ಕುದುರೆ ಮೇಲೆ ಯುದ್ಧಕ್ಕೆ ಹೊರಟಿದ್ದಾನೆ. ಅವನ ಹಿಂದೆ ಒಬ್ಬ ಛತ್ರಿ ಹಿಡಿದಿದ್ದಾನೆ. ಈ ಸ್ಮಾರಕದ ಬಲಭಾಗದ ಅಂಚಿನಲ್ಲಿ ಬಾರಿಸುವ ಮತ್ತು ನರ್ತಿಸುವವರನ್ನು ಕಂಡರಿಸಲಾಗಿದೆ.

**ಸಹಗಮನಗೊಂಡಿರುವ ಮೂವರಿಗಿಂತ ಹೆಚ್ಚಿನ ಸತಿಯರು**

ವೀರನೊಬ್ಬ ಮೂವರು ಪತ್ನಿಯರನ್ನು ಹೊಂದಿದ್ದರೆ ಅವನು ಯಾವುದೋ ಹೋರಾಟದಲ್ಲಿ ಮಡಿದಾಗ ಆತನ ಮೂವರು ಪತ್ನಿಯರು ಸಹಗಮನಗೊಂಡ ನಿದರ್ಶನಗಳಿವೆ. ಇಂತಹ ಸ್ಮಾರಕಶಿಲ್ಪಗಳು ಕರ್ನಾಟಕದಲ್ಲಿ ಅತಿ ವಿರಳವಾಗಿ ಕಂಡುಬರುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಮೂರರಿಂದ ಹತ್ತು ಮಂದಿವರೆಗಿನ ಸತಿಯರು ಸಹಗಮನವಾಗಿರುವ ಸ್ಮಾರಕ ಶಿಲ್ಪಗಳನ್ನು ಗುರುತಿಸಲಾಗಿದೆ. ಆ ಶಿಲ್ಪಗಳ ವೈಶಿಷ್ಟ್ಯತೆಯನ್ನು ಮುಂದಿನಂತೆ ಗಮನಿಸಬಹುದು.

ಫಲವನಹಳ್ಳಿಯ ಎರಡು ಸ್ಮಾರಕಶಿಲ್ಪಗಳು ನಾಲ್ಕು ಹಂತಗಳಲ್ಲಿದ್ದು ಒಂದೇ ಲಕ್ಷಣಗಳಣ್ಣು ಹೊಂದಿವೆ. ಮೊದಲ ಭಾಗದಲ್ಲಿ ಮೂವರು ಸತಿಯರು ಬಲಗೈ ಎತ್ತಿಕೊಂಡು ಎಡಗೈ ಇಳಿಬಿಟ್ಟು ನಿಂಬೆಹಣ್ಣು ಹಿಡಿದುಕೊಂಡಿರುವರು. ಅವರು ಧರಿಸಿರುವ ಕೊರಳಲ್ಲಿ ಆಭರಣ, ಮುಂಗೈ ಬಳೆ, ತೋಳಬಂದಿ ಹಾಗೂ ಉಟ್ಟಿರುವ ಲಂಗದ ನೆರಿಗೆಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಅವರ ತಲೆಯಲ್ಲಿನ ಕೇದಗೆ ಗರಿಯ ಹೂಗಳು ನಕ್ಷತ್ರದಂತೆ ಸುಂದರವಾಗಿ ಮೂಡಿಬಂದಿವೆ. ಎರಡನೆಯ ಭಾಗದಲ್ಲಿ ಕುದುರೆ ಮೇಲಿರುವರು. ವೀರರಿಗೆ ಒಬ್ಬ ಛತ್ರಿ ಹಿಡಿದಿದ್ದಾನೆ. ಅವನ ಹಿಂದೆ ಇಬ್ಬರು ಪಲ್ಲಕ್ಕಿಯನ್ನು ಹೊತ್ತು ನಿಂತಿದ್ದಾರೆ. ಇದೇ ಹಂತಕ್ಕೆ ಹೊಂದಿಕೊಂಡಂತೆ ವೀರರ ಸ್ವರ್ಗಾರೋಹಣವನ್ನು ಕೆತ್ತಲಾಗಿದೆ. ಈ ಶಿಲ್ಪಗಳ ಕೊನೆಯ ಹಂತದಲ್ಲಿ ಪತಿಯೊಂದಿಗೆ ಮೂವರು ಸತಿಯವರು ಕೈಮುಗಿದುಕೊಂಡು ಕುಳಿತಿರುವ ಹಾಗೆ ಕಂಡರಿಸಲಾಗಿದೆ. ಬಿದರಿಹಳ್ಳಿಯ ನಾಲ್ಕು ಹಂತದ ಒಂದು ಸ್ಮಾರಕಶಿಲ್ಪವು ಬಹಳ ಅಪರೂಪವಾದುದ್ದಾಗಿದೆ. ಈ ಶಿಲ್ಪದ ಒಂದನೆಯ ಪಟ್ಟಿಕೆಯಲ್ಲಿ ಎರಡು ಭಾಗಗಳನ್ನು ಮಾಡಿಕೊಂಡು ಒಂದು ಭಾಗದಲ್ಲಿ ಒಬ್ಬ ಸತಿಯನ್ನು, ಮತ್ತೊಂದು ಭಾಗದಲ್ಲಿ ಇಬ್ಬರು ಸತಿಯರನ್ನು ಪ್ರತ್ಯೇಕಗೊಳಿಸಿ ಚಿತ್ರಿಸಲಾಗಿದೆ. ಒಬ್ಬ ವೀರನಿಗೆ ಒಬ್ಬ ಹೆಂಡತಿ, ಮತ್ತೊಬ್ಬ ವೀರನ ಇಬ್ಬರು ಹೆಂಡತಿಯರು ಸಹಗಮನಗೊಂಡಿರುವುದನ್ನು ಶಿಲ್ಪಿ ಹೀಗೆ ಕಂಡರಿಸಿದ್ದಾನೆ. ಎರಡನೆಯ ಪಟ್ಟಿಕೆಯಲ್ಲಿ ಹೋರಾಟವನ್ನು ಕೆತ್ತಲಾಗಿದೆ. ಮೂರನೆಯ ಪಟ್ಟಿಕೆಯಲ್ಲಿ ಒಬ್ಬ ವೀರನು ಮಾತ್ರವೇ ಸ್ವರ್ಗಕ್ಕೆ ತೆರಳುತ್ತಿರುವಂತೆ ಚಿತ್ರಿಸಿರುವುದು ಪ್ರಶ್ನಾರ್ಥಕವಾಗಿದೆ. ನಾಲ್ಕನೆಯ ಪಟ್ಟಿಯಲ್ಲಿ ಶಿವಲಿಂಗದ ಎಡ ಭಾಗದಲ್ಲಿ ಮೂವರು ಸತಿಯರು, ಬಲಭಾಗದಲ್ಲಿ ಇಬ್ಬರು ವೀರರು ಕೈಮುಗಿದುಕೊಂಡು ಕುಳಿತಿರುವಂತೆ ಬಿಡಿಸಲಾಗಿದೆ.

ಹಿರೇಹಾಲಿವಣದ ಶಿಲ್ಪವೊಂದರಲ್ಲಿ ವೀರನು ಕುದುರೆಯ ಮೇಲೆ ಯುದ್ಧಕ್ಕೆ ಹೊರಟಿದ್ದು, ಅವನ ಹಿಂದೆ ಒಬ್ಬ ಛತ್ರಿ ಹಿಡಿದಿರುವ ದೃಶ್ಯವಿದೆ. ಕುದುರೆಯು ತನ್ನೆರಡು ಮುಂಗಾಲುಗಳನ್ನು ಮೇಲೆತ್ತಿ ಹಾರುತ್ತಿರುವ ಭಂಗಿಯನ್ನು ಶಿಲ್ಪಿ ಸೊಗಸಾಗಿ ಚಿತ್ರಿಸಿದ್ದಾನೆ. ಎರಡನೆಯ ಭಾಗದಲ್ಲಿ ವೀರನು ಪದ್ಮಾಸನದಲ್ಲಿ ಕುಳಿತಿದ್ದಾನೆ. ಅವನ ಎರಡು ಬದಿಯಲ್ಲಿ ನಾಲ್ವರು ಸತಿಯರು ಪೀಠದ ಮೇಲೆ ನಿಂತಿರುವಂತೆ ಕೆತ್ತಲಾಗಿದೆ. ವೀರನ ಎಡಭಾಗದಲ್ಲಿರುವ ಇಬ್ಬರು ಸತಿಯರು ಬಲಗೈಯನ್ನು, ಬಲಭಾಗದಲ್ಲಿರುವ ಇಬ್ಬರು ಎಡಗೈಗಳನ್ನು ಮೇಲೆತ್ತಿ ಅರಳಿದ ಕಮಲದ ಹೂವನ್ನು ಹಿಡಿದು ನಿಂತಿದ್ದಾರೆ. ಸತಿಯರು ಕಟ್ಟಿಕೊಂಡಿರುವ ತುರುಬನ್ನು ಆಕರ್ಷಕವಾಗಿ ಚಿತ್ರಸಲಾಗಿದೆ. ಮೂರನೆಯ ಭಾಗದಲ್ಲಿ ವೀರನು ಎತ್ತರವಾದ ಪೀಠದ ಮೇಲೆ ಕೈಮುಗಿದುಕೊಂಡು ಕುಳಿತಿದ್ದಾನೆ. ಅವನ ಎಡ ಮತ್ತು ಬಲಭಾಗದಲ್ಲಿ ನಾಲ್ವರು ಸತಿಯರು ಒಂದೇ ಪೀಠದ ಮೇಲೆ ಕೈಮುಗಿಯುತ್ತಿರುವ ನಿಂತಿರುವ ದೃಶ್ಯವು ಸುಂದರವಾಗಿದೆ. ಇಲ್ಲಿ ವೀರನೊಬ್ಬನ ನಾಲ್ವರು ಪತ್ನಿಯರು ಸಹಗಮನಗೊಂಡಿರುವುದನ್ನು ಶಿಲ್ಪಿ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಅಣಬೂರು ಗ್ರಾಮದಲ್ಲಿ ಕಂಡುಬರುವ ಸ್ಮಾರಕವೊಂದು ಹತ್ತು ಮಂದಿ ಸತಿಯರು ಸಹಗಮನಗೊಂಡ

ವಿಷಯವನ್ನು ತಿಳಿಸುತ್ತದೆ. ಮೊದಲ ಹಂತದಲ್ಲಿ ಐವರು ಸತಿಯರು ಪತಿಯೊಂದಿಗೆ ಇರುವಂತೆ ಕೆತ್ತಲಾಗಿದೆ. ಎರಡನೆಯ ಹಂತದಲ್ಲಿ ವೀರನು ಕುದುರೆ ಮೇಲೆ ಕುಳಿತು ಶತ್ರುಗಳೊಂದಿಗೆ ಹೋರಾಡುವ ದೃಶ್ಯವಿದೆ. ಮೂರನೆಯ ಹಂತದಲ್ಲಿ ವೀರನು ಪದ್ಮಾಸನದಲ್ಲಿ ಕೈಮುಗಿದುಕೊಂಡು ಕುಳಿತಿದ್ದಾನೆ. ಅವನ ಎಡ-ಬಲ ಭಾಗದಲ್ಲಿ ಹತ್ತು ಮಂದಿ ಸತಿಯರು ತಮ್ಮ ಬಲಗೈಯನ್ನು ಮೇಲೆತ್ತಿ ನಿಂತಿದ್ದಾರೆ. ಅವರ ಕೇಶವಿನ್ಯಾಸ, ಆಭರಣ, ಧರಿಸಿಕೊಂಡಿರುವ ಉಡುಪಿನ ನೆರಿಗೆಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಕೊನೆಯ ಹಂತದಲ್ಲಿ ಐದು ಸತಿಯರು ಪತಿಯೊಂದಿಗೆ ಕೈಮುಗಿದುಕೊಂಡು ಸ್ವರ್ಗದಲ್ಲಿರುವಂತೆ ಕೆತ್ತಲಾಗಿದೆ. ಈ ಸ್ಮಾರಕದ ಮೊದಲ ಹಾಗೂ ಕೊನೆಯ ಹಂತದಲ್ಲಿ ಸ್ಥಳದ ಅಭಾವದಿಂದ ಐದು ಸತಿಯರನ್ನು ಮಾತ್ರ ಚಿತ್ರಿಸಿರುವುದು ಕಂಡುಬರುತ್ತದೆ.[೬೭] ಹತ್ತು ಮಂದಿ ಸತಿಯರು ಸಹಗಮನಗೊಂಡ ಲಿಪಿ ರಹಿತವಾದ ಸ್ಮಾರಕಶಿಲ್ಪ ಕರ್ನಾಟಕದಲ್ಲಿ ಈವರೆಗೆ ಕಂಡುಬಂದಿರುವುದಿಲ್ಲ. ಮೊದಲ ಬಾರಿಗೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಗುರುತಿಸಲಾಗಿದೆ.

**ಇ. ಸತಿ-ಪತಿ ಸ್ಥಾನ ಸಮಾನವುಳ್ಳ ಸ್ಮಾರಕ ಶಿಲ್ಪಗಳು**

ಮಡಿದ ವೀರ ಹಾಗೂ ಸತಿ ಹೋದ ಆತನ ಪತ್ನಿ ಇಬ್ಬರನ್ನು ಸಮಾನವಾಗಿ ಕಂಡರಿಸಿದ ಸ್ಮಾರಕಶಿಲ್ಪಗಳು ಸಾಮಾನ್ಯವಾಗಿ ಹಲವು ಪ್ರದೇಶಗಳಲ್ಲಿ ಕಂಡುಬರುತ್ತವೆ. ಇವುಗಳನ್ನು ಒಂದು ಹಂತ ಅಥವಾ ಪಟ್ಟಿಕೆಯಲ್ಲಿ ನಿರ್ಮಾಣ ಮಾಡಲಾಗಿರುತ್ತದೆ. ಇಲ್ಲಿ ಇಬ್ಬರನ್ನೂ ಸರಿಸಮಾನವಾಗಿ ಚಿತ್ರಿಸಲಾಗಿರುತ್ತದೆ. ಈ ರೀತಿಯ ಶಿಲ್ಪಗಳು ಅಧ್ಯಯನ ಪ್ರದೇಶದ ಬಹುತೇಕ ಗ್ರಾಮಗಳಲ್ಲಿ ಕಂಡುಬರುವುದನ್ನು ಗುರುತಿಸಲಾಗಿದೆ. ಕೋಟೆಮಲ್ಲೂರಿನ ಶಿಲ್ಪವೊಂದರಲ್ಲಿ ವೀರನು ಒಂದು ಕೈಯಲ್ಲಿ ಬಾಕು, ಮತ್ತೊಂದು ಕೈಯಲ್ಲಿ ಕತ್ತಿ ಹಿಡಿದು ನಿಂತುಕೊಂಡಿದ್ದಾರೆ. ಪತ್ನಿ ಎರಡೂ ಕೈಗಳಲ್ಲಿ ನಿಂಬೆಹಣ್ಣು ಹಿಡಿದು ನಿಂತಿದ್ದಾಳೆ. ಈ ಸತಿಯ ತಲೆಗೆ ಕೇದಗೆಯ ಗರಿಗಳನ್ನು ಸುಂದರವಾಗಿ ಬಿಡಿಸಲಾಗಿದೆ.[೬೮] ಹಳೆಜೋಗದ ಸ್ಮಾರಕಶಿಲ್ಪದಲ್ಲಿ ಸತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು ಬಲಗೈ ಮೇಲೆತ್ತಿ ಹರಸುತ್ತಿರುವಂತೆ ಸ್ಮಾರಕದ ಬಲಭಾಗದಲ್ಲಿ ಕಂಡರಿಸಲಾಗಿದೆ. ಬಿಲ್ಲು ಹಿಡಿದು ನಿಂತಿರುವ ವೀರನನ್ನು ಸ್ಮಾರಕದ ಎಡಭಾಗದಲ್ಲಿ ಕಂಡರಿಸಲಾಗಿದೆ. ಇದೇ ರೀತಿಯ ಲಕ್ಷಣಗಳಿರುವ ಮತ್ತೊಂದು ಶಿಲ್ಪ ಕೋಡಿಹಳ್ಳಿಯಲ್ಲಿದೆ. ಸತಿಯನ್ನು ಸಾಮಾನ್ಯವಾಗಿ ವೀರನ ಎಡಭಾಗದಲ್ಲಿ ಚಿತ್ರಸಲಾಗಿರುತ್ತದೆ. ಆದರೆ ಈ ಶಿಲ್ಪಗಳಲ್ಲಿ ವೀರನ ಬಲಭಾಗದಲ್ಲಿ ಕೆತ್ತಿರುವುದು ವಿಶೇಷವಾಗಿದೆ. ಇದಕ್ಕೆ ನಿರ್ದಿಷ್ಟ ಕಾರಣ ತಿಳಿಯದು. ಪ್ರಾಯಶಃ ಸತಿಯನ್ನು ಪತಿಯ ಎಡಭಾಗದಲ್ಲೇ ಚಿತ್ರಿಸಬೇಕೆಂಬ ನೇಮವು ಇರಲಿಲ್ಲವೆಂಬುದು ಇದರಿಂದ ತಿಳಿಯುತ್ತದೆ. ಸೊರಟೂರಿನ ಶಿಲ್ಪದಲ್ಲಿ ಸತಿ-ಪತಿಗಳಿಬ್ಬರು ಕೈಮುಗಿದುಕೊಂಡು ಸಮಭಂಗಿಯಲ್ಲಿ ನಿಂತಿರುವಂತೆ ಬಿಡಿಸಲಾಗಿದೆ. ಹಳೆದೇವರ ಹೊನ್ನಾಳಿಯ ಒಂದು ಸ್ಮಾರಕದಲ್ಲಿ ವೀರನು ಎಡಗೈಯಲ್ಲಿ ಬಾಕು ಹಿಡಿದು ಮೇಲೆತ್ತಿ ಹಿಡಿದಿರುವುದು ವಿಶೇಷವಾಗಿದೆ. ಆತನ ಎಡಭಾಗದಲ್ಲಿ ಸತಿ ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ.

ದೊಡ್ಡೇರಹಳ್ಳಿಯ ಎರಡು ಸ್ಮಾರಕಶಿಲ್ಪಗಳು ಅಪೂರ್ವವಾಗಿವೆ. ಒಂದು ಶಿಲ್ಪದಲ್ಲಿ ಪತಿ ಎರಡೂ ಕೈಯಲ್ಲಿ ಆಯುಧ ಹಿಡಿದು ನಿಂತುಕೊಂಡಿದ್ದರೆ, ಸತಿ ಬಲಗೈ ಎತ್ತಿ, ಎಡಗೈಯಲ್ಲಿ ನಿಂಬೆಹಣ್ಣು ಮತ್ತು ಗಿಂಡಿ ಹಿಡಿದು ನಿಂತಿರುವುದನ್ನು ಕೆತ್ತಲಾಗಿದೆ. ಇನ್ನೊಂದು ಶಿಲ್ಪ ತುಂಬಾ ಅಪರೂಪದ್ದಾಗಿದೆ. ಇಲ್ಲಿ ಸತಿಪತಿಗಳನ್ನು ನಿಂತಿರುವ ಭಂಗಿಯಲ್ಲಿ ಚಿತ್ರಿಸದೇ ಇಬ್ಬರು ಪದ್ಮಾಸನದಲ್ಲಿ ಕುಳಿತಿರುವಂತೆ ಕೆತ್ತಿರುವುದು ಈ ಸ್ಮಾರಕದ ವಿಶೇಷತೆಯಾಗಿದೆ. ಪತಿಯಾದವನು ಯಾವುದೇ ಆಯುಧಗಳನ್ನು ಹಿಡಿದಿಲ್ಲ. ಸತಿ ಕುಳಿತಿರುವ ಭಂಗಿಯಲ್ಲಿದ್ದರೂ ಬಲಗೈ ಮೇಲೆತ್ತಿ ಹಿಡಿದಂತೆ ಚಿತ್ರಿಸಲಾಗಿದೆ. ಇವರ ಮುಂಭಾಗದಲ್ಲಿ ಬಿಡಿಸಿರುವ ಕಳಸ, ಮಂಗಳಾರತಿಯ ಭಂಡಾರದ ಕುಂಡ ಇತ್ಯಾದಿ ಪೂಜಾ ಸಾಮಗ್ರಿಗಳನ್ನು ಗಮನಿಸಿದರೆ ಅವರು ಸ್ವರ್ಗದಲ್ಲಿ ವಿಶೇಷ ಆತಿಥ್ಯ ಸ್ವೀಕರಿಸಿದ್ದಾರೆ ಎಂಬ ಭಾವನೆ ಬರುತ್ತದೆ. ಶಿಲ್ಪಿ ಅದನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಸತಿಯರು ಕಟ್ಟಿಕೊಂಡಿರುವ ಕೇಶದ ತುರುಬು ತಲೆಗೆ ಅಲಂಕರಿಸಿಕೊಂಡಿರುವ ಕೇದಿಗೆ ಹೂ, ಧರಿಸಿರುವ ಉಡುಪಿನ ನೆರಿಗೆಗಳು ಅಲಂಕೃತವಾಗಿ ಮೂಡಿಬಂದಿವೆ. ಪುನಭಘಟ್ಟ ಗ್ರಾಮದ ಶಿಲ್ಪದಲ್ಲಿ ಪತಿ ಕತ್ತಿ ಹಿಡಿದು ನಿಂತಿದ್ದರೆ, ಸತಿ ಎರಡು ಕೈಗಳಲ್ಲಿ ನಿಂಬೆಹಣ್ಣು ಹಿಡಿದು ಬಲಗೈ ಮೇಲೆತ್ತಿ ನಿಂತಿದ್ದಾಳೆ. ಸತಿ ಧರಿಸಿರುವ ಬಳೆ, ಮುತ್ತಿನ ಸರ, ಕೇದಗೆ ಹೂ, ಸೀರೆಯ ನೆರಿಗೆಗಳನ್ನು ಎದ್ದು ಕಾಣುವಂತೆ ಕೆತ್ತಲಾಗಿದೆ. ಇದೇ ವಿವರಗಳನ್ನು ಹೊಂದಿರುವ ಮತ್ತೊಂದು ಸ್ಮಾರಕಶಿಲ್ಪ ಸೂರಗೊಂಡನಕೊಪ್ಪ ಗ್ರಾಮದಲ್ಲಿ ಕಂಡುಬರುವುದು. ತಾರೇಹಳ್ಳಿಯ ಶಿಲ್ಪವೊಂದರಲ್ಲಿ ಸತಿಪತಿಗಳಿಬ್ಬರು ಕೈಮುಗಿದುಕೊಂಡು ನಿಂತಿದ್ದಾರೆ. ಅವರು ಧರಿಸಿರುವ ಆಭರಣಗಳು ಗಮನ ಸೆಳೆಯುತ್ತವೆ. ಕ್ಯಾತನಹಳ್ಳಿಯ ಶಿಲ್ಪದಲ್ಲಿ ಪತಿ ಬಲಗೈಯಲ್ಲಿ ಚೂರಿಯನ್ನು ಹಿಡಿದು ಕೆಳಗೆ ಇಳಿಬಿಟ್ಟಿದ್ದಾನೆ. ಅವನ ಬಲಭುಜದ ಮೇಲೆ ಗಿಳಿಯೊಂದನ್ನು ಚಿತ್ರಿಸಲಾಗಿದೆ. ಪತ್ನಿಯು ಬಲಗೈಯನ್ನು ಮೇಲೆತ್ತಿ ಮಾದಳದ ಫಲವನ್ನು ಹಿಡಿದಿರುವುದು ವಿಶೇಷವಾಗಿದೆ. ನೀರ್ಥಡಿ ಗ್ರಾಮದ ಒಂದು ಶಿಲ್ಪದಲ್ಲಿ ಪತಿ ಕೈಮುಗಿದುಕೊಂಡು ನಿಂತಿದ್ದಾರೆ. ಪತ್ನಿ ಬಲಗೈ ಮೇಲೆತ್ತಿ ನಿಂತಿರುವಳು. ಕೊಗ್ಗನೂರು ಗ್ರಾಮದ ಸ್ಮಾರಕದಲ್ಲಿ ಪತಿಯು ಆಯುಧವೊಂದನ್ನು ಹಿಡಿದು ನಿಂತಿದ್ದರೆ ಪತ್ನಿಯು ಎರಡು ಕೈಗಳನ್ನು ಮೇಲೆತ್ತಿ ನಿಂಬೆಹಣ್ಣು ಹಿಡಿದಿರುವಂತೆ ಕೆತ್ತಲಾಗಿದೆ. ಇದೇ ದೃಶ್ಯಗಳಿರುವ ಮತ್ತೊಂದು ಶಿಲ್ಪ ಬಿಸ್ತುವಳ್ಳಿಯಲ್ಲಿ ಕಂಡುಬಂದಿದೆ.

ಮಲಹಾಳ್ ಗ್ರಾಮದ ಸ್ಮಾರಕವೊಂದರಲ್ಲಿ ಅಪರೂಪದ ದೃಶ್ಯವನ್ನು ಕೆತ್ತಲ್ಪಟ್ಟಿದೆ. ಪತಿ ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಕತ್ತಿ ಹಿಡಿದು ನಿಂತಿದ್ದರೆ, ಸತಿ ನೃತ್ಯ ಮಾಡುತ್ತ ನಿಂತಿರುವುದು ವಿಶೇಷವಾಗಿದೆ. ತ್ಯಾವಣಿಗೆ ಗ್ರಾಮದ ಶಿಲ್ಪವೊಂದರಲ್ಲಿ ಪತಿ ಬಿಲ್ಲು ಹಿಡಿದು ನಿಂತುಕೊಂಡಿದ್ದಾನೆ. ಸತಿ ಎಡಗೈಯಲ್ಲಿ ಹಿಡಿದ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತಿದ್ದಾಳೆ.[೬೯] ಗೋವಿನಹಾಳು ಸ್ಮಾರಕದಲ್ಲಿ ಪತಿ ಬಿಲ್ಲು ಮತ್ತು ಬಾಣವನ್ನು ಹಿಡಿದು ನಿಂತಿದ್ದಾನೆ. ಸತಿಯು ಬಲಗೈ ಮೇಲೆತ್ತಿ ಹರಸುತ್ತಿರುವಂತೆ ಕೆತ್ತಲಾಗಿದೆ. ಕಕ್ಕನೂರು ಗ್ರಾಮದ ಒಂದು ಶಿಲ್ಪದಲ್ಲಿ ಕಿರೀಟ ಧರಸಿರುವ ವೀರ ಬಿಲ್ಲು ಮತ್ತು ಬಾಣವನ್ನು ಹಿಡಿದು ನಿಂತಿದ್ದರೆ, ಸತಿ ಒಂದು ಕೈಯಲ್ಲಿ ಬಾಳೆಹಣ್ಣು ಮತ್ತೊಂದು ಕೈಯಲ್ಲಿ ಮಾದಲದ ಹಣ್ಣುಗಳನ್ನು ಹಿಡಿದು ನಿಂತಿರುವುದು ವಿಶೇಷವಾಗಿದೆ.[೭೦] ಈ ಗ್ರಾಮದ ಮತ್ತೊಂದು ಶಿಲ್ಪದಲ್ಲಿ ಸತಿ ಎಡಗೈಯಲ್ಲಿ

ಕನ್ನಡಿ ಹಿಡಿದು ನಿಂತಿರುವುದನ್ನು ಚಿತ್ರಿಸಲಾಗಿದೆ. ಹರಳಹಳ್ಳಿಯ ಸ್ಮಾರಕವೊಂದರಲ್ಲಿ ಪತಿ ಕೈಮುಗಿದುಕೊಂಡು ನಿಂತಿದ್ದಾನೆ. ಸತಿಯು ಬಲಗೈ ಮೇಲೆತ್ತಿ ನಿಂಬೆಹಣ್ಣು ಹಿಡಿದು, ಎಡಗೈಯಲ್ಲಿ ಮಗುವಿನ ಕೈಹಿಡಿದು ನಿಂತಿರುವಂತೆ ಬಿಡಿಸಲಾಗಿದೆ. ಪ್ರಾಯಶಃ ಸತಿ ತನ್ನ ಮಗುವಿನೊಂದಿಗೆ ಸಹಗಮನಗೊಂಡಳೆಂದು ತೋರುತ್ತದೆ. ವಿದ್ವಾಂಸರಾದ ಆರ್. ಶೇಷಶಾಸ್ತ್ರಿಯವರು ಇಂತಹ ಶಿಲ್ಪವು ಚಿಂತಾಮಣಿ ತಾಲೂಕು ತಳಗವಾರ ಗ್ರಾಮದಲ್ಲಿ ಬಿಟ್ಟರೆ ನಮಗೆ ತಿಳಿದ ಮಟ್ಟಿಗೆ ಕರ್ನಾಟಕದ ಮತ್ಯಾವುದೇ ಭಾಗದಲ್ಲಿ ಕಂಡುಬಂದಿರುವುದಿಲ್ಲವೆಂದು ಅಭಿಪ್ರಾಯಿಸುತ್ತಾರೆ.[೭೧] ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆ ಶಿಲ್ಪ ಕಂಡುಬಂದಿರುವುದು ವಿಶೇಷವಾಗಿದೆ. ಕಣಕುಪ್ಪೆ ಕೋಟೆಯೊಳಗಿರುವ ಸ್ಮಾರಕಶಿಲ್ಪವೊಂದು ಅಪರೂಪದ್ದಾಗಿದೆ. ಈ ಶಿಲ್ಪದಲ್ಲಿ ಇಬ್ಬರು ವೀರರು ಕತ್ತಿ ಹಿಡಿದು ನಿಂತುಕೊಂಡಿದ್ದಾರೆ. ಅವರ ನಡುವೆ ಒಬ್ಬ ಸತಿ ಕೈ ಮುಗಿದುಕೊಂಡು ನಿಂತಿರುವುದನ್ನು ಕೆತ್ತಲಾಗಿದೆ.[೭೨] ಸತಿಯು ಇಬ್ಬರಿಗೆ ಒಬ್ಬಳೇ ಪತ್ನಿಯಾಗಿದ್ದಳೋ ತಿಳಿಯದು, ಪ್ರಾಯಶಃ ಈಕೆ ಒಬ್ಬ ವೀರನ ಪತ್ನಿಯಾಗಿದ್ದು, ಇನ್ನೊಬ್ಬ ವೀರನಿಗೆ ಪತ್ನಿಯು ಇಲ್ಲದೇ ಇರಬಹುದು.

ಮರಿಕುಂಟೆ ಗ್ರಾಮದ ಶಿಲ್ಪವೊಂದರಲ್ಲಿ ವೀರನು ಎರಡು ಕೈಗಳಲ್ಲಿ ಕತ್ತಿ ಹಿಡಿದು ನಿಂತಿದ್ದರೆ, ಸತಿ ಬಲಗೈ ಮೇಲೆತ್ತಿ ಎಡಗೈಯಲ್ಲಿ ಯಾವುದೋ ವಸ್ತುವೊಂದನ್ನು ಹಿಡಿದು ನಿಂತಿದ್ದಾಳೆ. ಈಶಾಪುರದ ಒಂದು ಸ್ಮಾರಕದಲ್ಲಿ ವೀರನು ಕುಡುಗೋಲನ್ನು ಹಿಡಿದು ನಿಂತಿದ್ದರೆ, ಸತಿ ಬಲಗೈ ಮೇಲೆತ್ತಿ, ಎಡಗೈಯಲ್ಲಿ ನೀರಿನ ಗಿಂಡಿ ಹಿಡಿದಿರುವಂತೆ ಬಿಡಿಸಲಾಗಿದೆ. ಸಿಂಗ್ರಿಹಳ್ಳಿಯ ಸ್ಮಾರಕಶಿಲ್ಪದಲ್ಲಿ ಅಶ್ವರೂಢನಾಗಿರುವ ವೀರನಿಗೆ ಒಬ್ಬ ಛತ್ರಿ ಹಿಡಿದಿದ್ದಾನೆ. ಸತಿಯು ಎರಡು ಕೈಗಳನ್ನು ಮೇಲೆತ್ತಿ ನಿಂಬೆಹಣ್ಣು ಹಿಡಿದಿದ್ದಾಳೆ. ಈ ಶಿಲ್ಪದ ಮೇಲ್ಭಾಗದಲ್ಲಿ ಕೀರ್ತಿಮುಖದ ಕೆತ್ತನೆಯಿದೆ. ಉಚ್ಚಂಗಿದುರ್ಗದ ಶಿಲ್ಪದಲ್ಲಿ ಪತಿ ಕತ್ತಿ ಹಿಡಿದು ನಿಂತಿದ್ದರೆ, ಸತಿ ಬಲಗೈ ಮೇಲೆತ್ತಿ ಹೆಬ್ಬೆರಳುಗಳ ಮಧ್ಯೆ ನಿಂಬೆಹಣ್ಣು ಹಿಡಿದಿದ್ದಾಳೆ. ಇದೇ ಗ್ರಾಮದ ಇನ್ನೊಂದು ಶಿಲ್ಪದಲ್ಲಿ ಸತಿ ಎರಡು ಕೈಗಳನ್ನು ಮೇಲೆತ್ತಿ ನಿಂತಿರುವಂತೆ ಕಂಡರಿಸಲಾಗಿದೆ. ಬಾಗಳಿ ವಸ್ತುಸಂಗ್ರಹಾಲಯದಲ್ಲಿನ ಮೂರು ಶಿಲ್ಪಗಳು ಅತಿ ಸುಂದರವಾಗಿ ಮೂಡಿಬಂದಿವೆ. ಒಂದು ಶಿಲ್ಪದಲ್ಲಿ ಸತಿ ಎರಡು ಕೈಗಳನ್ನು ಮೇಲೆತ್ತಿ ನಿಂಬೆಹಣ್ಣು ಹಿಡಿದಿದ್ದಾಳೆ. ಪತಿ ಒಂದು ಕೈಯಲ್ಲಿ ಬಿಲ್ಲು ಮತ್ತೊಂದು ಕೈಯಲ್ಲಿ ಕೊಡಲಿ ಹಿಡಿದಿರುವಂತೆ ಕೆತ್ತಲಾಗಿದೆ. ಇದೇ ಸ್ಥಳದಲ್ಲಿರುವ ಇನ್ನೊಂದು ಶಿಲ್ಪದಲ್ಲಿ ಅಶ್ವರೂಢನಾಗಿರುವ ವೀರನಿಗೆ ಒಬ್ಬ ಛತ್ರಿ ಹಿಡಿದಿದ್ದಾನೆ. ಪತ್ನಿಯು ಎರಡು ಕೈಗಳನ್ನು ಮೇಲೆತ್ತಿ ನಿಂಬೆಹಣ್ಣು ಹಿಡಿದಿರುವಳು. ಇದೇ ವಿವರಗಳನ್ನು ಇಲ್ಲಿರುವ ಮತ್ತೊಂದು ಶಿಲ್ಪದಲ್ಲಿ ಕಾಣುತ್ತೇವೆ.[೭೩] ಮಾದಾಪುರದ ಶಿಲ್ಪದಲ್ಲಿ ಸತಿಯು ತನ್ನ ಎಡಗೈಯನ್ನು ಪತಿಯ ಹೆಗಲ ಮೇಲೆ ಹಾಕಿ ನಿಂತುಕೊಂಡಿರುವಂತೆ ಚಿತ್ರಿಸಲಾಗಿದೆ. ಸೂರಗೊಂಡನಕೊಪ್ಪದ ಸ್ಮಾರಕಶಿಲ್ಪವೊಂದರಲ್ಲಿ ವೀರನು ಕೊಡಲಿಯನ್ನು ಬಲಭುಜದ ಮೇಲೆ ಇಟ್ಟುಕೊಂಡಿದ್ದಾನೆ. ಸತಿಯು ಬಲಗೈ ಮೇಲೆತ್ತಿ ನಿಂಬೆಹಣ್ಣು ಹಿಡಿದಿದ್ದಾಳೆ. ಸತಿ ಹೆಣೆದುಕೊಂಡಿರುವ ಜಡೆ, ಅದಕ್ಕೆ ಮುಡಿದಿರುವ ಕೇದಗೆ ಹೂವನ್ನು ಶಿಲ್ಪಿ ಆಕರ್ಷಕವಾಗಿ ಕಂಡರಿಸಿದ್ದಾನೆ. ಭೈರನಹಳ್ಳಿಯ ಶಿಲ್ಪದಲ್ಲಿ ಸತಿಪತಿಗಳಿಬ್ಬರು ಎರಡು ಕೈಗಳನ್ನು ಮೇಲೆತ್ತಿರುವಂತೆ ಬಿಡಿಸಲಾಗಿದೆ.

ಕತ್ತಿಗೆ ಗ್ರಾಮದ ಒಂದು ಸ್ಮಾರಕದಲ್ಲಿ ಗಡ್ಡದಾರಿಯಾಗಿರುವ ವೀರ ಬಲಗೈಯಲ್ಲಿ ಕತ್ತಿಯನ್ನು ಹಿಡಿದು ನಿಂತಿದ್ದಾನೆ. ಮಾಸ್ತಿ ತನ್ನ ಬಲಗೈಯನ್ನು ಮೇಲೆತ್ತಿ ಹೆಬ್ಬೆರಳಿನ ನಡುವೆ ನಿಂಬೆಹಣ್ಣನ್ನು ಹಿಡಿದಿದ್ದಾಳೆ.[೭೪] ಮಾಸಡಿ ಗ್ರಾಮದಲ್ಲಿರುವ ಶಿಲ್ಪವೊಂದನ್ನು ಕಲಾತ್ಮಕವಾಗಿ ಕಂಡರಿಸಲಾಗಿದೆ. ವೀರನು ಧರಿಸಿರುವ ಮುಂಡಾಸು, ಕೂದಲು, ಹಾರ ಹಾಗೂ ತೋಳು ಮತ್ತು ಕೊರಳಲ್ಲಿ ಕಟ್ಟಿದ ತಾಯಿತ, ಕಿವಿಯೋಲೆ ಇತ್ಯಾದಿ ಆಭರಣಗಳನ್ನು ಸೂಕ್ಷ್ಮವಾಗಿ ಕೆತ್ತಲಾಗಿದೆ. ಉರಿ ಮೀಸೆ ಬಿಟ್ಟಿರುವ ವೀರನು ಎಡಗೈಯಲ್ಲಿ ಖಡ್ಗವನ್ನು ಹಿಡಿದುಕೊಂಡಿದ್ದಾನೆ. ಆತನ ಎಡಭಾಗದಲ್ಲಿ ಸತಿ ಬಲಗೈಯಲ್ಲಿ ಪೂರ್ಣ ಕಲಶವನ್ನೂ, ಎಡಗೈಯಲ್ಲಿ ತೆಂಗಿನಕಾಯಿಯನ್ನು ಹಿಡಿದುಕೊಂಡು ನಿಂತಿರುವಂತೆ ಚಿತ್ರಿಸಲಾಗಿದೆ.[೭೫] ವೀರನ ಬಲಗಡೆ ಇನ್ನೊಬ್ಬ ಚಿಕ್ಕ ವ್ಯಕ್ತಿಯನ್ನು ಚಿತ್ರಿಸಲಾಗಿದೆ. ಪ್ರಾಯಶಃ ಅವನು ಶತ್ರುವು ಆಗಿರಬಹುದು. ಬೆನಕನಹಳ್ಳಿಯ ಸ್ಮಾರಕಶಿಲ್ಪವೊಂದರಲ್ಲಿ ವೀರನು ಒಂದು ಕೈಯಲ್ಲಿ ಕತ್ತಿ, ಮತ್ತೊಂದು ಕೈಯಲ್ಲಿ ಬಾಕುವನ್ನು ಹಿಡಿದು ನಿಂತಿದ್ದಾನೆ. ಅವನು ಉರಿಮೀಸೆ ಉದ್ದವಾದ ಗಡ್ಡ ಬಿಟ್ಟು ಕೊರಳಲ್ಲಿ ತಾಯಿತ ಧರಿಸಿರುವಂತೆ ಕೆತ್ತಲಾಗಿದೆ. ಸತಿಯು ಬಲಗೈ ಮೇಲೆತ್ತಿ ನಿಂಬೆಹಣ್ಣು ಹಿಡಿದಿದ್ದರೆ, ಎಡಗೈಯಲ್ಲಿ ನಿಂಬೆಹಣ್ಣು ಮತ್ತು ಕಳಸ ಎರಡನ್ನು ಹಿಡಿದಿರುವಂತೆ ಬಿಡಿಸಲಾಗಿದೆ. ಸತಿ ಕಟ್ಟಿರುವ ತುರುಬು, ಅದಕ್ಕೆ ಮುಡಿದಿರುವ ಕೇದಗೆ ಹೂ, ಬಳೆ, ಕೊರಳ ಆಭರಣ ಹಾಗೂ ಸೀರೆಯ ನೆರಿಗೆಗಳನ್ನು ಶಿಲ್ಪಿ ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ಚಿಕ್ಕಬಾಸೂರು ಗ್ರಾಮದ ಶಿಲ್ಪದಲ್ಲಿ ವೀರ ಎಡಗೈಯಲ್ಲಿ ಹಿಡಿದ ದಂಡವನ್ನು ನೆಲಕ್ಕೆ ಊರಿ, ಬಲಗೈಯಲ್ಲಿ ಘಂಟೆ ಆಯುಧವನ್ನು ಹಿಡಿದಿದ್ದಾನೆ. ಸತಿ ಒಂದು ಕೈಯಲ್ಲಿ ಕಳಸ ಮತ್ತೊಂದು ಕೈಯಲ್ಲಿ ತೆಂಗಿನಕಾಯಿ ಹಿಡಿದು ನಿಂತಿದ್ದಾಳೆ. ಈ ಸ್ಮಾರಕವನ್ನು ಶಿಲ್ಪಿ ಹೃದಯದ ಆಕರದಲ್ಲಿ ಚಿತ್ರಿಸಿದ್ದಾನೆ. ಪರಸ್ಪರ ಸತಿಪತಿಗಳಿಗಿದ್ದ ಪ್ರೀತಿಯನ್ನು ಶಿಲ್ಪಿ ಹೀಗೆ ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ದೊಡ್ಡೇರಹಳ್ಳಿಯ ಸ್ಮಾರಕವೊಂದು ಅತಿ ಸುಂದರವಾಗಿ ಮೂಡಿಬಂದಿದೆ. ವೀರನು ಎಡಗೈಯಲ್ಲಿ ಬಾಕು ಹಿಡಿದು, ಬಲಗೈಯಲ್ಲಿರುವ ಕತ್ತಿಯನ್ನು ಬಲಭುಜದ ಮೇಲೆ ಇಟ್ಟುಕೊಂಡಿರುವನು. ಸತಿ ಬಲಗೈ ಮೇಲೆತ್ತಿ, ಎಡಗೈಯಲ್ಲಿ ನಿಂಬೆಹಣ್ಣು ಮತ್ತು ನೀರಿನ ಗಿಂಡಿಯನ್ನು ಹಿಡಿದು ನಿಂತಿದ್ದಾಳೆ. ಇಲ್ಲಿ ಸತಿ ಕಟ್ಟಿಕೊಂಡಿರುವ ತುರುಬಿನ ರೀತಿ, ಕೇದಗೆ ಹೂವಿನ ಅಲಂಕಾರ, ಕಿವಿಯೋಲೆ, ಕೊರಳ ಆಭರಣ, ಕೈತುಂಬ ಧರಿಸಿರುವ ಬಳೆ ಮತ್ತು ಉಡುಪನ್ನು ಕಲಾತ್ಮಕವಾಗಿ ಚಿತ್ರಿಸಲಾಗಿದೆ.

**ಈ. ಇಬ್ಬರು ಸತಿ–ಪತಿ ಸ್ಥಾನ ಸಮಾನವುಳ್ಳ ಸ್ಮಾರಕ ಶಿಲ್ಪಗಳು**

ಮಡಿದ ಪತಿ ಹಾಗೂ ಸತಿ ಹೋದ ಆತನ ಇಬ್ಬರು ಪತ್ನಿಯರನ್ನು ಸಮಾನವಾಗಿ ಕಂಡರಿಸಿದ ಸ್ಮಾರಕಶಿಲ್ಪಗಳು ಅಧ್ಯಯನ ಪ್ರದೇಶದಲ್ಲಿ ದೊರೆಯುತ್ತವೆ. ಈ ಸ್ಮಾರಕಗಳನ್ನು ಒಂದೇ ಹಂತದಲ್ಲಿ ಕಂಡರಿಸಲಾಗಿರುತ್ತದೆ. ಕೆಲವು ಸ್ಮಾರಕಗಳಲ್ಲಿ ಸತಿಯರು ಪತಿಯ ಎಡಭಾಗ ಅಥವಾ ಬಲಭಾಗದಲ್ಲಿ ನಿಂತಿರುವಂತೆ, ಇನ್ನೂ ಕೆಲವು ಸ್ಮಾರಕಗಳಲ್ಲಿ ಪತಿಯು ಇಬ್ಬರು ಸತಿಯರ ಮಧ್ಯದಲ್ಲಿ ಆಯುಧಗಳನ್ನು ಹಿಡಿದು ನಿಂತಿರುವಂತೆ ಕಂಡರಿಸಲಾಗಿರುತ್ತದೆ.

ಮಾಸಡಿ ಗ್ರಾಮದ ಒಂದು ಸ್ಮಾರಕವು ಬಹಳ ಸೊಗಸಾದ ಶಿಲ್ಪವನ್ನು ಹೊಂದಿದೆ. ಈ ಶಿಲ್ಪದಲ್ಲಿ ಇಬ್ಬರು ಸತಿಯರು ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು ಬಲಗೈಯನ್ನು ಮೇಲೆತ್ತಿ ಹರಸುತ್ತಿದ್ದಾರೆ. ಇವರಿಬ್ಬರ ಮಧ್ಯೆ ಪತಿ ಬಿಲ್ಲುವಿಗೆ ಬಾಣವನ್ನು ಹೂಡಿ ನಿಂತಿದ್ದಾನೆ.[೭೬] ಈ ಶಿಲ್ಪದ ಸತಿಯರು ಧರಿಸಿರುವ ಕಿವಿಯೋಲೆ, ಕೇದಗೆ ಹೂ, ಸೀರೆಯ ನೆರಿಗೆಗಳನ್ನು ಶಿಲ್ಪಿ ಸುಂದರವಾಗಿ ಬಿಡಿಸಿದ್ದಾನೆ. ಕಡ್ಲೆಬಾಳು ಗ್ರಾಮದ ಶಿಲ್ಪವೊಂದರಲ್ಲಿ ಇಬ್ಬರು ಸತಿಯರು ಎಡಗೈಯಲ್ಲಿ ಕನ್ನಡಿ ಹಿಡಿದು ಬಲಗೈ ಮೇಲೆತ್ತಿ ಹೆಬ್ಬೆರಳುಗಳ ಮಧ್ಯೆ ನಿಂಬೆಹಣ್ಣು ಹಿಡಿದಿದ್ದಾರೆ. ಇಬ್ಬರ ಮಧ್ಯದಲ್ಲಿ ಪತಿ ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡು ನಿಂತಿರುವಂತೆ ಕೆತ್ತಲಾಗಿದೆ. ಇದೇ ವಿವರಗಳನ್ನು ಹೊಂದಿರುವ ಮತ್ತೊಂದು ಸ್ಮಾರಕಶಿಲ್ಪ ಬೀಜೋಗಟ್ಟೆ ಗ್ರಾಮದಲ್ಲಿ ಕಂಡುಬರುತ್ತದೆ. ಚದುರಗೊಳ್ಳದ ಒಂದು ಸ್ಮಾರಕದಲ್ಲಿ ವೀರನು ಆಯುಧವೊಂದನ್ನು ಹಿಡಿದು ನಿಂತಿದ್ದಾನೆ. ಅವನ ಬಲಭಾಗ ಇಬ್ಬರು ಸತಿಯರು ನಿಂತಿರುವುದನ್ನು ಕೆತ್ತಲಾಗಿದೆ. ಶಿಲ್ಪದಲ್ಲಿ ಸಮತೋಲನ ತರಲು ಶಿಲ್ಪಿ ಒಬ್ಬಳು ಒಂದು ಕೈಯನ್ನು ಮತ್ತೊಬ್ಬಳು ಎರಡು ಕೈಗಳನ್ನು ಮೇಲೆತ್ತಿ ನಿಂಬೆಹಣ್ಣು ಹಿಡಿದಂತೆ ಕಂಡರಿಸಿದ್ದಾನೆ. ಗುಡ್ಡದಬೆನಕನಹಳ್ಳಿಯ ಒಂದು ಸ್ಮಾರಕಶಿಲ್ಪ ಗಮನಾರ್ಹವಾಗಿದೆ. ಇಬ್ಬರು ಸತಿಯರು ಬಲಗೈಯನ್ನು ಮೇಲೆತ್ತಿ ಹರಸುತ್ತಿದ್ದಾರೆ. ಒಬ್ಬಳು ಎಡಗೈಯಲ್ಲಿ ಕಳಸವನ್ನು ಹಿಡಿದಿದ್ದಾಳೆ, ಇಬ್ಬರ ಮಧ್ಯೆ ಇರುವ ಎತ್ತರವಾದ ವೇದಿಕೆಯ ಮೇಲೆ ವೀರ ಅಶ್ವರೂಢನಾಗಿ ಕತ್ತಿ ಹಿಡಿದಿದ್ದಾನೆ. ವೇದಿಕೆಯಲ್ಲಿ ಒಬ್ಬನ ರುಂಡ ಮತ್ತು ಮುಂಡಗಳು ಬೇರ್ಪಟ್ಟಿರುವಂತೆ ಕೆತ್ತಲಾಗಿದೆ. ಹೊನ್ನಮರಡಿಯ ಶಿಲ್ಪವೊಂದರಲ್ಲಿ ಅಶ್ವರೂಢನಾಗಿರುವ ವೀರನಿಗೆ ಒಬ್ಬ ಛತ್ರಿ ಹಿಡಿದಿದ್ದಾನೆ. ಸತಿಯರು ಎಡಗೈಯಲ್ಲಿ ನೀರಿನ ಗಿಂಡಿಗಳನ್ನು ಹಿಡಿದು, ಬಲಗೈ ಮೇಲೆತ್ತಿ ಹೂವಿನ ಮೊಗ್ಗು ಹಿಡಿದಂತೆ ಚಿತ್ರಿಸಿರುವುದು ವಿಶೇಷವಾಗಿದೆ. ಚಿಕ್ಕನಹಳ್ಳಿಯಲ್ಲಿರುವ ಸ್ಮಾರಕವೊಂದು ಸೊಗಸಾದ ಶಿಲ್ಪವನ್ನು ಹೊಂದಿದೆ. ಇಲ್ಲಿ ಇಬ್ಬರು ಸತಿಯರು ಹರಸುತ್ತಿದ್ದಾರೆ. ಶಿಲ್ಪದಲ್ಲಿ ಸಮತೋಲನವನ್ನು ತರಲು ಶಿಲ್ಪಿಯು ಒಬ್ಬಳ ಎಡಗೈಯನ್ನು, ಮತ್ತೊಬ್ಬಳ ಬಲಗೈಯನ್ನು ಎತ್ತಿಹಿಡಿದಂತೆ ಚಿತ್ರಿಸಿದ್ದಾನೆ. ಇವರಿಬ್ಬರ ಮಧ್ಯೆ ಪತಿ ಬಿಲ್ಲು ಬಾಣವನ್ನು ಹಿಡಿದು ನಿಂತಿದ್ದಾನೆ. ಅವನ ಕಾಲುಗಳ ಬಳಿ ಒಬ್ಬ ಮಡಿದಿರುವಂತೆ ಕಂಡರಿಸಲಾಗಿದೆ. ಇಲ್ಲಿ ಸತಿಯರು ಲಂಗದಂತೆ ಉಡುಗೆ ತೊಟ್ಟಿರುವುದು ವಿಶೇಷವಾಗಿದೆ.[೭೭] ಹೀಗೆ ಪತಿ-ಪತ್ನಿಯರನ್ನು ಸಮಾನವಾಗಿ ಕಂಡರಿಸಿದ ಶಿಲ್ಪಿಗಳ ಮೂಲ ಉದ್ದೇಶವೆಂದರೆ ಅವರಿಬ್ಬರು ಒಟ್ಟಿಗೆ ದಹಿಸಿಕೊಂಡ ಸಮಾನ ವ್ಯಕ್ತಿತ್ವವನ್ನು ಸಾರುವುದೇ ಆಗಿತ್ತೆಂಬುದನ್ನು ಅರ್ಥೈಸಿಕೊಳ್ಳಬೇಕಿದೆ.

### ೫.೩. ಅನುಗಮನ ಪದ್ಧತಿ

ಪತಿಯು ಎಲ್ಲೋ ದೂರದ ಪ್ರದೇಶದಲ್ಲಿ ಮಡಿದ ವಿಷಯವನ್ನು ತಿಳಿದು ಅವನ ಯಾವುದಾದರೂ ವಸ್ತುವಿನೊಡನೆ ಇಲ್ಲವೇ ತಾನೊಬ್ಬಳೇ ಅಗ್ನಿ ಅಥವಾ ಸಮಾಧಿ ಪ್ರವೇಶ ಮಾಡಿ ಪ್ರಾಣ ಬಿಡುವುದನ್ನು 'ಅನುಗಮನ' ಅಥವಾ 'ಅನುಮರಣ' ಎನ್ನಲಾಗುತ್ತಿದೆ.[೭೮] ಅನುಗಮನ ಅಥವಾ ಅನುಮರಣ ಎಂಬ ಪದ ಕನ್ನಡ ಶಾಸನ, ಕಾವ್ಯ, ಜನಪದ ಸಾಹಿತ್ಯ

ಮೊದಲಾದ ಆಕರಗಳಲ್ಲಿ ಕಂಡುಬರುವುದಿಲ್ಲವೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಗಥಾಸಪ್ತಸತಿ, ಪದ್ಮಪುರಾಣ ಮತ್ತು ಸಂಸ್ಕೃತದಲ್ಲಿ ಅಪರಾರ್ಕನು ಅನುಗಮನದ ಬಗ್ಗೆ ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಬಾಣನು ತನ್ನ ಕಾದಂಬರಿಯಲ್ಲಿ ಈ ಪದ್ಧತಿಯನ್ನು ವಿರೋಧಿಸುವುದನ್ನು ಕಾಣುತ್ತೇವೆ.[೭೯] ಕರ್ನಾಟಕದಲ್ಲಿ ಅನುಗಮನಕ್ಕೆ ಅತ್ಯುತ್ತಮ ನಿದರ್ಶನವು ಹೆಗ್ಗಡದೇವನಕೋಟೆ ತಾಲ್ಲೂಕು ಬೆಳತೂರಿನ ಕ್ರಿ.ಶ. ೧೦೫೭ರ ಶಾಸನದಲ್ಲಿ ದೊರೆಯುತ್ತದೆ.[೮೦] ನಗುನಾಡ ಅಧಿಪತಿ ರವಿಗ ಮತ್ತು ಪೊನ್ನಕಬ್ಬೆಯರ ಮಗಳು ದೇಕಬ್ಬೆಯನ್ನು ನವಲೆನಾಡ ಏಚನಿಗೆ ವಿವಾಹ ಮಾಡಿಕೊಡುತ್ತಾರೆ. ಏಚನು ಒಮ್ಮೆ ದಾಯಿಗರೊಡನೆ ಹೋರಾಡುತ್ತಿರುವಾಗ ಅವನನ್ನು ಬಂಧಿಸಿ ತಲಕಾಡಿಗೆ ಕೊಂಡೊಯ್ದು ಕೊಲ್ಲುತ್ತಾರೆ. ಆ ವಿಷಯವನ್ನು ಕೇಳಿದ ದೇಕಬ್ಬೆಯು ಕುಟುಂಬದವರ ವಿರೋಧದ ಮಧ್ಯೆಯು ಅಗ್ನಿಪ್ರವೇಶ ಮಾಡುತ್ತಾಳೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬಹುಸಂಖ್ಯೆಯಲ್ಲಿ ಅನುಗಮನ ಸತಿಗಲ್ಲುಗಳು ಕಂಡುಬಂದಿವೆ. ಅವುಗಳೆಲ್ಲವೂ ಶಾಸನರಹಿತವಾದ ಸ್ಮಾರಕಶಿಲ್ಪಗಳಾಗಿವೆ. ಇಲ್ಲಿ ಶಿಲ್ಪದ ಲಕ್ಷಣಗಳೇ ನಮಗೆ ಮುಖ್ಯವಾಗುತ್ತವೆ. ವೀರಗಲ್ಲುಗಳಲ್ಲಿ ವೀರನ ಹೋರಾಟದ ದೃಶ್ಯವನ್ನು ಚಿತ್ರಿಸಿದಂತೆ, ಅಗ್ನಿ ಅಥವಾ ಸಮಾಧಿ ಪ್ರವೇಶ ಮಾಡಿದ ಸತಿಯ ಸಂಪೂರ್ಣ ವಿವರಗಳನ್ನು ಶಿಲ್ಪದಲ್ಲಿ ಕಂಡರಿಸಿರುವುದು ಅತೀ ವಿರಳವಾಗಿದೆ. ಹಲವು ಸ್ಮಾರಕಶಿಲ್ಪಗಳಲ್ಲಿ ಸತಿಯೊಬ್ಬಳನ್ನೇ ಚಿತ್ರಿಸಿರುವುದು ಕಂಡುಬರುತ್ತದೆ. ಮಾಸ್ತಿಕಲ್ಲನ್ನು ಕೆತ್ತುವ ಶಿಲ್ಪಿಗೆ ಸತಿಯನ್ನು ಮಾತ್ರ ಸ್ಮಾರಕದಲ್ಲಿ ಕಂಡರಿಸುವ ಮಿತಿಯೂ ಇದ್ದಿರಬೇಕು. ಇಲ್ಲವೇ ಸತಿ ಹೋದವಳ ಪ್ರಾತಿನಿಧಿಕ ರೂಪವೊಂದನ್ನು ಕಲ್ಲಿನಲ್ಲಿ ಕಂಡರಿಸಿದರೆ ಸಾಕು ಎನ್ನುವ ಮಟ್ಟಿಗೆ ಈ ಸ್ಮಾರಕ ಕುರಿತಾಗಿ ಜನರ ಭಾವನೆಯೂ ಇದ್ದಿರಬೇಕೆಂದು ತೋರುತ್ತದೆ. ಹೀಗಾಗಿ ಅಪೂರ್ವವಾದ ಸತಿಘಟನೆಯ ಇನ್ನುಳಿದ ಯಾವ ಆಯಾಮಗಳು ಮಾಸ್ತಿಕಲ್ಲಿನಲ್ಲಿ ಕಾಣಿಸದೇ ಹೋದವು. ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗಿದ್ದ ಗೌಣಸ್ಥಾನವು ಇದಕ್ಕೆ ಕಾರಣವಿರಬೇಕೆಂಬುದು ಸಂಶೋಧಕರಾದ ಬಿ.ಎಸ್. ಶೇಠೆಯವರ ಅಭಿಪ್ರಾಯವಾಗಿದೆ.[೮೧] ಸತಿಯನ್ನು ಸಹಗಮನ ಸ್ಮಾರಕಶಿಲ್ಪಗಳಲ್ಲಿ ಚಿತ್ರಿಸಿರುವಂತೆ ಸಾಮಾನ್ಯವಾಗಿ ಅನುಗಮನ ಸ್ಮಾರಕಶಿಲ್ಪಗಳಲ್ಲೂ ಕೆತ್ತಲಾಗಿದೆ. ಆದರೆ ಈ ಶಿಲ್ಪಗಳಲ್ಲಿ ಸತಿಯೊಬ್ಬಳನ್ನೇ ಪ್ರಧಾನವಾಗಿ ಕಂಡರಿಸಲಾಗಿರುತ್ತದೆ. ಇಲ್ಲಿ ಪತಿ ಮಡಿದ ಕಾರಣ ಇತ್ಯಾದಿ ಅಂಶಗಳು ಅಭಿವ್ಯಕ್ತಿಗೊಂಡಿರುವುದಿಲ್ಲ. ಇದ್ದರೂ ಅವು ಗೌಣವಾಗಿರುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದ ಅನುಗಮನ ಸತಿಗಲ್ಲುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ಮುಖ್ಯ ಸಂಗತಿಗಳನ್ನು ಗುರುತಿಸಿಕೊಂಡು ವಿವರಿಸಲಾಗಿದೆ.

### ೫.೧. ಅನುಗಮನ ಸ್ಮಾರಕ ಶಿಲ್ಪಗಳು

#### ಅ. ಸ್ವತಂತ್ರ ಮಾಸ್ತಿ ಸ್ಮಾರಕ ಶಿಲ್ಪಗಳು

ಸ್ವತಂತ್ರ ಮಾಸ್ತಿಶಿಲ್ಪಗಳಲ್ಲಿ ಕೇವಲ ಸತಿಯನ್ನು ಮಾತ್ರ ಕೆತ್ತಲಾಗಿರುತ್ತದೆ. ಪತಿಯ ಚಿತ್ರಣವನ್ನು ಕಂಡರಿಸಿರುವುದಿಲ್ಲ. ಇಂಥ ಮಾಸ್ತಿಗಲ್ಲುಗಳು ಮುಖ್ಯವಾಗಿ ಸತಿಘಟನೆಯನ್ನು ಸಾರುವ ಉದ್ದೇಶದಿಂದ ರಚನೆಗೊಂಡವುಗಳು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಅಧ್ಯಯನ ಪ್ರದೇಶದ ದೋಣಿಹಳ್ಳಿಯ ಒಂದು ಶಿಲ್ಪದಲ್ಲಿ ಮಹಾಸತಿಯು ಎಡಗೈ ಹೆಬ್ಬೆರಳ ನಡುವೆ ಒಂದು ನಿಂಬೆಹಣ್ಣು ಹಿಡಿದು ಬಲಗೈಯನ್ನು ಮೇಲೆತ್ತಿ ಹರಸುತ್ತಿದ್ದಾಳೆ. ಕಿವಿಗೆ ದೊಡ್ಡ ರಿಂಗುಗಳನ್ನು, ಕೊರಳಲ್ಲಿ ಕಂಠೀಹಾರ, ಮುತ್ತಿನ ಸರಗಳನ್ನು ಧರಿಸಿದ್ದಾಳೆ. ಸೀರೆಯ ನೆರಿಗೆಗಳು ಹೊಕ್ಕಳಿನಿಂದ ಕೆಳಕ್ಕೆ ಇಳಿಬಿದ್ದಿರುವಂತೆ ಕೆತ್ತಲಾಗಿದೆ. ಸೊಂಟದ ಬಳಿ ಸೀರೆಯ ಮೇಲೆ ಮತ್ತೊಂದು ವಸ್ತ್ರವನ್ನು ಧರಿಸಿದಂತೆ ಚಿತ್ರಿಸಿರುವುದು ವಿಶೇಷವಾಗಿದೆ. ಇದೇ ರೀತಿಯ ವಿವರಗಳನ್ನು ಹೊಂದಿರುವ ಮತ್ತೊಂದು ಶಿಲ್ಪ ಹರೋಸಾಗರದಲ್ಲಿ ಕಂಡುಬರುತ್ತದೆ. ಆದರೆ ಈ ಶಿಲ್ಪದಲ್ಲಿ ಸತಿಯು ಬಲಗೈ ಮೇಲೆತ್ತಿ ಹೆಬ್ಬೆರಳುಗಳ ಮಧ್ಯೆ ನಿಂಬೆಹಣ್ಣು ಹಿಡಿದಿರುವಂತೆ ತೋರಿಸಲಾಗಿದೆ. ದಾಗಿನಕಟ್ಟೆ ಗ್ರಾಮದ ಸ್ಮಾರಕವೊಂದರಲ್ಲಿ ಸತಿ ಎಡಗೈಯಲ್ಲಿ ಕನ್ನಡಿ ಹಿಡಿದು ಬಲಗೈ ಮೇಲೆತ್ತಿ ನಿಂಬೆಹಣ್ಣು ಹಿಡಿದಿರುವ ಚಿತ್ರಣವಿದೆ. ಸತಿ ಕೈತುಂಬ ಬಳೆ, ಕಿವಿಯೋಲೆ, ಕೊರಳಲ್ಲಿ ಕಂಠೀಹಾರ, ಮುತ್ತಿನ ಸರವನ್ನು ಧರಿಸಿದ್ದಾಳೆ. ತಲೆಯಲ್ಲಿ ಮುಡಿದಿರುವ ಕೇದಗೆ ಗರಿಯ ಹೂವನ್ನು ಚಕ್ರದಂತೆ ಎರಡು ಹಂತಗಳಲ್ಲಿ ಆಕರ್ಷಕವಾಗಿ ಕಂಡರಿಸಲಾಗಿದೆ. ತಲೆಯಿಂದ ಹಣಿದುಕೊಂಡಿರುವ ಜಡೆ ಎಡಗೈ ಭುಜದ ಮೇಲೆ ಇಳಿಬಿದ್ದಿರುವಂತೆ ಬಿಡಿಸಿರುವುದು ಈವರೆಗೆ ದೊರೆತ ಮಾಸ್ತಿಶಿಲ್ಪಗಳಿಗಿಂತ ಭಿನ್ನವಾಗಿದೆ. ಸೀರೆಯನ್ನು ಅತ್ಯಂತ ಅಲಂಕೃತವಾಗಿ ಉಟ್ಟುಕೊಂಡಿದ್ದು, ಹೊಕ್ಕಳಿನಿಂದ ನೆರಿಗೆಯ ಕುಚ್ಚುಗಳು ಎರಡು ಹಂತದಲ್ಲಿ ಕೆಳಕ್ಕೆ ಇಳಿಬಿದ್ದಿವೆ. ಪಾದಗಳ ಬಳಿ ಸೀರೆ ಹೂವಿನಂತೆ ಅರಳಿದೆ. ಸತಿಯ ಬಲಭಾಗದಲ್ಲಿ ಮಡಕೆಗಳನ್ನು ಒಂದರ ಮೇಲೆ ಒಂದರಂತೆ ಮೂರು ಸಾಲಿನಲ್ಲಿ ಎತ್ತರವಾಗಿ ಜೋಡಿಸಿರುವುದು ಇಲ್ಲಿ ಪ್ರಶ್ನಾರ್ಥಕವಾಗಿದೆ. ಚಿರಡೋಣಿ ಗ್ರಾಮದ ಹೊಲವೊಂದರಲ್ಲಿ ಎರಡು ಸತಿ ಸ್ಮಾರಕಶಿಲ್ಪಗಳಿವೆ.[೮೨] ಈ ಶಿಲ್ಪಗಳ ಲಕ್ಷಣಗಳನ್ನು ಸಾಮಾನ್ಯವಾಗಿ ಒಂದೇ ರೀತಿ ಕೆತ್ತಲಾಗಿದೆ. ಸತಿಯರು ಎಡಗೈಯ ಹೆಬ್ಬೆರಳುಗಳ ನಡುವೆ ನಿಂಬೆಹಣ್ಣು ಹಿಡಿದು ಬಲಗೈಯನ್ನು ಮೇಲೆತ್ತಿ ಹರಸುತ್ತಿದ್ದಾರೆ. ಸತಿಯರ ಕುತ್ತಿಗೆ ಮತ್ತು ಸೊಂಟದ ಎರಡು ಬದಿಯಲ್ಲಿ ರಂಧ್ರಗಳನ್ನು ಮಾಡಲಾಗಿದ್ದು, ಇದಕ್ಕೆ ಕಾರಣ ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಸಂಬಂಧಿಕರು ಅಥವಾ ಸ್ಥಳೀಯರು ಹಬ್ಬ-ಹರಿದಿನಗಳಲ್ಲಿ ಮಹಾಸತಿ ಶಿಲ್ಪಕ್ಕೆ ಹೂವಿನಹಾರ ಹಾಗೂ ಸೀರೆ ಇನ್ನಿತರ ಬಟ್ಟೆಯನ್ನು ತೊಡಿಸಲು ಸುಲಭವಾಗಲಿ ಎಂದು ಈ ರೀತಿ ರಂಧ್ರಗಳನ್ನು ಮಾಡಲಾಗಿರುತ್ತದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಹಿರೇಕೋಗಲೂರು ಗ್ರಾಮದ ಒಂದು ಮಾಸ್ತಿಕಲ್ಲು ಬಹಳ ಸುಂದರವಾಗಿದ್ದು, ಕಮಾನಿನಾಕಾರದ ಶಿಲೆಯಲ್ಲಿ ಸತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು, ಬಲಗೈಯನ್ನು ಮೇಲೆತ್ತಿ ಹರಸುತ್ತಿರುವಂತೆ ಕೆತ್ತಲಾಗಿದೆ. ಸತಿಯು ಬಹಳ ಸಣ್ಣದಾದ ನಡುವನ್ನು ಹೊಂದಿದ್ದು, ಕಿವಿ, ಕೊರಳ ತುಂಬ ಆಭರಣಗಳನ್ನು ಧರಿಸಿ ತಲೆಯಲ್ಲಿ ಕೇದಗೆ ಗರಿಗಳಿಂದ ಅಲಂಕರಿಸಿದ ಹೂವನ್ನು ಮುಡಿದಿದ್ದಾಳೆ. ಈ ಶಿಲ್ಪದಲ್ಲಿನ ಸತಿಯು ಕೇಶದ ಗಂಟನ್ನು ಹಾಕಿಕೊಂಡಿದ್ದಾಳೆಂದು ವಿದ್ವಾಂಸರೊಬ್ಬರು ಉಲ್ಲೇಖಿಸುತ್ತಾರೆ.[೮೩] ಆದರೆ ಸತಿ ಹೆಣೆದ ಜಡೆಯನ್ನು ಬೆನ್ನ ಹಿಂದೆ ಉದ್ದವಾಗಿ ಇಳಿಬಿಟ್ಟಿರುವುದನ್ನು ಸ್ಮಾರಕದ ಹಿಂಬದಿಯಲ್ಲಿ ತೋರಿಸಲಾಗಿದೆ. ಸೀರೆಯ ನೆರಿಗೆ

ಪಾದದವರೆಗೂ ತೆರೆತೆರೆಯಾಗಿ ಹರಡಿದಂತೆ ಕೆತ್ತಲಾಗಿದೆ. ಮಾಸ್ತಿಯ ಶಿರ ಹಾಗೂ ಕಂಕುಳ ಭಾಗದಲ್ಲಿ ಎರಡು ರಂಧ್ರಗಳನ್ನು ಮಾಡಲಾಗಿದೆ. ಸತಿಯ ಕಾಲುಗಳ ಎರಡು ಬದಿಯಲ್ಲಿ ಹೂವಿನ ಕುಂಡಗಳನ್ನು ಚಿತ್ರಿಸಲಾಗಿದೆ. ಪೀಠದ ಮೇಲೆ ನಿಂತಿರುವ ಸತಿಯ ಪಾದಗಳನ್ನು ಬೆರಳು ಸಹಿತ ಕಾಣುವಂತೆ ಚಿತ್ರಿಸಿರುವುದು ಶಿಲ್ಪಿಯ ಕಲಾಜ್ಞಾನ ಎದ್ದುಕಾಣುತ್ತದೆ. ಇದೇ ವಿವರಗಳನ್ನು ಹೊಂದಿರುವ ಮತ್ತೊಂದು ಸ್ಮಾರಕ ಶಿಲ್ಪವು ಮಳಲಕೆರೆ ಗ್ರಾಮದಲ್ಲಿ ಕಂಡುಬರುತ್ತದೆ. ಮಲಹಾಳ್ ಗ್ರಾಮದ ಶಿಲ್ಪದಲ್ಲಿ ಮಾಸ್ತಿ ಎರಡು ಕೈಗಳನ್ನು ಮೇಲೆತ್ತಿ ಒಂದು ಕೈಯಲ್ಲಿ ಕನ್ನಡಿ, ಮತ್ತೊಂದು ಕೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಾಳೆ. ಮೇಲೆತ್ತಿದ ಎರಡೂ ಕೈಗಳ ಮೇಲೆ ಗಿಳಿಗಳು ಕುಳಿತಿರುವಂತೆ ಬಿಡಿಸಲಾಗಿದೆ. ಕೈತುಂಬ ಬಳೆ, ಕಿವಿಯೋಲೆ, ಕೊರಳಿಗೆ ಕಂಠೀಹಾರ ಮತ್ತು ಮುತ್ತಿನ ಸರ ಧರಿಸಿದ್ದು ತಲೆಯಲ್ಲಿ ಕೇದಗೆ ಗರಿಗಳಿಂದ ಅಲಂಕರಿಸಿದ ಕೇಶಗಂಟನ್ನು ಹಾಕಿಕೊಂಡಿದ್ದಾಳೆ. ನಿಂತ ಭಂಗಿಯಲ್ಲಿ ಇರದೇ ನೃತ್ಯದ ಭಂಗಿಯಲ್ಲಿರುವಂತೆ ಕಂಡರಿಸಿರುವುದು ವಿಶೇಷವಾಗಿದೆ.[೮೪] ತಣಿಗೆರೆ ಗ್ರಾಮದ ಮಾಸ್ತಿಶಿಲ್ಪದಲ್ಲಿ ಸತಿ ಬಲಗೈ ಮೇಲೆತ್ತಿ ನಿಂಬೆಹಣ್ಣು ಹಿಡಿದಿದ್ದಾಳೆ. ಆಕೆಯ ಎಡಗೈ ಸಾಮಾನ್ಯಕ್ಕಿಂತ ಹೆಚ್ಚಾಗಿ ಮಡಚಿಕೊಂಡಿದೆ. ಸ್ಥಳದ ಅಭಾವದಿಂದ ಶಿಲ್ಪಿ ಈ ರೀತಿ ಕಂಡರಿಸಿದ್ದಾನೆಂದು ತೋರುತ್ತದೆ. ಬಲಗೈ ಕೆಳಭಾಗದಲ್ಲಿ ಕಳಸವಿದೆ. ಮಾಸ್ತಿ ಧರಿಸಿರುವ ಉಡುಪಿನ ನೆರಿಗೆಗಳು ಪಾದಗಳವರೆಗೂ ಇಳಿಬಿದ್ದಿರುವಂತೆ ಕೆತ್ತಲಾಗಿದೆ.

ಕತ್ತಿಗೆ[೮೫] ಗ್ರಾಮದ ಒಂದು ಶಿಲ್ಪದಲ್ಲಿ ಸತಿ ಎಡಗೈಯಲ್ಲಿ ನೀರಿನ ಗಿಂಡಿಯನ್ನು ಹಿಡಿದು ಬಲಗೈ ಮೇಲೆತ್ತಿ ಹೆಬ್ಬೆರಳಿನ ನಡುವೆ ನಿಂಬೆಹಣ್ಣು ಹಿಡಿದಿದ್ದಾಳೆ. ಈ ಶಿಲ್ಪದಲ್ಲಿ ಸತಿ ಕೇಶದ ತುರುಬನ್ನು ಬಲಕ್ಕೆ ಕಟ್ಟಿ ಕೇದಗೆ ಹೂವನ್ನು ಮುಡಿದಿರುವಂತೆ ಕೆತ್ತಲಾಗಿದೆ. ಕಿವಿಯಲ್ಲಿ ರಿಂಗು, ಕೊರಳಲ್ಲಿ ಕಂಠೀಹಾರಗಳನ್ನು ಧರಿಸಿರುವಳು. ಸೀರೆಯ ನೆರಿಗೆಗಳು ಸೊಂಟದ ಸುತ್ತಲೂ ಹೂವಿನಂತೆ ಹರಡಿಕೊಂಡಿರುವ ಹಾಗೆ ಬಿಡಿಸಲಾಗಿದೆ. ಕುಂದೂರಿನ ಸ್ಮಾರಕವೊಂದರಲ್ಲಿ ಸತಿ ಬಲಗೈ ಮೇಲೆತ್ತಿ ಹರಸುತ್ತಿದ್ದಾಳೆ. ಎಡಗೈಯನ್ನು ಇಳಿಬಿಟ್ಟು ಅಂಗೈ ತೊಡುಗೆ ತಾಗಿಕೊಂಡಿರುವಂತೆ ಶಿಲ್ಪಿ ಸುಂದರವಾಗಿ ಚಿತ್ರಿಸಿದ್ದಾನೆ. ಕಿವಿಯಲ್ಲಿ ಜುಮಕಿ, ಕೊರಳಲ್ಲಿ ತಾಳಿ ಹಾಗೂ ಮುತ್ತಿನ ಸರಗಳನ್ನು ಧರಿಸಿದ್ದಾಳೆ. ನಡುವಿಗೆ ದಾವಣಿಯನ್ನು ಹಾಕಿದ್ದಾಳೆ. ಸೀರೆ ಪಾದದವರೆಗೆ ನಾಲ್ಕು ಮಡಿಕೆಗಳಲ್ಲಿರುವಂತೆ ಬಿಡಿಸಲಾಗಿದೆ. ಹೊಕ್ಕಳಿನಿಂದ ನೆರಿಗೆಯ ಕುಚ್ಚುಗಳು ಒಂಬತ್ತು ಹಂತದಲ್ಲಿ ಕೆಳಕ್ಕೆ ಇಳಿಬಿದ್ದಿರುವಂತೆ ಕಂಡರಿಸಿರುವುದು ವಿಶೇಷವಾಗಿದೆ. ಇದೇ ಸಂಗತಿಗಳನ್ನು ತಿಳಿಸುವ ಮತ್ತೊಂದು ಮಾಸ್ತಿ ಸ್ಮಾರಕವು ಸೂರಹೊನ್ನೆ ಗ್ರಾಮದಲ್ಲಿ ಕಂಡುಬರುತ್ತದೆ. ಈ ಎರಡು ಸ್ಮಾರಕಶಿಲ್ಪಗಳಲ್ಲಿ ಸತಿಯವರು ಕೈಗಳಲ್ಲಿ ಯಾವುದೇ ವಸ್ತುಗಳನ್ನು ಹಿಡಿದಿರುವುದಿಲ್ಲ. ಮಾಸಡಿ[೮೬] ಗ್ರಾಮದ ಶಿಲ್ಪದಲ್ಲಿ ಸತಿ ಬಲಗೈಯಲ್ಲಿ ಕಳಸವನ್ನು ಹಿಡಿದಿರುವ ಕೆತ್ತನೆ ಇದೆ. ಈ ಶಿಲ್ಪದಲ್ಲಿ ಸತಿ ಧರಿಸಿರುವ ಸೀರೆಯ ನೆರಿಗೆಗಳು ಪಾದಗಳವರೆಗೆ ಚಿತ್ರಿಸಿ ಸೆರಗನ್ನು ಎಡಭುಜದ ಮೇಲೆ ಹಾಕಿಕೊಂಡಿರುವಂತೆ ಶಿಲ್ಪಿ ಅಪೂರ್ವವಾಗಿ ಕಂಡರಿಸಿದ್ದಾನೆ. ಚೀಲೂರಿನ ತ್ರುಟಿತಗೊಂಡಿರುವ ಸ್ಮಾರಕವೊಂದರಲ್ಲಿ ಸತಿ ಸೀರೆಯ ಸೆರಗು ಮೇಲೆತ್ತಿದ ಬಲಗೈ ಕೆಳಗೆ ನೇತಾಡುತ್ತಿರುವ ಹಾಗೆ

ಕೆತ್ತಲಾಗಿದೆ. ಇದೇ ರೀತಿ ಚಿತ್ರಿಸಿರುವ ಮತ್ತೊಂದು ಸತಿ ಸ್ಮಾರಕಶಿಲ್ಪ ಮತ್ತಿ ಗ್ರಾಮದಲ್ಲಿ ಕಂಡುಬರುವುದು. ಮತ್ತಿ ಗ್ರಾಮದ ಇನ್ನೊಂದು ಶಿಲ್ಪದಲ್ಲಿ ಸತಿ ಎಡಗೈಯಲ್ಲಿ ಕಳಸವನ್ನು ಹಿಡಿದು ಬಲಗೈ ಮೇಲೆತ್ತಿ ಹರಸುತ್ತಿರುವಂತೆ ಕೆತ್ತಲಾಗಿದೆ. ಈ ಸ್ಮಾರಕದಲ್ಲಿ ಸತಿ ಕಟ್ಟಿರುವ ಮುಡಿ, ಅದಕ್ಕೆ ಮುಡಿದಿರುವ ಕೇದಗೆ ಹೂವನ್ನು ಶಿಲ್ಪಿ ಕಲಾತ್ಮಕವಾಗಿ ಚಿತ್ರಿಸಿದ್ದಾನೆ.

ಈಚಘಟ್ಟ ಗ್ರಾಮದ ಸ್ಮಾರಕವು ಕಮಾನಿನಾಕಾರದಲ್ಲಿ ಮೂಡಿಬಂದಿದ್ದು, ಅದರೊಳಗೆ ನಿಂತಿರುವ ಸತಿ ಎಡಗೈಯಲ್ಲಿ ಕನ್ನಡಿ ಹಿಡಿದು ಬಲಗೈ ಮೇಲೆತ್ತಿ ಹರಸುತ್ತಿದ್ದಾಳೆ. ಕಿವಿಗೆ ರಿಂಗು, ಕೊರಳಿಗೆ ಕಂಠೀಹಾರಗಳನ್ನು ಧರಿಸಿರುವಳು. ಸತಿಯ ಸೀರೆ ಪಾದದ ಬಳಿ ವಿಶಾಲವಾಗಿ ಹರಡಿಕೊಂಡು ಹೆಚ್ಚು ನೆರಿಗೆಗಳಿಂದ ಕೂಡಿದೆ. ಸೀರೆಯ ಮೇಲೆ ಸೊಂಟಕ್ಕೆ ಅಲಂಕರಿಸಿದ ಬಟ್ಟೆಯೊಂದನ್ನು ಸುತ್ತಿಕೊಂಡಂತೆ ಕೆತ್ತಲಾಗಿದೆ. ಸತಿ ಕಾಲು ಗೆಜ್ಜೆ, ಪಾದುಕೆಗಳನ್ನು ಧರಿಸಿರುವಂತೆ ಕಂಡರಿಸಿರುವುದು ವಿಶೇಷವಾಗಿದೆ. ಇದೇ ರೀತಿಯ ಸಂಗತಿಗಳನ್ನು ಚಿತ್ರಿಸಿರುವ ಮತ್ತೊಂದು ಸ್ಮಾರಕ ಎಲೆಬೇತೂರು ಗ್ರಾಮದಲ್ಲಿ ಕಂಡುಬರುತ್ತದೆ. ನೀರ್ಥಡಿಯ ತ್ರುಟಿತವಾದ ಒಂದು ಶಿಲ್ಪದಲ್ಲಿ ಸತಿ ಪಾದುಕೆಗಳನ್ನು ಧರಿಸಿ ನಿಂತಿರುವಂತೆ ಚಿತ್ರಿಸಲಾಗಿದೆ. ಗಂಗನಕಟ್ಟೆ ಗ್ರಾಮದ ಶಿಲ್ಪದಲ್ಲಿ ಸತಿಯನ್ನು ಬೃಹದಾಕಾರದ ಶಿಲೆಯಲ್ಲಿ ಸುಂದರವಾಗಿ ಕೆತ್ತಲಾಗಿದೆ. ಮಾಸ್ತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದುಕೊಂಡು ಬಲಗೈ ಮೇಲೆತ್ತಿ ಹರಸುತ್ತಿದ್ದಾಳೆ. ಎತ್ತಿದ ಬಲಗೈ ಕೆಳಗೆ ಕಳಸವನ್ನು ಬಿಡಿಸಲಾಗಿದೆ. ಮಾಯಕೊಂಡ ಗ್ರಾಮದ ಒಂದು ಸ್ಮಾರಕದಲ್ಲಿ ಸತಿ ಎರಡು ಕೈಗಳನ್ನು ಮೇಲೆತ್ತಿ ನಿಂತಿರುವಂತೆ ಕಂಡರಿಸಲಾಗಿದೆ. ಇದೇ ಗ್ರಾಮದ ಮತ್ತೊಂದು ಸ್ಮಾರಕದಲ್ಲಿ ಸತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು ಬಲಗೈ ಮೇಲೆತ್ತಿ ಹೂವಿನ ಮೊಗ್ಗನ್ನು ಹಿಡಿದಿರುವುದನ್ನು ಕೆತ್ತಲಾಗಿದೆ. ಸತಿಯ ಎಡಗೈ ಭುಜದ ಮೇಲೆ ಕುಳಿತಿರುವ ಗಿಳಿಯೊಂದನ್ನು ಬಿಡಿಸಲಾಗಿದೆ. ಪಲ್ಲಾಗಟ್ಟೆ ಗ್ರಾಮದ ಮಾಸ್ತಿಶಿಲ್ಪದಲ್ಲಿ ಸತಿ ಮೇಲೆತ್ತಿದ ಎಡಗೈ ತೋರುಬೆರಳುಗಳ ಮೇಲೆ ಗಿಳಿ ಕುಳಿತಿರುವಂತೆ ಕೆತ್ತಲಾಗಿದೆ. ಕೆಳಗಿಳಿಸಿರುವ ಬಲಗೈಯಲ್ಲಿ ಹೂವಿನ ಮೊಗ್ಗನ್ನು ಹಿಡಿದಿದ್ದಾಳೆ. ಗಿಳಿಯನ್ನು ಚಿತ್ರಿಸುವ ನಿರ್ದಿಷ್ಟ ಕಾರಣ ತಿಳಿಯದು. ಪ್ರಾಯಶಃ ಗಿಳಿ ಶುಭದ ಸಂಕೇತವಾಗಿತ್ತೆಂದು ತೋರುತ್ತದೆ. ಮೂಲ ಸ್ಮಾರಕವನ್ನು ನವೀಕರಣಗೊಳಿಸಿರುವುದರಿಂದ ಸ್ಮಾರಕವು ಆಕರ್ಷಕವಾಗಿ ಕಂಡುಬರುತ್ತದೆ.

ಜಿಗಳಿ ಗ್ರಾಮದ ಸ್ಮಾರಕಶಿಲ್ಪವೊಂದು ಕಮಾನಿನ ರಚನೆಯಿದ್ದು ಸತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದುಕೊಂಡು, ಬಲಗೈ ಮೇಲೆತ್ತಿ ಹರಸುತ್ತಿರುವಂತೆ ಕೆತ್ತಲಾಗಿದೆ. ಸತಿ ಕಿವಿಯಲ್ಲಿ ಬೆಂಡಾಲಿ, ಕಂಠೀಹಾರ, ಕೊರಳಹಾರಗಳನ್ನು ಧರಿಸಿದ್ದಾಳೆ. ಸೀರೆಯ ನೆರಿಗೆ ಪಾದಗಳವರೆಗೂ ತೆರೆತೆರೆಯಾಗಿ ಹರಡಿದೆ. ಸೀರೆಯ ಮೇಲೆ ಸೊಂಟಕ್ಕೆ ಡಾಬನ್ನು ಹಾಕಿದ್ದಾಳೆ. ಸತಿ ಧರಿಸಿರುವ ಸೀರೆ ದೇಹದ ಸುತ್ತಲೂ ಮಡಚಿಕೊಂಡಿರುವಂತೆ ಕಂಡರಿಸಲಾಗಿದೆ. ಯಲವಟ್ಟಿ ಗ್ರಾಮದ ಶಿಲ್ಪದಲ್ಲಿ ಪೀಠದ ಮೇಲೆ ನಿಂತಿರುವ ಸತಿ ಬಲಗೈ ಮೇಲೆತ್ತಿ ಹರಸುತ್ತಿರುವಂತೆ ಕೆತ್ತಲಾಗಿದೆ. ದೀಟೂರು ಗ್ರಾಮದ ಒಂದು ಸ್ಮಾರಕದಲ್ಲಿ ಸತಿ ಲಂಗದಂಥ ಉಡುಪನ್ನು ಧರಿಸಿಕೊಂಡು

ನಿಂತಿರುವಂತೆ ಕಂಡರಿಸಲಾಗಿದೆ.[೮೭] ಗೋವಿನಹಾಳು ಗ್ರಾಮದ ಶಿಲ್ಪದಲ್ಲಿ ಸತಿ ಎಡಗೈಯಲ್ಲಿ ಗಿಂಡಿಯನ್ನು ಹಿಡಿದುಕೊಂಡು ಬಲಗೈ ಮೇಲೆತ್ತಿ ಹರಸುತ್ತಿರುವ ಚಿತ್ರಣವಿದೆ. ಈ ಶಿಲ್ಪದಲ್ಲಿ ಸತಿ ಮುಡಿಯನ್ನು ಬಲಕ್ಕೆ ಇರುವಂತೆ ಕಟ್ಟಿ ಕೇದಗೆ ಹೂವನ್ನು ಮುಡಿದುಕೊಂಡಂತೆ ಬಿಡಿಸಲಾಗಿದೆ. ನಂದಿಬೇವೂರು ಗ್ರಾಮದ ಸ್ಮಾರಕದಲ್ಲಿ ಸತಿ ವೃತ್ತಾಕಾರದ ಪೀಠದ ಮೇಲೆ ನಿಂತಿದ್ದಾಳೆ. ಬಲಗೈಯನ್ನು ಮೇಲೆತ್ತಿ ಹೆಬ್ಬೆರಳು ಮತ್ತು ತೋರಬೆರಳುಗಳ ಮಧ್ಯೆ ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಎಡಗೈಯನ್ನು ನೀಳವಾಗಿ ಕೆಳಗೆ ಇಳಿಬಿಟ್ಟು ಹೆಬ್ಬೆರಳು ಮತ್ತು ತೋರುಬೆರಳುಗಳ ಮಧ್ಯೆ ಕಮಲದ ಮೊಗ್ಗನ್ನು ಕೆಳಮುಖವಾಗಿ ಹಿಡಿದಿದ್ದಾಳೆ. ಎತ್ತಿದ ಬಲಗೈ ಕೆಳಗೆ ಕಳಸದ ಚಿತ್ರಣವಿದೆ. ಸತಿ ಕೊರಳ ಆಭರಣಗಳನ್ನು ಧರಿಸಿ, ತಲೆಯಲ್ಲಿ ಕೇದಗೆ ಹೂ ಮುಡಿದಿರುವುದನ್ನು ಕೆತ್ತಲಾಗಿದೆ. ಸೀರೆಯ ನೆರಿಗೆ ಸೊಂಟದ ಸುತ್ತಲೂ ಹೂವಿನಂತೆ ಪಾದಗಳವರೆಗೂ ಹರಡಿಕೊಂಡಿದೆ.[೮೮] ಈ ಸ್ಮಾರಕ ಮೇಲ್ಭಾಗದಲ್ಲಿ ಶಿವಲಿಂಗ, ನಂದಿಯನ್ನು ಚಿತ್ರಿಸಲಾಗಿದೆ. ಸತಿ ಸ್ವರ್ಗ ಪ್ರಾಪ್ತಿಯಾದಳು ಎನ್ನುವ ಅರ್ಥದಲ್ಲಿ ಶಿಲ್ಪಿ ಇಲ್ಲಿ ಚಿತ್ರಿಸಿರುವನೆಂದು ತೋರುತ್ತದೆ. ಬೆಂಡಿಗೆರೆ ಗ್ರಾಮದ ಶಿಲ್ಪದಲ್ಲಿ ಸತಿ ಬಲಗೈ ಮೇಲೆತ್ತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಾಳೆ. ಬಳೆ, ಕಿವಿಗೆ ಹಾಕಿರುವ ರಿಂಗು, ಕೊರಳಿಗೆ ಹಾಕಿದ ಕಂಠೀಹಾರ ಮತ್ತು ಕೊರಳಹಾರಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಸತಿ ಸೀರೆಯನ್ನು ಅತ್ಯಂತ ಅಲಂಕೃತವಾಗಿ ಉಟ್ಟುಕೊಂಡಿದ್ದು, ಹೊಕ್ಕಳಿನಿಂದ ನೆರಿಗೆಗಳು ಕೆಳಕ್ಕೆ ಇಳಿಬಿದ್ದಿವೆ. ಅಲಗಿಲವಾಡದ ಒಂದು ಶಿಲ್ಪದಲ್ಲಿ ಸತಿ ಬಲಗೈ ಮೇಲೆತ್ತಿ ಹರಸುತ್ತಿದ್ದಾಳೆ. ಆಕೆಯ ಮುಡಿಯನ್ನು ಬಲಕ್ಕೆ ಇರುವಂತೆ ಕೆತ್ತಲಾಗಿದೆ. ಇದೇ ದೃಶ್ಯಗಳಿರುವ ಇನ್ನೊಂದು ಮಾಸ್ತಿಶಿಲ್ಪ ಕಡತಿ ಗ್ರಾಮದಲ್ಲಿ ಕಂಡುಬರುತ್ತದೆ. ಗಡಿಗುಡಾಹಾಳ್ ಗ್ರಾಮದಲ್ಲಿ ಎರಡು ಮಾಸ್ತಿ ಸ್ಮಾರಕಗಳಿವೆ. ಸತಿಯರಿಬ್ಬರು ಬಲಗೈ ಮೇಲೆತ್ತಿ ಹರಸುತ್ತಿರುವಂತೆ ಬೆಣಚುಕಲ್ಲಿನ ಶಿಲೆಯಲ್ಲಿ ಕಂಡರಿಸಲಾಗಿದೆ.

**ಆ. ಮಾಸ್ತಿಶಿಲ್ಪದಲ್ಲಿ ಗೌಣವಾಗಿರುವ ಪತಿಯ ಶಿಲ್ಪ**

ವೀರನೊಬ್ಬ ಮಡಿದಾಗ ಆತನ ಪತ್ನಿ ಸತಿಹೋದುದ್ದನ್ನು ಸಾಮಾನ್ಯವಾಗಿ ಕೈ ಎತ್ತಿಕೊಂಡು ನಿಂತಿರುವಂತೆ ಸ್ಮಾರಕದಲ್ಲಿ ಚಿತ್ರಿಸುವ ಪರಿಪಾಠ ಬೆಳೆದುಬಂದದ್ದನ್ನು ಕಾಣುತ್ತೇವೆ. ಇಂಥ ಸ್ಮಾರಕಗಳಲ್ಲಿ ಸತಿಯನ್ನು ಮಾತ್ರ ಮುಖ್ಯವಾಗಿಟ್ಟುಕೊಂಡು ಕಂಡರಿಸಿರುವುದನ್ನು ಈ ಹಿಂದೆ ಗಮನಿಸಿದ್ದೇವೆ. ಈ ಪ್ರಕಾರದ ಶಿಲ್ಪಗಳಲ್ಲಿ ಯಾವುದಾದರೂ ಒಂದು ಮೂಲೆಯಲ್ಲಿ ಅಥವಾ ಸತಿಯ ಎಡ-ಬಲ ಭಾಗದಲ್ಲಿ ಪತಿಯನ್ನು ಚಿಕ್ಕದಾಗಿ ಕೆತ್ತಲಾಗಿರುತ್ತದೆ. ಇಲ್ಲಿ ಪತಿಯನ್ನು ಗೌಣಗೊಳಿಸಿರಲು ಮುಖ್ಯ ಕಾರಣ ಸತಿ ಅನುಗಮನಗೊಂಡಿರುವುದೇ ಆಗಿದೆ. ಅವನು ಹೋರಾಟದಲ್ಲಿ ಮಡಿದವನಾಗಿದ್ದರೆ ಅದರ ಗುರುತಿಗಾಗಿ ಅವನೊಡನೆ ಆಯುಧಗಳನ್ನು ಬಿಡಿಸಲಾಗಿರುತ್ತದೆ. ಕೆಲವೊಂದು ಮಾಸ್ತಿಶಿಲ್ಪಗಳಲ್ಲಿ ಪತಿ ಪದ್ಮಾಸನದಲ್ಲಿ ಕೈಮುಗಿದುಕೊಂಡು ಕುಳಿತಿರುವಂತೆ ಕೆತ್ತಲಾಗಿರುತ್ತದೆ. ಈ ಚಿತ್ರಣವು ಪತಿಯ ಸಹಜ ಮರಣವನ್ನು ಸೂಚಿಸುತ್ತವೆಯೆಂದು ವಿದ್ವಾಂಸರೊಬ್ಬರು ಅಭಿಪ್ರಾಯಿಸಿದ್ದಾರೆ.[೮೯] ಬಹುಶಃ ಅದು ಪತಿಯ ಸಹಜ ಮರಣವನ್ನು ಸೂಚಿಸದೇ ಅವನು ಹೋರಾಟದಲ್ಲಿ ಮಡಿದಿದ್ದರೂ ಈಗಾಗಲೇ ಸ್ವರ್ಗಪ್ರಾಪ್ತಿ ಪಡೆದಿರುವನೆಂಬ ಅರ್ಥದ ಹಿನ್ನೆಲೆಯಲ್ಲಿ ಶಿಲ್ಪಿ ಇಲ್ಲಿ ಕಂಡರಿಸಿರಬಹುದು. ಪತಿ ಮರಣದ ನಂತರ ಪತ್ನಿ ಸತಿ ಹೋದದ್ದರಿಂದ ಅವನನ್ನು ನೆನಪಿಸುವ ಸಾಂಕೇತಿಕ ಉದ್ದೇಶ ಇಲ್ಲಿದ್ದಿರಬಹುದು.

ಅಧ್ಯಯನ ಪ್ರದೇಶದ ಬೊಮ್ಮನಹಳ್ಳಿಯ ನಾಲ್ಕು ಮಾಸ್ತಿ ಸ್ಮಾರಕಶಿಲ್ಪಗಳನ್ನು ಅತ್ಯಂತ ಕಲಾತ್ಮಕವಾಗಿ ಕಂಡರಿಸಲಾಗಿದೆ. ಒಂದು ಶಿಲ್ಪದಲ್ಲಿ ಸತಿ ಮೊಣಕಾಲಿನವರೆಗೆ ದೊಡ್ಡ ಹಾರವನ್ನು ಧರಿಸಿದ್ದಾಳೆ. ಕೊರಳ ತುಂಬ ಅಲಂಕಾರದ ವಿವಿಧ ಸರಗಳಿವೆ. ಕೈತುಂಬ ಬಳೆ, ಕಾಲಲ್ಲಿ ಅಂದುಗೆ ಇದೆ. ಸರ್ವಾಲಂಕಾರ ಭೂಷಿತೆಯಾದ ಸತಿ ಎತ್ತಿದ ಬಲಗೈ ಕೆಳಗೆ ಪತಿ ಬಿಲ್ಲು ಹಿಡಿದು ನಿಂತಿದ್ದಾನೆ.[೯೦] ಈ ಶಿಲ್ಪದಲ್ಲಿ ಸತಿಯ ಬಲಗೈ ಹೆಚ್ಚು ಮಡಚಿಕೊಂಡಂತೆ ಕೆತ್ತಲಾಗಿದೆ. ಎರಡೂ ಕೈಗಳಲ್ಲಿ ಕಮಲದ ಹೂವನ್ನು ಹಿಡಿದುಕೊಂಡಿರುವುದು ಈ ಶಿಲ್ಪದ ವೈಶಿಷ್ಟ್ಯವಾಗಿದೆ. ಇಲ್ಲಿರುವ ಇನ್ನೆರಡು ಶಿಲ್ಪಗಳಲ್ಲಿ ಸತಿ ಪ್ರಭಾವಳಿಯ ಮಧ್ಯೆ ನಿಂತಿರುವಂತೆ ಕೆತ್ತಲಾಗಿದೆ. ಸತಿಯರ ಕೇಶಶೃಂಗಾರ, ಆಭರಣ, ಉಡುಪುಗಳು ಸುಂದರವಾಗಿ ಮೂಡಿಬಂದಿವೆ. ಅವರ ಪಾದಗಳ ಎರಡೂ ಭಾಗಗಳಲ್ಲಿ ಒಂದೊಂದು ಕಳಸಗಳನ್ನು ಚಿತ್ರಿಸಲಾಗಿದೆ. ಕಳಸದ ಮೇಲೆ ಇಟ್ಟ ವೀಳ್ಯದೆಲೆಗಳ ಮಧ್ಯೆ ತೆಂಗಿನಕಾಯಿಯನ್ನೂ ಶಿಲ್ಪಿ ಕಂಡರಿಸಿದ್ದಾನೆಂದರೆ ಅವನ ಸೂಕ್ಷ್ಮ ಪ್ರತಿಭೆ ಇಲ್ಲಿ ಎದ್ದುಕಾಣುತ್ತದೆ. ಮೇಲಕ್ಕೆ ಎತ್ತಿರುವ ಸತಿಯ ಬಲಗೈ ಕೆಳಗೆ ವೀರ ಬಿಲ್ಲನ್ನು ಹಿಡಿದು ಹೋರಾಟಕ್ಕೆ ಹೊರಟಿರುವಂತೆ ಚಿತ್ರಿಸಲಾಗಿದೆ. ಇಲ್ಲಿನ ವೀರರು ಎರಡು ಕಾಲಿಗೆ ಗೆಜ್ಜೆಗಳನ್ನು ಕಟ್ಟಿದ್ದಾರೆ. ಅದನ್ನು ಸಂಶೋಧಕರಾದ ಡಿ.ವಿ. ಪರಮಶಿವಮೂರ್ತಿಯವರು ಇದು ವೇಳವಾಳಿಯ ಸಂಕೇತವಾಗಿರಬಹುದೆಂದು ಊಹಿಸಿದ್ದಾರೆ.[೯೧] ಸತಿಯರು ಉದ್ದವಾದ ಜಡೆಯನ್ನು ಬಿಟ್ಟಿರುವಂತೆ ಚಿತ್ರಿಸಿರುವುದು ಈ ಶಿಲ್ಪಗಳ ವೈಶಿಷ್ಟ್ಯವಾಗಿದೆ. ಮೊಗ್ಗಿನ ಜಡೆಯನ್ನು ಹಾಕಿಕೊಂಡು ತುದಿಯಲ್ಲಿ ಕುಚ್ಚು ಕಟ್ಟಿರುವ ರೀತಿ ಮನಮೋಹಕವಾಗಿದೆ. ಇಂತಹ ಶಿಲ್ಪ ನನಗೆ ತಿಳಿದಮಟ್ಟಿಗೆ ಕರ್ನಾಟಕದಲ್ಲಿ ಮತ್ತೊಂದಿಲ್ಲ ಎಂದು ವಿದ್ವಾಂಸರಾದ ಎಂ. ಚಿದಾನಂದಮೂರ್ತಿ ಅವರು ಅಭಿಪ್ರಾಯಿಸಿದ್ದಾರೆ.[೯೨] ಆದರೆ ಈ ಶಿಲ್ಪಗಳಿಗಿಂತಲೂ ಅತೀ ಸುಂದರವಾಗಿರುವ ಮತ್ತೊಂದು ಮಾಸ್ತಿಗಲ್ಲು ಅಧ್ಯಯನ ಪ್ರದೇಶದ ಜೋಳದಾಳ್ ಮಾಸ್ತಿಕಟ್ಟೆ ಅರಣ್ಯದಲ್ಲಿ ಕಂಡುಬಂದಿದೆ. ಸತಿ ಎಡಗೈಯಲ್ಲಿ ಕನ್ನಡಿ ಹಿಡಿದು ಬಲಗೈ ಮೇಲೆತ್ತಿ ಹೆಬ್ಬೆರಳು ಮತ್ತು ತೋರಬೆರಳಿನ ಮಧ್ಯ ನಿಂಬೆಹಣ್ಣು ಹಿಡಿದಿದ್ದಾಳೆ. ಕೈತುಂಬ ಬಳೆ, ಕೊರಳಲ್ಲಿ ಮಣಿ ಹಾಗೂ ಮುತ್ತಿನ ಸರಗಳನ್ನು ಧರಿಸಿಕೊಂಡು, ಅರಳಿದ ಕಮಲದಂತೆ ಕಾಣುವ ಕೇದಗೆ ಹೂವನ್ನು ತಲೆಯಲ್ಲಿ ಮುಡಿದಂತೆ ತೋರಿಸಲಾಗಿದೆ. ಸೀರೆಯ ನೆರಿಗೆಗಳನ್ನು ಅತ್ಯಂತ ಕಲಾಪೂರ್ಣವಾಗಿ ಚಿತ್ರಿಸಲಾಗಿದೆ. ಸತಿಯ ಬಲಭಾಗದಲ್ಲಿ ಬಿಲ್ಲು ಹಿಡಿದು ನಿಂತಿರುವ ವೀರನನ್ನು ಚಿಕ್ಕದಾಗಿ ಕೆತ್ತಲಾಗಿದೆ. ಹೆಣೆದುಕೊಂಡ ಮೊಗ್ಗಿನ ಜಡೆ ಎಡಗೈ ಭುಜದ ಮೇಲಿಂದ ಅಂಕುಡೊಂಕಾಗಿ ಕೆಳಮುಖವಾಗಿ ಇಳಿಬಿದ್ದಂತೆ ಚಿತ್ರಿಸಿದೆ. ಅದರ ತುದಿಯಲ್ಲಿ ಹಾಕಿಕೊಂಡಿರುವ ಕುಚ್ಚನ್ನು ಆಕರ್ಷಕವಾಗಿ ತೋರಿಸಲಾಗಿದೆ. ಈ ರೀತಿ ಜಡೆಯಿರುವ ಮಹಾಸತಿಯರ ಶಿಲ್ಪಗಳು ಬಹಳ ಅಪರೂಪ.

ಕೊಡತಾಳ ಗ್ರಾಮದ ಶಿಲ್ಪದಲ್ಲಿ ಸತಿ ಬಲಗೈ ಮೇಲೆತ್ತಿ ಹರಸುತ್ತ ನಿಂತಿದ್ದಾಳೆ. ಅವಳ ಎಡಭಾಗದ ಪಟ್ಟಿಯಲ್ಲಿ ಪತಿಯಾದವನು ಎಡಗೈಯಲ್ಲಿ ಬಿಲ್ಲು ಹಿಡಿದು ನಿಂತಿರುವಂತೆ ಸಣ್ಣದಾಗಿ ಕೆತ್ತಲಾಗಿದೆ. ಸಾಸುವೆಹಳ್ಳಿಯ ಸ್ಮಾರಕವೊಂದರಲ್ಲಿ ಸತಿ ಬಲಗೈ ಮೇಲೆತ್ತಿ ಎಡಗೈ

ಇಳಿಬಿಟ್ಟು ನಿಂಬೆಹಣ್ಣು ಹಿಡಿದುಕೊಂಡಿದ್ದಾಳೆ. ಕಿವಿಯಲ್ಲಿ ರಿಂಗು, ಕೊರಳ ಆಭರಣಗಳನ್ನು ಧರಿಸಿ, ಮುಡಿಕಟ್ಟಿದ ತಲೆಗೆ ಕೇದಗೆ ಗರಿಯ ಹೂವನ್ನು ಮುಡಿದಿದ್ದಾಳೆ. ಮಾಸ್ತಿಯ ಎಡಗೈ ಭಾಗದಲ್ಲಿ ವೀರನು ಕತ್ತಿ ಹಿಡಿದು ನಿಂತಿರುವುದನ್ನು ಚಿಕ್ಕದಾಗಿ ಕೆತ್ತಲಾಗಿದೆ. ಈ ಶಿಲ್ಪದ ಮೇಲ್ಭಾಗದಲ್ಲಿ ಪತಿ ಬಿಲ್ಲು ಹಿಡಿದುಕೊಂಡು ಸ್ವರ್ಗದಲ್ಲಿರುವಂತೆ ಚಿತ್ರಿಸಲಾಗಿದೆ. ಇದರ ಮುಖ್ಯ ಉದ್ದೇಶ ಪತ್ನಿಯ ಮೊದಲೇ ಪತಿಯಾದವನು ಮಡಿದಿರುವನೆಂಬುದು ಶಿಲ್ಪಿಯ ಕಲ್ಪನೆ ಇಲ್ಲಿ ಸೊಗಸಾಗಿದೆ. ಚಿಕ್ಕಬಸೂರು ಗ್ರಾಮದ ಸ್ಮಾರಕವೊಂದರಲ್ಲಿ ಸತಿ ಎರಡು ಕೈಗಳಲ್ಲಿ ನಿಂಬೆಹಣ್ಣು ಹಿಡಿದು ನಿಂತಿದ್ದಾಳೆ. ಆಕೆಯ ಬಲಭಾಗದಲ್ಲಿ ಪತಿ ಬಿಲ್ಲು ಬಾಣವನ್ನು ಹಿಡಿದು ನಿಂತಿರುವಂತೆ ಗೌಣವಾಗಿಸಿ ಕಂಡರಿಸಲಾಗಿದೆ. ಕೋಡಿಹಳ್ಳಿ ಗ್ರಾಮದ ಒಂದು ಬೃಹದಾಕಾರದ ಶಿಲೆಯಲ್ಲಿ ಮಾಸ್ತಿಯನ್ನು ಎದ್ದು ಬರುವಂತೆ ಸುಂದರವಾಗಿ ಬಿಡಿಸಲಾಗಿದೆ. ಸತಿ ಬಲಗೈ ಎತ್ತಿಕೊಂಡು ನಿಂತಿದ್ದಾಳೆ. ಎಡಗೈ ಕೆಳಗೆ ಇಳಿಬಿಟ್ಟು ಹೆಬ್ಬೆರಳು ಮತ್ತು ತೋರಬೆರಳಿನ ಮಧ್ಯೆ ನಿಂಬೆಹಣ್ಣು ಹಿಡಿದಿದ್ದಾಳೆ. ಅವಳ ಕೇಶಶೃಂಗಾರ, ಕೊರಳ ಆಭರಣ ಹಾಗೂ ಸೀರೆಯ ನೆರಿಗೆಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಮಾಸ್ತಿಯ ಪಾದಗಳ ಎಡಭಾಗದಲ್ಲಿ ಕಳಸವೊಂದನ್ನು ಚಿತ್ರಿಸಲಾಗಿದೆ. ಬಲಭಾಗದಲ್ಲಿ ಅಶ್ವರೂಢನಾಗಿರುವ ವೀರನಿಗೆ ಸೇವಕನೊಬ್ಬ ಛತ್ರಿ ಹಿಡಿದಿದ್ದಾನೆ. ಲೋಕಿಕೆರೆ ಗ್ರಾಮದ ಮೂರು ಮಾಸ್ತಿಶಿಲ್ಪಗಳು ಸಾಮಾನ್ಯವಾಗಿ ಒಂದೇ ದೃಶ್ಯಗಳನ್ನು ಒಳಗೊಂಡಿವೆ. ಸತಿಯರು ಬಲಗೈ ಮೇಲೆತ್ತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದುಕೊಂಡಿದ್ದಾರೆ. ಕೈಯಲ್ಲಿ ಬಳೆ, ಕಿವಿಯಲ್ಲಿ ರಿಂಗು, ಕೊರಳಲ್ಲಿ ತಾಳಿಗಳನ್ನು ಧರಿಸುವಂತೆ ತೋರಿಸಲಾಗಿದೆ. ತಲೆಯಲ್ಲಿ ಮುಡಿ ಕಟ್ಟಿ ಕೇದಗೆ ಹೂವನ್ನು ಮುಡಿದಿದ್ದಾರೆ. ಪತಿಯರು ಒಂದು ಕಡೆ ಬಿಲ್ಲುಬಾಣಗಳನ್ನು ಹಿಡಿದು ನಿಂತಿರುವಂತೆ, ಮತ್ತೊಂದು ಕಡೆ ಪದ್ಮಾಸನದಲ್ಲಿ ಕೈಮುಗಿದುಕೊಂಡು ಕುಳಿತಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ.

ಕೊಡತಾಳ ಗ್ರಾಮದ ಶಿಲ್ಪದಲ್ಲಿ ಸತಿಯನ್ನು ಪ್ರಭಾವಳಿ ಮಧ್ಯ ನಿಂತಿರುವಂತೆ ಬಿಡಿಸಲಾಗಿದೆ. ಬಲಗೈ ಮೇಲೆತ್ತಿ, ಎಡಗೈ ಹೆಬ್ಬೆರಳು ಮತ್ತು ತೋರುಬೆರಳಿನ ಮಧ್ಯೆ ನಿಂಬೆಹಣ್ಣು ಹಿಡಿದಿದ್ದಾಳೆ. ಸತಿಯು ಎಡಗೈಯನ್ನು ಬಳುಕಿದಂತೆ ಇಳಿಬಿಟ್ಟ ರೀತಿ ಮನೋಹರವಾಗಿದೆ. ಪಾದಗಳ ಎರಡು ಕಡೆ ಕಳಸಗಳನ್ನು ಚಿತ್ರಿಸಲಾಗಿದೆ. ಶಿಲ್ಪದ ಬಲಭಾಗದಲ್ಲಿ ವೀರನು ಪದ್ಮಾಸನದಲ್ಲಿ ಕುಳಿತಿದ್ದಾನೆ. ಇದೇ ವಿವರಗಳನ್ನು ನೀಡುವ ಮತ್ತೊಂದು ಮಾಸ್ತಿಶಿಲ್ಪ ಕುಳಗಟ್ಟೆ ಗ್ರಾಮದಲ್ಲಿ ಕಂಡುಬಂದಿದೆ. ಸಾಸ್ವೆಹಳ್ಳಿಯ ಸ್ಮಾರಕದಲ್ಲಿ ವೀರ ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾನೆ. ಸತಿ ಬಲಗೈ ಮೇಲೆತ್ತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿರುವುದನ್ನು ಚಿತ್ರಿಸಲಾಗಿದೆ. ಅವಳು ಲಂಗದಂಥ ಉಡುಪನ್ನು ಮೊಣಕಾಲಿನ ವರೆಗೆ ತೊಟ್ಟಿದ್ದಾಳೆ. ಕಾಲಿಗೆ ಗೆಜ್ಜೆಗಳನ್ನು ಕಟ್ಟಿದ್ದಾಳೆ. ಕಿವಿಯಲ್ಲಿ ಬೆಂಡಾಲಿ ಮತ್ತು ರಿಂಗು ಎರಡನ್ನು ಧರಿಸಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ. ದೊಡ್ಡಘಟ್ಟ ಗ್ರಾಮದ ಒಂದು ಶಿಲ್ಪದಲ್ಲಿ ಮಾಸ್ತಿ ಮನೆಯ ಹೊಸ್ತಿಲು (ಬಾಗಿಲ) ಮಧ್ಯೆ ನಿಂತು ಬಲಗೈ ಮೇಲೆತ್ತಿ ಹರಸುತ್ತಿರುವಂತೆ ಚಿತ್ರಿಸಲಾಗಿದೆ. ಎಡಗೈ ಇಳಿಬಿಟ್ಟು ಹೆಬ್ಬೆರಳು ಮತ್ತು ತೋರಬೆರಳಿನ

ನಡುವೆ ನಿಂಬೆಹಣ್ಣು ಹಿಡಿದುಕೊಂಡಿದ್ದಾಳೆ. ಸತಿಯು ತಲೆಯನ್ನು ಬಾಚಿ ಮುಡಿಕಟ್ಟಿ ಕೇದಗೆ ಹೂವು ಮುಡಿದುಕೊಂಡಿರುವ ರೀತಿ ಆಕರ್ಷಕವಾಗಿದೆ. ಕಿವಿಯಲ್ಲಿ ರಿಂಗು, ಕೊರಳಲ್ಲಿ ಕಂಠೀಹಾರವನ್ನು ಧರಿಸಿದ್ದಾಳೆ. ಸೀರೆಯ ನೆರಿಗೆಗಳನ್ನು ಸುಂದರವಾಗಿ ಕೆತ್ತಲಾಗಿದೆ. ಬಲಗೈ ಕೆಳಗೆ ಪತಿ ಪದ್ಮಾಸನದಲ್ಲಿ ಕುಳಿತಿದ್ದಾನೆ. ಇದೇ ವಿವರಗಳನ್ನು ಹಿರೇಕೋಗಲೂರು ಮಾಸ್ತಿ ಶಿಲ್ಪದಲ್ಲಿ ಕಂಡರಿಸಲಾಗಿದೆ.[೯] ಕಮ್ಮಾರಗಟ್ಟೆ ಶಿಲ್ಪದಲ್ಲಿ ಸತಿ ಮೊಣಕಾಲಿನವರೆಗೆ ದೊಡ್ಡ ಹಾರವನ್ನು ಧರಿಸಿದ್ದಾಳೆ. ಎರಡು ಕೈಯಲ್ಲಿ ಬಳೆ, ಕೊರಳ ತುಂಬ ಆಭರಣ, ಕಿವಿಯಲ್ಲಿ ಬೆಂಡಾಲಿಗಳನ್ನು ಧರಿಸಿಕೊಂಡಂತೆ ಬಿಡಿಸಲಾಗಿದೆ. ತಲೆಯಲ್ಲಿ ಮುಡಿದಿರುವ ಕೇದಗೆ ಹೂವನ್ನು ಸುಂದರವಾಗಿ ಅಲಂಕರಿಸಲಾಗಿದೆ. ಸರ್ವಾಲಂಕಾರ ಭೂಷಿತೆಯಾದ ಸತಿ ಪಕ್ಕದಲ್ಲಿ ಪತಿ ಪೀಠದ ಮೇಲೆ ಕೈಮುಗಿದುಕೊಂಡು ನಿಂತಿದ್ದಾನೆ. ಇದೇ ಶಿಲ್ಪದ ವಿವರಗಳನ್ನು ವಡ್ನಾಳ್ ಗ್ರಾಮದ ಸ್ಮಾರಕದಲ್ಲಿ ಕಂಡುಬರುತ್ತದೆ. ಹೊದಿಗೆರೆ ಗ್ರಾಮದ ಮಾಸ್ತಿ ಶಿಲ್ಪದಲ್ಲಿರುವ ಸತಿ ಬಹಳ ಸಣ್ಣದಾದ ನಡುವನ್ನು ಹೊಂದಿದ್ದು ಎದೆ, ಕೊರಳತುಂಬ ಆಭರಣಗಳನ್ನು ಧರಿಸಿ ಕೇದಗೆ ಗರಿಗಳಿಂದ ಅಲಂಕರಿಸಿದ ಮುಡಿಯನ್ನು ಕಟ್ಟಿದ್ದಾಳೆ. ಅವಳ ಸೀರೆಯ ನೆರಿಗೆ ಪಾದಗಳವರೆಗೂ ತೆರೆತೆರೆಯಾಗಿ ಇಳಿಬಿದ್ದಿವೆ. ಸತಿಯ ಬಲಭಾಗದಲ್ಲಿ ಪತಿ ಕೈಮುಗಿದುಕೊಂಡು ಪದ್ಮಾಸನದಲ್ಲಿ ಕುಳಿತಿದ್ದಾನೆ. ಪಾದಗಳ ಎರಡೂ ಒಂದೊಂದು ಕಳಸಗಳನ್ನು ಚಿತ್ರಿಸಲಾಗಿದೆ. ಕನಗೊಂಡನಹಳ್ಳಿಯ ಸ್ಮಾರಕದಲ್ಲಿ ಸತಿ ಬಲಗೈ ಮೇಲೆತ್ತಿ, ಎಡಗೈಯಲ್ಲಿ ನಿಂಬೆಹಣ್ಣು ಹಿಡಿದುಕೊಂಡಿದ್ದಾಳೆ. ಅವಳ ಕೇಶಾಲಂಕಾರವನ್ನು ಆಕರ್ಷಕವಾಗಿ ಚಿತ್ರಿಸಲಾಗಿದೆ. ಮಾಸ್ತಿಯ ಬಲಕ್ಕೆ ಪತಿ ಪದ್ಮಾಸನದಲ್ಲಿ ಕುಳಿತಿದ್ದಾನೆ. ಕತ್ತಲಗೆರೆ ಗ್ರಾಮದ ಶಿಲ್ಪದಲ್ಲಿ ಸತಿ ಎತ್ತಿದ ಬಲಗೈ ಕೆಳಗೆ ಪತಿ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಸೊರಟೂರು ಗ್ರಾಮದ ಸ್ಮಾರಕದಲ್ಲಿ ಸತಿಯ ಎಡಗೈ ಭುಜದ ಪಕ್ಕದಲ್ಲಿ ಪತಿಯನ್ನು ಕಂಡರಿಸಲಾಗಿದೆ.

**ಇ. ಇಬ್ಬರು ಸತಿಯರ ಪೂರ್ಣಶಿಲ್ಪಗಳು**

ಹೋರಾಟವೊಂದರಲ್ಲಿ ಮಡಿದ ವೀರನಿಗೆ ಇಬ್ಬರು ಪತ್ನಿಯರಿದ್ದರೆ, ಅವರಿಬ್ಬರೂ ಅನುಗಮನದ ಮೂಲಕ ಸತಿಹೋಗಿರುವ ನಿದರ್ಶನಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿವೆ. ಈ ಬಗ್ಗೆ ತಿಳಿಸುವ ಶಾಸನಗಳು ಅತೀ ಕಡಿಮೆ. ಆದರೆ ಶಿಲ್ಪದ ಮೂಲಕ ಅದನ್ನು ನಿರ್ಧರಿಸಬಹುದಾಗಿದೆ. ಇಂತಹ ಸ್ಮಾರಕಗಳಲ್ಲಿ ಸಾಮಾನ್ಯವಾಗಿ ಇಬ್ಬರು ಸತಿಯರನ್ನು ಸಮಾನಾಂತರವಾಗಿ ಚಿತ್ರಿಸಲಾಗಿರುತ್ತದೆ. ಇಲ್ಲಿ ಪತಿಯ ಶಿಲ್ಪಕ್ಕೂ ಅವಕಾಶವಿರುವುದಿಲ್ಲ.

ಅಧ್ಯಯನ ಪ್ರದೇಶದ ದಾಗಿನಕಟ್ಟೆಯ ಒಂದು ಸ್ಮಾರಕವು ತುಂಬ ಕಲಾತ್ಮಕವಾಗಿ ಮೂಡಿಬಂದಿದೆ. ಈ ಶಿಲ್ಪದಲ್ಲಿ ಒಬ್ಬಳು ಎಡಗೈಯಲ್ಲಿ ಕನ್ನಡಿ ಹಿಡಿದುಕೊಂಡು ಬಲಗೈ ಮೇಲೆತ್ತಿ ಹೆಬ್ಬೆರಳು ಮತ್ತು ತೋರುಬೆರಳಿನ ಮಧ್ಯೆ ನಿಂಬೆಹಣ್ಣು ಹಿಡಿದಿದ್ದರೆ, ಇನ್ನೊಬ್ಬಳು ಎರಡು ಕೈಗಳನ್ನು ಮುಗಿದುಕೊಂಡು ನಿಂತಿರುವಂತೆ ಚಿತ್ರಿಸಲಾಗಿದೆ. ಇವರಿಬ್ಬರ ಉಡುಪು ಮತ್ತು ಆಭರಣಗಳು ಒಂದೇ ರೀತಿಯಾಗಿವೆ. ಒಬ್ಬ ಸತಿ ತಲೆಯಲ್ಲಿ ಬಾಚಿ ಹೆಣೆದುಕೊಂಡ ಜಡೆ ಎಡಗೈ ಭುಜದ ಮೇಲೆ ಇಳಿಬಿದ್ದಿದೆ. ಅದರ ತುದಿಯಲ್ಲಿ ಕುಚ್ಚನ್ನು ಧರಿಸಿದಂತೆ ತೋರಿಸಲಾಗಿದೆ. ಇನ್ನೊಬ್ಬಳು ತಲೆಯಲ್ಲಿ ಮುಡಿಯನ್ನು ಕಟ್ಟಿದ್ದಾಳೆ. ಅವರ ಸೀರೆಯ ನೆರಿಗೆಗಳು

ಪಾದಗಳ ಬಳಿ ಕಮಲದ ಹೂವಿನಂತೆ ಹರಡಿಕೊಂಡಿದೆ.[೯೪] ಶಿಲ್ಪಿ ಒಬ್ಬಳನ್ನು ದೊಡ್ಡದಾಗಿ ಮತ್ತೊಬ್ಬಳನ್ನು ಚಿಕ್ಕದಾಗಿ ಕಂಡರಿಸಿದ್ದಾನೆ. ಇದಕ್ಕೆ ಸೂಕ್ತ ಕಾರಣ ತಿಳಿಯದು. ಪ್ರಾಯಶಃ ಒಬ್ಬಳು ವೀರನ ಹಿರಿಯ ಪತ್ನಿ, ಮತ್ತೊಬ್ಬಳು ಕಿರಿಯ ಪತ್ನಿ ಎಂಬರ್ಥದಲ್ಲಿ ಹೀಗೆ ಚಿತ್ರಿಸಿರುವನೆಂದು ತೋರುತ್ತದೆ. ಇಲ್ಲವೇ ಶಿಲ್ಪದಲ್ಲಿ ಸ್ಥಳದ ಅಭಾವವೂ ಅದಕ್ಕೆ ಕಾರಣವಿರಬಹುದು. ಮಲಹಾಳ್ ಗ್ರಾಮದ ಸ್ಮಾರಕದಲ್ಲಿ ಇಬ್ಬರು ಸತಿಯರನ್ನು ಸುಂದರವಾಗಿ ಚಿತ್ರಿಸಲಾಗಿದೆ. ಒಬ್ಬಳು ಬಲಗೈ ಎತ್ತಿದ್ದರೆ, ಇನ್ನೊಬ್ಬಳು ಎರಡು ಕೈಗಳನ್ನು ಮೇಲೆತ್ತಿ ಕನ್ನಡಿ ಹಾಗೂ ನಿಂಬೆ ಹಣ್ಣು ಹಿಡಿದುಕೊಂಡಿದ್ದಾಳೆ. ಸತಿಯರು ಕಿವಿಯೋಲೆ, ಕಂಠೀಹಾರ, ಕಾಲು ಗೆಜ್ಜೆಗಳನ್ನು ಧರಿಸಿದ್ದಾರೆ. ಅವರ ಸೀರೆಯ ನೆರಿಗೆಗಳು ಪಾದಗಳ ಬಳಿ ಕಮಲದ ಹೂವಿನಂತೆ ಹರಡಿರುವ ಹಾಗೆ ಚಿತ್ರಿಸಲಾಗಿದೆ. ಒಬ್ಬಳ ಕೇಶಾಲಂಕಾರವನ್ನು ವಿಶೇಷವಾಗಿ ಚಿತ್ರಿಸಲಾಗಿದೆ. ಅವಳು ತಲೆಯನ್ನು ಬಾಚಿಕೊಂಡು ಬಲಕ್ಕೆ ಮುಡಿಕಟ್ಟಿದ್ದಾಳೆ. ಹಣೆಸರವನ್ನು ಧರಿಸಿಕೊಂಡಿರುವುದು ವಿಶೇಷವಾಗಿದೆ. ಸತಿಯರಿಬ್ಬರು ಹಸನ್ಮುಖಿಗಳಾಗಿ ನಿಂತಿರುವಂತೆ ಶಿಲ್ಪಿ ಚಿತ್ರಿಸಿದ್ದಾನೆ. ಇಬ್ಬರು ಸಂತೋಷದಿಂದ ಸತಿ ಹೋದುದ್ದನ್ನು ಅದು ಧ್ವನಿಸುತ್ತದೆ. ಮೈದೂರು ಗ್ರಾಮದ ಒಂದು ಮಾಸ್ತಿಶಿಲ್ಪದಲ್ಲಿ ಇಬ್ಬರು ಸತಿಯರು ಬಲಗೈಯನ್ನು ಮೇಲೆತ್ತಿ ನಿಂತಿದ್ದಾರೆ. ಇಳಿಬಿಟ್ಟ ಅವರ ಎಡಗೈಯಲ್ಲಿ ನಿಂಬೆಹಣ್ಣುಗಳಿವೆ. ಈ ಮಹಾಸತಿಯರ ಕುತ್ತಿಗೆ ಹಾಗೂ ಸೊಂಟದ ಬಳಿ ರಂಧ್ರಗಳನ್ನು ಮಾಡಲಾಗಿದೆ. ನಂದಿಬೇವೂರಿನ ಒಂದು ಸ್ಮಾರಕದಲ್ಲಿ ಇಬ್ಬರು ಸತಿಯರು ಬಲಗೈ ಮೇಲೆತ್ತಿ ಹರಸುತ್ತಿದ್ದಾರೆ. ಎಡಗೈಯನ್ನು ತೊಡೆಗಳಿಗೆ ತಾಗುವಂತೆ ನೇರವಾಗಿ ಕೆಳಗೆ ಇಳಿಬಿಟ್ಟಿರುವರು. ಅವರ ಕೇಶಶೃಂಗಾರ, ಆಭರಣ, ಉಡುಪುಗಳನ್ನು ಸುಂದರವಾಗಿ ಕಂಡರಿಸಿದೆ.[೯೫]

**ಈ. ಒಕ್ಕೈ ಮಾಸ್ತಿ ಸ್ಮಾರಕ ಶಿಲ್ಪಗಳು**

ಕೆಲವೊಂದು ಸತಿ ಶಿಲ್ಪಗಳಲ್ಲಿ ಕಂಬದಿಂದ ಹೊರಟ ತೋಳಿನ ಚಿತ್ರ ಮಾತ್ರವಿರುವಂತೆ ಕಂಡರಿಸಲಾಗಿರುತ್ತದೆ. ಅವುಗಳನ್ನು ತೋಳುಗೈ, ವ್ಯಾಸನತೋಳು, ಒಕ್ಕೈಮಾಸ್ತಿ, ಇಕ್ಕೈಮಾಸ್ತಿ, ಬಹುಕೈ ಮಾಸ್ತಿ ಎಂದು ಕರೆಯುವುದುಂಟು. ಅವುಗಳನ್ನು 'ವ್ಯಾಸನತೋಳು' ಎಂದು ತಪ್ಪಾಗಿ ಕರೆಯಲಾಗಿದೆ. ಮಾಸ್ತಿ ಶಾಸನಗಳು ಎಲ್ಲಿಯೂ ಹೀಗೆ ಹೇಳಿಲ್ಲವಾದರೂ ಜನರ ಗ್ರಹಿಕೆಯಲ್ಲಿ ಈ ಮಾಸ್ತಿಕಲ್ಲು ವ್ಯಾಸನತೋಳೆನಿಸಿಕೊಂಡಿರಲು ಮುಖ್ಯ ಕಾರಣ ವ್ಯಾಪಕವಾಗಿ ಪ್ರಚಾರದಲ್ಲಿರುವ ವ್ಯಾಸನತೋಳಿನ ಪುರಾಣವೇ ಆಗಿದೆ. ಶೈವ, ವೈಷ್ಣವ ಮತಗಳ ತಿಕ್ಕಾಟದಲ್ಲಿ ಹುಟ್ಟಿಕೊಂಡ ವ್ಯಸನ ತೋಳಿನ ಪುರಾಣ ಈ ಮಾಸ್ತಿಕಲ್ಲಿಗೆ ಅನ್ವಯಿಸಲ್ಪಟ್ಟಿತು ಎಂದು ವಿದ್ವಾಂಸರೊಬ್ಬರು ಅಭಿಪ್ರಾಯಿಸಿದ್ದಾರೆ.[೯೬] ಈ ಸ್ಮಾರಕಗಳನ್ನು ಕುರಿತು ವಿದ್ವಾಂಸರು ಹೀಗೆ ಅಭಿಪ್ರಾಯಿಸಿದ್ದಾರೆ. ಎಂ. ಚಿದಾನಂದಮೂರ್ತಿ ಅವರು "ಸತಿಯರು ಚಿತೆಯನ್ನೇರಲು ಹೋಗುವಾಗ ಕುಂಕುಮದಲ್ಲಿ ಕೈಯನ್ನು ಅದ್ದಿ ಬಾಗಿಲಿನ ಮೇಲೆ ತಮ್ಮ ಬೆರಳುಗಳನ್ನು ಮೂಡಿಸುತ್ತಿದ್ದರು. ಆ ಬೆರಳುಗಳನ್ನು, ಅದಕ್ಕೆ ಸೇರಿದಂತೆ ತೋಳನ್ನು ಶಿಲ್ಪಿಗಳು ಕೊರೆದಿರಬೇಕು" ಎಂದಿದ್ದಾರೆ.[೯೭] ಎಂ.ಎಂ. ಕಲಬುರ್ಗಿ ಅವರು "ಸತಿಯ ಬಲಗೈ ಮುದ್ರೆ ಕಲ್ಲ ಮೇಲೆ ತಿರುವುಮುರುವು ಆಗುತ್ತದೆ. ಆದಕಾರಣ

ಹೆಣ್ಣಿಗೆ ಎಡಗೈ ಶುಭವಾದುದರಿಂದ ಅರಿಷಿಣ ದ್ರವದಲ್ಲಿ ಅದ್ದಿದ ಎಡಗೈಯನ್ನು ಕಲ್ಲ ಮೇಲೆ ಮೂಡಿಸುತ್ತಿರಬಹುದೇ" ಎಂದಿದ್ದಾರೆ.[೯೮] ಕಲಬುರ್ಗಿ ಅವರ ಅಭಿಪ್ರಾಯವೇ ಆ ಶಿಲ್ಪಗಳಿಗೆ ಸಮಂಜಶವಾಗಿದೆ. ಚಿದಾನಂದಮೂರ್ತಿಯವರು ಬಹುಶಃ ಈ ಶಿಲ್ಪಗಳು ಸಹಗಮನಗೊಂಡಿರುವ ಸ್ತ್ರೀಯರ ಸ್ಮಾರಕಗಳಿರಬಹುದೆಂದಿದ್ದಾರೆ.[೯೯] ಕಂಬದಿಂದ ಹೊರಟ ಎತ್ತಿದ ಕೈ ಮೇಲೆ ಸತಿಪತಿಗಳಿಬ್ಬರು ಕುಳಿತಿರುವ ಚಿತ್ರಣಗಳೇ ಅವರ ಮಾತನ್ನು ಬೆಂಬಲಿಸುತ್ತವೆ. ಆದರೆ ಹೀಗೆ ಎತ್ತಿ ಕೆಲವು ಶಿಲ್ಪಗಳಲ್ಲಿ ತೋಳನ್ನು ಬಿಟ್ಟರೆ ಬೇರೆ ಯಾವುದೇ ದೃಶ್ಯಗಳಿರುವುದಿಲ್ಲ. ಪ್ರಾಯಶಃ ಇಂತಹ ಶಿಲ್ಪಗಳು ಅನುಗಮನಗೊಂಡ ಸತಿಯರನ್ನು ನೆನಪಿಸುತ್ತಿರಬಹುದು. ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ಬೆರಳೆಣಿಕೆಯ ಒಕ್ಕೈ ಮಾಸ್ತಿಗಲ್ಲುಗಳು ನಮ್ಮ ಮಾತನ್ನು ಪುಷ್ಠೀಕರಿಸುತ್ತಿರಬಹುದು. ಈ ಸಾಂಕೇತಿಕ ಶಿಲ್ಪ ಹೆಚ್ಚು ಪ್ರಿಯವಾದುದರಿಂದಲೂ, ಶಿಲ್ಪಿಗಳಿಗೆ ಅದನ್ನು ಕಂಡರಿಸುವಲ್ಲಿ ಸರಳತೆ ಕಂಡುಬರುವುದರಿಂದಲೂ, ಜನತೆಯಲ್ಲಿ ಸ್ತ್ರೀಯರ ಕುರಿತಾಗಿ ಗೌಣಭಾವ ಇದ್ದಿರುವುದರಿಂದಲೂ ಇಂಥ ಎತ್ತಿದ ತೋಳುಗೈ ಕಂಬದ ಸರಳ ಶಿಲ್ಪಗಳು ಹೆಚ್ಚು ಹೆಚ್ಚು ರಚನೆಗೊಂಡಿರಬಹುದೆಂದು ವಿದ್ವಾಂಸರೊಬ್ಬರು ಅಭಿಪ್ರಾಯಿಸಿದ್ದಾರೆ.[೧೦೦] ಆದರೆ ಜಿಲ್ಲೆಯಲ್ಲಿ ಈ ಪ್ರಕಾರದ ಸ್ಮಾರಕ ಶಿಲ್ಪಗಳು ಅತೀ ವಿರಳವಾಗಿ ಕಂಡುಬಂದಿವೆ.

ಸೂರಹೊನ್ನೆ ಗ್ರಾಮದಲ್ಲಿ ಎರಡು ಒಕ್ಕೈ ಮಾಸ್ತಿಶಿಲ್ಪಗಳು ಕಂಡುಬರುತ್ತವೆ. ಈ ಸ್ಮಾರಕಗಳ ಎಡಭಾಗದಲ್ಲಿ ಚಿತ್ರಿಸಿರುವ ಕಂಬಗಳು ಚೌಕಾಕಾರವಾಗಿದ್ದು, ಮೇಲೆ ದುಂಡಾದ ರಚನೆಯಿದೆ. ಅದರ ಮಧ್ಯೆ ಭಾಗದಿಂದ ಬಲಗೈ ಎತ್ತಿದ ತೋಳನ್ನು ಕೆತ್ತಲಾಗಿದೆ. ಸೌಂದರ್ಯವನ್ನು ತೋರಿಸುವುದಕ್ಕೆ ಕಂಬಗಳ ಮಧ್ಯೆ ಪಟ್ಟಿಕೆಗಳನ್ನು ಶಿಲ್ಪಿ ಮಾಡಿಕೊಂಡಿದ್ದಾನೆ. ಎತ್ತಿ ಕೈಗಳಲ್ಲಿ ಬಳೆ, ತೋಳಬಂದಿಗಳನ್ನು ಧರಿಸಿದಂತೆ ತೋರಿಸಲಾಗಿದೆ. ತೋಳಿನ ಮೇಲೆ ಮತ್ತು ಕೆಳಗೆ ಎರಡು ರಂಧ್ರಗಳನ್ನು ಮಾಡಲಾಗಿದೆ. ಮುಚ್ಚನೂರು ಗ್ರಾಮದ ಒಂದು ಶಿಲ್ಪವು ಅಪರೂಪದ್ದಾಗಿದೆ. ಪೀಠದ ಮೇಲೆ ನಿಂತಿರುವ ಸತಿಪತಿಗಳಿಬ್ಬರು ಪರಸ್ಪರ ಹೆಗಲ ಮೇಲೆ ಕೈಹಾಕಿಕೊಂಡು ನಿಂತಿರುವಂತೆ ಕೆತ್ತಲಾಗಿದೆ. ಅವರಿಬ್ಬರ ಉತ್ಕಟ ಪ್ರೀತಿಯ ಸಂಕೇತವಾಗಿ ಶಿಲ್ಪಿ ಹೀಗೆ ಚಿತ್ರಿಸಿದನೆಂದು ತೋರುತ್ತದೆ. ಈ ಸ್ಮಾರಕದ ಬಲಭಾಗದ ಅಂಚಿನ ಪಟ್ಟಿಕೆಯಲ್ಲಿ ಕಂಬವೊಂದನ್ನು ಚಿತ್ರಿಸಿ ಅದರಿಂದ ಹೊರಬಂದ ಎತ್ತಿ ಹಿಡಿದ ತೋಳಿನ ಚಿತ್ರಣವಿದೆ. ಅದರ ಕೆಳಭಾಗದಲ್ಲಿ ಎರಡು ತುರುಗಳನ್ನು ಬಿಡಿಸಲಾಗಿದೆ. ಈ ಶಿಲ್ಪದ ಎರಡನೇ ಪಟ್ಟಿಯಲ್ಲಿ ಸ್ವರ್ಗದ ಚಿತ್ರಣವಿದೆ.[೧೦೧] ಇಲ್ಲಿ ವೀರನು ತುರುಗಾಳಗದಲ್ಲಿ ಮಡಿದಿರಬಹುದು. ಆತನ ಸತಿಯನ್ನು ಒಕ್ಕೈ ಕಂಬದಲ್ಲಿ ಚಿತ್ರಿಸುವ ಜೊತೆಗೆ ಪತಿಯೊಂದಿಗೆ ಇರುವಂತೆಯೂ ಕಂಡರಿಸಿರುವುದು ಈ ಶಿಲ್ಪದ ವಿಶೇಷತೆಯಾಗಿದೆ.

**ಉ. ಅಪರೂಪದ ಮಾಸ್ತಿ ಸ್ಮಾರಕ ಶಿಲ್ಪಗಳು**

ಪತಿಯೊಂದಿಗೆ ಸಹಗಮನಗೊಳ್ಳಲು ಸಾಧ್ಯವಾಗದ ಕೆಲವು ಸತಿಯರು ಅವನ ಯಾವುದಾದರೂ ವಸ್ತುವಿನೊಡನೆ ಅನುಗಮನದ ಮೂಲಕ ಸತಿ ಹೋಗುತ್ತಿದ್ದರು. ಈ ಬಗೆಯ ಸತಿ ಘಟನೆಯನ್ನು ಅಭಿವ್ಯಕ್ತಿಸುವ ಶಿಲ್ಪಗಳು ವ್ಯಾಪಕವಾಗಿ ಕಂಡುಬರುವುದಿಲ್ಲ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಸ್ಮಾರಕಗಳ ಸಂಖ್ಯೆ ಅತೀ ವಿರಳವಾಗಿದೆ. ಪತಿಯ ಯಾವುದಾದರೂ ವಸ್ತುವೆಂದರೆ ಮುಖ್ಯವಾಗಿ ಕತ್ತಿಯನ್ನೇ ಹಿಡಿದು ಸತಿಹೋಗಿರುವುದು ಕಂಡುಬರುತ್ತದೆ. ಆಕೆ ಹಿಡಿದ ಕತ್ತಿ ಪತಿ ಹೋರಾಟವೊಂದರಲ್ಲಿ ಮಡಿದನೆಂಬುದನ್ನು ಸಂಕೇತಿಸುತ್ತದೆ. ಈವರೆಗೂ ದೊರೆತಿರುವ ಶಿಲ್ಪಗಳಲ್ಲಿ ಸತಿ ತಾನೇ ಕೈಯಲ್ಲಿ ಕತ್ತಿ ಹಿಡಿದಿರುವಂತೆ ಚಿತ್ರಿಸಿರುವ ಶಿಲ್ಪಗಳು ದೊರೆತಿಲ್ಲ. ಕೇವಲ ಕಂಬದಿಂದ ಹೊರಟ ತೋಳಗ್ಗೆ ಶಿಲ್ಪದ ಯಾವುದಾದರೂ ಒಂದು ಕಡೆ ಕತ್ತಿಯನ್ನು ಚಿತ್ರಿಸಿರುವಂತ ಉದಾಹರಣೆಗಳಿವೆ.[೧೦೨] ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ಸ್ಮಾರಕಗಳಲ್ಲಿ ಸ್ವತಃ ಸತಿ ಕತ್ತಿ ಹಿಡಿದು ನಿಂತಿರುವಂಥ ಶಿಲ್ಪಗಳು ಕಂಡುಬರುವುದು ವಿಶೇಷವಾಗಿದೆ.

ಹಿರೇಹಾಲಿವಣದ ಸ್ಮಾರಕದಲ್ಲಿ ಸತಿ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದುಕೊಂಡು ಬಲಗೈ ಮೇಲೆತ್ತಿ ಬಾಕುವನ್ನು ಅಡ್ಡವಾಗಿ ಹಿಡಿದಿರುವಂತೆ ಕೆತ್ತಲಾಗಿದೆ. ಕಿವಿಯಲ್ಲಿ ರಿಂಗು, ಕೊರಳಲ್ಲಿ ಕಂಠೀಹಾರ, ತಲೆಯಲ್ಲಿ ಕೇದಗೆ ಗರಿಯ ಹೂವನ್ನು ಮುಡಿದಿದ್ದಾಳೆ. ಸತಿ ಎತ್ತಿದ ಬಲಗೈ ಕೆಳಗೆ ವೀರರಿಬ್ಬರು ಬಿಲ್ಲುಗಳನ್ನು ಹಿಡಿದು ಅಭಿಮುಖವಾಗಿ ನಿಂತಿರುವಂತೆ ಕಂಡರಿಸಲಾಗಿದೆ. ಸತಿ ಪತಿಯ ಆಯುಧವನ್ನು ಹಿಡಿದು ಸತಿ ಹೋದಂತೆ ಚಿತ್ರಿಸಿರುವುದಲ್ಲದೆ, ಪತಿ ಮಡಿದ ಕಾರಣವನ್ನೂ ತಿಳಿಸಲು ಶಿಲ್ಪಿ ಮಾಡಿರುವ ಪ್ರಯತ್ನ ಇಲ್ಲಿ ಸೊಗಸಾಗಿದೆ. ಇದೆ ರೀತಿ ಪತಿಗೆ ಸೇರಿದ ಕತ್ತಿಯನ್ನು ಹಿಡಿದು ಸತಿ ಹೋದವರ ಐದು ಸ್ಮಾರಕಶಿಲ್ಪಗಳು ಉಪನಾಯಕನಹಳ್ಳಿಯಲ್ಲಿ ಕಂಡುಬರುತ್ತವೆ. ಒಂದು ಶಿಲ್ಪದಲ್ಲಿ ಸತಿ ಎರಡೂ ಕೈಗಳನ್ನು ಮೇಲೆತ್ತಿ ಎಡಗೈಯಲ್ಲಿ ತಟ್ಟೆ ಹಿಡಿದು, ಬಲಗೈಯಲ್ಲಿ ಕತ್ತಿಯನ್ನು ಕೆಳಮುಖವಾಗಿ ಹಿಡಿದಿದ್ದಾಳೆ. ಸತಿ ಎತ್ತಿ ಬಲಗೈ ಕೆಳಗೆ ಪತಿ ಬಾಣವನ್ನು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ. ಇಲ್ಲೇ ಇರುವ ಮೂರು ಶಿಲ್ಪಗಳಲ್ಲಿಯೂ ಸತಿಯರು ತಟ್ಟೆ ಹಾಗೂ ಕತ್ತಿ ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ಇದೇ ಸ್ಥಳದಲ್ಲಿರುವ ಮತ್ತೊಂದು ಸ್ಮಾರಕದಲ್ಲಿ ಸತಿಯರಿಬ್ಬರನ್ನು ಚಿತ್ರಿಸಲಾಗಿದೆ. ಒಬ್ಬಳು ಎರಡು ಕೈಗಳನ್ನು ಮೇಲೆತ್ತಿ ಎಡಗೈಯಲ್ಲಿ ತಟ್ಟೆ ಹಿಡಿದು ಬಲಗೈಯಲ್ಲಿ ಕತ್ತಿಯನ್ನು ಕೆಳಮುಖವಾಗಿ ಹಿಡಿದುಕೊಂಡಿದ್ದಾಳೆ. ಇನ್ನೊಬ್ಬಳು ಎಡಗೈ ಎತ್ತಿಕೊಂಡು ಬಲಗೈ ಇಳಿಬಿಟ್ಟು ಕಳಸವನ್ನು ಹಿಡಿದಿದ್ದಾಳೆ. ಇಲ್ಲಿ ವೀರನೊಬ್ಬನ ಇಬ್ಬರು ಪತ್ನಿಯರು ಅವನ ವಸ್ತುಗಳೊಂದಿಗೆ ಅನುಗಮನಗೊಂಡಿರುವುದು ತಿಳಿಯುತ್ತದೆ. ಸತಿಯರ ಕೇಶಶೃಂಗಾರ, ಆಭರಣ, ಉಡುಪು ಮುಂತಾದ ಅಲಂಕಾರವನ್ನು ಶಿಲ್ಪಿ ಸುಂದರವಾಗಿ ಚಿತ್ರಿಸಿದ್ದಾನೆ. ಈ ಶಿಲ್ಪಗಳಲ್ಲಿ ಸತಿಯರು ಹಿಡಿದಿರುವ ಕತ್ತಿಗಳನ್ನು ಸಂಶೋಧಕರೊಬ್ಬರು ದಂಡವಿರಬರುದೆಂದು ಅಭಿಪ್ರಾಯಿಸಿದ್ದಾರೆ.[೧೦೩] ಅದು ದಂಡವೇ ಆಗಿದ್ದರೆ ಅವುಗಳ ಹಿಡಿಯನ್ನು ಕತ್ತಿಯಂತೆ ಚಿತ್ರಿಸುತ್ತಿರಲಿಲ್ಲ. ಅಲ್ಲದೆ ಅವುಗಳ ತುದಿಯನ್ನು ನಯಗೊಳಿಸುತ್ತಿರಲಿಲ್ಲ. ಸ್ಥಳದ ಅಭಾವದಿಂದ ಸತಿಯರು ಹಿಡಿದ ಕತ್ತಿಗಳನ್ನು ಮೇಲ್ಮುಖವಾಗಿ ಚಿತ್ರಿಸದೇ ಕೆಳಮುಖವಾಗಿ ಹಿಡಿದಂತೆ ಚಿತ್ರಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಸತಿಯರು ಪತಿಗೆ ಸೇರಿದ ಕತ್ತಿ ಹಾಗೂ ಪ್ರಾಯಶಃ ಅವನು ಊಟಕ್ಕೆ ಬಳಸುತ್ತಿದ್ದ ತಟ್ಟೆಯನ್ನು

ಹಿಡಿದುಕೊಂಡು ಸತಿ ಹೋಗಿರಬಹುದು. ಮಾದೇನಹಳ್ಳಿ ಒಂದು ಶಿಲ್ಪದಲ್ಲಿ ಇಬ್ಬರು ಸತಿಯರು ಕತ್ತಿಗಳನ್ನು ಹಿಡಿದು ಸಮಭಂಗಿಯಲ್ಲಿ ನಿಂತಿದ್ದಾರೆ. ಅವರ ತಲೆಕೂದಲು ಹರಡಿಕೊಂಡಿರುವಂತೆ ಬಿಡಿಸಲಾಗಿದೆ. ಸತಿಯ ಕಾಲುಗಳ ಬಳಿ ಪತಿಯನ್ನು ಚಿಕ್ಕದಾಗಿ ತೋರಿಸಲಾಗಿದೆ. ಸಣ್ಣದಾಗಿರುವ ಶಿಲೆಯಲ್ಲಿ ಇಬ್ಬರು ಸತಿಯರನ್ನು ಶಿಲ್ಪಿ ಸೊಗಸಾಗಿ ಚಿತ್ರಿಸಿದ್ದಾನೆ.

**ಊ. ಮಾಸ್ತಿಯ ಇತರೆ ಅವಶೇಷಗಳು**

ಪತಿಗಾಗಿ ಸತಿಹೋದ ಮಾಸ್ತಿಗೆ ಯಾವುದೋ ಕಾರಣದಿಂದ ಸ್ಮಾರಕವನ್ನು ನಿರ್ಮಿಸದಿದ್ದಾಗ ಆಕೆಯ ಹೆಸರಿನಲ್ಲಿ ಒಂದು ಸಣ್ಣ ಶಿಲೆಯನ್ನು ಇಟ್ಟು ಪೂಜಿಸುತ್ತಿರುವುದು ಕಂಡುಬರುತ್ತದೆ. ಶಿಲೆಯಲ್ಲದೇ ಕೆಲವೊಂದು ಗ್ರಾಮಗಳಲ್ಲಿ ಗುಡಿ, ಮನೆ ಹಾಗೂ ಮರಗಳನ್ನು ಆರಾಧಿಸುತ್ತಿರುವುದು ತಿಳಿದುಬರುತ್ತದೆ. ಸತಿ ಉಪಯೋಗಿಸಿದ ವಸ್ತುಗಳು ಎನ್ನಲಾದ ಬಳೆ, ಸೀರೆ, ಕನ್ನಡಿ ಮೊದಲಾದವುಗಳನ್ನು ಕೆಲವೆಡೆ ಸಂರಕ್ಷಿಸಿರುವುದನ್ನು ಕಾಣಬಹುದು. ಶ್ರೀರಂಗಪಟ್ಟಣದ ಒಂದು ಮನೆಯಲ್ಲಿ ಸತಿಯವು ಎನ್ನುವ ಬಳೆ, ಕಳಸ, ಕನ್ನಡಿಗಳನ್ನು ಸಂರಕ್ಷಿಸಿಕೊಂಡು ಪೂಜಿಸುವ ಪದ್ಧತಿಯಿದೆ.[೧೦೪] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸತಿ ಹೆಸರಿನಲ್ಲಿ ಪೂಜೆಗೊಳ್ಳುತ್ತಿರುವ ಕುರುಹುಗಳು ಕಂಡುಬರುತ್ತವೆ. ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

**ಅ. ಶಿಲೆ**

ಸತಿ ಹೋದ ಮಾಸ್ತಿಯ ಸ್ಮಾರಕವಾಗಿ ಕೆಲವೆಡೆ ದುಂಡುಶಿಲೆಗಳನ್ನಿಟ್ಟು ಪೂಜಿಸುತ್ತಿದ್ದರೆ ಇನ್ನೂ ಕೆಲ ಗ್ರಾಮಗಳಲ್ಲಿ ಕಾಡುಕಲ್ಲು ಅಥವಾ ಅಡ್ಡ ಉದ್ದವಾಗಿರುವ ಒರಟು ಶಿಲೆಗಳನ್ನು ಇಟ್ಟು ಪೂಜಿಸುತ್ತಿರುವುದು ಕಂಡುಬರುತ್ತದೆ. ಆ ಶಿಲೆಗಳಲ್ಲೇ ಸತಿ ಇರುವಳೆಂದು ತಿಳಿದಿರುವ ಜನ ಅವಳನ್ನು ದೈವೀಸ್ವರೂಪಿಣಿಯೆಂದು ನಂಬಿದ್ದಾರೆ.

ಅಧ್ಯಯನ ಪ್ರದೇಶದ ಕೊಂಡದಹಳ್ಳಿ, ಚಿಕ್ಕುಡ, ಯರಗಟ್ಟಹಳ್ಳಿ, ಮುದಿಗೆರೆ, ಗಿರಿಯಾಪುರ, ಆರುಂಡಿ, ತಾರೇಹಳ್ಳಿ ಮೊದಲಾದ ಗ್ರಾಮಗಳಲ್ಲಿ ಶಿಲೆಗಳು ಮಾಸ್ತಿಯ ಹೆಸರಿನಲ್ಲಿ ಪೂಜೆಗೊಳ್ಳುತ್ತಿವೆ. ಕೊಂಡದಹಳ್ಳಿಯಲ್ಲಿ ವೃತ್ತಾಕಾರವಾಗಿ ನಯಗೊಳಿಸಿರುವ ಎರಡು ಶಿಲೆಗಳನ್ನು ಮಾಸ್ತಿಯೆಂದು ಪೂಜಿಸಲಾಗುತ್ತಿದೆ. ಬಲಗಡೆ ಇರುವುದು ಗಂಡನಕಲ್ಲು, ಎಡಗಡೆ ಇರುವುದು ಅಮ್ಮನ ಕಲ್ಲೆನ್ನುತ್ತಾರೆ. ಮಾಸ್ತಮ್ಮ ಇಲ್ಲಿ ಕಲ್ಲಾಗಿ ಉದ್ಭವಳಾಗಿದ್ದಾಳೆ ಎಂಬುದು ಸ್ಥಳೀಯರ ನಂಬಿಕೆ.[೧೦೫] ಚಿಕ್ಕುಡ ಗ್ರಾಮದಲ್ಲಿ ಒಂದು ಶಿಲೆ ಹಾಗೂ ಸತಿಗೆ ಸೇರಿದ ವಸ್ತುಗಳನ್ನು ಮಾಸ್ತಮ್ಮನ ಹೆಸರಿನಲ್ಲಿ ಆರಾಧಿಸಿದ್ದಾರೆ. ಅದರ ಪಕ್ಕದಲ್ಲಿರುವ ಇನ್ನೊಂದು ಶಿಲೆಯನ್ನು ಮಾಸ್ತಮ್ಮನ ಗಂಡ ಕರಿಯಪ್ಪ ಎಂದು ಹೇಳುತ್ತಾರೆ. ಯರಗಟ್ಟಹಳ್ಳಿ ಮನೆಯೊಂದರ ಮುಂದಿರುವ ಚಪ್ಪಟೆಯಾಕಾರದ ಎರಡು ಶಿಲೆಗಳನ್ನು ಸತಿ ಗೊಲ್ಲರ ಕಾಟಮ್ಮ ಎಂದು ಕರೆಯುತ್ತಾರೆ. ಸದ್ಯ ಶಿಲೆಯನ್ನು ಯಾರು ಪೂಜಿಸುತ್ತಿಲ್ಲ. ಕಾಟಮ್ಮ ಅಗ್ನಿ ಪ್ರವೇಶ ಮಾಡಿದ ಸ್ಥಳ ಇದೆ ಎಂದು ಸ್ಥಳೀಯರು ಹೇಳುತ್ತಾರೆ. ಮುದಿಗೆರೆ ಗ್ರಾಮದ ತಿಮ್ಮಲಾಪುರ ಗಡಿಯಲ್ಲಿರುವ ಒಂದು ಶಿಲೆಯನ್ನು ಪ್ರಾಣಿಯೊಂದಿಗೆ

ಹೋರಾಡಿ ಮಡಿದ ಚಿಕ್ಕಣ್ಣನ ಎರಡನೆಯ ಹೆಂಡತಿ ಮಾಸ್ತಮ್ಮ ಎಂದು ಹೇಳುತ್ತಾರೆ. ಗಿರಿಯಾಪುರ ಗ್ರಾಮದಲ್ಲಿ ಸಣ್ಣ ಮತ್ತು ದೊಡ್ಡದಾಗಿರುವ ಹತ್ತು ಶಿಲೆಗಳು ಮಹಾಸತಿ ಅನಸೂಯ ಎಂದು ಪೂಜಿಸಲ್ಪಡುತ್ತವೆ. ಆರುಂಡಿ ಗ್ರಾಮದ ಮಣ್ಣಿನ ಗುಡಿಯಲ್ಲಿರುವ ಒಂದು ಶಿಲೆಯನ್ನು ಮಾಸ್ತಿ ಎಂದು ಕರೆಯುತ್ತಾರೆ. ಪಂಚಮಸಾಲಿಯ ಒಂದು ಹೆಣ್ಣು ಮನೆಯಲ್ಲಿ ಜಗಳವಾಡಿಕೊಂಡು ಬಂದು ಈ ಸ್ಥಳದಲ್ಲಿ ಬೆಂಕಿಗೆ ಹೋಗಿ ಕಲ್ಲಾಗಿ ಒಡಮೂಡಿದ್ದಾಳೆಂದು ಸ್ಥಳೀಯರ ಹೇಳಿಕೆ. ತಾರೇಹಳ್ಳಿ ಗ್ರಾಮದ ಗುಡಿಯೊಂದರಲ್ಲಿ ಸಾಲಾಗಿ ನಿಲ್ಲಿಸಿರುವ ಸಣ್ಣ ಕಲ್ಲುಗಳನ್ನು ಮಾಸ್ತಿ ಎಂದು ಪೂಜಿಸಲಾಗುತ್ತದೆ.

**ಆ. ಮಾಸ್ತಿಯ ಮರಗಳು**

ಅಧ್ಯಯನ ಪ್ರದೇಶದ ಬೋರಗೊಂಡನಹಳ್ಳಿ ಹಾಗೂ ಹಳೆಜೋಗ ಗ್ರಾಮಗಳಲ್ಲಿ ಮರಗಳನ್ನು ಮಾಸ್ತಿ ಹೆಸರಿನಲ್ಲಿ ಪೂಜಿಸುವುದು ಕಂಡುಬರುತ್ತದೆ. ಸತಿ ಅಗ್ನಿಪ್ರವೇಶ ಮಾಡಿದ ಸ್ಥಳದಲ್ಲಿ ಬೆಳೆದ ಮರದಲ್ಲೇ ಸತಿ ನೆಲೆಸಿರುವಳೆಂಬ ನಂಬಿಕೆ ಸ್ಥಳೀಯರದ್ದಾಗಿದೆ. ಈ ರೀತಿ ಮಾಸ್ತಿ ಹೆಸರಿನಲ್ಲಿ ಮರಗಳನ್ನು ಪೂಜಿಸುವುದು ಸಾಮಾನ್ಯವಾಗಿ ಎಲ್ಲೆಡೆ ಕಂಡುಬರುವುದಿಲ್ಲ. ಬೋರಗೊಂಡನಹಳ್ಳಿ ಗ್ರಾಮದ ಗೌಡ್ರು ನಿಜಲಿಂಗಪ್ಪ ಎಂಬುವರ ಮನೆಯ ಪಕ್ಕದ ಜಮೀನಿನಲ್ಲಿ ಬೃಹದಾಕಾರವಾಗಿ ಬೆಳೆದ ಒಂದು ಆಲದ ಮರವಿದೆ. ಅದನ್ನು ಮಾಸ್ತಮ್ಮನ ಮರವೆಂದು ಕರೆಯುತ್ತಾರೆ. ಆ ಮರದ ಬುಡಕ್ಕೆ ಸುಣ್ಣವನ್ನು ಬಳಿದು ಸೀರೆ, ಬಳೆ, ಘಂಟೆಗಳನ್ನು ಕಟ್ಟಿರುವುದು ಕಂಡುಬರುತ್ತದೆ. ಪ್ರತಿ ಮಂಗಳವಾರ ಮತ್ತು ಶುಕ್ರವಾರಗಳಂದು ಪೂಜೆ ನಡೆಯುತ್ತದೆ. ನಿಜಲಿಂಗಪ್ಪ ಅವರ ಕುಟುಂಬದ ಮಹಿಳೆಯೊಬ್ಬರಿಗೆ ಮಾಸ್ತಮ್ಮ ಮೈ ಮೇಲೆ ಬರುತ್ತಾಳೆಂಬ ನಂಬಿಕೆಯೂ ಅಲ್ಲಿದೆ. ಇದೇ ಗ್ರಾಮದ ಕೆರೆ ಏರಿಯ ಕೆಳಭಾಗದಲ್ಲೊಂದು ದೊಡ್ಡದಾದ ಮಾಸ್ತಿ ಮರವಿದೆ. ಆ ಮರಕ್ಕೂ ಸುಣ್ಣ ಬಳಿದು ಸೀರೆ, ಬಳೆ, ಘಂಟೆಗಳನ್ನು ಹಾಕಿರುವುದನ್ನು ಕಾಣಬಹುದು. ಊರಿನ ಮಧ್ಯವಿರುವ ಮರಕ್ಕೆ ಮಾಸ್ತಮ್ಮ ಎಂದು, ಕೆರೆ ಏರಿಯ ಮೇಲಿರುವ ಮರಕ್ಕೆ ಮಹಾಸತಿ ಚೌಡಮ್ಮ ಎಂದೂ ಕರೆಯುತ್ತಾರೆ. ಹಳೆಜೋಗ ಗ್ರಾಮದ ಮಾದೇವಪ್ಪ ಎಂಬುವರ ಹೊಲದಲ್ಲಿರುವ ಬೇವಿನ ಮರಕ್ಕೆ ಮಾಸ್ತಮ್ಮನ ಮರವೆಂದು ಕರೆಯುತ್ತಾರೆ. ಆ ಮರದ ಬುಡದಲ್ಲಿ ಚಪ್ಪಟೆಯಾಕಾರದಲ್ಲಿ ಕಟ್ಟಿರಬಹುದಾದ ದೇವಸ್ಥಾನವಿದ್ದು ಇಂದು ನಾಶವಾಗಿ ಕೆಲವೇ ಕಲ್ಲುಗಳು ಕಾಣಿಸುತ್ತಿವೆ. ಈ ಮೊದಲು ಇಲ್ಲಿ ಸತಿಯ ಶಿಲ್ಪ ಇದ್ದಿರಬಹುದೇನೋ, ಆದರೆ ಸ್ಥಳೀಯ ಅನಾದಿಕಾಲದಿಂದಲೂ ಯಾವುದೇ ಮೂರ್ತಿಶಿಲ್ಪ ಇಲ್ಲಿ ಇಲ್ಲ. ನಾವು ಮರವನ್ನೇ ಮಾಸ್ತಮ್ಮ ಎಂದು ಪೂಜಿಸುತ್ತೇವೆಯೆಂದು ಹೇಳುತ್ತಾರೆ. ಬಹುಶಃ ಮಾಸ್ತಿಯ ನೆಪದಲ್ಲಿ ಆ ಮರವನ್ನು ನೆಟ್ಟಿರಬಹುದೇನೋ ಎಂದುಕೊಂಡರೂ ಆ ಮರವು ಅಂತಹ ದೀರ್ಘವಾದ ಕಾಲವನ್ನು ಹೊಂದಿಲ್ಲ. ಏನೇ ಇದ್ದರೂ ಸ್ಥಳೀಯರು ಬೇವಿನ ಮರವನ್ನೇ ಮಾಸ್ತಮ್ಮ ಎಂದು ಪೂಜಿಸುತ್ತಿರುವುದು ಕಂಡುಬರುತ್ತದೆ.

**ಇ. ಮಾಸ್ತಿಯ ವಸ್ತುಗಳು, ಹೊಲ, ಬಾವಿ ಹಾಗೂ ಮಾಸ್ತಿ ಹೆಸರಿನ ಊರುಗಳು**

ಸತಿ ಹೋದ ಮಾಸ್ತಿ ಹೆಜ್ಜೆ ಇಟ್ಟ ಭೂಮಿ ಪವಿತ್ರ, ಅವಳು ಕೈಯೆತ್ತಿಕೊಟ್ಟ ಬಟ್ಟೆ, ಆಭರಣ ಇತ್ಯಾದಿಗಳೆಲ್ಲವೂ ಪವಿತ್ರ ಎಂಬ ಭಾವನೆ ಬೆಳೆದುಬಂದಿದೆ. ಅವಳಿಗೆ ಸೇರಿದವು ಎನ್ನುವ ಅವಶೇಷಗಳು ಅಧ್ಯಯನ ಪ್ರದೇಶದ ಕೆಲವು ಗ್ರಾಮಗಳಲ್ಲಿ ಕಂಡುಬಂದಿವೆ. ಚಿಕ್ಕುಡ ಗ್ರಾಮದ ಮಾಸ್ತಮ್ಮ ಅಗ್ನಿಪ್ರವೇಶ ಮಾಡುವಾಗ ಆಕಾಶದಿಂದ ಬಿದ್ದುವೆನ್ನಲಾದ ತಾಳಿ, ಕನ್ನಡಿ, ಬೆಳ್ಳಿಯ ನಿಂಬೆಹಣ್ಣು ಮತ್ತು ಕತ್ತಿಗಳನ್ನು ಮಾಸ್ತಮ್ಮನ ಮನೆಯಲ್ಲಿಟ್ಟು ಪೂಜೆ ಮಾಡುತ್ತಿದ್ದಾರೆ.[೧೦೬] ಕೊಂಡದಹಳ್ಳಿ ಮಾಸ್ತಮ್ಮನ ಬಳೆ, ಸೀರೆ ಮುಂತಾದ ವಸ್ತುಗಳನ್ನೆಲ್ಲ ಒಂದು ಬಿರುವಿನಲ್ಲಿ ಹಾಕಿ ಇಟ್ಟಿದ್ದಾರೆ. ಅವುಗಳನ್ನು ವರ್ಷಕ್ಕೊಮ್ಮೆ ನಡೆಯುವ ಜಾತ್ರೆ ಸಮಯದಲ್ಲಿ ಮಾತ್ರವೇ ಹೊರತೆಗೆಯಲಾಗುತ್ತದೆ. ಇಲ್ಲಿಯ ಮಾಸ್ತಮ್ಮನಿಗೆ ಯುಗಾದಿ ಹಬ್ಬದ ಬಳಿಕ ಜಾತ್ರೆ ಮಾಡಿದ ನಂತರವೇ ಹೊಲ ಉಳುವ ಕಾರ್ಯವನ್ನು(ಹೊನ್ನಾರು) ಆರಂಭಿಸುತ್ತಾರೆ. ಮಾಸ್ತಮ್ಮನ ಜಾತ್ರೆ ಮಾಡದೇ ಯಾವುದೇ ಉಳುವ ಕಾರ್ಯಗಳು ಆ ಗ್ರಾಮದಲ್ಲಿ ನಡೆಯುವುದಿಲ್ಲವಂತೆ.

ಕೊಂಡದಹಳ್ಳಿಯ ಮಾಸ್ತಮ್ಮ ಅಗ್ನಿಪ್ರವೇಶ ಮಾಡಿದ ಜಾಗದಲ್ಲಿ ಸುಮಾರು ಐದು ಎಕರೆ ಭೂಮಿಯಿದೆ. ಈ ಭೂಮಿ ಮಾಸ್ತಮ್ಮನಿಗೆ ಸೇರಿದ್ದು ಎನ್ನುವ ಲೆಕ್ಕ ಪತ್ರಗಳು ದೇವಸ್ಥಾನದಲ್ಲಿ ಇವೆ. ಈ ಭೂಮಿಯನ್ನು ದೇವಸ್ಥಾನದ ಪರವಾಗಿ ಮೂರು ವರ್ಷಕ್ಕೊಮ್ಮೆ ಹರಾಜು ಹಾಕಲಾಗುತ್ತಿದ್ದು, ಯಾರು ಹೆಚ್ಚು ಹರಾಜು ಕೂಗುತ್ತಾರೋ ಅವರು ಮೂರು ವರ್ಷ ಕಾಲ ಭೂಮಿಯನ್ನು ಉಳುಮೆ ಮಾಡಬೇಕು. ಬೆಳೆ ಬಂದರೂ, ಬರದಿದ್ದರೂ ಹರಾಜು ಕೂಗಿದ ಹಣವನ್ನು ವರ್ಷಕ್ಕೊಮ್ಮೆ ಕಟ್ಟಲೇಬೇಕೆಂಬ ನಿಯಮ ಅಲ್ಲಿದೆ. ಭೂಮಿಯಿಂದ ಬಂದ ಹಣವನ್ನು ಜಾತ್ರೆಗೆ ಬಳಸಿಕೊಳ್ಳಲಾಗುತ್ತಿದೆ. ಸೊರಟೂರಿನಲ್ಲಿಯೂ ಮಾಸ್ತಿಗೆ ಸೇರಿದ ಹೊಲವಿದೆ. ಆದರೆ ಈಗ ಆ ಹೊಲದಲ್ಲಿ ಮನೆಗಳು ನಿರ್ಮಾಣಗೊಂಡಿವೆ.

ಹೊದಿಗೆರೆಯಲ್ಲಿ ಮಾಸ್ತಮ್ಮನ ಒಂದು ಬಾವಿಯಿದೆ. ಅದಕ್ಕೆ ಗಣೇಶನ ಬಾವಿ ಎಂದು ಕರೆಯುತ್ತಾರೆ. ಈ ಬಾವಿಗೆ ನೀರು ತರಲೆಂದು ಬಂದ ಮಹಾಸತಿ ಮನೆಗೆ ಮರಳಿ ಬರುವುದು ತಡವಾಗುತ್ತದೆ. ಆಗ ಗಂಡ ಯಾಕೆ ತಡವಾಯಿತೆಂದು ಪ್ರಶ್ನಿಸಿ ಹೊಡೆಯುತ್ತಾನೆ. ಇದರಿಂದ ಕೋಪಗೊಂಡ ಮಾಸ್ತಮ್ಮ ಗಂಡನನ್ನು ಕೊಂದು ತಾನೂ ಬಾವಿಯಲ್ಲಿ ಬಿದ್ದು ಸತ್ತಳೆಂದು ಹೇಳುತ್ತಾರೆ. ಇದೇ ರೀತಿ ಮಾಸ್ತಮ್ಮ ಹೊಂಡದಲ್ಲಿ ಬಿದ್ದು ಸತ್ತಳೆಂದು ಹೇಳುವ ಸ್ಥಳ ಮತ್ತಿ ಗ್ರಾಮದಲ್ಲಿದೆ. ಬೀಜೋಗಟ್ಟಿ ಗ್ರಾಮದಲ್ಲಿ ಸತಿ ಬಾವಿಗೆ ಬಿದ್ದು ಸತ್ತಳೆಂದು ಹೇಳುವ ಸ್ಥಳವು ಈಗ ನೆಲಸಮವಾಗಿದೆ. ಈ ರೀತಿ ಹೇಳುವ ಸ್ಥಳಗಳು ಬಹುಶಃ ಅಗ್ನಿಪ್ರವೇಶ ಮಾಡಿದ ಸ್ಥಳಗಳಿರಬೇಕು.

ಅಧ್ಯಯನ ಪ್ರದೇಶದ ಕೆಲವು ಗ್ರಾಮಗಳಿಗೆ ಮಹಾಸತಿಯರ ಹೆಸರಿನಿಂದಲೇ ಆ ಸ್ಥಳಗಳನ್ನು ಕರೆಯುವುದನ್ನು ಕಾಣಬಹುದು. ಕೊಂಡದಹಳ್ಳಿಯ ಹೆಸರು ಸತಿಯೊಬ್ಬಳು ಅಗ್ನಿಪ್ರವೇಶ

ಮಾಡಿದ್ದನ್ನು ಸೂಚಿಸುವುದಾಗಿದೆ. 'ಕೊಂಡದಹಳ್ಳಿ' ಎಂಬ ಹೆಸರು 'ಕೊಂಡ' ಸಂಸ್ಕೃತ (ಅಗ್ನಿ) ಕುಂಡ ಎಂಬ ಪದದಿಂದ ಬಂದಿದೆಯೆಂದು ವಿದ್ವಾಂಸರೊಬ್ಬರು ಅಭಿಪ್ರಾಯಿಸಿದ್ದಾರೆ.[೧೦೭] ಮಾಸ್ತಿಯಿಂದಲೇ ಒಂದು ಗ್ರಾಮಕ್ಕೆ 'ಮಾಸ್ತಿಕಟ್ಟೆ' ಎನ್ನುವ ಹೆಸರು ಬಂದಿದೆ. ಈ ಗ್ರಾಮದ ಅರಣ್ಯಕ್ಕೂ ಮಾಸ್ತಿಕಟ್ಟೆ ಅರಣ್ಯ ಪ್ರದೇಶವೆಂದು ಕರೆಯಲಾಗುತ್ತಿದೆ. ಮಾಸಡಿ ಗ್ರಾಮಕ್ಕೆ ಮಾಸ್ತಿ> ಮಾಸ್ಡಿ> ಮಾಸಡಿ ಹೀಗೆ ಹೆಸರು ಬಂದಿರಬೇಕು.[೧೦೮] 'ಮತ್ತಿ ಎನ್ನುವ ಗ್ರಾಮದ ಹೆಸರು 'ಮಾಸ್ತಿ' ಎನ್ನುವುದರ ರೂಪಾಂತರವಿದ್ದಂತೆ ಕಾಣುತ್ತದೆ.[೧೦೯] ಸೊರಟೂರಿನಲ್ಲಿ ಮಾಸ್ತಿಗೆ ಸೇರಿದ ಹೊಲವಿದ್ದು ಈಗ ಮನೆಗಳು ನಿರ್ಮಾಣಗೊಂಡಿವೆ. ಆ ಏರಿಯಾಕ್ಕೆ ಈಗ ಮಾಸ್ತಿನಗರ ಎಂದು ಹೆಸರಿಡಲಾಗಿದೆ. ಹೀಗೆ ಮಹಾಸತಿಯರ ಮೇಲಿನ ಸ್ಥಳೀಯ ಉತ್ಕಟ ಭಕ್ತಿ ಸ್ಥಳಗಳಿಗೂ ಆಕೆಯ ಹೆಸರಿಡಲು ಕಾರಣವಾಗಿರಬಹುದು. ಈ ಹಿನ್ನೆಲೆಯಲ್ಲಿ ನೋಡಿದಾಗ ಕರ್ನಾಟಕದಲ್ಲಿ ಇಂದು ಕಂಡುಬರುತ್ತಿರುವ ಬಹಳಷ್ಟು ಹೆಣ್ಣು ದೇವತೆಗಳು ಯಾವುದೋ ಕಾರಣದಿಂದ ಹೆಸರು ಬದಲಾಯಿಸಿಕೊಂಡ ಮಾಸ್ತಿಯರೇ ಆಗಿರಬಹುದೆಂಬ ವಿದ್ವಾಂಸರ ಅಭಿಪ್ರಾಯ ಇಲ್ಲಿ ಸಮಂಜಸವೆನಿಸುತ್ತದೆ.[೧೧೦]

ಸತಿ ಹೋದವಳ ನೆನಪಿಗಾಗಿ ಶಿಲೆ, ಶಿಲ್ಪ, ಶಾಸನಗಳನ್ನು ನಿರ್ಮಿಸುತ್ತ ಬಂದಿರುವಂತೆ ದೈವೀ ಸ್ವರೂಪಳಾಗಿ ಮಾರ್ಪಟ್ಟ ಮಾಸ್ತಿಗೆ ಗುಡಿಗಳನ್ನು ಕಟ್ಟಿ ಪೂಜೆ ಪುನಸ್ಕಾರಗಳನ್ನು ನೆರವೇರಿಸುತ್ತ ಬಂದಿದ್ದಾರೆ. ಈ ಗುಡಿಗಳು ಆಕಾರದಲ್ಲಿಯಾಗಲಿ ವಾಸ್ತುಕಲೆ ದೃಷ್ಟಿಯಿಂದಾಗಲಿ ಹೇಳಿಕೊಳ್ಳುವಂತಿಲ್ಲ. ಆರಂಭದಲ್ಲಿ ಮೂರು ಕಲ್ಲು ಚಪ್ಪಡಿಗಳನ್ನು ಹಾಕಿ ಅತೀ ಚಿಕ್ಕದಾಗಿ ಮಾಸ್ತಿ ಗುಡಿಗಳನ್ನು ಕಟ್ಟಲಾಗಿದೆ. ಇತ್ತೀಚಿನ ದಿನಗಳಲ್ಲಿ ಸ್ಥಳೀಯರು ಅವುಗಳನ್ನು ತೆಗೆದು ಇಟ್ಟಿಗೆ ಹಾಗೂ ಗಾರೆಗಳಿಂದ ವಿಶಾಲವಾದ ದೇವಸ್ಥಾನಗಳನ್ನು ನಿರ್ಮಿಸಲಾಗಿದೆ. ಕೆಲವು ಗ್ರಾಮಗಳಲ್ಲಿ ಮೂಲ ಆಶಯಕ್ಕೆ ಧಕ್ಕೆ ತರದಂತೆ ಹಾಗೆ ಉಳಿಸಿಕೊಂಡು ಬಂದಿದ್ದಾರೆ.

ಅಧ್ಯಯನ ಪ್ರದೇಶದ ಚಿಕ್ಕುಡ, ಪುನಭಘಟ್ಟ, ಕತ್ತಿಗೆ, ಹಳೆದೇವರ ಹೊನ್ನಾಳಿ, ಆರುಂಡಿ, ಕಂಕನಹಳ್ಳಿ, ಬೀಜೋಗಟ್ಟಿ, ಬೈದನಹಳ್ಳಿ, ತಾರೇಹಳ್ಳಿ, ಚದರಗೊಳ್ಳ, ದೊಡ್ಡಗಟ್ಟ, ಚಿರಡೋಣಿ, ರಾಮೇನಹಳ್ಳಿ, ಲಕ್ಷ್ಮಿಸಾಗರ(ಮಲ್ಲೇನಹಳ್ಳಿ ಹಾಳೂರು) ಮೊದಲಾದ ಗ್ರಾಮಗಳಲ್ಲಿ ಮೂರು ಅಥವಾ ನಾಲ್ಕು ಕಲ್ಲು ಚಪ್ಪಡಿಗಳನ್ನು ಹಾಕಿ ಆರಂಭದಲ್ಲಿ ಕಟ್ಟಿರುವಂತಹ ಗುಡಿಗಳಾಗಿವೆ. ಚಿಕ್ಕುಡ ಗ್ರಾಮದಲ್ಲಿ ಚೌಕಾಕಾರದಲ್ಲಿ ಕಾಡುಕಲ್ಲುಗಳನ್ನು ಜೋಡಿಸಿ ಅದರ ಮೇಲೆ ಕಲ್ಲು ಚಪ್ಪಡಿಯ ಬಂಡೆಗಳನ್ನು ಹಾಕಿದೆ. ಸುತ್ತಲಿನ ಗೋಡೆಗೆ ಮಣ್ಣನ್ನು ಎರಚಲಾಗಿದೆ. ಒಂದು ರೀತಿಯಲ್ಲಿ ಈ ಗುಡಿ ಗವಿಯಂತೆ ಕಂಡುಬರುತ್ತದೆ. ಅದರೊಳಗೆ ಸತಿಪತಿಗಳಿಬ್ಬರು ನಿಂತಿರುವ ಸ್ಮಾರಕವಿದೆ. ಪುನಭಘಟ್ಟದಲ್ಲಿ ಮೂರು ದಿಕ್ಕಿಗೆ ಚಪ್ಪಟೆ ಕಲ್ಲುಗಳನ್ನು ನೆಟ್ಟು, ಅದರ ಮೇಲೆ ಹಾಸುಬಂಡೆಗಳನ್ನು ಹಾಕಿದೆ. ಸುತ್ತಲೂ ಸಣ್ಣ ಸಣ್ಣ ಗಾತ್ರದ ಕಲ್ಲುಗಳನ್ನು ಜೋಡಿಸಲಾಗಿದೆ. ಇದೇ ರೀತಿ ಕಟ್ಟಿರುವ ಗುಡಿ ಕತ್ತಿಗೆ ಗ್ರಾಮದಲ್ಲಿ ಕಂಡುಬರುತ್ತದೆ. ಆರುಂಡಿ ಗ್ರಾಮದ ಗುಡಿಗೆ ನಾಲ್ಕು ನಿಲುವುಗಲ್ಲುಗಳನ್ನು ನೆಟ್ಟು ಅದರ ಮೇಲೆ ಚಪ್ಪಡಿ ಕಲ್ಲನ್ನು ಹಾಕಿದೆ. ಸುತ್ತಲೂ ಕಾಡುಗಲ್ಲು ಮತ್ತು ಮಣ್ಣನ್ನು ಸೇರಿಸಿ ಗೋಡೆ ನಿರ್ಮಿಸಲಾಗಿದೆ. ಇದೇ ರೀತಿ ತಾರೇಹಳ್ಳಿ ಮತ್ತು ಕಮ್ಮಾರಗಟ್ಟೆ ಗುಡಿಗಳನ್ನು ಕಟ್ಟಲಾಗಿದೆ.

ಕೊಂಡದಹಳ್ಳಿ, ಹೊದಿಗೆರೆ[೧೧೧], ದಾಗಿನಕಟ್ಟೆ, ಮುದಿಗೆರೆ, ಬೆಂಡಿಗೆರೆ, ಸಿಂಗ್ರಿಹಳ್ಳಿ, ನಂದಿಬೇವೂರು, ಮಾಸಡಿ, ಕತ್ತಿಗೆ, ದೊಡ್ಡೇರಹಳ್ಳಿ, ಸೊರಟೂರು, ಬೆನಕನಹಳ್ಳಿ, ತಾರೇಹಳ್ಳಿ, ಪಲ್ಲಾಗಟ್ಟೆ ಮೊದಲಾದ ಗ್ರಾಮಗಳಲ್ಲಿ ನೂತನವಾಗಿ ಕಟ್ಟಿದ ಮಾಸ್ತಿ ಗುಡಿಗಳಿವೆ. ಹಲವು ಗ್ರಾಮಗಳಲ್ಲಿ ಗರ್ಭಗೃಹ ಮಾತ್ರ ಹೊಂದಿರುವಂತೆ ಸಾಧಾರಣ ಶೈಲಿಯಲ್ಲಿ ಕಟ್ಟಲಾಗಿದೆ. ಆದರೆ ಜಿಗಳಿ ಮತ್ತು ಪಲ್ಲಾಗಟ್ಟೆ, ದಾಗಿನಕಟ್ಟೆಯಲ್ಲಿನ ಗುಡಿಗಳನ್ನು ಸುಂದರವಾಗಿ ಕಟ್ಟಲಾಗಿದೆ. ಜಿಗಳಿ ಗ್ರಾಮದ ಗುಡಿಯನ್ನು ಗರ್ಭಗೃಹ ಮತ್ತು ನವರಂಗಗಳಿರುವಂತೆ ಕಟ್ಟಿದೆ. ಗರ್ಭಗೃಹದ ಮೇಲೆ ದ್ರಾವಿಡ ಮಾದರಿಯ ಶಿಖರ ಮತ್ತು ಕಂಚಿನ ಕಳಸವಿದೆ. ಇದೇ ರೀತಿ ದಾಗಿನಕಟ್ಟೆಯಲ್ಲಿನ ಗುಡಿ ಸಣ್ಣದಾಗಿದ್ದರೂ ಸುಂದರವಾಗಿ ಕಟ್ಟಲಾಗಿದೆ. ಅಧ್ಯಯನ ಪ್ರದೇಶದ ಹಲವು ಗುಡಿಗಳಲ್ಲಿ ಪ್ರತಿದಿನ ಪೂಜೆ ನಡೆದರೆ, ಕೆಲವು ಗುಡಿಗಳಲ್ಲಿ ವಾರಕ್ಕೊಮ್ಮೆ ಹಬ್ಬ ಹುಣ್ಣಿಮೆಗೊಮ್ಮೆ, ವರ್ಷಕ್ಕೊಮ್ಮೆ ಮಾತ್ರ ನಡೆಯುತ್ತವೆ. ಇನ್ನೂ ಕೆಲವು ಗುಡಿಗಳಲ್ಲಿ ಪೂಜೆಯೂ ನಡೆಯುವುದಿಲ್ಲ. ಹೀಗೆ ಮಾಸ್ತಿ ಗುಡಿಗಳು ಚಿಕ್ಕದಾಗಿದ್ದರೂ ಮಾಸ್ತಿಶಕ್ತಿ ಬಗೆಗಿನ ಜನರ ಭಕ್ತಿ ಇಲ್ಲಿ ಮಹತ್ವದ್ದಾಗಿ ಕಂಡುಬರುತ್ತದೆ.

### ೫.೨. ವೇಳೆವಾಳಿ ಮರಣ

ಪತಿಗಾಗಿ ಸತಿ ಕೈಗೊಳ್ಳುವ ಆತ್ಮಬಲಿದಾನ 'ಮಾಸ್ತಿಮರಣ'ವಾದರೆ, ಒಡೆಯನಿಗಾಗಿ ಸೇವಕ ಕೈಗೊಳ್ಳುವ ಆತ್ಮಬಲಿದಾನ 'ವೇಳೆವಾಳಿ ಮರಣ'ವಾಗಿದೆ. ರಾಜರು ಪ್ರತ್ಯಕ್ಷ ದೇವರು, ಪರಮಾತ್ಮನ ಅವತಾರವೆಂದೋ ಅಥವಾ ದೈವಾಂಶ ಸಂಭೂತರೆಂದೋ ಭಾವಿಸಿದ ಸೇವಕರು, ರಾಜ ಅಥವಾ ತನ್ನ ಒಡೆಯ ಮರಣ ಹೊಂದಿ ಪರಲೋಕಕ್ಕೆ ಹೋದರೆ ಅಲ್ಲಿಯೂ ಅವನನ್ನು ಹಿಂಬಾಲಿಸಿ ಸೇವೆ ಸಲ್ಲಿಸುವ ನಿಷ್ಠೆ ವೇಳೆವಾಳಿ ಮರಣಕ್ಕೆ ಕಾರಣವಾಗಿದೆ.[೧೧೨] ಹೀಗೆ ರಾಜರಿಗೆ ಅಥವಾ ಒಡೆಯರಿಗೆ ಮರಣ ಉಂಟಾದಾಗ ಅವರೊಂದಿಗೆ ತಾವು ಚಿತೆ ಏರುವ, ಆತ್ಮಬಲಿ ಮಾಡಿಕೊಳ್ಳುವ ಪದ್ಧತಿ ಕರ್ನಾಟಕದಲ್ಲಿ ಪ್ರಚಲಿತವಾಗಿತ್ತು. ನಾಡಿನ ಶಾಸನ-ಕಾವ್ಯಗಳಿಂದ ಈ ಸಂಪ್ರದಾಯ ಕೀಳ್ಗುಂಟೆ, ವೇಳೆವಾಳಿ, ಲೆಂಕವಾಳಿ, ಗರುಡ ಎಂಬ ಹೆಸರುಗಳಿಂದ ಕ್ರಮವಾಗಿ ಆಚರಣೆಯಲ್ಲಿದ್ದಿದ್ದು ತಿಳಿದುಬರುತ್ತದೆ.[೧೧೩] ಸಾಮಾನ್ಯವಾಗಿ ಕಿಟ್ಗಿಂಟೆ ಗಂಗ, ರಾಷ್ಟ್ರಕೂಟರ ಕಾಲದಲ್ಲಿ, ವೇಳೆವಾಳಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ, ಲೆಂಕವಾಳಿ ಕಲ್ಯಾಣ ಚಾಲುಕ್ಯ ಹಾಗೂ ಹೊಯ್ಸಳರ ಕಾಲದಲ್ಲಿ ಪ್ರಧಾನವಾಗಿ ಆಚರಣೆಯಲ್ಲಿದ್ದ ಪದ್ಧತಿಗಳಾಗಿದ್ದವು.[೧೧೪] ಕಿಟ್ಗಿಂಟೆ ಎಂಬುದು ಹೂಳುವ ಸಂಪ್ರದಾಯವನ್ನು, ವೇಳೆವಾಳಿ ಎಂಬುದು ಸುಡುವ ಸಂಪ್ರದಾಯವನ್ನು ಪ್ರತಿನಿಧಿಸುತ್ತದೆ. ಕಿಟ್ಗಿಂಟೆ ಹಳೆಯ ಪದ, ವೇಳಾವಾಳಿ ಆ ಮೇಲೆ ಬಳಕೆಗೆ ಬಂದವಾಗಿದ್ದು, ಕಿಟ್ಗಿಂಟೆ ಪದವನ್ನು ತಳ್ಳಿ ಎರಡೂ ಸಂಪ್ರದಾಯಗಳಿಗೆ ತಾನೇ ಬಳಕೆಗೊಂಡು ಕ್ರಿ.ಶ. ೧೨ನೇ ಶತಮಾನದವರೆಗೂ ಅಸ್ತಿತ್ವದಲ್ಲಿತ್ತೆಂದು ವಿದ್ವಾಂಸರಾದ ಎಂ.ಎಂ. ಕಲಬುರ್ಗಿ ಅವರು ಅಭಿಪ್ರಾಯಿಸಿದ್ದಾರೆ.[೧೧೫] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಸಂಪ್ರದಾಯದ ಬಗ್ಗೆ ತಿಳಿಸುವ ವಿಪುಲ ಆಧಾರಗಳೂ ದೊರೆಯದಿದ್ದರೂ, ಕೆಲವೇ ಶಾಸನ ಹಾಗೂ ಸ್ಮಾರಕಶಿಲ್ಪಗಳು ಅದರ ಅಸ್ತಿತ್ವವನ್ನು ದೃಢಪಡಿಸುತ್ತಿವೆ.

## ೫.೨.೧. ಕೀಜ್ಗಿಂಟೆ

'ಕಿಟ್ಗೆಂಟೆ' ಎಂಬ ಪದವು ಎರಡು ಅರ್ಥವನ್ನು ಹೊಂದಿದೆ. 'ಕೀಮ್' ಎಂಬ ಪದ 'ಕೆಳಗೆ' ಎನ್ನುವುದನ್ನು ಸೂಚಿಸಿದರೆ, ಕುಂತೆ ಎಂಬುದು 'ಈಗಿನ' ಕುಣಿ(ಗುಂಡಿ)ಯನ್ನು ಸೂಚಿಸುತ್ತದೆ. 'ಕಿಟ್ಗೆಂಟೆಯಾದಂ' ಎಂದರೆ ತನ್ನ ಒಡೆಯನ ಚಿತೆಯ ಕೆಳಗೆ ಅಥವಾ ಸಮಾಧಿಯ ಕೆಳಗೆ ಹೂಳಲ್ಪಟ್ಟವನು ಎಂಬ ಅರ್ಥಗಳಿವೆ.[೧೧೬] ಅಂದರೆ ವ್ಯಕ್ತಿಯನ್ನು ಜೀವಸಹಿತ ಇಲ್ಲವೆ ಹೊರಗೆ ಆತ್ಮಘಾತ ಮಾಡಿಕೊಂಡ ಬಳಿಕ ಒಡೆಯನ ಶವದ ಕೆಳಗೆ ಮಲಗಿಸುತ್ತಿರಬೇಕು. ಆದರೆ 'ಕಿಚ್ಚುವೊಗು' ಎಂಬ ಪ್ರಯೋಗಗಳು ಒಡೆಯನನ್ನು ಸುಡುತ್ತಿರುವ ಚಿತೆಯಲ್ಲಿ ಪ್ರವೇಶಿಸುವುದನ್ನು ಸೂಚಿಸುತ್ತದೆ.[೧೧೭] ಈ ಹಿನ್ನೆಲೆಯಲ್ಲಿ 'ಕಿಟ್ಗೆಂಟೆ' ಒಡೆಯನ ಮರಣ ಪ್ರಸಂಗದಲ್ಲಿ ಜರುಗುತ್ತಿದ್ದರೆ, 'ಸಿಡಿತಲೆ', 'ಅಗ್ನಿಪ್ರವೇಶಗಳು' ಒಡೆಯನ ಶುಭಹಾರೈಕೆ ಪ್ರಸಂಗದಲ್ಲಿ ಜರುಗುತ್ತಿದ್ದವು.

ಪ್ರಾಚೀನ ಜನಾಂಗಗಳಲ್ಲಿ ರಾಜನು ಸತ್ತಾಗ ಅವನು ಪರಲೋಕದಲ್ಲಿ ಇಲ್ಲಿಯಂತೇ ಸುಖವಾಗಿರಲಿ ಎಂದು ಅವನ ಸಮಾಧಿಯಲ್ಲಿ ಅವನಿಗೆ ಇಷ್ಟವಾದ ವಸ್ತುಗಳನ್ನು, ಪ್ರಾಣಿಗಳನ್ನೂ, ಜನರನ್ನೂ ಹೂಳುತ್ತಿದ್ದರಂತೆ. ಸಿಥಿಯನ್ನರ ರಾಜನು ಸತ್ತಾಗ ಅವನ ಜೊತೆಗೆ ಮತ್ತು ಅವನ ಸುತ್ತಮುತ್ತ ಅವನ ಅಡುಗೆಯವರು, ಆಳುಗಳು, ಕುದುರೆಗಳನ್ನೂ ಹೂಳುತ್ತಿದ್ದರು.[೧೧೮] ಬಹುಶಃ ಇದಕ್ಕೆ ಧಾರ್ಮಿಕವಾದ ಬಣ್ಣವು ಬಂದು ರಾಜನ ಜೊತೆಯಲ್ಲಿ ತಾವೂ ಮಡಿಯುವುದಾಗಿ ರಾಜನ ಜೀವಿತದ ಅವಧಿಯಲ್ಲಿಯೇ ಹಲವಾರು ಜನ ತಾವಾಗಿ ಮುಂದೆ ಬಂದು ಪ್ರತಿಜ್ಞೆ ಮಾಡುವ ಪರಂಪರೆ ಬೆಳೆದಿರುವಂತೆ ಕಾಣುತ್ತದೆ. ಒಬ್ಬ ಪುರುಷನು ಸತ್ತಾಗ ಅವನ ಜೊತೆಯಲ್ಲಿ ಹೆಂಡತಿಯಲ್ಲದೆ ಅವನ ತಾಯಿ, ಸೋದರಿಯರು, ಮಂತ್ರಿಗಳು, ದಾಸದಾಸಿಯರು ಪ್ರಾಣತ್ಯಾಗ ಮಾಡಿಕೊಳ್ಳುತ್ತಿದ್ದ ವಿಷಯವನ್ನು ಕಲ್ಹಣನು ಹೇಳುತ್ತಾನೆ.[೧೧೯] ಈ ಸಂಪ್ರದಾಯವು ಕರ್ನಾಟಕದಲ್ಲಿ ಅತ್ಯಂತ ಪ್ರಬಲವಾಗಿದ್ದಿತು. ರೆಟ್ಟಿಯಣ್ಣನೆಂಬ 'ಬೆಳಾವಡಿಚ' ಮಡಿದ ಒಡೆಯನ ಅಗ್ನಿ ಸಂಸ್ಕಾರದೆದುರು ಆತ್ಮಹತ್ಯೆ ಮಾಡಿಕೊಂಡು 'ಕಿಜ್ಗೆಣ್ಟೆ' ಯಾದನೆಂಬ ಘಟನೆಯನ್ನು ಹೇಳುವ ಕ್ರಿ.ಶ. ೮೬೫ರ ಮೇವುಂಡಿ ಶಾಸನವೇ ಈ ಪದ್ಧತಿಯ ಪ್ರಥಮ ದಾಖಲೆಯಾಗಿದೆ.[೧೨೦] ಕ್ರಿ.ಶ. ೯೭೭ರ ಕಲುಗೋಡ ಶಾಸನದ ನಂತರ ಕೀಜ್ಗಿಂಟೆ ಪದ ಬಳಕೆಯಾಗಿಲ್ಲ. ವೇಳವಾಳಿ ಆ ನಂತರವೂ ಬಳಕೆಯಾಗಿದೆ.[೧೨೧]

ಪ್ರಸ್ತುತ ಅಧ್ಯಯನ ಪ್ರದೇಶದ ಕ್ರಿ.ಶ. ೯೩೦ರ ನಂದಿಗುಂಡಿ ಶಾಸನದಲ್ಲಿ 'ಕೀಜ್ಗಿಂಟೆ' ಎಂಬ ಪದ ಕಂಡುಬರುತ್ತದೆ. 'ಬೆಳವಡಿಚ' ಅಲ್ಲಿಗ ಎಂಬುವನು ರಾಜನೊಡನೆ ಜೀವಂತ ಸಮಾಧಿಯಾದುದ್ದನ್ನು ಈ ಶಾಸನ ತಿಳಿಸುತ್ತದೆ.[೧೨೨] ಸ್ಮಾರಕದ ಮೇಲ್ಭಾಗ ತ್ರುಟಿತಗೊಂಡು, ಕೆಳಭಾಗವು ಭೂಮಿಯಲ್ಲಿ ಹೂತಿರುವುದರಿಂದ ಶಿಲ್ಪದ ದೃಶ್ಯಗಳು ಕಂಡುಬರುತ್ತಿಲ್ಲ. ಇದೇ ಗ್ರಾಮದ ಮಲ್ಲಿಕಾರ್ಜುನ ದೇವಾಲಯದ ಹಿಂದೆ ಬನ್ನಿಕಟ್ಟೆಯಲ್ಲಿದ್ದ ಶಾಸನರಹಿತವಾಗಿರುವ

'ಕೀಳ್ಗುಂಟೆ' ಸ್ಮಾರಕವೊಂದನ್ನು ಸಂಶೋಧಕರಾದ ಡಿ.ವಿ. ಪರಮಶಿವಮೂರ್ತಿ ಅವರು ಇತ್ತೀಚಿಗೆ ಪತ್ತೆಹಚ್ಚಿದ್ದಾರೆ. ಈ ಸ್ಮಾರಕಶಿಲ್ಪವು ಕ್ರಿ.ಶ. ೯ನೇ ಶತಮಾನದ ರಾಷ್ಟ್ರಕೂಟ ಕಾಲದ ಶಿಲ್ಪವಾಗಿದೆ. ಈ ಶಿಲ್ಪದ ವಿಶೇಷವೇನೆಂದರೆ ಸೇವಕನೊಬ್ಬ ತನ್ನ ಒಡೆಯನ ಚಿತೆಯ ಸಮ್ಮುಖದಲ್ಲೇ ಆತ್ಮಾರ್ಪಣೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಪ್ರಾಯಶಃ ಕರ್ನಾಟಕದಲ್ಲೇ ಇದೊಂದು ಏಕೈಕ ಚಿತೆ ಸಹಿತವಿರುವ ಕೀಳ್ಗುಂಟೆ ಸ್ಮಾರಕವೆಂದು ವಿದ್ವಾಂಸರು ದೃಢಪಡಿಸುವ ಅಭಿಪ್ರಾಯ ಮಂಡಿಸಿದ್ದಾರೆ.[೧೨೩] ಈ ಸ್ಮಾರಕ ಶಿಲ್ಪವನ್ನು ಮೂರು ಹಂತದಲ್ಲಿ ಕಂಡರಿಸಲಾಗಿದೆ. ಮೊದಲ ಹಂತದಲ್ಲಿ ಮೃತ ಒಡೆಯನನ್ನು ಚಿತೆಯಲ್ಲಿ ಸುಡುತ್ತಿದ್ದು ಆ ಚಿತೆಯ ಮುಂದೆ ಸೇವಕನೊಬ್ಬ ಬಲಿದಾನ ಮಾಡಿಕೊಳ್ಳುತ್ತಿರುವುದನ್ನು ಕೆತ್ತಲಾಗಿದೆ. ಸೇವಕ ಬಲಗೈಯಲ್ಲಿ ಖಡ್ಗ ಹಿಡಿದುಕೊಂಡಿದ್ದಾನೆ. ಈ ಖಡ್ಗದಿಂದಲೇ ಅವನು ಇರಿದುಕೊಂಡು ಬಲಿದಾನ ಮಾಡಿದ್ದಾನೆ. ಅವನ ಕಿವಿ ಆಭರಣ, ಕೊರಳ ಮಣಿಸರ, ಕೈಗಡಗ, ಕೇಶದ ಗಂಟು, ಸೊಂಟದಲ್ಲಿರುವ ಕಿರುಗತ್ತಿಯನ್ನು ಬಹಳ ಅರ್ಥಪೂರ್ಣವಾಗಿ ಶಿಲ್ಪಿ ಕೆತ್ತಿದ್ದಾನೆ. ಕಟ್ಟಿಗೆ ತುಂಡುಗಳ ಮಧ್ಯೆ ಒಡೆಯನನ್ನು ಮಲಗಿಸಿ ಅಗ್ನಿಸ್ಪರ್ಶ ಮಾಡಲಾಗಿರುವ ಚಿತ್ರವನ್ನು ಶಿಲ್ಪಿ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಎರಡನೆಯ ಹಂತದಲ್ಲಿ ಬಲಿದಾನ ಮಾಡಿದ ಸೇವಕನನ್ನು ಅಪ್ಸರೆಯರು ಹೆಗಲ ಮೇಲೆ ಕೈ ಹಾಕಿಕೊಂಡು ಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯವಿದೆ. ಮೂರನೆಯ ಹಂತದಲ್ಲಿ ಸೇವಕ ಸ್ವರ್ಗದಲ್ಲಿ ಕುಳಿತಿರುವುದನ್ನು ಕೆತ್ತಲಾಗಿದೆ. ಇಂತಹ ಆತ್ಮಬಲಿಯ ಪ್ರಸಂಗಗಳು ತೀರ ಕ್ವಚಿತ್ತಾಗಿ ಜಿಲ್ಲೆಯಲ್ಲಿ ಕಂಡುಬಂದರೂ ಮಹತ್ವವಾದವುಗಳಾಗಿವೆ.

### ೫.೨.೨. ವೇಳೆವಾಳಿ

'ಜೋಳವಾಳಿ'ಯೆಂಬುದು ವೈರಿಯೊಂದಿಗೆ ಹೋರಾಡಿ ಗೆದೆಯುವ ಇಲ್ಲವೆ ಮಡಿಯುವ ವ್ಯಕ್ತಿಯನ್ನು ಸೂಚಿಸಿದರೆ, ಈ ವೇಳವಾಳಿ ತಾನಾಗಿಯೇ ಜೀವತ್ಯಾಗ ಮಾಡಿಕೊಳ್ಳುವ ಇಲ್ಲವೇ ಮಾಡಿಸಿಕೊಳ್ಳುವ ವ್ಯಕ್ತಿಯನ್ನು ಸೂಚಿಸುತ್ತದೆ.[೧೨೪] 'ಜೋಳವಾಳಿ' ಎಂದರೆ ಅನ್ನದ ಋಣ, ಅನ್ನದ ಕರ್ತವ್ಯ ಎಂದು ಅರ್ಥ(ಜೋಳ= ಆಹಾರ, ಅನ್ನ), ಅನ್ನವನ್ನು ಕೊಟ್ಟು ಸಾಕಿದ ಒಡೆಯನಿಗೆ ಕಷ್ಟ ಬಂದಾಗ ಅವನಿಂದ ಉಪಕೃತನಾಗಿರುವ ವ್ಯಕ್ತಿಯು ಒಡೆಯನಿಗೆ ಸಹಾಯ ಮಾಡಬೇಕು, ಯುದ್ಧವು ಒದಗಿದಾಗ ಅವನ ಪರವಾಗಿ ಹೋರಾಡಬೇಕು. ಇದೇ 'ಜೋಳವಾಳಿ' ಕರ್ತವ್ಯವನ್ನು ಪಾಲಿಸುವ ವ್ಯಕ್ತಿಯನ್ನು ಸೂಚಿಸುತ್ತದೆ.[೧೨೫] ಪಂಪಭಾರತದ ಹಲವು ಕಡೆ 'ಜೋಳದಪಾಟಿ' ಪ್ರಸ್ತಾಪ ಬರುತ್ತದೆ.

ವೇಳೆವಾಳಿತನವು ಕೃತಜ್ಞತೆಯ ಪರಾಕಾಷ್ಠೆ ಎಂದು ಹೇಳಲಾಗಿದೆ. ವ್ಯಕ್ತಿಯೊಬ್ಬ ತನ್ನ ಒಡೆಯನು ಮಡಿದರೆ ತಾನೂ ಮಡಿಯುತ್ತಾನೆ. ಹಾಗೆಂದೇ ಅರಸನಿಗೆ ಭಾಷೆ ಕೊಟ್ಟು, ಪ್ರತಿಜ್ಞೆಯನ್ನೂ ಮಾಡಿರುತ್ತಾನೆ. ಈ ವೇಳೆವಾಳಿಯ ಪದನಿಷ್ಪತ್ತಿ ಬಗ್ಗೆ ವಿದ್ವಾಂಸರು ಭಿನ್ನ ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ. ವಿದ್ವಾಂಸರಾದ ಎಂ. ಚಿದಾನಂದಮೂರ್ತಿಯವರು 'ವೇಳೆವಾಳಿ'

ವೆಳೆ+ಪಾಟಿ: ವೇಳೆ ಎಂದರೆ ಸಮಯ, ಆಪತ್ತು. ಪಾಟಿ=ಧರ್ಮದ ಕರ್ತವ್ಯವೆಂದು ಅರ್ಥೈಸಿ ರಾಜನ ಸಾವಿನ ಸಮಯದಲ್ಲಿ ತನ್ನ ಕರ್ತವ್ಯವನ್ನು ನಡೆಸುವವನು ಎಂಬ ಅರ್ಥವನ್ನು ಹೇಳಿದ್ದಾರೆ. ಅಲ್ಲದೆ ಈ ರೂಪವೇ ಮೂಲವಿರಬೇಕೆಂದು ಭಾವಿಸುತ್ತಾರೆ.[೧೨೬] ವಿದ್ವಾಂಸರಾದ ಎಂ.ಎಂ. ಕಲಬುರ್ಗಿಯವರು ವೇಳೆವಾಳಿ ಸಾಧು ರೂಪಲ್ಲವೆಂದೂ ಅದು ವೇಳವಾಳಿಯೆಂದೂ ವೇಳದ ಪ್ರಕೃತಿ ರೂಪ ಬೇಳ್(ಸುಡು)ದಿಂದ ರೂಪಗೊಂಡು ಅದು ವೇಳ+ವಳ=ವೇಳ್ವಳ= ವೇಳವಳ ರೂಪ ರೂಢಗೊಂಡು ಇದರ ಭಾವನಾಮ 'ವೇಳವಳಿ'ಯಾಗಿ, ಕೊನೆಗೆ ಜೋಳವಾಟಿಯ ಅನುಕರಣೆಯಿಂದ ವೇಳವಾಳಿ ರೂಪುಗೊಂಡಿದೆ. ಈ ಪದದ ಅಪರಿಚಿತತೆಯಿಂದಾಗಿ ಆಮೇಲೆ 'ವೇಳೆವಾಳಿ'ಯೆಂಬುದು ಚಲಾವಣೆಗೆ ಬಂದಿರಬಹುದೆಂದು ಅಭಿಪ್ರಾಯಿಸಿದ್ದಾರೆ.[೧೨೭] ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ 'ವೇಳೆವಾಳ'ಯೇ ಅಧಿಕವಾಗಿ ಪ್ರಯೋಗವಾಗಿರುವ ಪದವಾಗಿದೆ. ಸುಮಾರು ೧೧ನೆಯ ಶತಮಾನದ ಸಮಯಕ್ಕೆ ವೇಳ, ವೇಳವಾಳಿ ಎಂಬ ಪದಗಳನ್ನು ಹಿಂದೆ ಸರಿಸಿ, ಲೆಂಕ, ಲೆಂಕವಾಳಿಯೆಂಬ ಪದಗಳು ಈ ಸಂಪ್ರದಾಯದಲ್ಲಿ ಕ್ರಮೇಣ ಕಾಣಿಸತೊಡಗಿವೆ. ಬಸವಣ್ಣನವರ ವಚನಗಳಲ್ಲಿ 'ವೇಳವಾಳಿ-ಜೋಳವಾಳಿ', ಅಂಕ-ಲೆಂಕ ಎರಡೂ ಪ್ರಯೋಗಗಳಿರುವುದು ಮೇಲಿನ ಹೇಳಿಕೆಯನ್ನು ಸಮರ್ಥಿಸುತ್ತವೆ.[೧೨೮] ಅಧ್ಯಯನ ಪ್ರದೇಶದ ಬೆಳಗುತ್ತಿಯಲ್ಲಿ ಕಂಡುಬರುವ ಸ್ಮಾರಕಶಿಲ್ಪ ಶಾಸನಗಳು ಜಿಲ್ಲೆಯಲ್ಲಿ 'ವೇಳವಾಳಿ' ಸಂಪ್ರದಾಯ ಪ್ರಚಲಿತದಲ್ಲಿದುದ್ದನ್ನು ತಿಳಿಯಪಡಿಸುತ್ತಿವೆ.

ಕ್ರಿ.ಶ. ೧೧೩೦ರಲ್ಲಿ ಮಹಾಮಂಡಳೇಶ್ವರನಾದ ತೈಪಲದೇವನು ಸತ್ತಾಗ ತಂತ್ರಪಾಳರ ಗಂಡ ಮಸಯ್ಯನ ತಮ್ಮ ಬೊಪ್ಪಣ ಎಂಬುವನು ವೇಳೆವಾಳಿತನವನ್ನು ಮೆರೆದು ತೈಲಪನೊಡನೆ ಸ್ವರ್ಗಸ್ಥನಾದಾಗ 'ಮಂಡಳೇಶ್ವರ ಮಯೂರವರ್ಮ ದೇವರು ಮಂಡಲಿಕ ಮಸಣಯ್ಯ ಶ್ರೀಕರಣಸಹಿತ ಸಮಸ್ತ ಪರಿಗ್ರಮುಮಿಮ್ಮು ಬೊಪ್ಪಣನ ಸೇವೆಗೆ ನೀಡಿದ ಜೋಳಕೆ ಕೊಟ್ಟ ಗದ್ಯಾಣಂ ನೋಟಿರ್ವಂ' ಆತನ ಮಕ್ಕಳಿಗೆ ನೀಡಲಾಯಿತು. ಈ ವೇಳೆ ವಾಮದೇವ ಪಂಡಿತರು ಸಮಸ್ತ ಗೌವುಡುಗಳು ಇದ್ದು ಆತನ ಕಲ್ಲು ನಿಲ್ಲಿಸಿದರೆಂದು ಶಾಸನ ಉಲ್ಲೇಖಿಸುತ್ತದೆ.[೧೨೯] ವೇಳವಾಳಿಗೊಳ್ಳುವ ಬೊಪ್ಪಣನ ಮೆರವಣಿಗೆಯನ್ನು ಶಿಲ್ಪಿ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಪಲ್ಲಕ್ಕಿಯಲ್ಲಿ ಕುಳಿತಿರುವ ಬೊಪ್ಪಣನು ಬಲಗೈಯಲ್ಲಿ ಆಯುಧವೊಂದನ್ನು ಹಿಡಿದು, ಎಡಗೈ ಮೇಲೆತ್ತಿ ಎಲ್ಲರಿಗೂ ಹರಸುತ್ತಿರುವಂತೆ ಕೆತ್ತಲಾಗಿದೆ. ಅವನ ತಲೆಯ ಮೇಲೆ ಛತ್ರಿಯಿದೆ. ಬೊಪ್ಪಣನು ಹಸನ್ಮುಖನಾಗಿರುವಂತೆ ಶಿಲ್ಪಿ ಚಿತ್ರಿಸಿದ್ದಾನೆ. ಇದರಿಂದ ಅವನು ಸಂತೋಷದಿಂದಲೇ ವೇಳವಾಳಿಗೊಂಡಿರುವುದು ಕಂಡುಬರುತ್ತದೆ. ಅವನನ್ನು ಭದ್ರತೆಯಲ್ಲಿ ಮೆರವಣಿಗೆ ಮಾಡುತ್ತಿರುವಂತೆ ಕಂಡರಿಸಿರುವುದು ಶಿಲ್ಪದ ದೃಷ್ಟಿಯಿಂದ ವಿಶೇಷತೆಯಾಗಿದೆ. ಇಲ್ಲಿ ತನ್ನನ್ನು ಪೋಷಿಸಿದ (ಮಹಾರಾಜ) ಮಹಾಮಂಡಳೇಶ್ವರನಿಗೆ ನಿಷ್ಠೆಯಿಂದ ತಾನು ಅವನೊಂದಿಗೆ ಸ್ವರ್ಗಸ್ಥನಾಗಿದ್ದುದು ತಿಳಿದುಬರುತ್ತದೆ. ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲೂಕಿನ ಒಂದು ಸ್ಮಾರಕವು ಅಪರೂಪದ್ದಾಗಿದೆ. ಕ್ರಿ.ಶ. ೧೨೧೫ರಲ್ಲಿ 'ಶಿವೋದಯನಾಯಕನ ಅವ್ವೆ ಹೊನ್ನವ್ವೆ ನಾಯಕಿತಿ ಸ್ವರ್ಗಸ್ಥೆಯಾಗಲು ಮತಿಯ... ಕಿತ್ತಿ ಹೊನ್ನಿ ಸಿಡಿತಲೆಯಗೊಟ್ಟು ಸುರಲೋಕ ಪ್ರಾಪ್ತಿಯಾದಲ್ಲಿ' ಎಂದು ಶಾಸನ ಉಲ್ಲೇಖಿಸುತ್ತದೆ.[೧೩೦] ಶಿವೋದಯನಾಕಯನೆಂಬ

ಅಧಿಕಾರಿಯ ತಾಯಿಯ ಮರಣಕ್ಕಾಗಿ ಹೊನ್ನಿ ಎಂಬುವಳು ಸಿಡಿತಲೆಗೊಟ್ಟ ವಿಷಯವನ್ನು ಹೇಳುವ ಈ ಶಾಸನ ಹೆಣ್ಣಿನ ಮರಣಕ್ಕಾಗಿ ಹೆಣ್ಣೊಬ್ಬಳು ಆತ್ಮಬಲಿಯಾದ ವಿರಳ ನಿದರ್ಶನವಾಗಿದೆ. ಪೆರ್ಗಡೆ ಗುಂಡಯ್ಯ ಎಂಬಾತನು ಅಯ್ಯಪಮಂಗಲ ಎಂಬ ಅಗ್ರಹಾರವನ್ನು(ಬ್ರಹ್ಮದೇಯಂ) ಅಕ್ರಮವಾಗಿ ಸೂರೆಮಾಡುತ್ತಾನೆ. ಆ ಗುಂಡಯ್ಯನನ್ನು ರಾಜನು ಕಠಿಣ ಶಿಕ್ಷೆಗೆ ಗುರಿಪಡಿಸಬೇಕಾಗಿದ್ದಿತು. ಆದರೆ ಬಹುಶಃ ಗುಂಡಯ್ಯನಿಂದ ಉಪಕೃತನಾಗಿದ್ದ ಏಚಯ್ಯ ಎನ್ನುವವನು ತಾನೇ ಇರಿದುಕೊಂಡು ತನ್ನ ಒಡೆಯನ ಶಿಕ್ಷೆಯನ್ನು ತಾನೇ ಹೊತ್ತು, ಗುಂಡಯ್ಯನಿಗೆ ಕ್ಷಮಾದಾನವನ್ನು ಮಾಡಿಸುತ್ತಾನೆ.[೧೩೧] ಈ ಶಾಸನದಲ್ಲಿ ವೇಳವಾಳಿ ಪದ ಬಳಕೆಯಾಗದಿದ್ದರೂ ಒಡೆಯನ ಬಗ್ಗೆ ಸೇವಕನಿಗಿದ್ದ ನಿಷ್ಠೆ ಮಹತ್ವದ್ದಾಗಿದೆ.

**೫.೨.೩. ಆತ್ಮಬಲಿದಾನ ಸ್ಮಾರಕ ಶಿಲ್ಪಗಳು: ಶಾಸನರಹಿತ**

ಪ್ರಸ್ತುತ ಅಧ್ಯಯನ ಪ್ರದೇಶದ ಕೆಲವು ಗ್ರಾಮಗಳಲ್ಲಿ ಶಾಸನರಹಿತವಾದ ಆತ್ಮಬಲಿದಾನ ಶಿಲ್ಪಗಳು ಕಂಡುಬರುತ್ತವೆ. ಅವು ಲಿಪಿರಹಿತವಾಗಿದ್ದರೂ ಶಿಲ್ಪದ ಲಕ್ಷಣಗಳು ಅವರು ಆತ್ಮಬಲಿದಾನಗೊಂಡಿರುವುದನ್ನು ಅಭಿವ್ಯಕ್ತಿಸುತ್ತವೆ. ತನಗೆ ಅನ್ನವಿಟ್ಟು ಸಲುಹಿದ ಒಡೆಯನ ಮರಣದ ನಂತರವೋ, ಇಲ್ಲವೇ ಅವನಿಗೆ ಒಳಿತಾಗಲೆಂದು ಬಯಸಿ ಅವರು ದೇಹವನ್ನು ತ್ಯಾಗ ಮಾಡಿರಬಹುದು.

ಸುಮಾರು ಕ್ರಿ.ಶ. ೧೨ನೇ ಶತಮಾನದ ಕಡತಿ ಗ್ರಾಮದ ಒಂದು ಸ್ಮಾರಕಶಿಲ್ಪವು ವೀರನೊಬ್ಬ ಕತ್ತಿಯಿಂದ ಇರಿದುಕೊಂಡು ಪ್ರಾಣತ್ಯಾಗ ಮಾಡಿರುವುದನ್ನು ತಿಳಿಸುತ್ತದೆ. ಈ ಶಿಲ್ಪದಲ್ಲಿ ವೀರನು ಎರಡು ಕೈಗಳಲ್ಲಿ ಹಿಡಿದ ಕತ್ತಿ ಹೃದಯದ ಭಾಗಕ್ಕೆ ತಾಗಿರುವಂತೆ ಕೆತ್ತಲಾಗಿದೆ. ಅವನ ಕಿವಿಯ ಓಲೆ, ಕೊರಳ ತಾಯತ, ಕೈ ಮತ್ತು ಕಾಲು ಕಡಗ ಹಾಗೂ ತಲೆಯಲ್ಲಿ ಕಟ್ಟಿರುವ ಮುಡಿಯನ್ನು ಶಿಲ್ಪಿ ಅರ್ಥಪೂರ್ಣವಾಗಿ ಚಿತ್ರಿಸಿದ್ದಾನೆ. ಇದೇ ಕಾಲಕ್ಕೆ ಸೇರಬಹುದಾದ ಮತ್ತೊಂದು ಆತ್ಮಬಲಿ ಸ್ಮಾರಕ ಉಚ್ಚಂಗಿದುರ್ಗದಲ್ಲಿದೆ. ಈ ಗ್ರಾಮದ ಕೋಟೆ ಪ್ರವೇಶದಲ್ಲಿ ಕಂಡುಬರುವ ಸ್ಮಾರಕವು ಜಿಲ್ಲೆಯ ಅಪರೂಪದ ಆತ್ಮಬಲಿಯ ಶಿಲ್ಪವಾಗಿದೆ. ಈ ಸ್ಮಾರಕದಲ್ಲಿ ವೀರ ಕೈಮುಗಿದುಕೊಂಡು ನಿಂತಿದ್ದಾನೆ. ಅವನ ಬಲಭಾಗದಲ್ಲಿ ವೇಳವಾಳಿಯ ಕುತ್ತಿಗೆಯನ್ನು ಕತ್ತರಿಸಲು ಒಬ್ಬ ಕತ್ತಿಯನ್ನು ಎತ್ತಿ ಹಿಡಿದು ನಿಂತಿದ್ದಾನೆ. ಅವನು ತನ್ನ ಬಲಗಾಲನ್ನು ಮಡಚಿಕೊಂಡು ತಲೆಯನ್ನು ಕತ್ತರಿಸಲು ಮುಂದಾಗಿರುವಂತೆ ಶಿಲ್ಪಿ ಸೊಗಸಾಗಿ ಚಿತ್ರಿಸಿದ್ದಾನೆ. ಇಲ್ಲಿ ವೇಳವಾಳಿಗೊಳ್ಳುವ ವ್ಯಕ್ತಿಯನ್ನು ಗೌಣಗೊಳಿಸಿ ತಲೆ ಕಡೆಯುವವನನ್ನು ಪ್ರಧಾನವಾಗಿ ಕಂಡರಿಸಿರುವುದು ವಿಶೇಷವಾಗಿದೆ. ಇದಕ್ಕೆ ನಿರ್ದಿಷ್ಟ ಕಾರಣ ತಿಳಿಯದು. ಪ್ರಾಯಶಃ ಶಿಲ್ಪದ ಅಭಾವದಿಂದ ಶಿಲ್ಪಿ ಹೀಗೆ ಕಂಡರಿಸಿರಬಹುದು. ಸುಮಾರು ೧೬ನೇ ಶತಮಾನದ ಮಾಯಕೊಂಡ ಗ್ರಾಮದ ಸ್ಮಾರಕದಲ್ಲಿ ವೀರನು ಬಲಗೈಯಲ್ಲಿ ಯಾವುದೋ ಒಂದು ವಸ್ತುವನ್ನು ಹಿಡಿದು ನಿಂತಿದ್ದಾನೆ. ಅವನ ಎಡಭಾಗದಲ್ಲಿ ಉದ್ದನೆಯ ಒಂದು ಕತ್ತಿಯನ್ನು ಚಿತ್ರಿಸಲಾಗಿದೆ. ಇಲ್ಲಿ ವೀರನು ಆಯುಧವನ್ನು ಹಿಡಿದು ತನ್ನ ದೇಹಕ್ಕೆ ಇರಿದುಕೊಳ್ಳುತ್ತಿರುವಂತೆ ಕಂಡರಿಸದಿದ್ದರೂ ಇದು ಆತ್ಮಬಲಿಗೊಂಡ ವಿಷಯವನ್ನೇ ತಿಳಿಸುತ್ತದೆ.

ಉಪನಾಯಕನಹಳ್ಳಿಯಲ್ಲಿ ಕಂಡುಬರುವ ಒಂದು ಸ್ಮಾರಕವು ಬಹಳ ಅಪರೂಪದ್ದಾಗಿದೆ. ಈವರೆಗೆ ದೊರೆತ ಶಿಲ್ಪಗಳಲ್ಲಿ ಒಡೆಯನಿಗಾಗಿ ಸೇವಕನೊಬ್ಬ ಕಿಬ್ಬಿಂಟೆ, ವೇಳಾವಳಿ, ಬೆಂಕಿಬಲಿ, ಶೂಲಬಲಿ, ಸಿಡಿತಲೆ ಬಲಿ, ಉರಿ ಉಯ್ಯಾಲೆ ಬಲಿ, ಲೆಂಕ ಮುಂತಾದ ವಿಧಾನದ ಮೂಲಕ ದೇಹತ್ಯಾಗ ಮಾಡಿರುವುದನ್ನು ನೋಡಿದ್ದೇವೆ. ಆದರೆ ಈ ಗ್ರಾಮದಲ್ಲಿ ಕಂಡುಬರುವ ಸುಮಾರು ೧೫ನೇ ಶತಮಾನದ ಶಿಲ್ಪದಲ್ಲಿ ಒಡೆಯನಿಗಾಗಿ ಸೇವಕನೊಬ್ಬ ಚಾಟಿ ಏಟಿನಿಂದ ಮಡಿದಿರುವುದು ವಿಶೇಷವಾಗಿದೆ. ಜೊತೆಗೆ ಆತನ ಪತ್ನಿಯೂ ಅವನೊಂದಿಗೆ ಸಹಗಮನಗೊಂಡಿರುವುದು ತಿಳಿಯುತ್ತದೆ. ಈ ಸ್ಮಾರಕದಲ್ಲಿ ಸತಿಪತಿಗಳಿಬ್ಬರನ್ನು ಸಮಭಂಗಿಯಲ್ಲಿ ನಿಂತಿರುವಂತೆ ಕೆತ್ತಲಾಗಿದೆ. ಶಿಲ್ಪದ ಬಲಭಾಗದಲ್ಲಿ ನಿಂತಿರುವ ವೀರನು ಎರಡು ಕೈಗಳನ್ನು ಇಳಿಬಿಟ್ಟು ಬಲಗೈಯಲ್ಲಿ ಚಾಟಿ ಹಿಡಿದಿದ್ದಾನೆ. ಅದು ಬಲಭುಜದ ಮೇಲಿಂದ ಕುತ್ತಿಗೆ ಹಿಂಭಾಗದಲ್ಲಿ ಹಾದು ಎಡಭುಜದ ಮೇಲಿಂದ ಎದೆಯ ಮೇಲೆ ಅದರ ಕೊನೆಯ ತುದಿಯು ಇಳಿಬಿದ್ದಿರುವಂತೆ ಶಿಲ್ಪಿ ಸುಂದರವಾಗಿ ಕೆತ್ತಿದ್ದಾನೆ. ಅವನ ಎಡಭಾಗದಲ್ಲಿ ಪತ್ನಿ ಎಡಗೈಯಲ್ಲಿ ಕಳಸವನ್ನು ಹಿಡಿದು ನಿಂತಿರುವಂತೆ ಕಂಡರಿಸಲಾಗಿದೆ. ಸತಿಪತಿಗಳಿಬ್ಬರು ಉಡುಪು, ಆಭರಣ, ಕೇಶವಿನ್ಯಾಸವನ್ನು ಶಿಲ್ಪಿ ಆಕರ್ಷಕವಾಗಿ ಚಿತ್ರಿಸಿದ್ದಾನೆ.[೧೨] ಹೀಗೆ ಚಾಟಿ ಏಟಿನಿಂದ ಆತ್ಮಬಲಿ ಮಾಡಿಕೊಂಡವರ ಸ್ಮಾರಕಗಳು ಈವರೆಗೆ ಎಲ್ಲೂ ದೊರೆತಿಲ್ಲವೆಂದು ಹೇಳಬಹುದು. ಗಂಗನಕಟ್ಟೆ ಗ್ರಾಮದಲ್ಲಿರುವ ಮತ್ತೊಂದು ಶಿಲ್ಪ ವಿಶೇಷವಾಗಿದೆ. ಇಲ್ಲಿ ವೀರನು ಬಲಗೈ ಕತ್ತಿ ಹಿಡಿದು ಮೇಲೆತ್ತಿ ಹಿಡಿದಿದ್ದಾನೆ. ಎಡಗೈಯಲ್ಲಿ ಬಾಕುವಿದೆ. ಬಹುಶಃ ಅವನ ಹೊಟ್ಟೆಯಿಂದ ಕರಳು ಹೊರಬಂದಂತೆ ಕೆತ್ತಲಾಗಿದೆ. ವೀರನು ಎರಡೂ ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಂಡಿರುವುದರಿಂದ ಅದು ವೇಳವಾಳಿಯಲ್ಲಿ ಮಡಿದಿರುವುದನ್ನು ಸಂಕೇತಿಸುತ್ತದೆ. ಈ ಸ್ಮಾರಕದಲ್ಲೂ ವೇಳವಾಳಿಗೊಂಡ ಪತಿಯನ್ನು ಹಿಂಬಾಲಿಸಿ ಸಹಗಮನಗೊಂಡ ಸತಿಯನ್ನು ಚಿತ್ರಿಸಲಾಗಿದೆ. ಆಕೆ ಎಡಗೈಯಲ್ಲಿ ಕನ್ನಡಿ ಹಿಡಿದು, ಬಲಗೈಯಲ್ಲಿ ಯಾವುದೋ ವಸ್ತು(ಪ್ರಾಯಶಃ ಬಾಳೆಹಣ್ಣು) ಹಿಡಿದು ನಿಂತಿರುವಂತೆ ಕಂಡರಿಸಲಾಗಿದೆ. ಯರಗಟ್ಟಿಹಳ್ಳಿಯ ಸ್ಮಾರಕವೊಂದು ಆತ್ಮಬಲಿಗೊಂಡ ವ್ಯಕ್ತಿಯನ್ನೇ ಸೂಚಿಸುತ್ತಿರಬಹುದು. ವೀರನು ತನ್ನೆರಡು ಕೈಗಳನ್ನು ಸೊಂಟದ ಮೇಲೆ ಇಟ್ಟುಕೊಂಡು ನಿಂತಿರುವಂತೆ ಶಿಲ್ಪದಲ್ಲಿ ಕಂಡರಿಸಿದೆ. ಅವನನ್ನು ಸ್ಥಳೀಯವಾಗಿ ಗುಂಡರಾಮಪ್ಪ ಎಂದು ಕರೆಯುತ್ತಾರೆ. ಪಲ್ಲಾಗಟ್ಟೆ ಮಾಸ್ತಿಗುಡಿ ಹತ್ತಿರ ಕಂಡುಬರುವ ಒಂದು ಶಿಲ್ಪದಲ್ಲಿ ಒಬ್ಬನು ಎಡಗೈಯಲ್ಲಿ ಗಿಂಡಿಯನ್ನು ಹಿಡಿದುಕೊಂಡು, ಬಲಗೈಯಲ್ಲಿ ಬಿಲ್ಲುವಿನಂಥ ಆಯುಧವನ್ನು ಹಿಡಿದು ನಿಂತಿದ್ದಾನೆ. ಅವನು ಕಿವಿಯಲ್ಲಿ ಓಲೆ, ಕೊರಳಲ್ಲಿ ಮಣಿಸರ, ಕಾಲುಗಳಲ್ಲಿ ಕಡಗಗಳನ್ನು ಧರಿಸಿ ಮುಡಿಯನ್ನು ನೆತ್ತಿಯ ಮೇಲೆ ಕಟ್ಟಿರುವಂತೆ ಕೆತ್ತಲಾಗಿದೆ. ಅವನ ಹಿಂಬದಿ ಒಬ್ಬ ಕೈಮುಗಿದುಕೊಂಡು ನಿಂತಂತೆ ಚಿಕ್ಕದಾಗಿ ಕಂಡರಿಸಲಾಗಿದೆ. ಇಲ್ಲಿ ಸೇವಕನೊಬ್ಬ ಒಡೆಯನನ್ನು ಹಿಂಬಾಲಿಸಿ ಮಡಿದಿರುವನೆಂದು ತೋರುತ್ತದೆ.

## ಆ. ಧಾರ್ಮಿಕ ಆತ್ಮಬಲಿದಾನ

ಪ್ರಾಚೀನ ಜನರು ನಂಬಿದ್ದ ಹಲವು ಮೌಲ್ಯಗಳಲ್ಲಿ ಧಾರ್ಮಿಕ ನಂಬಿಕೆಯೂ ಒಂದಾಗಿತ್ತು. ಅವರ ಜೀವನದ ಪರಮ ಗುರಿ ಮುಕ್ತಿ ಸಾಧಿಸುವುದಾಗಿತ್ತು. ಈ ಮುಕ್ತಿಗೋಸ್ಕರ ದೇವರ ಹೆಸರಿನಲ್ಲಿ ದೇಹತ್ಯಾಗ ಮಾಡಿಕೊಳ್ಳುವುದೇ ಧಾರ್ಮಿಕ ಬಲಿದಾನವಾಗಿದೆ. ದೈವಸಂಪ್ರೀತ ಧಾರ್ಮಿಕ ಕಾರ್ಯಗಳ ಆಚರಣೆಯಿಂದ ಪಡೆಯಬಹುದಾದ ಸ್ವರ್ಗವನ್ನು ದೇವರ ಪ್ರೀತ್ಯರ್ಥ ಪ್ರಾಣವನ್ನು ಉತ್ಕ್ರಮಣಗೊಳಿಸಿಕೊಳ್ಳುವುದರಿಂದಲೂ ಪಡೆಯಬಹುದೆಂಬ ಭಾವನೆ ಭಾರತೀಯರಲ್ಲಿ ಬೆಳೆದು ಈ ಪದ್ಧತಿಯ ಆಚರಣೆಗೆ ಮೂಲವೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೩೩] ಹೀಗೆ ಮಡಿಯುವುದನ್ನು ಪಾಪದಕೃತ್ಯ ಎಂದು ಭಾವಿಸದೇ, ಪುಣ್ಯದ ಕಾರ್ಯವೆಂದು ಪರಿಗಣಿಸಲಾಗಿತ್ತು. ಹೀಗಾಗಿ ಹಿಂದೂ ಮತ್ತು ಜೈನರು ಈ ಧಾರ್ಮಿಕ ಆತ್ಮಬಲಿದಾನಕ್ಕೆ ಹೆಚ್ಚು ಮಹತ್ವಕೊಟ್ಟು ಅದನ್ನು ಪರಿಪಾಲಿಸಿದರು. ವಿದ್ವಾಂಸರು ಜೈನರ ನಿಸಿದಿ ಮರಣವನ್ನು ಬಲಿದಾನವೆಂದು ಸ್ಥೂಲ ಅರ್ಥದಲ್ಲಿ ಭಾವಿಸಿದ್ದಾರೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಧಾರ್ಮಿಕ ಆತ್ಮಬಲಿದಾನ ಕುರಿತು ಉಲ್ಲೇಖಿಸುವ ಶಾಸನ ಹಾಗೂ ಸ್ಮಾರಕಶಿಲ್ಪಗಳು ಕಂಡುಬಂದಿವೆ. ಅಧ್ಯಯನದ ದೃಷ್ಟಿಯಿಂದ ಧಾರ್ಮಿಕ ಬಲಿದಾನವನ್ನು ಹಿಂದೂ ಧಾರ್ಮಿಕ ಆತ್ಮಬಲಿದಾನ ಹಾಗೂ ಜೈನ ಧಾರ್ಮಿಕ ಆತ್ಮಬಲಿದಾನವೆಂದು ವಿಂಗಡಿಸಿಕೊಂಡು ಮುಂದಿನಂತೆ ವಿವರಿಸಲಾಗಿದೆ.

### ೫.೩. ಹಿಂದೂ ಧಾರ್ಮಿಕ ಆತ್ಮಬಲಿದಾನ

ದೈವವನ್ನು ಗುರಿಯಿಟ್ಟು ನಡೆಸುವ ಆತ್ಮಾನುಸಂಧಾನದಿಂದ ಸದ್ಗತಿ ಸಾಧ್ಯವೆಂದು ಭಾವಿಸಿದ ಹಿಂದೂಗಳು, ದೇವರಿಗಾಗಿ ಕೈಗೊಳ್ಳುವ ಬಲಿದಾನದಿಂದಲೂ ಸದ್ಗತಿ ಸಾಧ್ಯವೆಂದು ನಂಬಿದ್ದು, ಧಾರ್ಮಿಕ ಸಂದರ್ಭಗಳಲ್ಲಿ ಆತ್ಮಾರ್ಪಣೆ ಮಾಡಿಕೊಳ್ಳುವ ಸಂಪ್ರದಾಯಕ್ಕೆ ದಾರಿಮಾಡಿಕೊಟ್ಟಿತು.[೧೩೪] ಈ ಮರಣ ಮುಂದೆ ಪ್ರಾಪಂಚಿಕ ತೊಂದರೆ, ಗುಣಪಡಿಸಲಾರದ ವ್ಯಾಧಿಗಳಿಂದಾಗಿ ಮರುಕ್ಷಣದಲ್ಲಿ ಮರಣ ಅನಿವಾರ್ಯವಾದವರು ಕೂಡ ದೇವರು ಹೆಸರಿನಲ್ಲಿ ಇಂತಹ ಮರಣವನ್ನು ಅನುಸರಿಸತೊಡಗಿದರು. ಭಾರತದಲ್ಲಿ ಈ ಧಾರ್ಮಿಕ ಬಲಿದಾನವು ಅತ್ಯಂತ ಪುರಾತನವಾದ ಸಂಪ್ರದಾಯವಾಗಿದೆ. ಇಂತಹ ದೇಹತ್ಯಾಗಗಳು ವಾರಣಾಸಿಯಲ್ಲೋ ಪ್ರಯಾಗದಲ್ಲೋ ನಡೆದರೆ ಅವನಿಗೆ ಶಾಶ್ವತವಾದ ಮುಕ್ತಿ ಲಭಿಸುತ್ತದೆ ಎಂದು ಹಲವು ಶಾಸ್ತ್ರಗ್ರಂಥಗಳು ಹೇಳುತ್ತವೆ.[೧೩೫] ಭಾರತದಲ್ಲಿ ನಡೆಯುತ್ತಿದ್ದ ಈ ರೀತಿಯ ದೇಹತ್ಯಾಗಗಳನ್ನು ಚೀನಿ ಪ್ರವಾಸಿಗ ಹ್ಯೂಯೆನ್‌ತ್ಸಾಂಗ್, ಅಲ್ಬೆರೂನಿ ಮುಂತಾದ ವಿದೇಶಿ ಪ್ರವಾಸಿಗರು ಉಲ್ಲೇಖಿಸಿರುವುದು ಕಂಡುಬರುತ್ತದೆ.[೧೩೬] ಬ್ರಹ್ಮಶಿವ, ನಯಸೇನ ಮತ್ತು ಶಿವಶರಣರು[೧೩೭] ಈ ಪದ್ಧತಿಯನ್ನು ತೆಗಳಿರುವುದರಿಂದ ಧಾರ್ಮಿಕ ಆತ್ಮಬಲಿದಾನ ಕರ್ನಾಟಕದಲ್ಲೂ ಪ್ರಚಲಿತವಾಗಿದ್ದದ್ದು ತಿಳಿದುಬರುತ್ತದೆ. ಈ ಧಾರ್ಮಿಕ ಆತ್ಮಬಲಿದಾನವು ಹಲವು ತೆರನಾಗಿದ್ದಿತು. ಬಲಿದಾನಗೈಯುವ ವ್ಯಕ್ತಿ, ತಾನು ನಂಬಿದ ದೈವ ಅಥವಾ ಧರ್ಮದ ಪ್ರೇರಣೆಯಿಂದ ಒಂದು ನಿರ್ದಿಷ್ಟ ಶುಭದಿನದಂದು ಅಗ್ನಿಪ್ರವೇಶ, ಜಲಪ್ರವೇಶ, ಊರ್ಧ್ವಪತನ ಅಥವಾ ಒಂದು ನಿರ್ದಿಷ್ಟ ದಿನದಿಂದ ಆಹಾರವನ್ನು ತ್ಯಜಿಸುವುದರ ಮೂಲಕ

ಮರಣವನ್ನು ತಂದುಕೊಳ್ಳುತ್ತಿದ್ದರು. ಈ ರೀತಿಯ ಮರಣವನ್ನು ಕೈಗೊಳ್ಳಲು ಹೆಚ್ಚಾಗಿ ಸೂರ್ಯಗ್ರಹಣದ ದಿನವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಕರ್ನಾಟಕದ ಶಾಸನಗಳಲ್ಲಿ ಇಂತಹ ಧಾರ್ಮಿಕ ದೇಹತ್ಯಾಗಗಳ ಹಲವು ನಿದರ್ಶನಗಳಿವೆ. ದಾವಣಗೆರೆ ಜಿಲ್ಲೆಯಲ್ಲಿ ಧಾರ್ಮಿಕ ಮರಣ ಪ್ರಸಂಗಗಳು ಅತೀ ವಿರಳವಾಗಿ ಕಂಡುಬಂದಿವೆ.

ಪ್ರಸ್ತುತ ಅಧ್ಯಯನ ಪ್ರದೇಶದ ಬೆಳಗುತ್ತಿ ಗ್ರಾಮದ ಒಂದು ಸ್ಮಾರಕವು ಅಗ್ನಿಪ್ರವೇಶ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೩೩ರ ಶಾಸನ ಮಾಘ ಬಹುಳ ಅಮಾವಾಸ್ಯೆ ಅಂದರೆ ಶಿವರಾತ್ರಿಯಂದು ಸೊರಡಿಯ ಅಗ್ರಹಾರದ ಹೊನ್ನೆಯನ ಮಗ ವೀರಯ್ಯನು ಅಗ್ನಿಪ್ರವೇಶ ಮಾಡಿ ದೇಹ ದಹಿಸಿದ್ದನ್ನು ಉಲ್ಲೇಖಿಸುತ್ತದೆ.[೧೩೮] ಆ ದಿನ ಸೂರ್ಯಗ್ರಹಣ ಇದ್ದಿರಬೇಕು. ಇದೇ ರೀತಿ ಸೂರ್ಯಗ್ರಹಣದ ದಿನದಂದು ಮಡಿದಿರಬಹುದಾದ ಒಬ್ಬನ ಸ್ಮಾರಕವೊಂದು ಅಡವಿಹಳ್ಳಿ ಗ್ರಾಮದಲ್ಲಿ ಕಂಡುಬರುತ್ತದೆ. ಮಡಿದ ವ್ಯಕ್ತಿಯೊಬ್ಬ ಎಡಗೈಯಲ್ಲಿ ಗಿಂಡಿ ಹಿಡಿದು ನಿಂತಿದ್ದಾನೆ. ಅವನ ಎಡ-ಬಲಭಾಗದಲ್ಲಿ ಎರಡು ಸರ್ಪಗಳು ಹೆಡೆ ಬಿಚ್ಚಿ ನಿಂತಿರುವಂತೆ ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರ ಅವುಗಳ ಮಧ್ಯದಲ್ಲಿ ತ್ರಿಶೂಲವನ್ನು ಕಂಡರಿಸಲಾಗಿದೆ. ದೇಹ ದಹಿಸಿಕೊಂಡ ವ್ಯಕ್ತಿ ಶಿವರಾತ್ರಿ, ಸೂರ್ಯಗ್ರಹಣದಂದೇ ಮಡಿದಿರುವನೆಂಬ ಅರ್ಥದಲ್ಲಿ ಶಿಲ್ಪಿ ಇಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಸುಮಾರು ೧೬ನೇ ಶತಮಾನದ ಯು. ಕಲ್ಲಹಳ್ಳಿಯ ಒಂದು ಸ್ಮಾರಕದಲ್ಲಿ ಒಬ್ಬನು ತನ್ನ ಬಲಗಾಲನ್ನು ಮೇಲೆತ್ತಿ ಎರಡು ಕೈಗಳನ್ನು ಮುಂಚಾಚಿ ನಿಂತಿದ್ದಾನೆ. ಅವನು ನೆತ್ತಿಯ ಮೇಲೆ ಕಟ್ಟಿರುವ ಮುಡಿಯನ್ನು ಶಿಲ್ಪಿ ಸುಂದರವಾಗಿ ಚಿತ್ರಿಸಿದ್ದಾನೆ. ಇದು ಧಾರ್ಮಿಕವಾಗಿ ಮಡಿದಿರುವುದನ್ನೇ ಸೂಚಿಸುತ್ತದೆ. ಹನಗವಾಡಿ ಗ್ರಾಮದ ಶಿಲ್ಪವೊಂದರಲ್ಲಿ ಸ್ತ್ರೀಯೊಬ್ಬಳು ತನ್ನೆರಡು ಕೈಗಳನ್ನು ಮುಗಿದುಕೊಂಡು ಪದ್ಮಾಸನದಲ್ಲಿ ಕುಳಿತಿರುವಂತೆ ಕಂಡರಿಸಲಾಗಿದೆ. ಈ ಸ್ಮಾರಕವು ಸಹ ಧಾರ್ಮಿಕವಾಗಿ ದೇಹದಹಿಸಿಕೊಂಡಿರುವುದನ್ನು ಅಭಿವ್ಯಕ್ತಿಸುತ್ತದೆ. ಇದು ಸ್ತ್ರೀಯೊಬ್ಬಳ ಆತ್ಮಬಲಿಯನ್ನು ಸೂಚಿಸುವುದರಿಂದ ಇದೊಂದು ಅಪರೂಪದ ಸ್ಮಾರಕವಾಗಿ ಕಂಡುಬರುತ್ತದೆ. ಆವರಗೊಳ ಗ್ರಾಮದ ವೀರಭದ್ರೇಶ್ವರ ದೇವಾಲಯದ ಮುಂದೆ ಕತ್ತರಿಸಿದ ಎರಡು ರುಂಡ ಶಿಲ್ಪಗಳಲ್ಲದೆ, ಈ ಕಾರ್ಯಕ್ಕೆ ಬಳಸಲಾಗುತ್ತಿದ್ದ ಗಂಡಗತ್ತರಿಯ ಅಳವಡಿಕೆಗಾಗಿ ನಿಲ್ಲಿಸಿರುವ ಎರಡು ಶಿಲಾಸ್ತಂಭಗಳಿವೆ. ಆ ರುಂಡಗಳು ವೀರಮಾಹೇಶ್ವರರ ಹೆಸರಿನಲ್ಲಿ ಆತ್ಮಬಲಿಗೊಂಡ ನಿದರ್ಶನಗಳಾಗಿವೆ. ಇದರಿಂದ ವೀರಶೈವ ಪೂರ್ವದ ಶೈವಸಮಾಜದಲ್ಲಿ ಪ್ರಾಣತ್ಯಾಗ ಮಾಡಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ಈ ಬಗ್ಗೆ ದೀರ್ಘವಾಗಿ ವಿದ್ವಾಂಸರಾದ ಎಂ.ಎಂ. ಕಲಬುರ್ಗಿಯವರು ತಮ್ಮ ಕೃತಿಯಲ್ಲಿ ಚರ್ಚಿಸಿದ್ದಾರೆ.[೧೩೯] ಹೀರೇಕೋಗಲೂರು ಕೋಟೆ ರಸ್ತೆಯಲ್ಲಿರುವ ಮತ್ತೊಂದು ಶಾಸನ ಗೌಡರ ಬೀರಯ್ಯ ಎಂಬುವನು ಐದು ಗ್ರಾಮಗಳನ್ನು ವೀರ ಮಹೇಶ್ವರರಿಗೆ ದಾನ ಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.[೧೪೦] ಮೇಲಿನ ಆಧಾರಗಳಿಂದ ಧಾರ್ಮಿಕ ಬಲಿದಾನವು ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿತೆಂದು ಸ್ಪಷ್ಟವಾಗುತ್ತದೆ.

## ೫.೪. ಜೈನ ಧಾರ್ಮಿಕ ಬಲಿದಾನ

ಜೈನ ಧರ್ಮ ವೈರಾಗ್ಯವನ್ನು ಉನ್ನತ ತತ್ವವಾಗಿ ಬೋಧಿಸಿದೆ. ಸಮಾಧಿ ಮರಣವನ್ನು ತನ್ನ ಪ್ರಧಾನ ಧ್ಯೇಯವಾಗಿ ಪ್ರತಿಪಾದಿಸಿದೆ. ಬಹುಶಃ ಹಿಂದೂ ಧರ್ಮದ ಯಾವ ಪಂಥವೂ ಸಮಾಧಿ ಮರಣವನ್ನು ಮುಖ್ಯ ವಿಷಯವಾಗಿ ಸ್ವೀಕರಿಸಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೪೧] ಜೈನ ಧರ್ಮ ಕೆಲವು ನಿರ್ಬಂಧಗಳನ್ನು ವಿಧಿಸಿ ಧಾರ್ಮಿಕ ಮರಣವನ್ನಪ್ಪಲು ಅವಕಾಶವನ್ನು ನೀಡಿದೆ. ಅನಾರೋಗ್ಯ(ವ್ಯಾಧಿ, ಮುಪ್ಪು), ಅಪಾಯ(ಪ್ರಾಣಿ ಹಿಂಸೆ, ಕ್ಷಾಮ ಹಿಂಸೆ)ಗಳೊಡನೆ, ಇನ್ನೇನು ಬದುಕಲಾರೆನೆಂದು ನಿಶ್ಚಯದ ಪ್ರಸಂಗದಲ್ಲಿ ಧಾರ್ಮಿಕ ವಿಧಿಯಿಂದ ಮರಣವನ್ನಪ್ಪಲು ಅವಕಾಶವಿದೆ.[೧೪೨] ರತ್ನಕಂಡಕ, ಶಾಸ್ತ್ರಸಾರಮುಚ್ಚಯ, ಭಗವತೀ ಆರಾಧನಾ ಮೊದಲಾದ ಗ್ರಂಥಗಳು ಈ ಬಗ್ಗೆ ವಿವರಿಸುತ್ತವೆ.[೧೪೩] ಜೈನ ಧಾರ್ಮಿಕ ಗ್ರಂಥಗಳು ನಲ್ವತ್ತೆರಡು ರೀತಿಯ ಧಾರ್ಮಿಕ ಮರಣಗಳನ್ನು ಪ್ರಸ್ತಾಪಿಸಿದರೂ[೧೪೪] ಹೆಚ್ಚಾಗಿ ಸನ್ಯಾಸನ ವಿಧಿ, ಸಮಾಧಿ ಮರಣ ಮತ್ತು ಸಲ್ಲೇಖನ ವಿಧಿಗಳನ್ನೇ ಹೆಚ್ಚು ಪಾಲಿಸಲಾಗಿದೆ. ಕರ್ನಾಟಕದಲ್ಲಿ ಸಮಾಧಿ ಮರಣವನ್ನು ಬಹುಸಂಖ್ಯೆಯ ಜೈನರು ಹಾರೈಸುತ್ತಿದ್ದ ಆದರ್ಶ ಮರಣವಾಗಿತ್ತು.[೧೪೫] ಶ್ರವಣಬೆಳಗೊಳದ ಶಾಸನಗಳ ಆಧಾರದ ಮೇಲೆ ವಿದ್ವಾಂಸರಾದ ಎಸ್. ಶೆಟ್ಟರ್ ಅವರು ಆರಾಧನಾ, ಪಂಚಪದ, ಸನ್ಯಸನ, ಸಲ್ಲೇಖನಾ, ಸಮಾಧಿ, ಪಂಡಿತ ಮರಣ ಮತ್ತು ಪಾವುಗ್ಗಮಣ ಎಂಬ ಏಳು ರೀತಿಯ ಧಾರ್ಮಿಕ ಮರಣಗಳನ್ನು ಗುರುತಿಸಿದ್ದಾರೆ.[೧೪೬]

ಈ ಧರ್ಮದ ಧಾರ್ಮಿಕ ವಿಧಿಗಳ ಅನುಸಾರವಾಗಿ ವ್ರತತೊಟ್ಟು ಮರಣ ಹೊಂದಿದ ವ್ಯಕ್ತಿಗಳಿಗೆ ಸ್ಮಾರಕವಾಗಿ ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಅವುಗಳನ್ನು 'ನಿಸಿದಿಗಲ್ಲು'ಗಳೆಂದು ಕರೆಯಲಾಗಿದೆ.[೧೪೭] ಈ ಸ್ಮಾರಕಗಳನ್ನು ನಿಸಿದಿ, ನಿಷಿದಿ, ನಿಶಿಧಿ, ನಿಸಿದ್ಧಿ, ನಿಶೀಧಿಕಾ, ನಿಷದ್ಯಿಕಾ ಮುಂತಾದ ಪದರೂಪಗಳಿಂದ ಶಾಸನಗಳು ಕರೆದಿವೆ.[೧೪೮] ಈ ಪದದ ಸರಿಯಾದ ರೂಪ, ಸರಿಯಾದ ಅರ್ಥ ಇನ್ನೂ ಚರ್ಚೆಯ ವಲಯದಲ್ಲಿ ನಿಂತಿದೆ. ಆದರೆ ಹೆಚ್ಚಿನ ಸಂಖ್ಯೆಯ ಶಾಸನಗಳಲ್ಲಿ 'ನಿಸಿದಿ' ಎಂಬ ರೂಪವನ್ನು ಬಳಸಿರುವುದು ಗಮನಾರ್ಹವಾಗಿದೆ.[೧೪೯]

ದಾವಣಗೆರೆ ಪ್ರದೇಶದ ಗುಂಡಿಚಟ್ನಿಹಳ್ಳಿಯ ಒಂದು ಶಾಸನವು 'ನಿಸುದ್ದಿ' ಎಂಬ ಪದರೂಪವನ್ನು ಉಲ್ಲೇಖಿಸಿದೆ.[೧೫೦] ಶಾಬನೂರು ಗ್ರಾಮದ ಮತ್ತೊಂದು ಶಾಸನ '(ನಿ)ಸಿಧಿಗೆ' ಎಂಬ ಪದವನ್ನು ಉಲ್ಲೇಖಿಸುತ್ತದೆ.[೧೫೧] ಒಬ್ಬರಿಗಾಗಿ ಒಂದು ಸ್ಥಳದಲ್ಲಿ ಒಂದು ಸ್ಮಾರಕ ಅಥವಾ ನಿಸಿದಿಯನ್ನು ನಿಲ್ಲಿಸುವುದು ಸಾಮಾನ್ಯವಾಗಿರುತ್ತದೆ. ಆದರೆ ಅಧ್ಯಯನ ಪ್ರದೇಶದ ಗುಂಡಿಚಟ್ನಿಹಳ್ಳಿಯ ಎರಡು ಶಾಸನಗಳು ಒಂದೇ ಮನೆತನದ ಇಬ್ಬರಿಗೆ ಒಂದೇ ನಿಸಿದಿ ಹಾಕಿಸಿರುವುದನ್ನು ಪ್ರಸ್ತಾಪಿಸುತ್ತಿವೆ. ಒಂದು ಶಾಸನ ಜಿಡ್ಡಗೌಡ ಮತ್ತು ಅವನ ಮಗ ತೈಲಗೌಡರ ಸಮಾಧಿ ಮರಣವನ್ನು ತಿಳಿಸಿದರೆ[೧೫೨] ಮತ್ತೊಂದು ಶಾಸನ ಜಿಡ್ಡಗೌಡನ ಅಕ್ಕ ಕಾಳಿಗೌಡಿಯ ಸಮಾಧಿ ಮರಣವನ್ನು ಸೂಚಿಸುತ್ತದೆ.[೧೫೩] ಈ ಎರಡು ನಿಸಿದಿ ಶಿಲ್ಪದಲ್ಲಿ ಜಿನ ಮಧ್ಯದಲ್ಲಿ ಕುಳಿತಿದ್ದಾನೆ. ಅಕ್ಕ ಪಕ್ಕ ಭಕ್ತರು ಕುಳಿತಿರುವ ದೃಶ್ಯವಿದೆ.

ಇಂಥ ಧಾರ್ಮಿಕ ಮರಣಗಳಲ್ಲಿ ಗುರುವಿನ ಅಪ್ಪಣೆ ಪಡೆದು ಶಿಷ್ಯರು ಮರಣ ವ್ರತಕೈಗೊಳ್ಳುತ್ತಿದ್ದಂತೆ ಕಂಡುಬರುತ್ತದೆ. ಅಧ್ಯಯನ ಪ್ರದೇಶದ ನಿಸಿದಿ ಸ್ಮಾರಕಗಳಲ್ಲಿ ಗುರು ಉಪದೇಶ ಮಾಡುತ್ತಿರುವಂತೆಯೂ, ಶಿಷ್ಯ ಆಲಿಸುತ್ತಿರುವಂತೆಯೂ, ಮಧ್ಯೆ ವ್ಯಾಸ ಪೀಠವಿರುವಂತೆಯೂ ಚಿತ್ರಿಸಲಾಗಿದೆ. ಸಾಸ್ವೇಹಳ್ಳಿಯಲ್ಲಿ ನಾಲ್ಕು ನಿಸಿದಿ ಶಿಲ್ಪಗಳಿವೆ. ಮೂರು ಶಿಲ್ಪಗಳನ್ನು ಎರಡು ಹಂತದಲ್ಲಿ ಚಿತ್ರಿಸಿದ್ದರೆ, ಒಂದು ಶಿಲ್ಪವನ್ನು ಒಂದೇ ಹಂತದಲ್ಲಿ ಕೆತ್ತಲಾಗಿದೆ. ಮೂರು ನಿಸಿದಿಗಳ ಮೊದಲ ದೃಶ್ಯದಲ್ಲಿ ಒಂದು ಕಡೆ ವ್ರತವನ್ನು ಬೋಧಿಸುತ್ತಿರುವ ಮುನಿ, ಮತ್ತೊಂದು ಕಡೆ ಆಲಿಸುತ್ತಿರುವ ಶಿಷ್ಯರಿದ್ದು, ಮಧ್ಯದಲ್ಲಿ ವ್ಯಾಸಪೀಠ(ಪುಸ್ತಕ ಪೀಠ)ವನ್ನು ಚಿತ್ರಿಸಲಾಗಿದೆ. ಎರಡನೆಯ ದೃಶ್ಯದಲ್ಲಿ ಮುಕ್ಕೊಡೆಯ ಕೆಳಗೆ ಜಿನ ಶಾಂತಭಾವದಿಂದ ಕುಳಿತಿರುವನು. ಎರಡು ನಿಸಿದಿಗಳಲ್ಲಿ ಚಾಮರಗಳನ್ನು ಕಂಡರಿಸಲಾಗಿದೆ. ಇನ್ನೊಂದು ಶಿಲ್ಪದಲ್ಲಿ ಮುಕ್ಕೊಡೆಯ ಕೆಳಗೆ ಜಿನ ಕುಳಿತಿದ್ದು, ಬಲಭಾಗದಲ್ಲಿ ಶಿಷ್ಯ ಕುಳಿತಿರುವ ಚಿತ್ರಣವಿದೆ. ಇಲ್ಲಿರುವ ಎರಡು ನಿಸಿದಿ ಶಾಸನಗಳು ಅಪ್ರಕಟಿತವಾಗಿವೆ. ಮಾಡಲಗೆರೆ ಗ್ರಾಮದಲ್ಲಿ ಎರಡು ನಿಸಿದಿ ಸ್ಮಾರಕಗಳು ಕಂಡುಬಂದಿವೆ. ಒಂದು ಶಿಲ್ಪದ ಮೊದಲ ಭಾಗದಲ್ಲಿ ವ್ಯಾಸಪೀಠದ ಮುಂದೆ ಭಕ್ತ ಕುಳಿತಿದ್ದರೆ, ಮೇಲ್ಭಾಗದಲ್ಲಿ ಮುಕ್ಕೊಡೆಯ ಕೆಳಗೆ ಜಿನ ಪದ್ಮಾಸನದಲ್ಲಿ ಕುಳಿತಿರುವಂತೆ ಕಂಡರಿಸಿದೆ. ಮತ್ತೊಂದು ಶಿಲ್ಪದಲ್ಲಿ ಮುಕ್ಕೊಡೆಯ ಕೆಳಗೆ ಜಿನ ನಿಂತಿದ್ದಾನೆ. ಅವನ ಎರಡು ಬದಿ ಚಾಮರಗಳಿವೆ. ಗುರುವಿನ ಕಾಲುಗಳ ಬಳಿ ಶಿಷ್ಯನಿರುವಂತೆ ಬಿಡಿಸಲಾಗಿದೆ. ಈ ನಿಸಿದಿ ಸ್ಮಾರಕಗಳಲ್ಲದೆ ಪ್ರಸ್ತುತ ಅಧ್ಯಯನ ಪ್ರದೇಶದ ಜಿನಹಳ್ಳಿ, ದಿಡಗರು, ಆರುಂಡಿ, ಗಂಜೀನಹಳ್ಳಿ, ಚಿಕ್ಕೇರಹಳ್ಳಿ ಹಾಗೂ ಉಚ್ಚಂಗಿದುರ್ಗ ಮೊದಲಾದ ಗ್ರಾಮಗಳಲ್ಲಿ ಜೈನ ತೀರ್ಥಂಕರ ವಿಗ್ರಹಗಳು ಮತ್ತು ಇತರೆ ಅವಶೇಷಗಳು ಕಂಡುಬರುತ್ತವೆ. ಉಲ್ಲೇಖಿತ ಆಧಾರಗಳಿಂದ ಜೈನ ಧರ್ಮ ಈ ಭಾಗದಲ್ಲಿ ಪ್ರಚಲಿತವಾಗಿತ್ತೆಂದು ತಿಳಿದುಬರುತ್ತದೆ.

ಧಾರ್ಮಿಕ ದೇಹತ್ಯಾಗವು ಜೈನರಲ್ಲಿದ್ದಷ್ಟು ಜೈನೇತರರಲ್ಲಿರಲಿಲ್ಲ. ಜೈನನೇತರರಲ್ಲಿ ಇಂತಹ ದೇಹತ್ಯಾಗಗಳನ್ನು ಮಾಡಿದವರ ಆಧಾರಗಳು ಎಲ್ಲೋ ಕೆಲವು ಮಾತ್ರ.[೧೫೪] ಆದರೆ ಬೌದ್ಧ ಧರ್ಮ ಈ ಸಂಪ್ರದಾಯವನ್ನು ಪ್ರಬಲವಾಗಿ ತಿರಸ್ಕರಿಸಿದೆ. ಮಾನವನು ತನಗೆ ನಿಗದಿಯಾದ ಆಯುಸ್ಸನ್ನು ಪೂರ್ಣವಾಗಿ ಬದುಕಬೇಕು. ವ್ಯಕ್ತಿ ಬದುಕಿನಲ್ಲಿ ಕಾಯಬೇಕು. ಅವಸರದಿಂದ ಆತ್ಮಹತ್ಯೆ ಮಾಡಿಕೊಂಡರೆ ಆಧ್ಯಾತ್ಮಿಕ ಪ್ರಗತಿಯಲ್ಲವೆಂದು ಹೇಳುತ್ತದೆ. ಸನ್ಯಾಸಿ, ಅರ್ಹತ್ ತನ್ನನ್ನು ತಾನು ಕೊಂದುಕೊಳ್ಳಕೂಡದೆಂದು ವಿಧಿಸುತ್ತದೆ. ಆದರೂ ಕೆಲವು ಬೌದ್ಧ ಕತೆಗಳಲ್ಲಿ ಆತ್ಮಹತ್ಯೆಯನ್ನು ಹೇಳಿರುವುದುಂಟು. ಮಹಾಯಾನದ ಹೊತ್ತಿಗೆ ಆತ್ಮಹತ್ಯೆಗೆ ಸಮ್ಮತಿ ಸಿಕ್ಕ ಹಾಗೆ ಕಾಣುತ್ತದೆ. ಭೈಷಜ್ಯರಾಜನು ದೇಹದ ಮೇಲೆ ಎಣ್ಣೆಯನ್ನು ಹಾಕಿಕೊಂಡು ಬೆಂಕಿ ಹತ್ತಿಸಿಕೊಂಡಂತಹ ಉದಾಹರಣೆಗಳಿವೆ.[೧೫೫] ಏನೇ ಇದ್ದರೂ ಬೌದ್ಧ ಧರ್ಮ ಆತ್ಮಹತ್ಯೆಯ ಕಡೆಗೆ ತನ್ನ ಬಲವನ್ನು ತೋರಿಸಿದ ಹಾಗಿಲ್ಲ. ಕರ್ನಾಟಕದ ೧೨ನೇ ಶತಮಾನದ ಶಿವಶರಣರು ಕೂಡ ತಮ್ಮ ವಚನಗಳ ಮೂಲಕ ಆತ್ಮಬಲಿದಾನವನ್ನು ವಿರೋಧಿಸಿರುವುದು ಕಂಡುಬರುತ್ತದೆ.[೧೫೬]

**ಅಡಿಟಿಪ್ಪಣಿಗಳು**

೧. ರಾಮಚಂದ್ರರಾವ್ ಸಾ.ಕೃ., ೧೯೯೪, ಸಂಪ್ರದಾಯ ಶಿಲ್ಪಕಲೆ, ಶಿಲ್ಪಕಲಾ ಪ್ರಪಂಚ, ನರಸಿಂಹನ್ ಅ.ಲ., ಮರಿಶಾಮಾಚಾರ್ ಎನ್ (ಸಂ), ಪು. ೩೧.

೨. ಕಲಬುರ್ಗಿ ಎಂ.ಎಂ., ೨೦೧೧, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು. ೨೬-೨೭.

೩. ಬಸವರಾಜ ಕಲ್ಗುಡಿ, ೧೯೮೫, ಮಹಾಸತಿ ಆಚರಣೆ: ಒಂದು ಅಧ್ಯಯನ, ಪು. ೧.

೪. ಚಿದಾನಂದಮೂರ್ತಿ ಎಂ., ೧೯೮೪, ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಪು. ೧೫.

೫. ಶೇಠ ಬಿ.ಎಸ್., ೧೯೯೧, ಕರ್ನಾಟಕದಲ್ಲಿ ಸತಿಪದ್ಧತಿ, ಪು. ೧೩.

೬. ಅದೇ, ಪು. ೧೩.

೭. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೧.

೮. ಅದೇ, ಪು. ೪.

೯. ಅದೇ, ಪು. ೬.

೧೦. Altekar A.S., 1962, The Position of Women in Hindu Civilization, P. 116.

೧೧. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೬.

೧೨. Altekar A.S., 1962, ಪೂರ್ವೋಕ್ತ, ಪು. ೧೧೬.

೧೩. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೧೪.

೧೪. ಅದೇ, ಪು. ೧೪.

೧೫. ಅದೇ, ಪು. ೧೨.

೧೬. Dobious, 1879, Manners and Customs of Pepole of India, P. 174.

೧೭. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೯.

೧೮. ಅದೇ, ಪು. ೮-೯.

೧೯. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೨೮.

೨೦. Altekar A.S., 1962, ಪೂರ್ವೋಕ್ತ, ಪು. ೧೧೮.

೨೧. ಚೆನ್ನಕ್ಕ ಎಲಿಗಾರ, ೧೯೯೦, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪು. ೨೩೪.

೨೨. ಅದೇ, ಪು. ೨೩೫.

೨೩. ಅದೇ, ಪು. ೨೩೫.

೨೪. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೧೭–೧೯.

೨೫. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೬.

೨೬. ಚೆನ್ನಕ್ಕ ಎಲಿಗಾರ, ೧೯೯೦, ಪೂರ್ವೋಕ್ತ, ಪು. ೨೩೬.

೨೭. ಚಿದಾನಂದಮೂರ್ತಿ ಎಂ., ೧೯೮೫, ಪೂರ್ವೋಕ್ತ, ಪು. ೩೯.

೨೮. ಎ.ಕ.ಸಂ.೮, ಸೊರಬ, ಶಾ.ಸಂ. ೫೨೩, ಕವಡಿ.

೨೯. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೨೯.

೩೦. ಎ.ಕ.ಸಂ.೮, ಸೊರಬ, ಶಾ.ಸಂ., ೪೫೭, ಬೆನ್ನೂರು.

೩೧. ಚೆನ್ನಕ್ಕ ಎಲಿಗಾರ, ೧೯೭೭, ಮಾಸ್ತಿಕಲ್ಲು, ಪು. ೧೮.

೩೨. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೩೩.

೩೩. Altekar A.S., 1962, P. 131.

೩೪. ನಾಗೇಗೌಡ ಎಚ್.ಎಲ್., ೨೦೦೬, ಪ್ರವಾಸಿ ಕಂಡ ಇಂಡಿಯಾ ಸಂ–೨, ಪು. ೨೩೩, ೩೫೬, ೪೨೦.

೩೫. ನಾಗೇಗೌಡ ಎಚ್.ಎಲ್., ೨೦೦೭, ಪ್ರವಾಸಿ ಕಂಡ ಇಂಡಿಯಾ, ಸಂ–೪, ಪು. ೧೫೬.

೩೬. ಪರಮಶಿವಯ್ಯ ಜಿ.ಶಂ.(ಸಂ), ೧೯೭೯, ಜನಪದ ಖಂಡ ಕಾವ್ಯಗಳು, ಪು. ೯–೨೦, ೨೧–೨೭.

೩೭. ಚಿದಾನಂದಮೂರ್ತಿ ಎಂ., ೧೯೮೪, ಪೂರ್ವೋಕ್ತ, ಪು. ೪೧–೪೨.

೩೮. ಅದೇ, ಪು. ೪೩.

೩೯. ಕಲಬುರ್ಗಿ ಎಂ.ಎಂ., ೨೦೦೬, ಸಂಸ್ಕೃತಿ–ವಿಕೃತಿ, ಪು. ೨೨೧–೨೨೮.

೪೦. Saletore B.A., 1934, Social and Political life in Vijayanagar Empire, Vol-II, P.94.

೪೧. Altekar A.S., 1962, ಪೂರ್ವೋಕ್ತ, ಪು. ೧೧೫–೧೧೬

೪೨. ತಿಪ್ಪೇರುದ್ರಸ್ವಾಮಿ ಎಚ್., ೨೦೧೫, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೨೪೭.

೪೩. ಚಿದಾನಂದಮೂರ್ತಿ ಎಂ., ೨೦೧೫, ಕ.ಶಾ.ಸಾ.ಅ. ಪು. ೩೪೬.

೪೪. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೨೭.

೪೫. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೩.

೪೬. ಚೆನ್ನಕ್ಕ ಎಲಿಗಾರ, ೧೯೯೦, ಪೂರ್ವೋಕ್ತ, ಪು. ೨೩೩.

೪೭. ನಾಗೇಗೌಡ ಎಚ್.ಎಲ್., ೨೦೦೬, ಪೂರ್ವೋಕ್ತ, ಪು. ೬೮.

೪೮. ಅದೇ ಪು. ೨೭೩.

೪೯. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೪೭.

೫೦. ಅದೇ, ಪು. ೩೪೮.

೫೧. ಎ.ಕ.ಸಂ.೮, ಸಾಗರ, ಶಾ.ಸಂ. ೪೭, ಹಲಸೂರು.

೫೨. ಮಂಜುನಾಥ ಎಂ.ಜಿ., ೨೦೧೧, ಮಾಸ್ತಿಕಲ್ಲು ವೀರಗಲ್ಲು ಮತ್ತು ನಿಸಿದಿ ಶಾಸನಗಳು, ಪು. ೪.

೫೩. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೭, ವಾಸನ.

೫೪. ಅದೇ, ಶಾ.ಸಂ. ೧೧೬, ವಾಸನ

೫೫. ಎಂ.ಎ.ಆರ್., ೧೯೪೨, ಪು. ೨೦೩-೨೦೪.

೫೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೯೫, ಚಿಕ್ಕಹಾಲಿವಾಣ.

೫೭. ಅದೇ, ಶಾ.ಸಂ. ೯೩, ಚಿಕ್ಕಹಾಲಿವಾಣ.

೫೮. ಅದೇ, ಶಾ.ಸಂ. ೯೨, ಚಿಕ್ಕಹಾಲಿವಾಣ.

೫೯. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೬೨, ಹರಿಹರ.

೬೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೨೪, ಸೊರಟೂರು.

೬೧. ಪರಮಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನಶಿಲ್ಪ, ಪು. ೧೫೫.

೬೨. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೯೦.

೬೩. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೪೯.

೬೪. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೯೦.

೬೫. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೪೯.

೬೬. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೯೯.

೬೭. ಸಿದ್ದಪ್ಪ ಜಿ., ೨೦೧೦, ಜಗಳೂರು ತಾಲ್ಲೂಕು: ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೦-೧೧.

೬೮. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೪೯, ೧೭೭-೧೭೮.

೬೯. ಯೋಗಾನಂದ ಎಸ್.ಕೆ., ೨೦೧೮, ಚನ್ನಗಿರಿ ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೧೨.

೭೦. ರಮೇಶ ಹೆಚ್., ೨೦೧೭, ಹರಿಹರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು. ೧೮೬.

೭೧. ಶೇಷಶಾಸ್ತ್ರಿ ಆರ್., ೨೦೧೭, ಕರ್ನಾಟಕದ ವೀರಗಲ್ಲುಗಳು, ಪು. ೨೭೩-೨೭೪

೭೨. ಮಂಜಣ್ಣ ಪಿ.ಬಿ., ೨೦೧೦, ಕಣಕುಪ್ಪೆ ಪರಿಸರ: ಚಾರಿತ್ರಿಕ ಅಧ್ಯಯನ (ಅಪ್ರಕಟಿತ ಎಂ.ಫಿಲ್. ನಿಬಂಧ), ಪು. ೬೪.

೭೩. ಸೇವ್ಯಾನಾಯ್ಕ ಆರ್., ೨೦೧೫, ಹರಪನಹಳ್ಳಿ ಪರಿಸರದ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳ ಅಧ್ಯಯನ (ಅಪ್ರಕಟಿತ ಎಂ.ಫಿಲ್. ನಿಬಂಧ), ಪು. ೭೪-೭೫.

೭೪. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೧೭೭.

೭೫. ಅದೇ, ಪು. ೧೭೬-೧೭೭.

೭೬. ಅದೇ ಪು. ೧೭೭.

೭೭. ಹೊನ್ನೂರಸ್ವಾಮಿ ಹೆಚ್., ೨೦೧೭, ಚಿಕ್ಕನಹಳ್ಳಿ ಗ್ರಾಮದ ಅಪ್ರಕಟಿತ ವೀರಮಾಸ್ತಿ ಶಾಸನ, ಇ.ದ.ಸಂ-೩೨, ಪು. ೧೧೩-೧೧೪.

೭೮. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೫೦.

೭೯. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೧೯.

೮೦. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೫೦.

೮೧. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೧೯.

೮೨. ಮಂಜನಾಯ್ಕ ಆರ್., ೨೦೧೫, ಚನ್ನಗಿರಿ ತಾಲೂಕಿನ ಪುರಾತತ್ವ ಅವಶೇಷಗಳು, ಪು. ೫೭.

೮೩. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೧೪೧.

೮೪. ಯೋಗಾನಂದ ಎಸ್.ಕೆ., ೨೦೧೮, ಪೂರ್ವೋಕ್ತ, ಪು. ೧೧೬.

೮೫. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೭೭.

೮೬. ಅದೇ, ಪು. ೧೭೬.

೮೭. ರಮೇಶ ಹೆಚ್., ೨೦೧೭, ಪೂರ್ವೋಕ್ತ, ಪು. ೧೮೬.

೮೮. ನೆಲ್ಕುದ್ರಿ ಸದಾನಂದಪ್ಪ, ೨೦೧೪, ನಂದಿಬೇವೂರು ಗ್ರಾಮದ ಮಾಸ್ತಿಕಲ್ಲುಗಳು, ಇ.ದ.ಸಂ. ೨೯, ಪು. ೬೪-೬೫.

೮೯. ಶೇಠೆ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೬೫.

೯೦. ಚಿದಾನಂದಮೂರ್ತಿ ಎಂ., ೧೯೮೪, ಪೂರ್ವೋಕ್ತ, ಪು. ೩೩.

೯೧. ಪರಮಶಿವಮೂರ್ತಿ ಡಿ.ವಿ., ೧೯೯೯, ಪೂರ್ವೋಕ್ತ, ಪು. ೧೪೫.

೯೨. ಚಿದಾನಂದಮೂರ್ತಿ ಎಂ., ೧೯೮೪, ಪೂರ್ವೋಕ್ತ, ಪು. ೩೪.

೯೩. ಮಂಜನಾಯ್ಕ ಆರ್., ೨೦೧೫, ಪೂರ್ವೋಕ್ತ, ಪು. ೫೮-೫೯.

೯೪. ಅದೇ, ಪು. ೫೯.

೯೫. ನೆಲ್ಕುದ್ರಿ ಸದಾನಂದಪ್ಪ, ೨೦೧೪, ಪೂರ್ವೋಕ್ತ, ಪು. ೬೫.

೯೬. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೪೫.

೯೭. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೫೧.

೯೮. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, (ಅಡಿಟಿಪ್ಪಣಿಯಿಂದ), ಪು. ೪೨.

೯೯. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೫೨.

೧೦೦. ಶೇಠೆ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೩೦೪.

೧೦೧. ಸಿದ್ದಪ್ಪ ಜಿ., ೨೦೧೦, ಪೂರ್ವೋಕ್ತ, ಪು. ೪೧೩.

೧೦೨. ಶೇಠೆ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೨೮೩, ೨೮೭.

೧೦೩. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೬, ಉಪ್ಪನಾಯಕನಹಳ್ಳಿಯ ಅಪೂರ್ವ ಮಾಸ್ತಿಶಿಲ್ಪಗಳು, ಇ.ದ.ಸಂ. ೨೧, ಪು. ೧೭೦-೧೭೩.

೧೦೪. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೧೪೯.

೧೦೫. ಅದೇ, ಪು. ೧೮೦.

೧೦೬. ಚಿದಾನಂದಮೂರ್ತಿ ಎಂ., ೧೯೮೪, ಪೂರ್ವೋಕ್ತ, ಪು. ೩೪.

೧೦೭. ಅದೇ ಪು. ೩೪.

೧೦೮. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೧೭೭.

೧೦೯. ಅದೇ, ಪು. ೧೮೬.

೧೧೦. ಚೆನ್ನಕ್ಕ ಎಲಿಗಾರ, ೧೯೯೦, ಪೂರ್ವೋಕ್ತ, ಪು. ೨೫೪.

೧೧೧. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೭೦.

೧೧೨. ಮಂಜುನಾಥ ಸಿ.ಯು., ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೪೪೭.

೧೧೩. ಕಲಬುರ್ಗಿ ಎಂ.ಎಂ., ೨೦೧೦, ಮಾರ್ಗ ಸಂಪುಟ ಎರಡು, ಪು. ೫೪.

೧೧೪. ಅದೇ, ಪು. ೫೪.

೧೧೫. ಅದೇ, ಪು. ೫೪-೫೫.

೧೧೬. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೪೫-೩೪೬.

೧೧೭. ಚೆನ್ನಕ್ಕ ಎಲಿಗಾರ, ೧೯೯೦, ಪೂರ್ವೋಕ್ತ, ಪು. ೨೫೫.

೧೧೮. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೩೬.

೧೧೯. Altekar A.S., ಪೂರ್ವೋಕ್ತ, ಪು. ೧೨೭ಸ, ೮

೧೨೦. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೫೧-೫೭.

೧೨೧. ಅದೇ, ಪು. ೫೭.

೧೨೨. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೯, ನಂದಿಗುಡಿ.

೧೨೩. ಕನ್ನಡಪ್ರಭ ದಿನಪತ್ರಿಕೆ, ೦೩.೦೭.೨೦೧೮, ಸಚಿತ್ರ ಕರ್ನಾಟಕ, ಪು. ೪.

೧೨೪. ಕಲಬುರ್ಗಿ ಎಂ.ಎಂ., ೨೦೦೬, ಸಂಸ್ಕೃತಿ-ವಿಕೃತಿ, ಪು. ೨೧೨.

೧೨೫. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೩೪-೩೩೫.

೧೨೬. ಅದೇ, ಪು. ೩೪೫.

೧೨೭. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೫೪.

೧೨೮. ಕಲಬುರ್ಗಿ ಎಂ.ಎಂ., ೨೦೦೬, ಪೂರ್ವೋಕ್ತ, ಪು. ೨೧೨.

೧೨೯. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೪೭, ಬೆಳಗುತ್ತಿ.

೧೩೦. ಎ.ಕ.ಸಂ.೧೧, ಮೊಳಕಾಲ್ಮೂರು, ಶಾ.ಸಂ. ೧೨, ಸಿದ್ಧಾಪುರ.

೧೩೧. ಅದೇ, ಹಿರಿಯೂರು, ಶಾ.ಸಂ. ೧, ಹಿರಿಯೂರು.

೧೩೨. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೬, ಪೂರ್ವೋಕ್ತ, ಪು. ೧೭೦.

೧೩೩. ಚನ್ನಕ್ಕ ಎಲಿಗಾರ, ೧೯೯೯, ಪೂರ್ವೋಕ್ತ, ಪು. ೨೧೩.

೧೩೪. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೧೯.

೧೩೫. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೩೧.

೧೩೬. ಅದೇ, ಪು. ೩೩೩-೩೩೪.

೧೩೭. ಕಲಬುರ್ಗಿ ಎಂ.ಎಂ., ೨೦೦೬, ಪೂರ್ವೋಕ್ತ, ಪು. ೨೧೫-೨೧೭.

೧೩೮. ಎಂ.ಎ.ಆರ್., ೧೯೪೨, ಪು. ೨೦೦.

೧೩೯. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೨೨-೨೪.

೧೪೦. ಎಂ.ಎ.ಆರ್., ೧೯೩೫, ಪು. ೧೧೩-೧೧೪.

೧೪೧. ಮಂಜುನಾಥ ಸಿ.ಯು., ೨೦೧೨, ಪೂರ್ವೋಕ್ತ, ಪು. ೪೪೩.

೧೪೨. ಕಲಬುರ್ಗಿ ಎಂ.ಎಂ., ೨೦೧೧, ಪೂರ್ವೋಕ್ತ, ಪು. ೪.

೧೪೩. ಅದೇ, ಪು. ೪.

೧೪೪. ಷ. ಶೆಟ್ಟರ್, ೨೦೧೫, ಸಾವನ್ನು ಅರಸಿ-II, ಪು. ೮-೧೮.

೧೪೫. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೧೦೭.

೧೪೬. ಷ. ಶೆಟ್ಟರ್, ೨೦೧೫, ಸಾವನ್ನು ಸ್ವಾಗತಿಸಿ-I, ಪು. ೯೨.

೧೪೭. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೧೦೭.

೧೪೮. ಷ. ಶೆಟ್ಟರ್, ಸಾವನ್ನು ಸ್ವಾಗತಿಸಿ-I, ಪು. ೧೧೦-೧೧೧.

೧೪೯. ಮಂಜುನಾಥ ಎಂ.ಜಿ., ೨೦೦೯, ನಿಸಿದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೨.

೧೫೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೮೦, ಗುಂಡೀಚಟ್ನಿಹಳ್ಳಿ.

೧೫೧. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೯೧, ಶಾಬನೂರು.

೧೫೨. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೭೯, ಗುಂಡೀಚಟ್ನಿಹಳ್ಳಿ.

೧೫೩. ಅದೇ, ಶಾ.ಸಂ. ೮೦, ಗುಂಡೀಚಟ್ನಿಹಳ್ಳಿ.

೧೫೪. ಚಿದಾನಂದಮೂರ್ತಿ ಎಂ., ೨೦೧೫, ಪೂರ್ವೋಕ್ತ, ಪು. ೩೩೪.

೧೫೫. James Hastings(Ed), Encyclopaedia of Religion and Ethies, P. 25.

೧೫೬. ಕಲಬುರ್ಗಿ ಎಂ.ಎಂ., ೨೦೦೬, ಪೂರ್ವೋಕ್ತ, ಪು. ೨೨೧-೨೨೮.

# ಅಧ್ಯಾಯ: ಆರು

# ಸಮಾಜೋ-ಆರ್ಥಿಕ ಸ್ಥಿತಿಗತಿ

## (ಸ್ಮಾರಕ ಶಿಲ್ಪಗಳ ಅನುಲಕ್ಷಿಸಿ)

**೬.೧. ವೀರರ ಸಾಮಾಜಿಕ ಹಿನ್ನೆಲೆ**

೬.೧.೧. ವೃತ್ತಿ ಸಮುದಾಯದ ವೀರರು

೬.೧.೨. ಸೆಟ್ಟಿ ಸಮುದಾಯದ ವೀರರು

೬.೧.೩. ನಾಯಕ ಅಥವಾ ನಾಯ್ಕ ಸಮುದಾಯದ ವೀರರು

೬.೧.೪. ಇತರೆ ಸಮುದಾಯಗಳ ವೀರರು

೬.೧.೫. ಗಾವುಂಡರು

೬.೧.೬. ಅಧಿಕಾರಿ ವರ್ಗ

**೬.೨. ವೀರರ ಆರ್ಥಿಕ ಹಿನ್ನೆಲೆ**

# ಅಧ್ಯಾಯ: ಆರು

# ಸಮಾಜೋ–ಆರ್ಥಿಕ ಸ್ಥಿತಿಗತಿ

## (ಸ್ಮಾರಕ ಶಿಲ್ಪಗಳ ಅನುಲಕ್ಷಿಸಿ)

ಯುದ್ಧ ಅಥವಾ ಇನ್ನಿತರೆ ಹೋರಾಟಗಳಲ್ಲಿ ವೀರರು ಪ್ರಧಾನವಾಗಿ ಕಂಡುಬರುತ್ತಾರೆ. ಯುದ್ಧವೊಂದಕ್ಕೆ ಬೇಕಾದ ಉಳಿದೆಲ್ಲ ಅಂಶಗಳಿಗಿಂತ ವೀರರು ಅಗತ್ಯವಾದ ಸಂಪನ್ಮೂಲ ವರ್ಗವಾಗಿದೆ. ಈ ವರ್ಗದ ಸಾಮಾಜಿಕ, ಆರ್ಥಿಕ ಹಿನ್ನೆಲೆಯನ್ನರಿಯಲು ಪ್ರಸ್ತುತ ಅಧ್ಯಯನ ಪ್ರದೇಶದ ಶಾಸನೋಕ್ತ ಸ್ಮಾರಕಶಿಲ್ಪಗಳು ಸೂಕ್ತ ಆಧಾರಗಳಾಗಿವೆ. ಅವುಗಳನ್ನು ಅಧ್ಯಯಿನಿಸಿದಾಗ ಹಲವು ವೃತ್ತಿ, ಜಾತಿಗಳ ಹಿನ್ನೆಲೆಯುಳ್ಳ ವೀರರು ವಿವಿಧ ಹೋರಾಟಗಳಲ್ಲಿ ಮಡಿದಿರುವುದು ಕಂಡುಬರುತ್ತದೆ. ಅಲ್ಲದೆ ಮಡಿದ ನಂತರ ಅವರ ಕುಟುಂಬಗಳು ನೀಡಿದ ದಾನದತ್ತಿಗಳು ವೀರರ ಆರ್ಥಿಕ ಹಿನ್ನೆಲೆಯನ್ನು ಅರಿಯಲು ಸಹಕಾರಿಯಾಗಿವೆ. ಇಂತಹ ಹಲವು ವಿಚಾರಗಳನ್ನು ಅಧ್ಯಯನ ಪ್ರದೇಶದ ಶಾಸನೋಕ್ತ ಸ್ಮಾರಕಶಿಲ್ಪಗಳಿಂದ ಈ ಕೆಳಕಂಡಂತೆ ವರ್ಗೀಕರಿಸಿಕೊಂಡು ವಿವರಿಸಲಾಗಿದೆ.

### ೬.೧. ವೀರರ ಸಾಮಾಜಿಕ ಹಿನ್ನೆಲೆ

ಭಾರತದಲ್ಲಿ ಇರುವ ಜಾತಿಪದ್ಧತಿಯಂಥ ಕ್ಲಿಷ್ಟಗಳು ಪ್ರಾಯಶಃ ಪ್ರಪಂಚದ ಬೇರೆಲ್ಲೂ ಕಾಣಲಾಗುವುದಿಲ್ಲವೆಂದೇ ಅಭಿಪ್ರಾಯಿಸಬಹುದು. ವಿಸ್ತಾರವಾದ ವ್ಯವಸ್ಥೆಯನ್ನು ಹೊಂದಿರುವ ಭಾರತೀಯ ಸಮಾಜದಲ್ಲಿ ವಿವಿಧ ಸ್ತರ ವರ್ಗಗಳ ಅಥವಾ ಸಾಮಾಜಿಕ ವ್ಯತ್ಯಯಗಳು ಅಥವಾ ದರ್ಜೆಗಳು ಪ್ರಪಂಚದ ಬೇರೆ ಬೇರೆ ಭಾಗದಂತೆ ಕಂಡುಬರದಿದ್ದರೂ ಭಾರತೀಯರಲ್ಲಿ ಕಾಣುವ ಜಾತಿಪದ್ಧತಿಯಂಥ ಅನಿಷ್ಟವು ಬಹುಶಃ ಎಲ್ಲೂ ಕಂಡುಬರಲಾರದು.[೧] ಅತಿ ಪ್ರಾಚೀನವೆಂದು ಹೇಳುವ ವೇದಗಳ ಕಾಲದಿಂದಲೇ ವರ್ಣಾಶ್ರಮ ಪದ್ಧತಿ ಬೆಳೆದುಬಂದಿದೆ. ಅದನ್ನು ಋಗ್ವೇದದ ಹತ್ತನೇ ಮಂಡಲವಾದ 'ಪುರುಷಸೂಕ್ತ'ದಲ್ಲಿ ಕಾಣಬಹುದು.[೨] ವರ್ಣ ಪದ್ಧತಿಗಿಂತ ಪೂರ್ವದಲ್ಲಿ ಸಮಾಜವನ್ನು ವೃತ್ತಿಗೆ ಅನುಗುಣವಾಗಿ ವರ್ಗೀಕರಿಸಿದಂತೆ ತೋರುತ್ತದೆ. ಕಾಲಾಂತರದಲ್ಲಿ ಅಂದರೆ ಅಥರ್ವಣ ವೇದದಲ್ಲೇ ಜಾತಿ ರೂಪದಲ್ಲಿ ಪರಿವರ್ತನೆಗೊಂಡು ಜಟಿಲವಾಗಿದೆ. ಪ್ರಾಚೀನ ಸಮಾಜದಲ್ಲಿ ವಿವಿಧ ವೃತ್ತಿಗಳಿಗೆ ಮತ್ತು ವರ್ಗಗಳಿಗೆ ಸೇರಿದ ಜನರಿದ್ದರು. ಪುರೋಹಿತ ಹಾಗೂ ಯುದ್ಧದಲ್ಲಿ ತೊಡಗಿದ ವರ್ಗಗಳು ವಂಶ ಪಾರಂಪರ್ಯವಾದವಾಗಿರಲಿಲ್ಲ. ಯೋಧರಲ್ಲಿ ಎಲ್ಲ ವರ್ಗದ ಜನರೂ ಇರುತ್ತಿದ್ದರೆಂದು ತಿಳಿಯುತ್ತದೆ.[೩]

ಪ್ರಸ್ತುತ ಅಧ್ಯಯನ ಪ್ರದೇಶದ ಭೌಗೋಳಿಕ ವ್ಯಾಪ್ತಿಯಲ್ಲಿ ಕಂಡುಬರುವ ಕ್ರಿ.ಶ. ೯ನೇ ಶತಮಾನದಿಂದ ಕ್ರಿ.ಶ. ೧೪ನೇ ಶತಮಾನದವರೆಗಿನ ಶಾಸನ ಸ್ಮಾರಕಶಿಲ್ಪಗಳನ್ನು ಗಮನಿಸಿದರೆ, ಸೈನಿಕ ಅಥವಾ ವೀರ ವೃತ್ತಿಯು ಸಮಾಜದ ಯಾವುದೇ ಒಂದು ವರ್ಣ ಅಥವಾ ಒಂದು ಜಾತಿಗೆ ಸೀಮಿತವಾಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಈ ಸಂದರ್ಭದಲ್ಲಿ 'ವರ್ಣಮಾದರಿ ಸಮಾಜ'ವು ಸೈದ್ಧಾಂತಿಕವಾಗಿತ್ತೇ ಹೊರತು ವಾಸ್ತವವಾಗಿರಲಿಲ್ಲ ಎಂಬುದು ಗೋಚರವಾಗುತ್ತದೆ. ಆದರೆ ಸಮಕಾಲೀನ ಕಾವ್ಯಗಳಲ್ಲಿ ವೀರವೃತ್ತಿಯು ಕ್ಷತ್ರಿಯರಿಗೆ ಮಾತ್ರ ಸೂಕ್ತವೆಂದು ಹೇಳಿವೆ. 'ಈಯಲಿಜೆಯಲ್ ಶರಣ್ಬುಗೆ ಕಾಯಲ್ ಕ್ಷತ್ರಿಯರೆ ಬಲ್ಲರ ಬ್ರಹ್ಮಣ್ಯಂ' ಎಂಬ ರನ್ನನ ಮಾತು ಇದಕ್ಕೆ ಉದಾಹರಣೆಯಾಗಿದೆ.[೪] ಈ ಕಾಲದಲ್ಲಿ ಆಕ್ರಮಣ ಮತ್ತು ಅಪಹರಣ ಪ್ರಸಂಗಗಳು ಸಾಮಾನ್ಯವಾಗಿದ್ದವು. ಗಂಡಸರೆಲ್ಲರೂ ತುರ್ತು ಬಿದ್ದಾಗ ಆಯುಧ ಹಿಡಿಯಬೇಕೆಂಬ ಮನೋಧರ್ಮವನ್ನು ಅಂದಿನ ಸಮಾಜ ರೂಪಿಸಿತ್ತು. ಇದರಿಂದ ಸಮಾಜದ ಎಲ್ಲ ವರ್ಗದವರು ಹೋರಾಟದಲ್ಲಿ ಭಾಗವಹಿಸುವುದು ಅನಿವಾರ್ಯವಾಗಿತ್ತೆಂದು ತೋರುತ್ತದೆ.

**೬.೧.೧. ವೃತ್ತಿ ಸಮುದಾಯದ ವೀರರು**

ಪ್ರಸ್ತುತ ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ವೃತ್ತಿ ಸಮುದಾಯದ ವೀರರಿಗೆ ಸಂಬಂಧಿಸಿದ ಹದಿಮೂರು ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ಅವುಗಳಲ್ಲಿ ಐದು ತುರುಗೋಳ್ ಮತ್ತು ಊರಳಿವುಗಳಂತಹ ಅನಿವಾರ್ಯ ಪ್ರಸಂಗಗಳಲ್ಲಿ ಹೋರಾಡಿದ ವೀರರಿಗೆ ಸಂಬಂಧಿಸಿದವುಗಳಾಗಿವೆ. ಇನ್ನುಳಿದ ಎಂಟು ಸ್ಮಾರಕಶಿಲ್ಪಗಳು ಯುದ್ಧದಂತಹ ಇತರೆ ಸಂದರ್ಭದಲ್ಲಿ ಮಡಿದ ವೀರರಿಗೆ ಸಂಬಂಧಿಸಿವೆ ಎಂಬುದು ಗಮನಾರ್ಹ ಸಂಗತಿ.

**ಅ. ಬಡಿಗರು**

ಬಡಗಿ ಸಮುದಾಯ ಕುಶಲಕಲೆಗಳಲ್ಲಿ ನಿಷ್ಣಾವಂತರಾಗಿದ್ದು ಕೃಷಿ, ಮನೆ ಹಾಗೂ ದೇವಾಲಯಗಳಿಗೆ ಬೇಕಾದ ಮರಗೆಲಸವನ್ನು ಮಾಡುತ್ತಿದ್ದರು. ಈ ಸಮುದಾಯದ ಕುರಿತ ಉಲ್ಲೇಖಗಳು ದಾವಣಗೆರೆ ಪ್ರದೇಶದ ಶಾಸನಗಳಲ್ಲಿ ಕಂಡುಬರುವುದನ್ನು ಗಮನಿಸಬಹುದು. ವೃತ್ತಿಯ ಜೊತೆಗೆ ಹೋರಾಟದಂತಹ ಕೆಲಸದಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಕಾಶೀಪುರದ ಒಂದು ಸ್ಮಾರಕವು ಬಡಿಗೆ ಮಕೋಜ ಎಂಬುವನು ತುರುಗಾಳಗದಲ್ಲಿ ಮಡಿದನೆಂದು ಉಲ್ಲೇಖಿಸುತ್ತದೆ.[೫] ಮತ್ತೊಂದು ಸ್ಮಾರಕಶಿಲ್ಪವು ಬಡಗಮಟ್ಟ ಪುಣೋಜಣನು ಕಾಳಗವೊಂದರಲ್ಲಿ ಮಡಿದಿರುವುದನ್ನು ತಿಳಿಸುತ್ತದೆ.[೬] ಈ ಉಲ್ಲೇಖಗಳು ಬಡಿಗೆ ವೃತ್ತಿ ಸಮುದಾಯ ತನ್ನ ವೃತ್ತಿಯಲ್ಲಿ ಮಾತ್ರ ತೊಡಗಿರದೇ ಹೋರಾಟದಂತಹ ಕಾರ್ಯಗಳಲ್ಲಿಯೂ ಕೂಡ ಭಾಗವಹಿಸಿದಂತೆ ಕಂಡುಬರುವುದು. ಈ ಪ್ರದೇಶದಲ್ಲಿ ವಾಸವಾಗಿದ್ದ ಬಡಿಗರು ಸಾಹಸಿಗಳು ಆಗಿದ್ದರು ಎಂಬುದನ್ನು ತಿಳಿಯಬಹುದು

**ಆ. ಕುರುಬರು**

ಕುರುಬರ ಮೂಲ ವೃತ್ತಿ ಕುರಿಗಳನ್ನು ಸಾಕುವುದು. ಆಹಾರ ಮತ್ತು ಆದಾಯಕ್ಕಾಗಿ ಅವುಗಳನ್ನು ಸಾಕುತ್ತಿದ್ದರು. ಈ ಸಮುದಾಯಕ್ಕೆ ಸೇರಿದ ವೀರರನ್ನು ಪ್ರಸ್ತುತ ಅಧ್ಯಯನ ಪ್ರದೇಶದ ಸ್ಮಾರಕಶಿಲ್ಪಗಳು ಉಲ್ಲೇಖಿಸುತ್ತವೆ. ದೇವರಬೆಳಕೆರೆಯ ಒಂದು ಸ್ಮಾರಕಶಿಲ್ಪವು ಕುರುಬರ ಚಂದಗವುಡನ ಮಗ ಸೋಮಗವುಡ ಎಂಬುವನು ತುರುಗಳ ರಕ್ಷಣೆಗಾಗಿ ಮಡಿಯುತ್ತಾನೆ.[೭] ಹದಡಿ ಗ್ರಾಮದ ಇನ್ನೊಂದು ಸ್ಮಾರಕಶಿಲ್ಪವು ಕುರುಬರ ಎರಕಗೌಡನು ಹೋರಾಟವೊಂದರಲ್ಲಿ ಮಡಿದಿರುವುದನ್ನು ತಿಳಿಸುತ್ತದೆ.[೮] ಈ ಉಲ್ಲೇಖಗಳ ಹಿನ್ನೆಲೆಯಲ್ಲಿ ಗ್ರಹಿಸುವುದಾದರೆ ವೃತ್ತಿ ಆಧಾರಿತ ಕುರುಬರು ಯುದ್ಧದಂತಹ ಹೋರಾಟ ಕಾರ್ಯದಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ.

**ಇ. ಅಗಸ**

ಸಮಾಜದಲ್ಲಿ ಈ ಸಮುದಾಯವು ಅಗಸ, ಮಡಿವಾಳ, ದೋಬಿ ಎಂಬ ಹೆಸರುಗಳಿಂದ ಗುರುತಿಸಿಕೊಂಡಿದೆ. ಇವರ ಪಾರಂಪರಿಕ ವೃತ್ತಿ ಬಟ್ಟೆಗಳನ್ನು ತೊಳೆಯುವುದು. ದಾವಣಗೆರೆ ಪ್ರದೇಶದ ಕೆಲವು ಶಾಸನಗಳು ಇವರ ಬಗ್ಗೆ ಉಲ್ಲೇಖಿಸುತ್ತವೆ. ಮುಖ್ಯವಾಗಿ ಯುದ್ಧ ಪ್ರಸಂಗಗಳಲ್ಲಿಯೂ ಹೋರಾಡಿ ಈ ಸಮುದಾಯ ಗುರುತಿಸಿಕೊಂಡಿದೆ. ಬಿಳಿಚೋಡಿನ ಸ್ಮಾರಕವೊಂದು 'ಮಡಿವಳಕೇತ' ಎಂಬುವ ವೀರನೊಬ್ಬ ಹೋರಾಡಿ ಮಡಿದನೆಂದು ಉಲ್ಲೇಖಿಸುತ್ತದೆ.[೯] ಕ್ರಿ.ಶ. ೧೦೧೦ರ ಒಂದು ಸ್ಮಾರಕಶಿಲ್ಪವು ಅಸಗ(ಅಗಸ) ಕಾಡಚನ ಮಗ ಕಾಡವಾಸನೆಂಬುವನು ಬಲತ್ಕಾರದಿಂದ ಕೊಂಡೊಯ್ಯುತ್ತಿದ್ದ ಕಿತ್ತೂರಿನ ತುರುಗಳನ್ನು ಬಿಡಿಸಿಕೊಂಡು ಬರಲು ಹೋಗಿ ಮಡಿಯುತ್ತಾನೆ.[೧೦] ಮೇಲಿನ ಉಲ್ಲೇಖಗಳಿಂದ ಈ ಸಮುದಾಯ ವೀರ ವೃತ್ತಿಯಂತ ಕಾರ್ಯದಲ್ಲಿ ತೊಡಗಿದ್ದರೆಂದು ತಿಳಿದುಬರುತ್ತದೆ.

**ಈ. ಅಕ್ಕಸಾಲಿಗ(ಆಚಾರಿ, ಶಿಲ್ಪಿ)**

ಅಕ್ಕಸಾಲಿಗ ವೃತ್ತಿಯವರು ಪ್ರಾಚೀನ ಕಾಲದಿಂದಲೂ ಪ್ರಮುಖರಾಗಿದ್ದಾರೆ. ಚಿನ್ನ, ಬೆಳ್ಳಿ, ನಾಣ್ಯ ಇತ್ಯಾದಿ ಆಭರಣಗಳ ತಯಾರಿಕೆ ಈ ಸಮುದಾಯದ ಮುಖ್ಯ ಕರ್ತವ್ಯವವಾಗಿತ್ತು. ಜೊತೆಗೆ ಹೋರಾಟಗಳಲ್ಲಿಯೂ ಇವರು ಸೇವೆ ಮಾಡಿದ್ದನ್ನು ಪ್ರಸ್ತುತ ಅಧ್ಯಯನ ಪ್ರದೇಶದ ಸ್ಮಾರಕಶಿಲ್ಪಗಳಲ್ಲಿ ಕಾಣುತ್ತೇವೆ. ಹೊಯ್ಸಳ ವೀರಬಲ್ಲಾಳನ ಕಾಲದಲ್ಲಿ ಬೀಬೋಜ ಎಂಬುವನು ಊರದಾಳಿಯಲ್ಲಿ ಮಡಿಯುತ್ತಾನೆ.[೧೧] ಬೆಳಗುತ್ತಿಯ ಸಿಂದ ವಂಶದ ಈಶ್ವರ ದೇವನ ಕಾಲದಲ್ಲಿ ಅಕ್ಕಸಾಲಿಗ ಕಾಮೋಜನು[೧೨] ಸಿಂದರಸನ ಪರವಾಗಿ ಹೋರಾಡಿ ವೀರತನಕ್ಕೆ ಹೆಸರಾಗುತ್ತಾನೆ.

ಮೇಲಿನ ಸಮುದಾಯಗಳ ವೀರರಲ್ಲದೆ ಜೇಡರ ಸೋಮಯ್ಯನ ಮಗ ಅಪ್ಪುಗ[೧೩], ಚಿಪ್ಪಿಗ ಪದ್ಮನ ಮಗ ಚಿಕ್ಕ(ದರ್ಜಿ)[೧೪], ಬಣಜಿಗ ಸಿಂಗಯ್ಯನ ತಮ್ಮನಾದ ಹಂಪಸೆಟ್ಟಿ[೧೫], ಸೂಳೆಕಾಳಿಯ ಮಕ್ಕಳಾದ ಹಡವಳ ಬೆನವ, ಚಂಡಮಯ, ಕರಿಯ, ಬಾಳ[೧೬] ಮೊದಲಾದ ವೃತ್ತಿಕಾರ ಸಮುದಾಯಗಳಿಗೆ ಸೇರಿದ ವೀರರು ವಿವಿಧ ಹೋರಾಟಗಳಲ್ಲಿ ಮಡಿದಿರುವುದನ್ನು ಅಧ್ಯಯನ ಪ್ರದೇಶದ ಸ್ಮಾರಕಶಿಲ್ಪಗಳು ಉಲ್ಲೇಖಿಸುತ್ತವೆ. ಇದರಿಂದ ವೀರವೃತ್ತಿಯು ಅನುವಂಶಿಕ ಅನುಸರಣೆಯಲ್ಲಿ ಬದಲಾವಣೆಯಾಗಿರುವುದನ್ನು ಗಮನಿಸಬಹುದಾಗಿದೆ.

### ೬.೧.೨. ಸೆಟ್ಟಿ(ಬಣಜಿಗ) ಸಮುದಾಯದ ವೀರರು

ವ್ಯಾಪಾರ ವೃತ್ತಿಯನ್ನು ಜೀವನೋಪಾಯದ ಸಾಧನವನ್ನಾಗಿಸಿಕೊಂಡವರು ಬಣಜಿಗ ಅಥವಾ ಸೆಟ್ಟಿ ಸಮುದಾಯದವರು. ಇವರು ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡೋ ಅಥವಾ ತಲೆಯ ಮೇಲೆ ಹೊತ್ತುಕೊಂಡೋ ಹೋಗಿ ಪಟ್ಟಣಗಳಲ್ಲಿ ಸಂತೆ ವ್ಯಾಪಾರ ಮಾಡುತ್ತಿದ್ದರು.[೧೭] ಈ ಸಮುದಾಯದವರು ವೃತ್ತಿಯ ಜೊತೆಗೆ ಪಟ್ಟಣ ಸ್ವಾಮಿಯಾಗಿ ಮತ್ತು ಗಾವುಂಡರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ಕೆಲವರು ವೀರವೃತ್ತಿಯನ್ನು ಅನುಸರಿಸಿಕೊಂಡಿರುವುದು ಕಂಡುಬರುತ್ತದೆ. 'ಸೆಟ್ಟಿ' ಎಂಬ ಪ್ರತ್ಯೆಯ ಹೊಂದಿದ ಹೆಸರುಳ್ಳ ವೀರರು ಐದು ಸ್ಮಾರಕಶಿಲ್ಪಗಳು ಅಧ್ಯಯನ ಪ್ರದೇಶದಲ್ಲಿ ಕಂಡುಬರುತ್ತವೆ.

ಬೆಳಗುತ್ತಿಯ[೧೮] ಸ್ಮಾರಕವೊಂದು ಮಲ್ಲಶೆಟ್ಟಿಯ ಮಗ ಕಾಳೆಯನು ತುರುಗಾಳಗದಲ್ಲಿ ಹೋರಾಡಿ ಮಡಿದಿರುವುದನ್ನು ಉಲ್ಲೇಖಿಸುತ್ತದೆ. ಸಾಸುವೆಹಳ್ಳಿಯ[೧೯] ಒಂದು ಸ್ಮಾರಕವು ಶ್ರೀಮತ್ ರಾಜಸೆಟ್ಟಿಯ ಮಗ ದುಗ್ಗಣ್ಣನು ತಮ್ಮನ್ನು ತಡೆದ ಕಳ್ಳರೊಂದಿಗೆ ಹೋರಾಡಿ ಮಡಿದನೆಂದು ತಿಳಿಸುತ್ತದೆ. ಭೂಮಾದಸೆಟ್ಟಿಯ ಮಗ ನಾದಿಯಣ್ಣ[೨೦], ಕನವಸೆಟ್ಟಿಯ ಮಗ ಕೊಂಡನಂಬಿ[೨೧] ಹಾಗೂ ಕನವಸೆಟ್ಟಿ ಜಕ್ಕಯನ ಮಗ ಸಾತಯ[೨೨] ಇತರೆ ಸಂದರ್ಭಗಳಲ್ಲಿ ಕಾದಾಡಿ ಮಡಿದಿದ್ದಾರೆ. ಈ ಸಮುದಾಯದ ಮುಖ್ಯ ವೃತ್ತಿ ವ್ಯಾಪಾರವಾದರೂ ಆ ಕಾಲದ ದಾಳಿಯ ಸಂದರ್ಭಗಳು ಅವರನ್ನು ಹೋರಾಟಕ್ಕೆ ಕರೆತಂದಿರಬಹುದು.

### ೬.೧.೩. ನಾಯಕ ಅಥವಾ ನಾಯ್ಕ ಸಮುದಾಯದ ವೀರರು

ಈ ಸಮುದಾಯದವರು ಕೃಷಿ ಮತ್ತು ವೀರವೃತ್ತಿಯನ್ನು ಅನುಸರಿಸಿದ್ದಾರೆ. ಮಧ್ಯಯುಗೀನ ವಿಜಯನಗರ ಕಾಲಾವಧಿಯಲ್ಲೇ ಇವರು 'ನಾಯಂಕರ ಪದ್ಧತಿ' ಎನ್ನುವ ವಿಶಿಷ್ಟ ಮಾದರಿಯ ಸೈನ್ಯಾಡಳಿತದಲ್ಲಿ ಸೇವೆ ಸಲ್ಲಿಸಿದ್ದು ಕಂಡುಬರುತ್ತದೆ.[೨೩] ವಿಜಯನಗರ ಪತನಾನಂತರ ಪಾಳೆಯಗಾರರಾಗಿ ಸ್ವತಂತ್ರ ಆಳ್ವಿಕೆ ಮಾಡಿದ ಸಮುದಾಯವಾಗಿದೆ. ಇಂದಿಗೂ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬಹುಸಂಖ್ಯಾತ ಸಮುದಾಯವಾಗಿದೆ. ವೀರ ವೃತ್ತಿ ಹಿನ್ನೆಲೆಯುಳ್ಳ ಕೆಲವರ ಮನೆಗಳಲ್ಲಿ ಅವರ ಪೂರ್ವಜರ ಕತ್ತಿ–ಗುರಾಣಿಗಳನ್ನು ಇಂದಿಗೂ ಪೂಜಿಸಲಾಗುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದ ಸ್ಮಾರಕಶಿಲ್ಪಗಳು ಈ ಸಮುದಾಯಕ್ಕೂ ಮತ್ತು ವೀರವೃತ್ತಿಗೂ ಇದ್ದ ಸಂಬಂಧವನ್ನು ಸಮರ್ಥಿಸುತ್ತವೆ. ಹದಿನೇಳು ಸ್ಮಾರಕಶಿಲ್ಪ ಶಾಸನಗಳು ಈ ಸಮುದಾಯದ ವೀರರ ಬಗ್ಗೆ ಉಲ್ಲೇಖಿಸುತ್ತವೆ.

ಹಿರಿಯಬೊಂಮನ ಮಗ ನಾಗಯನಾಯ್ಕ[೨೪], ಮಾರೆಯನಾಯ್ಕ[೨೫], ಗಟ್ಟೆಯನಾಯಕ[೨೬], ಬೀರಬೋವನ ಮಗ ಬೊಂಮಯನಾಯಕ[೨೭] ಎಂಬ ವೀರರು ತುರುಗೋಳ್‌ನಂತಹ ಅನಿವಾರ್ಯ ಸಂದರ್ಭಗಳಲ್ಲಿ ಹೋರಾಡಿ ಮಡಿದಿದ್ದಾರೆ. ಬಿಲ್ಲಾಳಂಮೆಯನಾಯ್ಕ[೨೮] ಎಂಬುವನು ತನ್ನ ತಾಯಿಯ ರಕ್ಷಣೆಗಾಗಿ ಹೋರಾಡಿ ಮಡಿದಿರುವುದು ಕಂಡುಬರುತ್ತದೆ. ಕೊಂಮೆನಾಯ್ಕ[೨೯], ಮೈಲಿಯನಾಯಕ[೩೦], ಕಲ್ಲೆಯನಾಯಕ[೩೧], ಮಲ್ಲಯನಾಯಕ[೩೨], ಬೊಂಮನಾಯಕ[೩೩], ಸಂಗಿಯನಾಯ್ಕ[೩೪], ಪೊಮಣನಾಯಕ[೩೫], ಭೋಯಿನಾಯ್ಕನ ಮಗ ಪುರುಷೋತ್ತಮ[೩೬], ಲೂಯಿನಾಯಕ[೩೭], ಅಂಮೆಯನಾಯಕರ ಮಗ ಮಾಯಿನಾಯಕ[೩೮], ಹೈಮೈನಾಯಕನ ಮಗ ಮೈಯದೇವ[೩೯] ಮೊದಲಾದ ವೀರರು ಯುದ್ಧದಂಥ ಇತರೆ ಸಂದರ್ಭದಲ್ಲಿ ಹೋರಾಡಿ ಮಡಿದಿರುತ್ತಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ನಾಯಕ ಸಮುದಾಯ ಸೈನ್ಯ ಅಥವಾ ವೀರವೃತ್ತಿಯಲ್ಲಿ ಹೆಚ್ಚು ತೊಡಗಿಕೊಂಡಿದ್ದರೆಂದು ತೋರುತ್ತದೆ. ಹೀಗೆ ಗುರುತಿಸಿಕೊಂಡಿದ್ದ ಈ ಸಮುದಾಯವು ಮುಂದೆ ಚಿತ್ರದುರ್ಗ, ಹರಪನಹಳ್ಳಿ, ಸಂತೆಬೆನ್ನೂರು, ಕಣಕುಪ್ಪೆ, ಬಿಳಿಚೋಡು, ಉಚ್ಚಂಗಿದುರ್ಗದ ಪಾಳೆಯಗಾರರ ಸೈನ್ಯದಲ್ಲಿ ಇನ್ನೂ ಹೆಚ್ಚಿನ ಸ್ಥಾನಮಾನಗಳನ್ನು ಪಡೆದಿದೆ.

**೬.೧.೪. ಇತರೆ ಸಮುದಾಯಗಳ ವೀರರು**

ಮೇಲೆ ವಿವರಿಸಿದ ಸಮುದಾಯಗಳ ವೀರರಲ್ಲದೆ ಇನ್ನು ಹಲವು ಜಾತಿಗೆ ಸೇರಿದ ವೀರರನ್ನು ಅಧ್ಯಯನ ಪ್ರದೇಶದ ಸ್ಮಾರಕಶಿಲ್ಪ ಶಾಸನಗಳು ಉಲ್ಲೇಖಿಸುತ್ತವೆ. ಅವುಗಳು ಆ ವೀರರ ಸಾಮಾಜಿಕ ಹಿನ್ನೆಲೆಯ ಮೇಲೆ ಬೆಳಕು ಚೆಲ್ಲುತ್ತವೆ. ಈ ಪ್ರದೇಶದ ಮೂವತ್ತು ಸ್ಮಾರಕಶಿಲ್ಪಗಳು ಇತರ ಜಾತಿಗೆ ಸೇರಿದ ವೀರರನ್ನು ಪ್ರಸ್ತಾಪಿಸುತ್ತಿವೆ. ನಾಗಿಲ ಮುದ್ದಯ್ಯನ ಮಗ ಕೇತಣ್ಣ[೪೦], ನಾಗಿಲ ಮಾಳಯ್ಯ[೪೧]. ಮುತ್ತಲ ದಾಸಯ್ಯನ ಮಗ ಚ್ಚೇಲಯ ಹಾಗೂ ಮತ್ತಲ ಮಲ್ಲಯನ ಮಗ ಕೇತೆಯ[೪೨], ಚಿಣ್ಣೆಯ ಸಾಹಣಿ[೪೩] ಎಂಬ ವೀರರು ತುರುಗಳ ರಕ್ಷಣೆಗಾಗಿ ಹೋರಾಡಿ ಮಡಿದಿದ್ದಾರೆ. ಸಂಕಯ್ಯನ ತಮ್ಮ ಬೊಮ್ಮಿಯಣ[೪೪] ಮತ್ತು ಪಡಿಗನೊಂಬಾ[೪೫] ವೀರರು ಊರು(ಊರಟಿವು) ರಕ್ಷಣೆಗೆ ಹೋರಾಡಿ ಮಡಿದಿರುವುದು ಕಂಡುಬರುತ್ತದೆ. ಮಸಣ್ಣಯ್ಯನ ತಮ್ಮ ಬೊಪ್ಪಣ[೪೬] ವೇಳವಾಳಿಗೊಂಡು ಮಡಿದಿದ್ದರೆ, ಅಲ್ಲಿಗ[೪೭] ಎಂಬುವನು ಕಿಜ್ಗೆಂಟೆಯಾಗಿ ಮಡಿದಿದ್ದಾನೆ. ಉಳಿದ ಸ್ಮಾರಕಶಿಲ್ಪಗಳಲ್ಲಿ ಉಲ್ಲೇಖಗೊಳ್ಳುವ ಗೋಪರಸ[೪೮], ಶ್ರೀವೀರಚವುಡರಸು[೪೯], ಕ್ಷಯದೇವ[೫೦], ಮಲೆಗ[೫೧], ರಟ್ಟಪಳ್ಳಿ ಪೊಲಗ[೫೨], ಚೇಲಯ್ಯ[೫೩], ಬಿಲ್ಲೇಯ ತಂತ್ರಪಾಳ[೫೪], ಕೇತ[೫೫], ಸೋವಿದೇವನ ತಮ್ಮ ಬಮ್ಮ[೫೬], ಕಾಳೆಯನ ತಮ್ಮ ಲಂಕೈಚ[೫೭], ಗಂಗೆಯ ಸಾಹಣಿ ಅಳಿಯ ಏಚ[೫೮], ಗೋಳಿಗೊಡದುಗ್ಗ[೫೯], ಕಾರಬೋವಚನ ಮಗ ಮಾರ[೬೦], ತರಲಬಯಿಚ[೬೧], ಕೂಚರಸ[೬೨], ಭಾಚರ್ಸಭೀಮಕ್ರಿದಾಂತ[೬೩], ಬಸವದೇವ[೬೪], ಚಟ್ಟರಸ[೬೫], ಸೆಜಿಯ ಮಲ್ಲಯ್ಯ[೬೬], ಪೊಂಮಯ್ಯ[೬೭] ಹಾಗೂ ಮುದುದರ ದೇವಯ್ಯನ ಮಗ ಮಾಳಯ್ಯ[೬೮] ಮುಂತಾದವರು ಹಲವು ಪ್ರಕರಣಗಳಲ್ಲಿ ಹೋರಾಡಿರುವುದು ಕಂಡುಬರುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದ ಸ್ಮಾರಕಶಿಲ್ಪಗಳಲ್ಲಿ 'ಬ್ರಾಹ್ಮಣ' ಜಾತಿಗೆ ಸೇರಿದ ವೀರರ ಉಲ್ಲೇಖಗಳಿಲ್ಲ. ಆದರೆ ಈ ಪ್ರದೇಶದ ಹಲವು ಶಾಸನಗಳು ಇವರು ವಾಸವಿದ್ದರೆಂದು ದೃಢಪಡಿಸುತ್ತವೆ. ಅಲ್ಲದೆ ಇತರೆ ಸಾರ್ವತ್ರಿಕ ಕಾರ್ಯಗಳನ್ನು ಸಹ ಮಾಡುತ್ತಿದ್ದರು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ.[೬೯] ಆದರೂ ಅಗ್ರಹಾರಗಳತಂಹ ರಕ್ಷಣೆಯ ಸಂದರ್ಭದಲ್ಲಿಯೂ ಬ್ರಾಹ್ಮಣ ವೀರರು ಹೋರಾಡಿದ ನಿದರ್ಶನಗಳಿಲ್ಲ. ಬೆಳಗುತ್ತಿ[೭೦], ಹನಗವಾಡಿ[೭೧] ಮತ್ತು ವಾಸನ[೭೨] ಗ್ರಾಮಗಳ ಸ್ಮಾರಕಶಿಲ್ಪಗಳಲ್ಲಿ ವೀರನಿಗಾಗಿ ನೆಟ್ಟ ಕಲ್ಲನ್ನು ಅಳುಸಿದವರು ವಾರಣಾಸಿಯಲಿ ಕವಿಲೆಯಂ ಬ್ರಾಹ್ಮಣರನ್ನು ಸ್ವಹಸ್ತದಿಂದ ಕೊಂದ ಮಹಾಪಾಪಕ್ಕೆ ಗುರಿಯಾಗುತ್ತಿರಿ ಎಂಬ ಉಲ್ಲೇಖಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಬ್ರಾಹ್ಮಣ ಸಮುದಾಯ ಆ ಕಾಲದಲ್ಲಿ ಶ್ರೇಷ್ಠ ವರ್ಗವೆನಿಸಿ ಹೋರಾಟದಂತಹ ಕಾರ್ಯಗಳಿಂದ ದೂರವೇ ಉಳಿದಿತ್ತೆಂದು ತೋರುತ್ತದೆ. ಧೈರ್ಯ, ಸಾಹಸ, ಶೌರ್ಯಕ್ಕೆ ಹೆಸರಾಗಿದ್ದ ಕ್ಷತ್ರಿಯರ ಕುರಿತು ಸಹ ನಿರ್ದಿಷ್ಟವಾದ ಉಲ್ಲೇಖಗಳು ದಾವಣಗೆರೆ ಪ್ರದೇಶದ ಸ್ಮಾರಕಶಿಲ್ಪಗಳಲ್ಲಿ ಕಂಡುಬರುವುದಿಲ್ಲ. ಆದರೂ ಕಾಸಿಕಜ್ಜ ಎಂಬ ಪ್ರಾಂತ್ಯಪಾಲಕನ ಅಪ್ಪಣೆಯಂತೆ ನಾಗವರ್ಮ ಮತ್ತು ಅಜವಮ್ಮ ಎಂಬ ವೀರರು ಹೋರಾಟದಲ್ಲಿ ಮಡಿದರೆಂಬುದನ್ನು ಶಾಸನವೊಂದು ತಿಳಿಸುತ್ತದೆ.[೭೩] ಕ್ಷತ್ರಿಯರು ವೀರ ವೃತ್ತಿಯಲ್ಲಿ ತೊಡಗಿದ್ದರೆಂಬುದಕ್ಕೆ ಇದೊಂದೇ ಆಧಾರವಾಗಿದೆ. ಅಧ್ಯಯನ ಪ್ರದೇಶದ ಎಲ್ಲ ಸ್ಮಾರಕಶಿಲ್ಪ ಶಾಸನಗಳನ್ನು ಅವಲೋಕಿಸಿದರೆ ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಗಗಳು ಈ ಪ್ರದೇಶದಲ್ಲಿ ನಡೆದ ಹೋರಾಟಗಳಲ್ಲಿ ಅತೀ ವಿರಳವಾಗಿ ಭಾಗಿಯಾಗಿದ್ದರೆಂಬ ಅಂಶವು ಇಲ್ಲಿ ಸ್ಪಷ್ಟವಾಗುತ್ತದೆ.

### ೬.೧.೫. ಗಾವುಂಡರು

'ಗಾವುಂಡ' ಎಂಬುದು ಗ್ರಾಮ ಮುಖಂಡನ ಹುದ್ದೆಯಾಗಿದೆ. ಗ್ರಾಮ ಅಥವಾ ಊರಿನ ರಕ್ಷಣೆಯು ಗ್ರಾಮದ ಮುಖಂಡನಾದ ಗಾವುಂಡನ ಮುಖ್ಯ ಕಾರ್ಯವಾಗಿದ್ದುದರಿಂದ ತುರುಗಾಳಗ, ಊರಟಿವಿನಂತಹ ಘಟನೆಗಳಲ್ಲಿ ಗಾವುಂಡರು ಹೋರಾಡಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದ ಆರು ಸ್ಮಾರಕಶಿಲ್ಪ ಶಾಸನಗಳು ಗಾವುಂಡರನ್ನು ಕುರಿತು ಉಲ್ಲೇಖಿಸುತ್ತವೆ. ಸೋಮಗಾವುಣ್ಡ[೭೪], ನಾಳ್ಗಾವುಂಡನ ತಮ್ಮ ಬೆಟ್ಟುಗ[೭೫], ಗವುಣ್ಡಯ ಮಗ ಮುಪ್ಪಣ[೭೬] ಮತ್ತು ಸೋವಗಾವುಂಡನ ಬೆಸಮಗಬಟರಿಜ[೭೭] ಎಂಬ ವೀರರು ತುರುಗೋಳ್‌ನಂತಹ ಅನಿವಾರ್ಯ ಸಂದರ್ಭದಲ್ಲಿ ಮಡಿದಿದ್ದಾರೆ. ಒಮ್ಮೆ ಗಾವುಣ್ಡ[೭೮] ಚೆಣ್ಣಬೆಡಬತ್ತಚ ಗಾವುಣ್ಡ[೭೯] ಮೊದಲಾದವರು ತೀರಾ ಅಗತ್ಯವಿದ್ದಾಗ ಯುದ್ಧಗಳಲ್ಲಿ ಭಾಗವಹಿಸಿದ್ದಾರೆ. ಹೋರಾಡಿ ಮಡಿದ ವೀರರಿಗೆ ಸ್ಮಾರಕ ನಿರ್ಮಿಸುವ ಮತ್ತು ದಾನ ನೀಡುವ ಕಾರ್ಯದಲ್ಲಿಯೂ ಗಾವುಂಡರು ಭಾಗವಹಿಸಿರುವುದು ಕಂಡುಬರುತ್ತದೆ.[೮೦]

**ಗವುಡ ಅಥವಾ ಗೌಡ ಸಮುದಾಯದವರು**

ಗಾವುಂಡರಲ್ಲದೆ ಗೌಡ ಮತ್ತು ಗವುಡ ಎಂಬ ಪ್ರತ್ಯಯವನ್ನು ತಮ್ಮ ಹೆಸರಿನೊಂದಿಗೆ ಹೊಂದಿದ ವೀರರ ಹೆಸರುಗಳು ಸ್ಮಾರಕಶಿಲ್ಪಗಳಲ್ಲಿ ಬರುತ್ತವೆ. 'ಗೌಡ' ಎಂಬುದು ಸ್ಥಳೀಯ ಅಧಿಕಾರ ಸ್ಥಾನ ಸೂಚಿಸುವ ಪದವಾಗಿದ್ದು, 'ಗಾವುಂಡ' ಎಂಬ ಪದದಿಂದ ಬಂದಿದೆ ಎನ್ನಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ಏಳು ಸ್ಮಾರಕಶಿಲ್ಪ ಶಾಸನಗಳು ಈ ಸಮುದಾಯದ ವೀರರನ್ನು ಪ್ರಸ್ತಾಪಿಸುತ್ತಿವೆ. ಬಿದಿಯಮಗವುಡ[೮೧], ಸಂಕಗವುಡ ಮತ್ತು ಬೀರಗವುಡರು[೮೨] ತುರುಗೋಳ್‌ನಂತಹ ಹೋರಾಟದಲ್ಲಿ ಮಡಿದಿದ್ದರೆ, ಮಾದಿಗಡವು[೮೩], ಸಂಕಗವುಡ[೮೪], ದಾಸಗವುಡ[೮೫], ಬೊಂಮಿಯಗವಡ[೮೬], ನುಂಕಗವುಡ[೮೭] ಮೊದಲಾದವರು ಇತರೆ ಯುದ್ಧಗಳಲ್ಲಿ ಹೋರಾಡಿ ಮಡಿದಿದ್ದಾರೆ. ಇದರಿಂದ ಕೃಷಿ ಪ್ರಧಾನವಾದ ಈ ಸಮುದಾಯ ವೀರವೃತ್ತಿಯಲ್ಲಿಯೂ ಭಾಗಿಯಾಗಿರುವುದು ಕಂಡುಬರುತ್ತದೆ. ಈ 'ಗೌಡ' ಎಂಬ ಪ್ರತ್ಯಯವನ್ನು ಇತರೆ ಜಾತಿಯವರು ತಮ್ಮ ಹೆಸರಿನೊಂದಿಗೆ ಹೊಂದಿರುವುದು ಕಂಡುಬರುತ್ತದೆ. ಕುರುಬರ ಚಂದಗವುಡ[೮೮] ಮತ್ತು ಕುರುಬ ಎರಕಗೌಡರನ್ನು ಇಲ್ಲಿ ಉಲ್ಲೇಖಿಸಬಹುದು.

**೬.೧.೬. ಅಧಿಕಾರಿ ವರ್ಗ**

'ನಾಯಕ' ಎಂಬ ಪ್ರತ್ಯಯವನ್ನು ತಮ್ಮ ಹೆಸರಿನೊಂದಿಗೆ ಹೊಂದಿದ ವೀರರ ಉಲ್ಲೇಖಗಳು ಅಧ್ಯಯನ ಪ್ರದೇಶದ ಶಾಸನಗಳಲ್ಲಿ ಕಂಡುಬಂದಿವೆ. 'ನಾಯಕ' ಎಂದರೆ ಮುಂದಾಳು, ಮುಖಂಡ ಎಂಬ ಅರ್ಥಗಳಿದ್ದರೂ ಇದು ಸೈನ್ಯದಲ್ಲಿನ ಒಂದು ಹುದ್ದೆ ಅಥವಾ ಅಧಿಕಾರದ ಸ್ಥಾನವಾಗಿದೆ. ನಾಯಕ ಎಂಬುದು ಜಾತಿ ಸೂಚಕವಲ್ಲ ಅದನ್ನು ಎಲ್ಲ ಜಾತಿಯವರು ಹೊಂದಿರುತ್ತಿದ್ದರೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ದಾವಣಗೆರೆ ಪ್ರದೇಶದ ನಾಲ್ಕು ಸ್ಮಾರಕಶಿಲ್ಪ ಶಾಸನಗಳು ಈ ಬಗ್ಗೆ ಮಾಹಿತಿ ನೀಡುತ್ತವೆ. ಸೆಟ್ಟವೊನಾಯಕನ ಅಳಿಯ ಮೂಕಣ[೯೦], ಸೋಮಣ್ಣ ದಂಡನಾಯಕ[೯೧], ಸೆಟಸೋಮಯ್ಯನ ಮಗ ಬೊಂಮೆಯನಾಯಕ[೯೨], ಚಟ್ಟಿ(ಸೆಟ್ಟಿ) ನಾಯಕ[೯೩] ಎಂಬ ವೀರರನ್ನು ಸ್ಮಾರಕಶಿಲ್ಪಗಳು ಉಲ್ಲೇಖಿಸುತ್ತವೆ. ಈ ವೀರರು ತುರುಗಳ ರಕ್ಷಣೆ ಮತ್ತು ಇತರೆ ಸಂದರ್ಭಗಳಲ್ಲಿ ಹೋರಾಡಿ ಮಡಿದಿರುವುದು ಕಂಡುಬರುತ್ತದೆ.

**೬.೨. ವೀರರ ಆರ್ಥಿಕ ಹಿನ್ನೆಲೆ**

ಪ್ರಾಚೀನ ಕಾಲದಲ್ಲಿ ನಡೆದ ಹಠಾತ್ತನೆಯ ದಾಳಿ ಮತ್ತು ಪೂರ್ವ ನಿರ್ಧರಿತ ಯುದ್ಧಗಳಲ್ಲಿ ಹಲವು ವೀರರು ಹೋರಾಡಿ ಮಡಿದಿದ್ದಾರೆ. ಅಂತಹ ವೀರರಿಗೆ ಅಂದಿನ ಸಮಾಜ ವಿಶೇಷ ಮನ್ನಣೆ ನೀಡಿದೆ. ಸ್ಮಾರಕವನ್ನು ನಿರ್ಮಿಸುವುದು, ದಾನ ನೀಡುವುದು, ಆರಾಧಿಸುವುದು ಸಾಮಾಜಿಕವಾಗಿ ಆಚರಣೆಯಲ್ಲಿದ್ದವು. ದಾನದ ರೂಪದಲ್ಲಿ ವಿಶೇಷ ಕೊಡುಗೆಯನ್ನು ನೀಡಿ ಕೆಲವು ವೀರರನ್ನು ಗೌರವಿಸಲಾಗುತ್ತಿತ್ತು. ಸ್ಮಾರಕವನ್ನು ಸ್ಥಾಪಿಸುವಲ್ಲಿ ವೀರನ ಕುಟುಂಬ ಸಂಬಂಧಿಕರು ಮತ್ತು ಆಡಳಿತಾಧಿಕಾರಿಗಳು ಮುಖ್ಯ ಪಾತ್ರವಹಿಸುತ್ತಿದ್ದರು. ಈ ಬಗ್ಗೆ ಹಿಂದಿನ ಅಧ್ಯಯನದಲ್ಲಿ ವಿವರಿಸಲಾಗಿದೆ. ಸ್ಮಾರಕಗಳನ್ನು ನಿರ್ಮಿಸುವುದರಲ್ಲಿ ವೀರರ ಆರ್ಥಿಕ ಸ್ಥಿತಿಗತಿಗಳು

ಗೋಚರವಾಗುತ್ತವೆ. ಈ ಬಗ್ಗೆ ಒಂದು ಸಮಗ್ರ ಚಿತ್ರಣವನ್ನು ರೂಪಿಸಲು ಸಾಧ್ಯವಿಲ್ಲದಿದ್ದರೂ ಅಧ್ಯಯನ ಪ್ರದೇಶದ ಕೆಲವು ಸ್ಮಾರಕಶಿಲ್ಪಗಳು ಆ ಕುರಿತು ಮಾಹಿತಿ ನೀಡುತ್ತವೆ. ಆರ್ಥಿಕವಾಗಿ ಸಮರ್ಥರಾಗಿದ್ದ ವೀರರು ಮಾತ್ರ ಸ್ಮಾರಕಶಿಲ್ಪಗಳಲ್ಲಿ ಸ್ಥಾನ ಪಡೆದರೆಂಬ ಅಭಿಪ್ರಾಯಗಳಿದ್ದರೂ, ಆರ್ಥಿಕವಾಗಿ ಹಿಂದುಳಿದವರ ಸ್ಮಾರಕಶಿಲ್ಪಗಳು ಕಲಾತ್ಮಕವಾಗಿರದೇ ಸಾಧಾರಣ ಶೈಲಿಯಲ್ಲಿ ನಿರ್ಮಾಣಗೊಂಡಿವೆ. ಅಧ್ಯಯನ ಪ್ರದೇಶದಲ್ಲಿ ನಡೆದ ಯುದ್ಧಗಳು ಹಲವು ಇದ್ದರೆ ದೊರೆತಿರುವ ಸ್ಮಾರಕಶಿಲ್ಪಗಳ ಸಂಖ್ಯೆ ಸಾಧಾರಣವಾಗಿದೆ. ಒಂದು ಯುದ್ಧವೆಂದರೆ ಒಬ್ಬರಿಗಿಂತಲೂ ಹೆಚ್ಚು ಮಂದಿ ಮರಣ ಹೊಂದುತ್ತಿದ್ದರು. ಆದರೆ ಸ್ಮಾರಕಶಿಲ್ಪಗಳು ಕೆಲವೇ ಪ್ರಸಂಗಗಳನ್ನು ಮಾತ್ರ ಉಲ್ಲೇಖಿಸುತ್ತವೆ. ಅಂದರೆ ಯುದ್ಧದಲ್ಲಿ ಮಡಿದವರೆಲ್ಲರೂ ಸ್ಮಾರಕಶಿಲ್ಪದಲ್ಲಿ ಸ್ಥಾನ ಪಡೆಯಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅವರ ಆರ್ಥಿಕ ಸ್ಥಿತಿಯೇ ಅದಕ್ಕೆ ಕಾರಣವಾಗಿರಬಹುದು. ಆರ್ಥಿಕವಾಗಿ ಪ್ರಬಲ ಹಿನ್ನೆಲೆಯುಳ್ಳ ವೀರರ ಕುಟುಂಬದವರು ಸ್ಮಾರಕಶಿಲ್ಪವನ್ನು ನಿರ್ಮಿಸುವ ಸಂದರ್ಭದಲ್ಲಿ ವಿಶೇಷ ದಾನಗಳನ್ನು ನೀಡಿದ್ದಾರೆ. ಅಂತಹವುಗಳ ಸಂಖ್ಯೆ ಈ ಪ್ರದೇಶದಲ್ಲಿ ವಿರಳವಾಗಿ ಕಂಡುಬಂದಿವೆ. ಶ್ರೀಪಾದ ಪದ್ಮಾರಾಧ ಕರುಮಪ್ಪಯಯಿದೇವರ ಮಗ ಕೊಮೆನಾಯ್ಕ ಎಡವಟಿಯ ಬಳ್ಳಿರೆ ಕುರುವದ ರಾಮನಾಥ ದೇವರ ಸ್ತಾನದಾಚರ್ಯ ಬಯಿಚರಸದೇವರಿಗೆ ಭೂದಾನವನ್ನು ನೀಡುತ್ತಾನೆ.[೯೪] ಚೆನ್ನೆಯ ನಾಯಕನ ಮಗನಾದ ಕಲ್ಲಪ್ಪನು ತನ್ನ ಅಣ್ಣ ವೀರಯ ಬಯಿರಣ್ಣನವರ ನಿಧನರಾದುದ್ದಕ್ಕೆ ಕುಂಕೋವಾದ ವೀರೇಶ್ವರ ದೇವರಿಗೆ ಭೂಮಿಯನ್ನು ನೀಡಲಾಗಿದೆ.[೯೫] ಚಟ್ಟಣ ಎಂಬಾತನು ಮೋಕ್ಷಲಕ್ಷ್ಮಿಯ ಸದುಗುರು ಲಕ್ಷ್ಮಿನಾಥ ದೇವರಿಗೆ 'ಕಚಾಮುಂಡನುಮಂ' ಕಟ್ಟಿಸುತ್ತಾನೆ.[೯೬] ಸೂಳೆಕಾಳೆಯ ನಾಲ್ವರು ಮಕ್ಕಳು ಹೋರಾಟದಲ್ಲಿ ಮಡಿದಾಗ ಸಾಯಿರಕವಿಲೆಯ ಗಂಗಾದೇವಿಯಲು ಸಾಯಿರ ಬ್ರಾಹ್ಮಣಗ್ಗೇ ಗದ್ದೆಯನ್ನು ದಾನವಾಗಿ ನೀಡಲಾಗಿದೆ.[೯೭] ಮಂಡಳೇಶ್ವರ ಮಯವರ್ಮದೇವರುಂ ಮಂಡಲಿಕ ಮಸಣಯ್ಯ ಶ್ರೀಕರಸಹಿತ ಸಮಸ್ತ ಪರಿಗ್ರಹಮಿಮ್ದು ಬೊಪ್ಪಣನಿಗೆ ಜಮೀನನ್ನು ದತ್ತಿಯಾಗಿ ಬಿಡುತ್ತಾರೆ. ಇಲ್ಲಿ ವೀರನ ಕುಟುಂಬಕ್ಕೆ ಒಡೆಯ ದತ್ತಿ ನೀಡಿರುವುದು ಕಂಡುಬರುತ್ತದೆ. ಬೀರವಣ, ನೆತ್ತರು ಕೊಡುಗೆ, ಡಿಂಗರಿಗವೃತ್ತಿ ಮುಂತಾದ ರೂಪದಲ್ಲಿಯೂ ದಾನದತ್ತಿಗಳನ್ನು ನೀಡಲಾಗಿದೆ.

**ಬೀರವಣ**

ಇದು ಸಂರಕ್ಷಣಾ ಇಲಾಖೆಗೆ ಸೇರಿದ ಸುಂಕ. ಯುದ್ಧದ ಖರ್ಚಿಗಾಗಿ ಆಕರಿಸುತ್ತಿದ್ದ ಸುಂಕವೆಂದು ಹೇಳಲಾಗಿದೆ.[೯೮] ಗ್ರಾಮದ ಹಾಗೂ ನಾಡಿನ ಸಂರಕ್ಷಣೆಯಲ್ಲಿ ನಿರತರಾದ ಯೋಧರಿಗೆ ನಿಯತಕಾಲಿಕವಾಗಿ ಮನ್ನಣೆಯ ರೂಪದಲ್ಲಿ ಸಲ್ಲುತ್ತಿದ್ದ ಹಣ.[೯೯] ಇದಕ್ಕೆ ಅರಸರು ವಿಶೇಷ ಅಧಿಕಾರಿಗಳನ್ನು ನೇಮಿಸಿ ಕಡ್ಡಾಯವಾಗಿ ಇದನ್ನು ಸಂಗ್ರಹಿಸುತ್ತಿದ್ದರೆಂದು ತೋರುತ್ತದೆ. ಈ ಪ್ರದೇಶದ ಶಾಸನಗಳಲ್ಲಿ ಇದರ ಉಲ್ಲೇಖವು ಅಧಿಕವಾಗಿ ಕಂಡುಬರುವುದಿಲ್ಲ. ಬೆಳಗುತ್ತಿಯ ಒಂದು ಶಾಸನ 'ಬೀರವಣ'ದ ಬಗ್ಗೆ ಉಲ್ಲೇಖಿಸುತ್ತದೆ.[೧೦೦] ಕುಳ್ಳಹಳ್ಳಿಯ ಮತ್ತೊಂದು ಸ್ಮಾರಕಶಿಲ್ಪವು 'ಬೀರಮಂಸಂದಂ' ಎಂದು ಪ್ರಸ್ತಾಪಿಸುತ್ತದೆ.[೧೦೧] ಈ ಬೀರವಣವನ್ನು ಪ್ರತಿಷ್ಠಿತನಾದ ವೀರನಿಗೆ ಅರಸನೋ, ಜನರೋ ನೀಡುತ್ತಿದ್ದ ಗೌರವಧನವಿದ್ದಿರಬೇಕೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೦೨]

**ನೆತ್ತರು ಕೊಡುಗೆ**

ಯುದ್ಧದಲ್ಲಿ ಹೋರಾಡಿ ಮಡಿದ ವೀರರಿಗೆ ಬಿಡುತ್ತಿದ್ದ ದತ್ತಿಯನ್ನು ಸ್ಮಾರಕಶಿಲ್ಪಗಳಲ್ಲಿ 'ನೆತ್ತರು ಕೊಡುಗೆ' ಎಂಬುದಾಗಿ ಉಲ್ಲೇಖಿಸಿವೆ.[೧೦೩] ಅಧ್ಯಯನ ಪ್ರದೇಶದ ಒಂಭತ್ತು ಸ್ಮಾರಕಶಿಲ್ಪ ಶಾಸನಗಳಲ್ಲಿ ಈ ಪದಪ್ರಯೋಗವಾಗಿದೆ. ದಾವಣಗೆರೆಯ ಕ್ರಿ.ಶ. ೧೧೮೭ರ ಸ್ಮಾರಕವೊಂದರಲ್ಲಿ ಮೊದಲಬಾರಿಗೆ ಈ ಪದ ಪ್ರಸ್ತಾಪಗೊಂಡಿದೆ.[೧೦೪] ಪದ್ಮ ಎಂಬುವನ ಮಗನು ಗಾಳಗದಲ್ಲಿ ಸತ್ತಾಗ ಆ ಊರಿನ ಮಹಾಜನಗಳು ತಂದೆ ಪದ್ಮನಿಗೆ 'ನೆತ್ತರುಗೊಡಗೆ'ಯಾಗಿ ಹೊಲವನ್ನು ಕೊಟ್ಟ ವಿಷಯ ಸ್ಮಾರಕವೊಂದರಲ್ಲಿದೆ.[೧೦೫] ನಾಗನಾಯಕ ಎಂಬುವನು ಯುದ್ಧದಲ್ಲಿ ಸತ್ತು ಬೀಳಲು ಅವನ ತಮ್ಮನಿಗೆ ಬಿಂಕೆಜೆಯ ಎಂಬಾತನು 'ನೆತ್ತರುಗೊಡುಗೆ'ಯಾಗಿ ಭೂಮಿಯನ್ನು ಕೊಟ್ಟ ವಿಷಯವು ಮತ್ತೊಂದು ಸ್ಮಾರಕದಲ್ಲಿದೆ.[೧೦೬] ನಾಗಯನಾಯ್ಕ ಎಂಬುವನು ತುರುಗಾಳಗದಲ್ಲಿ ಮಡಿದಾಗ ಆತನ ವೀರತನಕ್ಕೆ ಮೆಚ್ಚಿ ಸಮಸ್ತವೂರೆಡೆಯರು 'ನೆತ್ತರುಗೊಡಗೆ'ಯಾಗಿ ದಾನ ನೀಡುತ್ತಾರೆ.[೧೦೭] ಮಾರೆಯನಾಯ್ಕ ಎಂಬ ವೀರನು ತುರುಗಾಳಗದಲ್ಲಿ ಮಡಿದಾಗ ಆತನ ವೀರಕ್ಕೆ ಮೆಚ್ಚಿ 'ನೆತ್ತರುಗೊಡಗೆ'ಯಾಗಿ ಭೂದಾನ ನೀಡಿದ್ದನ್ನು ಇನ್ನೊಂದು ಸ್ಮಾರಕ ಉಲ್ಲೇಖಿಸುತ್ತದೆ.[೧೦೮] ಅರಕೆರೆ ಗ್ರಾಮದ ಮೂರು ಸ್ಮಾರಕಶಿಲ್ಪ ಶಾಸನಗಳು ತುರುಗಾಳಗದಲ್ಲಿ ಮಡಿದ ಮಾದೆಯನಾಯ್ಕ[೧೦೯], ಮಲ್ಲಯನಾಯಕ[೧೧೦], ತರಲಬಯಚ[೧೧೧] ಎಂಬ ವೀರರಿಗೆ 'ನೆತ್ತರುಕೊಡುಗೆ'ಯಾಗಿ ದಾನ ನೀಡಿರುವುದನ್ನು ತಿಳಿಸುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದ ಕೆಲವೇ ಸ್ಮಾರಕಶಿಲ್ಪಗಳಲ್ಲಿ 'ನೆತ್ತರುಕೊಡುಗೆ'ಯ ಪ್ರಸ್ತಾಪ ಬರುವುದರಿಂದ ಪ್ರತಿಷ್ಠಿತರಾದ ವೀರರಿಗಷ್ಟೇ ಈ ದಾನವನ್ನು ನೀಡುತ್ತಿದ್ದರೆಂದು ತೋರುತ್ತದೆ.

**ಡಿಂಗರಿಗ ವೃತ್ತಿ**

ಮಡಿದ ವೀರನ ಮನೆಯವರಿಗೆ ಕೊಟ್ಟ ದತ್ತಿಯನ್ನು ಸ್ಮಾರಕಶಿಲ್ಪಗಳಲ್ಲಿ ಡಿಂಗರಿಗ ವೃತ್ತಿ ಎಂಬುದಾಗಿಯೂ ಉಲ್ಲೇಖಿಸುವುದನ್ನು ಕಾಣಬಹುದು. ಬೆಳಗುತ್ತಿಯ ತುರುಗಳನ್ನು ಬೇಡರು ಕದ್ದುಕೊಂಡು ಹೋದಾಗ ಬೆಳಗುತ್ತಿಯ ಅರಸನಾದ 'ಈಶ್ವರಭೂಪ'ನೆಂಬುವನ 'ಡಿಂಗರಿಗ'ನೂ ಸ್ವಾಮಿಕಾರ್ಯ 'ಹಿತರತಜೀವ'ನೂ ಆದ ಚೆನ್ನ ತುರುಗಳನ್ನು ಹಿಂತಿರುಗಿಸುವಲ್ಲಿ ಹೋರಾಡಿ ಸಾಯುತ್ತಾನೆ. ಆಗ ಅವನಿಗೆ 'ಡಿಂಗರಿಗ ವೃತ್ತಿ'ಯಾಗಿ ಗದ್ದೆಯನ್ನು ಕೊಡುತ್ತಾರೆ.[೧೧೨] 'ವೃತ್ತಿ' ಎಂಬ ಪದವನ್ನು ಹೊಂದಿರುವ ಸಮಸ್ತ ಪದದಲ್ಲಿ ವೃತ್ತಿ ಎಂಬುದು ಸಾಮಂತರಿಗೂ ಮಂಡಳೇಶ್ವರರಿಗೂ ಮತ್ತು ಅವರ ಅರಸರಿಗೂ ಇದ್ದ ರಾಜಕೀಯ ಸಂಬಂಧವನ್ನು ಸೂಚಿಸುವುದಿಲ್ಲ. ಆದರೆ ಈ ಸಮಸ್ತ ಪದಗಳಲ್ಲಿನ ಪೂರ್ವಪದ 'ಡಿಂಗರಿಗ' ಎಂಬುದು ಅವರಿಗೆ ಆ ವೃತ್ತಿ (ದತ್ತಿ, ಕೊಡುಗೆ) ಏಕೆ ನೀಡಲಾಯಿತೆಂಬುದರ ಕಾರಣವನ್ನು ವಿವರಿಸುತ್ತವೆ. ಇಡೀ ಸಮಸ್ತಪದ ಅರಸನಿಗೂ ಮತ್ತು ವೃತ್ತಿಯನ್ನು ಪಡೆದಿರುವ ವ್ಯಕ್ತಿಗೂ ಇದ್ದ ಸಂಬಂಧವನ್ನು ಸೂಚಿಸುವ ಪದವಾಗಿದೆ ಎಂಬುದು ವಿದ್ವಾಂಸರಾದ ಆರ್. ಶೇಷಶಾಸ್ತ್ರಿಯವರ ಅಭಿಪ್ರಾಯವಾಗಿದೆ.[೧೧೩] ವಿದ್ವಾಂಸರ ಈ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

**ಬಿಲ್ಲ ಮೂನೂರ್ವರು**

ಬಿಲ್ಲ ಮೂನೂರ್ವರು ಎಂಬುದು ಬಿಲ್ಲು ವಿದ್ಯೆಯಲ್ಲಿ ನೈಪುಣ್ಯತೆಯನ್ನು ಹೊಂದಿದವರು ಎಂಬ ಅರ್ಥವುಂಟು. ಇವರು ರಚಿಸಿಕೊಂಡ ಸಂಘಕ್ಕೆ ಬಿಲ್ಲ ಮೂನೂರ್ವರು ಎಂಬ ಹೆಸರು ಸಂದಿದೆ. ಇದು ಬಿಲ್ಲು ಬಾಣಗಳಿಂದ ಯುದ್ಧ ಮಾಡುತ್ತಿದ್ದ ವೀರರ ಪಡೆ, ಇವರು ಗ್ರಾಮೀಣ ಪರಿಸರದಲ್ಲಿ ಅಥವಾ ಅರಣ್ಯಗಳಲ್ಲಿ ವಾಸ ಮಾಡುವ ಜನಾಂಗದವರಾಗಿದ್ದರು.[೧೧೪] ಈ ಪ್ರದೇಶದ ಕುರುವದಗಡ್ಡೆ ಒಂದು ಶಾಸನದಲ್ಲಿ ಹೊಯ್ಸಳ ಬೀಡಿನ ಪರಮವಿಶ್ವಾಸಿಗಳಾದ ಬಿಲ್ಲಮೂನೂರ್ವರು ಮುಖ್ಯ ಹಕ್ಕಿಯ ಸೋಮನಾಯಕ ಅವನ ಸಾಮಂತರು ರಾಮನಾಥ ದೇವರ ನಂದಾ ದೀವಿಗೆಗೆ ಮತ್ತು ನೈವೇದ್ಯಕ್ಕೆ ದಾನ ಬಿಟ್ಟ ವಿಷಯವಿದೆ.[೧೧೫] ಬಿಳಿಚೋಡಿನ ಮತ್ತೊಂದು ಶಾಸನದಲ್ಲಿ ಬಿಲ್ಲಮೂನೂರ್ವರ ಪತಿ ಮಡಿವಳ ಕೇತ ಹೆಮ್ಮೆನುಬೆಲ್ತುರುವಿನ ಕೇತಗಾವುಂಡನೊಡನೆ ಕಾದಿ ಜಯ ಗೆಯ್ದು ಸತ್ತ ವಿಷಯವಿದೆ.[೧೧೬] ಬಿಲ್ಲಾಳು ತೋರಹತ್ತ ಅಂಮೆಯನಾಯಕರ ಮಗ ಮಾಯಿನಾಯಕ ನಾಲ್ವತ್ತು ಬೇಡರ ಠಾಣಾಂತರದಲ್ಲಿ ಹುಯ್ಯಲಂಹರಸಿದನೆಂದು ಸ್ಮಾರಕವೊಂದು ಉಲ್ಲೇಖಿಸುತ್ತದೆ.[೧೧೭] ಈ ಹಿನ್ನೆಲೆಯಲ್ಲಿ ನೋಡಿದಾಗ ಅವರು ಸಂಘವನ್ನು ಕಟ್ಟಿಕೊಂಡು ಯುದ್ಧದಲ್ಲಿ ಭಾಗವಹಿಸುವುದು ಮತ್ತು ದಾನ ನೀಡುವಂತ ಕಾರ್ಯದಲ್ಲಿಯೂ ತೊಡಗಿರುವುದು ಕಂಡುಬರುತ್ತದೆ.

ಒಟ್ಟಾರೆ ಹೇಳುವುದಾದರೆ ಸಮಾಜದ ಬಹುತೇಕ ವರ್ಗಗಳು ತಮ್ಮ ಮೂಲವೃತ್ತಿಯ ಜೊತೆಗೆ ವೀರ ವೃತ್ತಿಯನ್ನು ಅನುಸರಿಸಿದ್ದಾರೆ. ಅಧ್ಯಯನ ಪ್ರದೇಶದ ಸ್ಮಾರಕಶಿಲ್ಪಗಳಲ್ಲಿ ಕ್ಷತ್ರಿಯ ವರ್ಣದ ವೀರರ ಬಗ್ಗೆ ಹೆಚ್ಚಿನ ಪ್ರಸ್ತಾಪಗಳಿಲ್ಲ. ಹಾಗಾಗಿ ವರ್ಣವ್ಯವಸ್ಥೆಯು ವೃತ್ತಿ ಆಧಾರಿತವೆಂದು (ಹುಟ್ಟಿನಿಂದಲ್ಲ) ಗ್ರಹಿಸುವುದಾದರೆ ಎಲ್ಲಾ ವೀರರನ್ನು ಕ್ಷತ್ರಿಯ ವರ್ಣದವರಾಗಿ ಪರಿಗಣಿಸಬಹುದು. ಆರ್ಥಿಕವಾಗಿ ಎಲ್ಲಾ ವೀರರು ಪ್ರಬಲರಾಗಿರಲಿಲ್ಲವೆಂಬುದು ಮೇಲೆ ವಿವರಿಸಿದ ಅಂಶಗಳಿಂದ ಊಹಿಸಬಹುದು.

**೬.೩. ವೀರರ ಪಟ್ಟಿ**

ದಾವಣಗೆರೆ ಪ್ರದೇಶದ ಶಾಸನೋಕ್ತ ಸ್ಮಾರಕಶಿಲ್ಪಗಳನ್ನು ಅವಲೋಕಿಸಿ ವೀರರ ಪಟ್ಟಿ ಮಾಡಲಾಗಿದೆ. ಜೊತೆಗೆ ವೀರರು ಹೋರಾಡಿದ ಉದ್ದೇಶ, ಕಾಲವನ್ನು ಈ ಕೆಳಕಂಡಂತೆ ನೀಡಲಾಗಿದೆ.

| ಹೆಸರು | ಕಾಲ(ಕ್ರಿ.ಶ) | ಉದ್ದೇಶ | ಗ್ರಾಮ | ಉಲ್ಲೇಖ |
|---|---|---|---|---|
| ಹಾಳಗೊಣ್ಣ | ೮೭೦ | ತುರುಗೋಳ್ | ಮಾದೇನಹಳ್ಳಿ | ರಾ.ಶಾ.ಸಂ.೧.೧೧೬ |
| ಎರಗಂಗಯ್ಯ | ೮ನೇ. ಶ. | ಯುದ್ಧ | ಹೀರೇಹಾಲಿವಣ | |
| ನಾಗವರ್ಮ & ಅಜವರ್ಮ | ೯೦೭ | ಯುದ್ಧ | ಬಸವನಕೋಟೆ | ಎ.ಕ.ಸಂ.೧೧ ಜಗಲೂರು, ೧೯ |

| | | | | |
|---|---|---|---|---|
| ಅಲ್ಲಿಗ | ೯೩೦ | ಕೀಳ್ಗುಂಟೆ | ನಂದಿಗುಡಿ | ಅದೇ, ದಾವಣಗೆರೆ,೧೧೯ |
| ಪಡಿಗನೊಂಬಾ | ೯೩೧ | ಊರಟಿವು | ಚಿರಸ್ತಹಳ್ಳಿ | ಕ.ವಿ.ಶಾ.ಸಂ.೧ ಹರಪನಹಳ್ಳಿ, ೫೩ |
| ಮಾಳಯ್ಯ | ೯೩೩ | ಯುದ್ಧ | ಕಡಬಗೆರೆ | ಅದೇ, ೨೧೦ |
| ಬೆಟ್ಟುಗ | ೯೬೩ | ತುರುಗೋಳ್ | ಅರಕೆರೆ | ಎಂ.ಎ.ಆರ್. ೧೯೨೩, ೧೧೫ |
| ಇಡಿಪದೇವ | ೧೦ನೇ ಶ. | ತುರುಗೋಳ್ | ದೊಡ್ಡಬಾತಿ | ಜನತವಾಣೀ ಪತ್ರಿಕೆ ೨.೭.೨೦೧೪ |
| ಸೋಮಗಾವುಣ್ಡ | ೧೦೬೪ | ತುರುಗೋಳ್ | ಹೊನ್ನಾಳಿ | ಎ.ಕ.ಸಂ.೭, ಹೊನ್ನಾಳಿ,೨ |
| ಕೇತಣ್ಣ | ೧೦೬೪ | ತುರುಗೋಳ್ | ಹೊನ್ನಾಳಿ | ಅದೇ, ೩ |
| ನಾಗಿಲಮಾಳಯ್ಯ | ೧೦೬೪ | ತುರುಗೋಳ್ | ಹೊನ್ನಾಳಿ | ಅದೇ, ೪ |
| ಬೊಪ್ಪಣ | ೧೧೩೦ | ವೇಳವಾಳಿ | ಬೆಳಗುತ್ತಿ | ಅದೇ, ೪೭ |
| ಕಾಮೋಜ | ೧೧೧೬ | ಯುದ್ಧ | ಬೇಲಿಮಲ್ಲೂರು | ಅದೇ, ೯೮ |
| ಗಾವುಂಡ | ೧೧೭೦ | ಯುದ್ಧ | ಬಿಲ್ಲಹಳ್ಳಿ | ಅದೇ, ಚನ್ನಗಿರಿ, ೩೬ |
| ಮೂಕಣ | ೧೧೭೦ | ಯುದ್ಧ | ಮಾಯಕೊಂಡ | ಎ.ಕ.ಸಂ.೧೧, ದಾವಣಗೆರೆ, ೧೩೭ |
| ದಾಸಗವುಡ | ೧೧೭೧ | ಯುದ್ಧ | ಚಿಕ್ಕಯರೆಹಳ್ಳಿ | ಎ.ಕ.ಸಂ.೭, ಹೊನ್ನಾಳಿ, ೨೬ |
| ಚೀಲಯ್ಯ | ೧೧೭೧ | ತುರುಗೋಳ್ | ಚಿಕ್ಕಯರೆಹಳ್ಳಿ | ಅದೇ, ೨೭ |
| ಬೀಬೋಜ | ೧೧೮೫ | ಊರಟಿವು | ಕಂಚಿಗನಹಳ್ಳಿ | ಅದೇ, ೭೩ |
| ಚಟ್ಟಿಯನಾಯಕ | ೧೧೮೭ | ಯುದ್ಧ | ಬೆಳಗುತ್ತಿ | ಅದೇ, ೩೫ |
| ದುಗ್ಗಣ | ೧೧೮೯ | ಕಳ್ಳರೊಂದಿಗೆ | ಸಾಸುವೆಹಳ್ಳಿ | ಅದೇ, ೮೫ |
| ಕಲ್ಲೆಯನಾಯಕ | ೧೧೯೫ | ಯುದ್ಧ | ಬೆಳಗುತ್ತಿ | ಅದೇ, ೫೧ |
| ಗಟ್ಟೆಯನಾಯಕ | ೧೧೯೬ | ತುರುಗೋಳ್ | ಬೆಳಗುತ್ತಿ | ಅದೇ, ೩೭ |
| ಮೈಲಿಯನಾಯಕ | ೧೧೯೬ | ಯುದ್ಧ | ಬೆಳಗುತ್ತಿ | ಅದೇ, ೩೮ |
| ಅಪ್ಪುಗ | ೧೧೯೬ | ತುರುಗೋಳ್ | ಬೆಳಗುತ್ತಿ | ಅದೇ, ೪೦ |

| | | | | |
|---|---|---|---|---|
| ಚೀಲಿಯ್ಯ | ೧೧೯೭ | ತುರುಗೋಳ್ | ಚಿಕ್ಕಯರೆಹಳ್ಳಿ | ಅದೇ, ೨೮ |
| ಕೇತ | ೧೧೯೭ | ಯುದ್ಧ | ಬೆಳಗುತ್ತಿ | ಅದೇ, ೩೯ |
| ಮಾದಿಗೌಡ | ೧೨೦೦ | ಯುದ್ಧ | ಬಿಲ್ಲಹಳ್ಳಿ | ಅದೇ, ಚನ್ನಗಿರಿ, ೩೭ |
| ಪೊಂಮಯ್ಯ | ೧೨೦೯ | ಯುದ್ಧ | ಚಿಗಟೇರಿ | ಕ.ವಿ.ಹಂ.ಶಾ.ಸಂ. ೧, ಹರಪನಹಳ್ಳಿ, ೨೦೫ |
| ಕಾಳೆಯ | ೧೨೧೫ | ತುರುಗೋಳ್ | ಬೆಳಗುತ್ತಿ, | ಎ.ಕ.ಸಂ.೭, ಹೊನ್ನಾಳಿ, ೪೧ |
| ಚೆಣ್ಣಿಯ ಸಹಣಿ | ೧೨೧೬ | ಯುದ್ಧ | ಬೆಳಗುತ್ತಿ | ಅದೇ, ೪೮ |
| ಬಡಿಗಮಾಕೋಜ | ೧೨೨೬ | ತುರುಗೋಳ್ | ಕಾಶೀಪುರ | ಅದೇ, ಚನ್ನಗಿರಿ, ೪೦ |
| ಸಂಕಗವುಡ & ಬೀರಗವುಡ | ೧೨೨೯ | ತುರುಗೋಳ್ | ದೊಂದ್ರಘಟ್ಟ | ಅದೇ, ೪೫ |
| ಬಮ್ಮ | ೧೨೩೨ | ಯುದ್ಧ | ಬೆಳಗುತ್ತಿ | ಅದೇ, ಹೊನ್ನಾಳಿ, ೪೩ |
| ಬೊಂಮಯನಾಯಕ | ೧೨೪೨ | ಯುದ್ಧ | ನಲ್ಲುದುರೆ | ಅದೇ, ಚನ್ನಗಿರಿ, ೫೩ |
| ಲಂಕೈಚ | ೧೨೪೪ | ಯುದ್ಧ | ಬೆಳಗುತ್ತಿ | ಅದೇ, ಹೊನ್ನಾಳಿ, ೪೯ |
| ಬಂಮ್ಮಯ್ಯ | ೧೨೪೫ | ಯುದ್ಧ | ಕುಳ್ಳಹಳ್ಳಿ | ಅದೇ, ೫೪ |
| ಬಿಟಮೆಯ | ೧೨೪೬ | ಯುದ್ಧ | ಕುಳ್ಳಹಳ್ಳಿ | ಅದೇ, ೫೮ |
| ಏಚಯ | ೧೨೪೭ | ಯುದ್ಧ | ಕುಳ್ಳಹಳ್ಳಿ | ಅದೇ, ೫೫ |
| ಕರಿಯಗೌಡ | ೧೨೪೭ | ಯುದ್ಧ | ಕುಳ್ಳಹಳ್ಳಿ | ಅದೇ, ೫೬ |
| ಬೆಯಿದೇವ | ೧೨೬೪ | ಯುದ್ಧ | ಗಂಗನರಸಿ | ಎ.ಕ.ಸಂ.೧೧, ದಾವಣಗೆರೆ, ೮೭ |
| ಕೂಚರಸ | ೧೨೬೪ | ಯುದ್ಧ | ಬೇತೂರು | ಅದೇ, ೮ |
| ಬಿಲ್ಲಾಳಂಮೆನಾಯ್ಕ | ೧೨೬೫ | ಪೆಣ್ಬುಯ್ಯಲ್ | ಚಿಕ್ಕಬಿದರೆ | ಅದೇ, ೧೦೦ |
| ಪೊಮಣನಾಯಕ | ೧೨೬೫ | ಯುದ್ಧ | ಕೊಂಡಜ್ಜಿ | ಅದೇ, ೭೯ |
| ಮಯಿನಾಯಕ | ೧೨೬೫ | ಯುದ್ಧ | ಚಿಕ್ಕಬಿದರೆ | ಅದೇ, ೧೦೨ |
| ವೀರಚವುಡರಸ | ೧೨೮೨ | ಯುದ್ಧ | ಹಿರೇಕೋಗಿಲೂರು | ಎ.ಕ.ಸಂ.೭, ಚನ್ನಗಿರಿ, ೨೪ |

| | | | | |
|---|---|---|---|---|
| ಗೋಪರಸ | ೧೨೮೨ | ಯುದ್ಧ | ಹಿರೇಕೋಗಿಲೂರು | ಅದೇ, ೨೩ |
| ಬಸವದೇವ | ೧೨೮೨ | ಕೋಟೆಕಾಳಗ | ಕಡತಿ | ಕ.ವಿ.ಶಾ.ಸಂ.೧ ಹರಪನಹಳ್ಳಿ, ೫೫ |
| ಪುರುಷೋತ್ತಮ | ೧೨೮೨ | ಊರಟಿವು | ಕಡ್ಲಬಾಳು | ಎ.ಕ.ಸಂ. ೧೧, ದಾವಣಗೆರೆ, ೮೧ |
| ನಾಗಯನಾಯ್ಕ | ೧೨೭೭ | ತುರುಗೋಳ್ | ನಲ್ಕುದುರೆ | ಎ.ಕ.ಸಂ.೭, ಚನ್ನಗಿರಿ, ೫೪ |
| ಮಾರೆಯನಾಯ್ಕ | ೧೨೭೯ | ತುರುಗೋಳ್ | ನಲ್ಕುದುರೆ | ಅದೇ, ೫೫ |
| ಮೈಯಿದೇವ | ೧೨೮೫ | ಯುದ್ಧ | ಉಚ್ಚಂಗಿದುರ್ಗ | ಕ.ವಿ.ಶಾ.ಸಂ.೧, ಹರಪನಹಳ್ಳಿ, ೧೧ |
| ಹಂಪಸೆಟ್ಟಿ | ೧೨೮೭ | ಊರಟಿವು | ಅಲಗಿಲವಾಡ | ಅದೇ, ೫೦ |
| ಕೊಂಮನಾಯ್ಕ | ೧೨೮೬ | ಯುದ್ಧ | ಹೊನ್ನಾಳಿ | ಎ.ಕ.ಸಂ. ೭, ಹೊನ್ನಾಳಿ, ೧೨ |
| ಸೆಜಿಯ ಮಲ್ಲಯ್ಯ | ೧೨೮೭ | ಯುದ್ಧ | ಹಲುವಾಗಿಲು | ಕ.ವಿ.ಶಾ.ಸಂ.೧, ಹರಪನಹಳ್ಳಿ, ೬೮ |
| ಚಟ್ಟರಸ | ೧೨೯೩ | ಯುದ್ಧ | ಕಡತಿ | ಅದೇ, ೫೬ |
| ಸಂಗಿಯನಾಯ್ಕ | ೧೩೨೬ | ಯುದ್ಧ | ಹನಗವಾಡಿ | ಎ.ಕ.ಸಂ.೭, ಹೊನ್ನಾಳಿ, ೧೧೭ |
| ಸಂಕಗವುಡ | ೧೩೮೬ | ಯುದ್ಧ | ವಾಸನ | ಎ.ಕ.ಸಂ. ೧೧, ದಾವಣಗೆರೆ, ೧೧೭ |
| ಬೊಂಮ್ಮಗೌಡ | ೧೩೯೭ | ಯುದ್ಧ | ವಾಸನ | ಅದೇ, ೧೧೬ |
| ಬೊಮ್ಮಯಣ | – | ಊರಟಿವು | ಹಿರೇಮಳಲಿ | ಎ.ಕ.ಸಂ. ೭, ಚನ್ನಗಿರಿ, ೫೭ |
| ಕ್ಷಯದೇವ | – | ಯುದ್ಧ | ಚನ್ನಗಿರಿ | ಅದೇ, ೫೯ |
| ಮಲೆಗ | – | ಯುದ್ಧ | ಸೊರಟೂರು | ಅದೇ, ಹೊನ್ನಾಳಿ, ೨೧ |

| | | | | |
|---|---|---|---|---|
| ಪೊಲಗ | – | ಯುದ್ಧ | ಸೊರಟೂರು | ಅದೇ, ೨೨ |
| ಸಂಕಮಗವುಡ | – | ಯುದ್ಧ | ಸೊರಟೂರು | ಅದೇ, ೨೩ |
| ತಂತ್ರಪಾಳಬಿಲ್ಲೆಯ | – | ಯುದ್ಧ | ಬೆಳಗುತ್ತಿ | ಅದೇ, ೩೬ |
| ಗೋಳಿಗೊಡದುಗ್ಗ | – | ತುರುಗೋಳ್ | ಕುಳ್ಳಹಳ್ಳಿ | ಅದೇ, ೫೭ |
| ಚಿಕ್ಕ | – | ತುರುಗೋಳ್ | ನ್ಯಾಮತಿ | ಅದೇ, ೬೫ |
| ಮುಪ್ಪಣ | – | ತುರುಗೋಳ್ | ಚಿಕ್ಕಗೋಣಿಗೆರೆ | ಅದೇ, ೧೦೨ |
| ಮಲ್ಲಯನಾಯಕ | – | ತುರುಗೋಳ್ | ಅರಕೆರೆ | ಅದೇ, ೧೧೧ |
| ತರಲಬಯಿಚ | – | ತುರುಗೋಳ್ | ಅರಕೆರೆ | ಅದೇ, ೧೧೨ |
| ಬೊಂಮಯನಾಯಕ | – | ಯುದ್ಧ | ಹೊಸಹಳ್ಳಿ | ಅದೇ, ೧೧೬ |
| ಭಾಚರ್ಸಭೀಮಕ್ರಿದಾಂತ | – | ಯುದ್ಧ | ಬೇತೂರು | ಎ.ಕ.ಸಂ.೧೧,<br>ದಾವಣಗೆರೆ, ೯ |
| ಬೊಂಮನಾಯಕ | – | ತುರುಗೋಳ್ | ಬನ್ನಿಕೋಡು | ಅದೇ, ೭೬ |
| ಬಟರಿಜ | – | ತುರುಗೋಳ್ | ಕಡ್ಲಬಾಳು | ಅದೇ, ೮೨ |
| ಕೊಂಡನಂಬಿ | – | ಯುದ್ಧ | ಶಾಬನೂರು | ಅದೆ, ೯೨ |
| ಸಾಂತಯ | – | ಯುದ್ಧ | ಶಾಬನೂರು | ಅದೇ, ೯೩ |
| ಬದಿಯಮಗವುಡ | – | ತುರುಗೋಳ್ | ಕಕ್ಕರೆಗೊಳ್ಳ | ಅದೇ, ೯೮ |
| ಕುರುಬ ಎರಕಗೌಡ | – | ಯುದ್ಧ | ಹದಡಿ | ಅದೇ, ೧೨೫ |
| ನಾದಿಯಣ್ಣ | – | ತುರುಗೋಳ್ | ಆಲೂರು | ಅದೇ, ೧೬೯ |
| ಬತ್ತಚಗಾವುಣ್ಡ | – | ಯುದ್ಧ | ಜಗಲೂರು | ಅದೆ, ಜಗಲೂರು, ೫ |
| ಕಾಡವಾಸ | – | ಯುದ್ಧ | ಆಸಗೋಡು | ಅದೆ, ೧೩ |
| ಪೂಣೋಜ | – | ಯುದ್ಧ | ನಿಟ್ಟೂರು | ಕ.ವಿ.ಶಾ.ಸಂ.೧,<br>ಹರಪನಹಳ್ಳಿ, ೬೩ |
| ನಾರಾಣಪ್ಪ | ೧೨ನೇ.ಶ. | ಊರಟಿವು | ಕುಂಬಳೂರು | ಇ.ದ.ಸಂ. ೩೦,<br>ಪು. ೬೪–೬೬ |

**ಅಡಿಟಿಪ್ಪಣಿಗಳು**

೧. ಮಜುಂದಾರ್ ಆರ್.ಸಿ., ೨೦೦೬, ವೇದಯುಗ ಭಾಗ-೨, ಪು. ೧೭೪.

೨. ಅದೇ, ಪು. ೧೭೫.

೩. ಅದೇ, ಪು. ೧೭೮.

೪. ಶ್ರೀಕಂಠಯ್ಯ ತೀ.ನಂ.(ಸಂ), ೧೯೮೩, ಗದಾಯುದ್ಧ ಸಂಗ್ರಹಂ, ಪು. ೧೧.

೫. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೪೦, ಕಾಶೀಪುರ.

೬. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೬೩, ನಿಟ್ಟೂರು.

೭. ಎ.ಕ.ಸಂ ೧೧, ದಾವಣಗೆರೆ, ಶಾ.ಸಂ. ೭೫, ದೇವರಬೆಳಕೆರೆ

೮. ಅದೇ, ದಾವಣಗೆರೆ, ಶಾ.ಸಂ. ೧೨೫, ಹದಡಿ.

೯. ಅದೇ, ಜಗಲೂರು, ಶಾ.ಸಂ. ೫, ಬಿಳಿಚೋಡು.

೧೦. ಅದೇ, ಶಾ.ಸಂ. ೧೩, ಆಸಗೋಡು.

೧೧. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೭೩, ಕಂಚಿಗನಹಳ್ಳಿ.

೧೨. ಅದೇ, ಶಾ.ಸಂ. ೯೮, ಬೇಲಿಮಲ್ಲೂರು.

೧೩. ಅದೆ, ಶಾ.ಸಂ. ೪೦, ಬೆಳಗುತ್ತಿ.

೧೪. ಅದೇ, ಶಾ.ಸಂ. ೪೫, ನ್ಯಾಮತಿ.

೧೫. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೫೦, ಅಲಗಿಲವಾಡ.

೧೬. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೫, ವಾಸನ.

೧೭. ಹಿರೇಮಠ ಬಿ.ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೨.

೧೮. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೪೧, ಬೆಳಗುತ್ತಿ.

೧೯. ಅದೇ, ಶಾ.ಸಂ. ೮೫, ಸಾಸುವೆಹಳ್ಳಿ.

೨೦. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೬೯, ಆಲೂರು.

೨೧. ಅದೇ, ಶಾ.ಸಂ. ೯೨, ಶಾಬನೂರು.

೨೨. ಅದೇ, ಶಾ.ಸಂ. ೯೩, ಶಾಬನೂರು.

೨೩. ಲಕ್ಷ್ಮಣ್ ತೆಲಗಾವಿ, ೨೦೧೬, ವಿಜಯನಗರದಲ್ಲಿ ಪಾಳೆಯಗಾರಶಾಹಿ, ಪು. ೮-೧೩

೨೪. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೫೪, ನಲ್ಕುದುರೆ.

೨೫. ಅದೇ, ಶಾ.ಸಂ. ೫೫, ನಲ್ಕುದುರೆ.

೨೬. ಅದೆ, ಹೊನ್ನಾಳಿ, ಶಾ.ಸಂ. ೩೭, ಬೆಳಗುತ್ತಿ.

೨೭. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೭೬, ಬನ್ನಿಕೋಡು.

೨೮. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೦೦, ಚಿಕ್ಕಬಿದರೆ.

೨೯. ಅದೇ, ಶಾ.ಸಂ. ೧೨, ಕುರುವದಗಡ್ಡೆ.

೩೦. ಅದೇ, ಶಾ.ಸಂ. ೩೮, ಬೆಳಗುತ್ತಿ.

೩೧. ಅದೇ, ಶಾ.ಸಂ. ೫೧, ಬೆಳಗುತ್ತಿ.

೩೨. ಅದೇ, ಶಾ.ಸಂ. ೧೧೧, ಅರಕೆರೆ.

೩೩. ಅದೇ, ಶಾ.ಸಂ. ೧೧೬, ಹೊಸಹಳ್ಳಿ.

೩೪. ಅದೇ, ಶಾ.ಸಂ. ೧೧೭, ಹನಗವಾಡಿ.

೩೫. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೭೯, ಕೊಂಡಜ್ಜಿ.

೩೬. ಅದೇ, ಶಾ.ಸಂ. ೮೧, ಕಡ್ಲಬಾಳು.

೩೭. ಅದೇ. ಶಾ.ಸಂ. ೧೦೧, ಚಿಕ್ಕಬಿದರೆ.

೩೮. ಅದೇ, ಶಾ.ಸಂ. ೧೦೨, ಚಿಕ್ಕಬಿದರೆ.

೩೯. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೧೧, ಉಚ್ಚಂಗಿದುರ್ಗ.

೪೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೩, ಹೊನ್ನಾಳಿ.

೪೧. ಅದೇ, ಶಾ.ಸಂ. ೪, ಹೊನ್ನಾಳಿ.

೪೨. ಅದೇ, ಶಾ.ಸಂ. ೨೭, ಚಿಕ್ಕಯರೆಹಳ್ಳಿ.

೪೩. ಅದೇ, ಶಾ.ಸಂ. ೪೮, ಬೆಳಗುತ್ತಿ.

೪೪. ಅದೆ, ಚನ್ನಗಿರಿ, ಶಾ.ಸಂ. ೫೭, ಹಿರೇಮಳಲಿ.

೪೫. ಕ.ವಿ.ಶಾ.ಸಂ.೧, ಹರಪನಹಳ್ಳಿ, ಶಾ.ಸಂ. ೫೩, ಚಿರಸ್ತಹಳ್ಳಿ.

೪೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೪೭, ಬೆಳಗುತ್ತಿ.

೪೭. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೯, ನಂದಿಗುಡಿ.

೪೮. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೨೩, ಹಿರೇಕೋಗಿಲೂರು.

೪೯. ಅದೇ, ಶಾ.ಸಂ. ೨೪, ಹಿರೇಕೋಗಿಲೂರು.

೫೦. ಅದೇ, ಶಾ.ಸಂ. ೪೯, ಚನ್ನಗಿರಿ.

೫೧. ಅದೇ, ಹೊನ್ನಾಳಿ, ಶಾ.ಸಂ. ೨೧, ಸೊರಟೂರು.

೫೨. ಅದೇ, ಶಾ.ಸಂ. ೨೨, ಸೊರಟೂರು.

೫೩. ಅದೇ, ಶಾ.ಸಂ. ೨೮, ಚಿಕ್ಕಯರೆಹಳ್ಳಿ.

೫೪. ಅದೇ, ಶಾ.ಸಂ. ೩೬, ಬೆಳಗುತ್ತಿ

೫೫. ಅದೇ, ಶಾ.ಸಂ. ೩೯, ಬೆಳಗುತ್ತಿ.

೫೬. ಅದೇ, ಶಾ.ಸಂ. ೪೩, ಬೆಳಗುತ್ತಿ.

೫೭. ಅದೇ, ಶಾ.ಸಂ. ೪೯, ಬೆಳಗುತ್ತಿ.

೫೮. ಅದೇ, ಶಾ.ಸಂ. ೫೫, ಕುಳ್ಳಹಳ್ಳಿ.

೫೯. ಅದೇ, ಶಾ.ಸಂ. ೫೭, ಕುಳ್ಳಹಳ್ಳಿ.

೬೦. ಅದೆ, ಶಾ.ಸಂ. ೯೯, ಬೇಲಿಮಲ್ಲೂರು.

೬೧. ಅದೇ ಶಾ.ಸಂ. ೧೧೨, ಅರಕೆರೆ.

೬೨. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೮, ಬೇತೂರು.

೬೩. ಅದೇ, ಶಾ.ಸಂ. ೯, ಬೇತೂರು.

೬೪. ಕ.ವಿ.ಶಾ.ಸಂ. ೧, ಹರಪನಹಳ್ಳಿ, ಶಾ.ಸಂ. ೫೫, ಕಡತಿ.

೬೫. ಅದೇ, ಶಾ.ಸಂ. ೫೬, ಕಡತಿ.

೬೬. ಅದೇ, ಶಾ.ಸಂ. ೬೮, ಹಲುವಾಗಿಲು.

೬೭. ಅದೇ, ಶಾ.ಸಂ. ೨೦೫, ಚಿಗಟೇರಿ.

೬೮. ಅದೇ, ಶಾ.ಸಂ. ೨೧೦, ಕಡಬಗೆರೆ.

೬೯. ಮಂಜುನಾಥ ಹ. ಪಾಟೀಲ, ೨೦೦೨, ದಾವಣಗೆರೆ ಜಿಲ್ಲೆ ಶಾಸನಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಪು. ೭೦-೭೧.

೭೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೩೫, ಬೆಳಗುತ್ತಿ.

೭೧. ಅದೇ, ಶಾ.ಸಂ. ೧೧೭, ಹನಗವಾಡಿ.

೭೨. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೫, ವಾಸನ.

೭೩. ಅದೇ, ಜಗಲೂರು, ಶಾ.ಸಂ. ೧೯, ಬಸವನಕೋಟೆ.

೭೪. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೨, ಹೊನ್ನಾಳಿ.

೭೫. ಎಂ.ಎ.ಆರ್., ೧೯೨೩, ೧೧೫.

೭೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೦೨, ಚಿಕ್ಕಗೋಣಿಗೆರೆ.

೭೭. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೮೨, ಕಡ್ಲಬಾಳು.

೭೮. ಅದೇ, ಶಾ.ಸಂ. ೮೯, ಗಂಗನರಸಿ.

೭೯. ಅದೇ, ಜಗಲೂರು, ಶಾ.ಸಂ. ೫, ಬಿಳಿಚೋಡು.

೮೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೨೮, ೩೫, ೩೭, ೪೭, ಬೆಳಗುತ್ತಿ, ಶಾ.ಸಂ. ೨೩, ಸೊರಟೂರು.

೮೧. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೯೮, ಕಕ್ಕರಗೊಳ್ಳ.

೮೨. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೪೫, ದೊಡ್ರಘಟ್ಟ.

೮೩. ಅದೇ, ಶಾ.ಸಂ. ೩೬, ಬಿಲ್ಲಹಳ್ಳಿ.

೮೪. ಅದೇ, ಹೊನ್ನಾಳಿ, ಶಾ.ಸಂ. ೨೪, ಸೊರಟೂರು.

೮೫. ಅದೇ ಶಾ.ಸಂ. ೨೬, ಚಿಕ್ಕಯರೆಹಳ್ಳಿ.

೮೬. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೬, ವಾಸನ.

೮೭. ಅದೇ, ಶಾ.ಸಂ. ೧೧೭, ವಾಸನ.

೮೮. ಅದೇ, ಶಾ.ಸಂ. ೭೫, ದೇವರಬೆಳಕೆರೆ.

೮೯. ಅದೇ, ಶಾ.ಸಂ. ೧೨೫, ಹದಡಿ.

೯೦. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೩೭, ಮಾಯಕೊಂಡ.

೯೧. ಅದೇ, ಶಾ.ಸಂ. ೩೮, ಹರಿಹರ.

೯೨. ಎ.ಕ.ಸಂ.೭, ಚನ್ನಗಿರಿ, ಶಾ.ಸಂ. ೫೩, ನಲ್ಲುದುರೆ.

೯೩. ಅದೇ, ಹೊನ್ನಾಳಿ, ಶಾ.ಸಂ. ೩೫, ಬೆಳಗುತ್ತಿ.

೯೪. ಅದೇ, ಶಾ.ಸಂ. ೧೨, ಕುರುವಡಗಡ್ಡೆ.

೯೫. ಅದೇ, ಶಾ.ಸಂ. ೭೮. ಕುಂಕೋವಾ.

೯೬. ಅದೇ, ಚನ್ನಗಿರಿ, ಶಾ.ಸಂ. ೨೪, ಹಿರೇಕೋಗಲೂರು.

೯೭. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೫, ವಾಸನ.

೯೮. ಮಂಜುನಾಥ ಹ. ಪಾಟೀಲ, ೨೦೦೨, ಪೂರ್ವೋಕ್ತ, ಪು. ೧೪೦.

೯೯. ಶೇಷಶಾಸ್ತ್ರಿ ಆರ್., ೨೦೧೭, ಕರ್ನಾಟಕದ ವೀರಗಲ್ಲುಗಳು, ಪು. ೧೭೯.

೧೦೦. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೪೬, ಬೆಳಗುತ್ತಿ.

೧೦೧. ಅದೇ, ಶಾ.ಸಂ. ೫೪, ಕುಳ್ಳಹಳ್ಳಿ.

೧೦೨. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೭೯.

೧೦೩. ಚಿದಾನಂದಮೂರ್ತಿ ಎಂ., ೨೦೧೫, ಕ.ಶಾ.ಸಾ.ಅ.ಪು. ೩೨೪.

೧೦೪. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೩೫, ಬೆಳಗುತ್ತಿ.

೧೦೫. ಅದೇ, ಶಾ.ಸಂ. ೬೫, ನ್ಯಾಮತಿ.

೧೦೬. ಅದೇ, ಚನ್ನಗಿರಿ, ಶಾ.ಸಂ. ೬೫, ಬೆಂಕಿಕೆರೆ.

೧೦೭. ಅದೇ, ಶಾ.ಸಂ. ೫೪, ನಲ್ಲುದುರೆ.

೧೦೮. ಅದೇ, ಶಾ.ಸಂ. ೫೫, ನಲ್ಲುದುರೆ.

೧೦೯. ಅದೇ, ಹೊನ್ನಾಳಿ, ಶಾ.ಸಂ. ೧೧೦, ಅರಕೆರೆ.

೧೧೦. ಅದೇ, ಶಾ.ಸಂ. ೧೧೧, ಅರಕೆರೆ.

೧೧೧. ಅದೇ, ಶಾ.ಸಂ. ೧೧೨, ಅರಕೆರೆ.

೧೧೨. ಅದೇ, ಶಾ.ಸಂ. ೪೮, ಬೆಳಗುತ್ತಿ.

೧೧೩. ಶೇಷಶಾಸ್ತ್ರಿ ಆರ್., ೨೦೧೭, ಪೂರ್ವೋಕ್ತ, ಪು. ೧೮೭.

೧೧೪. ಮಂಜುನಾಥ ಸಿ.ಯು., ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೪೩೬.

೧೧೫. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೮, ಕುರುವದಗಡ್ಡೆ.

೧೧೬. ಎ.ಕ.ಸಂ.೧೧, ಜಗಲೂರು, ಶಾ.ಸಂ. ೫, ಬಿಳಿಚೋಡು.

೧೧೭. ಅದೇ, ದಾವಣಗೆರೆ, ಶಾ.ಸಂ. ೧೦೦, ಚಿಕ್ಕಬಿದಿರೆ.

# ಅಧ್ಯಾಯ: ಏಳು

# ನಂಬಿಕೆ ಮತ್ತು ಆಚರಣೆಗಳು

ಅನಾದಿಕಾಲದಿಂದಲೂ ನಂಬಿಕೆ ಮತ್ತು ಆಚರಣೆಗಳು ಪರಸ್ಪರ ನಿಕಟ ಸಂಬಂಧ ಹೊಂದಿವೆ. ಅಲ್ಲದೇ ತಮ್ಮ ಅಸ್ತಿತ್ವವನ್ನು ಇಂದಿಗೂ ಉಳಿಸಿಕೊಂಡಿವೆ. ನಂಬಿಕೆಗಳು ಭಾವನೆ ಮತ್ತು ಆಲೋಚನೆಯ ರೂಪದಲ್ಲಿದ್ದರೆ, ಆಚರಣೆಗಳು ಕ್ರಿಯಾರೂಪದಲ್ಲಿ ಇರುತ್ತವೆ. ಮಾನವನ ಹುಟ್ಟಿನಿಂದಲೂ ಅನುಸರಿಸಿಕೊಂಡು ಬಂದ ಆಚರಣೆಗಳಿಗೆ ಸಂಸ್ಕೃತಿಯನ್ನು ರೂಪಿಸಲು, ಸಮಾಜವನ್ನು ಸುಸ್ಥಿತಿಯಲ್ಲಿ ಇಡಲು ನಂಬಿಕೆಗಳು ಸಹಾಯಕವಾಗಿವೆ. ನಂಬಿಕೆಗಳ ಹುಟ್ಟಿಗೆ ಆದಿಮಾನವನ ನೈಸರ್ಗಿಕ ಅಭಿಪ್ಸೇಗಳೇ ಕಾರಣ. ಅವುಗಳ ಬಗೆಗೆ ಮಾನವ ತಾಳಿದ ಮನೋಭಾವವೇ ಕಾರಣವಾಗಿರಬೇಕೆಂದು ದೇಜಗೌ ಅಭಿಪ್ರಾಯಪಟ್ಟಿದ್ದಾರೆ.[೧] ಪ್ರಕೃತಿಯ ಮಧ್ಯೆ ಬಾಳುವ ಮಾನವ ಹಲವು ಶಕ್ತಿಗಳನ್ನು ದೇವರು ಎಂದು ನಂಬಿದ್ದ. ಮನುಷ್ಯನ ಹುಟ್ಟು ಸಾವುಗಳಿಗೂ ಸಹ ಯಾವುದೋ ನಿಗೂಢ ಶಕ್ತಿಯ ಕೈವಾಡವಿರಬೇಕು ಎಂದು ಯೋಚಿಸಿದ. ಜೊತೆಗೆ ಅವುಗಳ ವಿರುದ್ಧವಾಗಿ ದೆವ್ವಗಳ ಅಥವಾ ಭೀತಿಗಳ ಭಯವು ಅಧಿಕವಾಗಿ ಕಂಡುಕೊಂಡನು. ಅವನ ಅನುಭವ ಗ್ರಹಿಕೆಗಳ ಹಿನ್ನೆಲೆಯಲ್ಲಿ ತೋರಿದ ಭಯ ಮತ್ತು ಭಾವನಾತ್ಮಕ ಚಿಂತನೆಗಳಿಂದ ನಂಬಿಕೆಗಳು ಜನ್ಮ ತಾಳಿವೆ. ನಿರ್ದಿಷ್ಟ ಕಾಲದಲ್ಲಿ, ನಿರ್ದಿಷ್ಟ ಜಾಗದಲ್ಲಿ ಪೂಜೆ ಪುರಸ್ಕಾರಗಳನ್ನು ಕ್ರಮಬದ್ಧವಾಗಿ ನಡೆಸುವ ವಿಧಿಯೇ ಆಚರಣೆಯಾಗಿದೆ.[೨] ಅದು ಪರಂಪರೆಯ ಮೇಲಿನ ಶ್ರದ್ಧೆಯಿಂದ, ಧಾರ್ಮಿಕ ಪ್ರಜ್ಞೆಯಿಂದ, ದೈವ ಭಯದಿಂದ ನಡೆಯುತ್ತದೆ. ಅದು ಕೇವಲ ಪೂಜೆಯಾಗಿರದೆ ಅವರ ಬದುಕಿಗೆ ಒಂದು ಅಂಗವಾಗಿ ಮುಂದುವರಿಯುತ್ತಿರುತ್ತದೆ. ಹೀಗೆ ನಂಬಿಕೆ ಮತ್ತು ಆಚರಣೆಗಳು ಸಂಸ್ಕೃತಿಯ ಒಂದು ಭಾಗವಾಗಿದ್ದು ಮನುಷ್ಯನ ಜೀವನವನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಪೋಷಿಸುವಲ್ಲಿ ಬಹುಮುಖ್ಯವಾಗಿ ಕಂಡುಬರುತ್ತವೆ.

ಪ್ರಸ್ತುತ ಈ ಅಧ್ಯಾಯದಲ್ಲಿ ದಾವಣಗೆರೆ ಜಿಲ್ಲೆಯ ಪರಿಧಿಯಲ್ಲಿರುವಂಥ ಸ್ಮಾರಕಶಿಲ್ಪಗಳ ಮೇಲೆ ರೂಪುಗೊಂಡಿರುವ ನಂಬಿಕೆ, ಆಚರಣೆ ಹಾಗೂ ಐತಿಹ್ಯಗಳ ಬಗ್ಗೆ ವಿವರಿಸುವ ಉದ್ದೇಶ ಹೊಂದಲಾಗಿದೆ. ಸ್ಮಾರಕಶಿಲ್ಪಗಳು ಒಂದಲ್ಲಾ ಒಂದು ರೀತಿಯ ತ್ಯಾಗ, ಬಲಿದಾನ, ಶೌರ್ಯ, ನಿಷ್ಠೆ ಮುಂತಾದ ಮೌಲ್ಯಗಳನ್ನು ಸಾರುತ್ತಾ ಆಯಾ ಪ್ರದೇಶದ ಸಂಸ್ಕೃತಿ, ನಂಬಿಕೆ ಮತ್ತು ಆಚರಣೆಗಳ ಸಂಕೇತವಾಗಿವೆ. ಭಯದಿಂದಲೋ, ಭಕ್ತಿಯಿಂದಲೋ ಜನಪದರು ಅವುಗಳನ್ನು

ಆರಾಧಿಸುತ್ತಾ ಬಂದಿದ್ದಾರೆ. ವೀರ ಮತ್ತು ಮಹಾಸತಿಯರು ಸಮುದಾಯಗಳ ಮೇಲೆ ಪ್ರಭಾವ ಬೀರಿ ಐತಿಹ್ಯಗಳಿಗೆ ವಸ್ತುವಾಗಿದ್ದಾರೆ. ಅವರ ವೀರತ್ವ, ತ್ಯಾಗಗಳು ಕೇವಲ ಸ್ವಾರ್ಥ ಸಾಧನೆಯಾಗದೆ ಸಮುದಾಯದ ಒಳಿತಿಗಾಗಿ, ರಕ್ಷಣೆಗಾಗಿ ನಡೆದಿರುವುದರಿಂದ ಆ ಸಮಾಜ ಅಥವಾ ಸಮುದಾಯಕ್ಕೆ ದೈವವಾಗಿಬಿಟ್ಟಿದ್ದಾರೆ.

ವೀರನಾದವನು ಬದುಕಿದ್ದಾಗ ಹೇಗೆ ತನ್ನ ನೆರವನ್ನು ಕೇಳಿಬಂದವರಿಗೆ, ಶರಣಾಗತರಾದವರಿಗೆ ಆಶ್ರಯ, ರಕ್ಷಣೆಯನ್ನು ನೀಡುತ್ತಿದ್ದನೋ ಅದೇ ರೀತಿಯಲ್ಲಿ ಅವನು ಸತ್ತ ಮೇಲೆಯೂ ಸಹ ಸ್ಮಾರಕದಲ್ಲಿ ನೆಲೆಸಿ ತನ್ನನ್ನು ಆಶ್ರಯಿಸಿ ಬಂದವರಿಗೆ ನೆರವನ್ನು ನೀಡುತ್ತಾನೆ ಎಂಬುದಾಗಿ ಜನಪದರು ನಂಬಿದ್ದಾರೆ. ಈ ತೆರನ ವೀರರನ್ನು ಆರಾಧನೆ ಮಾಡದಿದ್ದರೆ ಕ್ಷಾಮ, ರೋಗ ಬಾಧೆಗಳು ಮತ್ತು ಅನಿಷ್ಟಗಳು ಸಂಭವಿಸುತ್ತವೆ. ಆರಾಧನೆ ಮಾಡುವುದರಿಂದ ತೃಪ್ತಿಗೊಂಡ ಭೂತವು ಬರಗಾಲವನ್ನು ಹೋಗಲಾಡಿಸಿ ಕಾಲಕಾಲಕ್ಕೆ ಮಳೆ-ಬೆಳೆಗಳನ್ನು ಕೊಡುತ್ತದೆ. ಮೈಲಿಗೆ, ವಾಂತಿಭೇದಿ ಮೊದಲಾದ ಮಾರಿ ರೋಗಗಳನ್ನು ನಿವಾರಿಸುತ್ತದೆ. ದನಕರುಗಳನ್ನು ಕಾಡು ಮೃಗಗಳ ಹಾವಳಿಯಂದ ತಪ್ಪಿಸುತ್ತದೆ. ತಮ್ಮ ಸಂಕಷ್ಟಗಳನ್ನು ಪರಿಹರಿಸುತ್ತದೆ ಎಂಬುದಾಗಿ ಜನರು ನಂಬಿದ್ದಾರೆ. ಇದೇ ರೀತಿಯ ನಿಲುವುಗಳನ್ನು ಮಹಾಸತಿಯರ ಸಂದರ್ಭದಲ್ಲಿಯೂ ಹೊಂದಲಾಗಿತ್ತು. ಈ ನಂಬಿಕೆಗಳು ಸ್ಮಾರಕಶಿಲ್ಪಗಳನ್ನು ಆರಾಧಿಸಲು ಮುಖ್ಯ ಪ್ರೇರಣೆಯನ್ನು ನೀಡಿವೆ. ಆರಾಧನೆಯನ್ನು ಅಲಕ್ಷ್ಯ ಮಾಡುವುದಿರಲಿ ಅವರ ಸಂಕೇತವೆಂದು ಜನ ಭಾವಿಸಿದ ಸ್ಮಾರಕವನ್ನು ನಿರ್ಲಕ್ಷ್ಯ ಮಾಡಿದರೆ ಅಥವಾ ಅಗೌರವದಿಂದ ಕಂಡರೆ ಅದರಿಂದ ತೊಂದರೆಯಾಗುತ್ತದೆ ಎಂಬ ನಂಬಿಕೆ ಅಧ್ಯಯನ ಪ್ರದೇಶದ ಐತಿಹ್ಯಗಳ ಮೂಲಕ ವ್ಯಕ್ತವಾಗುತ್ತದೆ. ಹೀಗೆ ವೀರರು ಮತ್ತು ಮಹಾಸತಿಯರ ಬಗ್ಗೆ ಇರುವ ಗೌರವವನ್ನು ಕಾಪಾಡಿಕೊಂಡು ಬರುವ ಸಲುವಾಗಿಯೇ ನಂಬಿಕೆ ಮತ್ತು ಆಚರಣೆಗಳು ಎಂಬ ಆರಾಧನಾ ಸಂಪ್ರದಾಯಗಳು ಹುಟ್ಟಿಕೊಂಡಿವೆಯೆಂದು ತೋರುತ್ತದೆ. ಸ್ಮಾರಕಶಿಲ್ಪಗಳು ಸುಂದರವಾಗಿರಲಿ, ಇಲ್ಲದಾಗಿರಲಿ ಕೇವಲ ಗುಂಡುಕಲ್ಲಾಗಿರಲಿ ಜನರು ಅದನ್ನು ಅಲಕ್ಷಿಸದೇ ಭಕ್ತಿಯಿಂದ ಪೂಜಿಸಿಕೊಂಡು ಬರುತ್ತಿದ್ದಾರೆ. ಇಂತಹ ಆಚರಣೆಗಳು ಸಂಸ್ಕೃತಿಯ ಜೀವಂತ ದಾಖಲೆಗಳೇ ಆಗಿವೆಯೆಂದು ಪರಿಭಾವಿಸಬಹುದು. ತಮ್ಮ ವೀರನ ಹೆಸರು ಚಿರಸ್ಥಾಯಿಯಾಗಿರಬೇಕು ಎಂದೋ ಅಥವಾ ತಮ್ಮ ವೀರನಿಗೆ ಆರಾಧನೆ ಮಾಡುವುದು ತಮ್ಮ ಕರ್ತವ್ಯವೆಂದು ಭಾವಿಸಿ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಂಥ ವೀರನ ಸಂಬಂಧಿಗಳು ಸ್ಮಾರಕಶಿಲ್ಪಗಳ ಪೂಜೆ ಪುರಸ್ಕಾರಗಳು ಸಾರೋದ್ಧರವಾಗಿ ನಡೆಯಬೇಕೆಂಬ ಉದ್ದೇಶದಿಂದ ದಾನ ಬಿಟ್ಟಿರುವುದನ್ನು ಶಾಸನೋಕ್ತ ಸ್ಮಾರಕಶಿಲ್ಪಗಳು ಉಲ್ಲೇಖಿಸುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹೋರಾಟದಲ್ಲಿ ಮಡಿದ ವೀರರಿಗಿಂತ, ಸಹಗಮನಗೊಂಡ ಸತಿಯರ ಬಗ್ಗೆ ಹೆಚ್ಚಿನ ನಂಬಿಕೆ ಮತ್ತು ಆಚರಣೆಗಳು ಪ್ರಚಲಿತದಲ್ಲಿರುವುದನ್ನು ಗಮನಿಸಬಹುದು. ಹಲವು ಗ್ರಾಮಗಳಲ್ಲಿರುವ ಈ ಆಚರಣೆಗಳು ಸಾಮಾನ್ಯವಾಗಿ ಒಂದೇ ರೀತಿಯಲ್ಲಿರುವುದು ಕಂಡುಬಂದಿದ್ದರೂ ಪ್ರಾದೇಶಿಕವಾಗಿ ಜನರು ವೀರ ಅಥವಾ ಸತಿಯರ ಬಗ್ಗೆ ಹೊಂದಿರುವ ಭಾವನೆಗಳು ವಿಭಿನ್ನವಾಗಿವೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ನಂಬಿಕೆ ಮತ್ತು ಆಚರಣೆ ಹಾಗೂ ಐತಿಹ್ಯಗಳನ್ನು ಇತಿಹಾಸ ಪರಿಪೇಕ್ಷೆಯಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

## ೭.೧. ನಂಬಿಕೆಗಳು

ಪ್ರಸ್ತುತ ಅಧ್ಯಯನ ಪ್ರದೇಶದ ಜನರು ವೀರ ಹಾಗೂ ಮಾಸ್ತಿಯರ ಬಗ್ಗೆ ತಮ್ಮದೇ ಆದ ನಂಬಿಕೆಗಳನ್ನು ಹೊಂದಿದ್ದಾರೆ. ನಿಷ್ಠೆ ಮತ್ತು ಭಕ್ತಿಯಿಂದ ಅವರನ್ನು ಪೂಜಿಸಿದರೆ ತಮ್ಮ ಕಷ್ಟಗಳನ್ನು ಪರಿಹರಿಸುವಂತೆ ಬೇಡಿಕೊಂಡರೆ ಖಂಡಿತವಾಗಿ ಫಲ ಸಿಗುತ್ತದೆ ಎಂದು ನಂಬಿದ್ದಾರೆ. ಮುಖ್ಯವಾಗಿ ಕಂಡುಬರುವ ನಂಬಿಕೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ. ಕಾಲದಿಂದ ಕಾಲಕ್ಕೆ ಮಳೆ ಬರದೆ ಇದ್ದಾಗ ಜನರು ಸ್ಮಾರಕಶಿಲ್ಪಗಳನ್ನು ಪೂಜಿಸಿದರೆ ಮಳೆ ಬರುತ್ತದೆಂಬ ನಂಬಿಕೆಗಳಿವೆ. ಹಳೆದೇವರ ಹೊನ್ನಾಳಿಯಲ್ಲಿರುವ ವೀರ ಮಾಸ್ತಿಶಿಲ್ಪವನ್ನು ಸ್ಥಳೀಯರು ಮಳೆ ಮಲ್ಲಪ್ಪ ಎಂದು ಕರೆಯುತ್ತಾರೆ. ಮಳೆ ಬಾರದ ದಿನಗಳಂದು ಈ ಶಿಲ್ಪಕ್ಕೆ ಪೂಜಿಸುವ ಸಂಪ್ರದಾಯವಿದೆ. ಹೀಗೆ ಮಾಡುವುದರಿಂದ ಮಳೆ ಬರುತ್ತದೆ ಎನ್ನುವುದು ಸ್ಥಳೀಯರ ನಂಬಿಕೆಯಾಗಿದೆ. ಸಿದ್ಧಮ್ಮನಹಳ್ಳಿಯ ವೀರಗಲ್ಲಿನ ಮೇಲೆ ಸಣ್ಣ ಗಾತ್ರದ ಕಲ್ಲುಗಳನ್ನು ಒಂದರ ಮೇಲೊಂದನ್ನು ಜೋಡಿಸಲಾಗುತ್ತದೆ. ನಂತರ ಪೂಜೆ ಮಾಡಿಕೊಂಡು ಹೋಗುತ್ತಾರೆ. ಹೀಗೆ ಮಾಡುವುದರಿಂದ ಮಳೆ ಬರುತ್ತದೆ ಎಂಬ ನಂಬಿಕೆಯಿದೆ. ನಂದಿಬೇವೂರಿನ ಸ್ಮಾರಕವೊಂದಕ್ಕೆ ಅಲ್ಲಿನ ಮಕ್ಕಳು ಮಳೆಗಾಗಿ ಪ್ರಾರ್ಥಿಸುವ ಸಂಪ್ರದಾಯವಿದೆ. ಯಡಿಹಳ್ಳಿಯ ವೀರಗಲ್ಲನ್ನು ಹಳ್ಳದ ಮಲ್ಲಪ್ಪ ಎಂದು ಕರೆಯುತ್ತಾರೆ. ಈ ಹಿಂದೆ ಮಳೆಗಾಗಿ ಈತನಿಗೆ ದೊಡ್ಡ ಜಾತ್ರೆಯನ್ನೇ ಮಾಡಲಾಗುತ್ತಿತ್ತಂತೆ. ತ್ಯಾವಣಿಗಿ ಮಾಸ್ತಿಶಿಲ್ಪಕ್ಕೆ ಮಳೆ ಬಾರದಿದ್ದ ಸಮಯದಲ್ಲಿ ಊರಿನ ದೇವರನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಮಂಗಳವಾದ್ಯ ಸಮೇತ ಮಾಸ್ತಿಕಲ್ಲಿನ ಹತ್ತಿರ ಹೋಗಿ ಪೂಜೆ ಮಾಡಿ, ನಂತರ ಅಲ್ಲೇ ತಾವು ತೆಗೆದುಕೊಂಡು ಹೋಗಿದ್ದ 'ಕಂಡೇ ಭಿಕ್ಷ'ವನ್ನು ಊಟ ಮಾಡಿ ಬರುವಷ್ಟರಲ್ಲಿ ಮಳೆಯಾಗುತ್ತಿತ್ತು ಎಂದು ಹೇಳುತ್ತಾರೆ. ಈಗ ಮಾಸ್ತಿಶಿಲ್ಪವನ್ನು ಯಾರು ಪೂಜಿಸುತ್ತಿಲ್ಲ.

ಮಾದೇನಹಳ್ಳಿಯಲ್ಲಿರುವ ಸತಿಶಿಲ್ಪಕ್ಕೆ ಮಾಸ್ತಮ್ಮ ಎಂದು ಕರೆಯುತ್ತಾರೆ. ಈ ಗ್ರಾಮದ ಮನೆಯಲ್ಲಿರುವ ಆಕಳು ಹಾಲು ಕರೆಯದಿದ್ದರೆ, ಹಸುಗಳ ಮೈಮೇಲೆ ಹುಣ್ಣು ಬಂದರೆ ಮತ್ತು ಚಿಕ್ಕ ಮಕ್ಕಳಿಗೆ ದೃಷ್ಟಿಯಾಗದಿರಲಿ ಎಂಬ ಕಾರಣಕ್ಕೆ ಆ ಶಿಲ್ಪಕ್ಕೆ ಪೂಜೆ ಮಾಡಿಕೊಂಡು ಹೋಗುತ್ತಾರೆ. ಹೀಗೆ ಮಾಡುವುದರಿಂದ ಆಕಳು ಹಾಲು ಕರೆಯುತ್ತದೆ. ಹಸುಗಳ ಮೈಮೇಲೆ ಇರುವ ಹುಣ್ಣು ಹೋಗುತ್ತದೆ ಎಂಬ ನಂಬಿಕೆಯನ್ನು ಅಲ್ಲಿಯ ಜನರು ಹೊಂದಿದ್ದಾರೆ. ಇದೇ ರೀತಿಯ ನಂಬಿಕೆ ಹಳೇಜೋಗದಲ್ಲಿದೆ. ಆ ಗ್ರಾಮದ ಲೋಕೇಶಪ್ಪ ಎಂಬುವರ ಮಾವಿನ ತೋಟದಲ್ಲಿರುವ ಸ್ಮಾರಕವನ್ನು ಬಾಲಬಸಪ್ಪ ಎಂದು ಕರೆಯುತ್ತಾರೆ. ದನಕರುಗಳ ಮೈಮೇಲೆ ಹುಣ್ಣುಗಳು ಬಂದಾಗ, ಐದಾರು ಹುಣ್ಣುಗಳನ್ನು ತಂದು ಈ ಶಿಲ್ಪಗಳ ಮುಂದೆ ಹಾಕಿ ಪೂಜೆ ಮಾಡಿಕೊಂಡು ಹೋಗುತ್ತಾರೆ. ಹೀಗೆ ಮಾಡುವುದರಿಂದ ಒಂದೆರಡು ದಿನಗಳಲ್ಲಿ ಹುಣ್ಣುಗಳು ಹೋಗುತ್ತವೆಂಬ ನಂಬಿಕೆಯಿದೆ. ಇದೇ ಗ್ರಾಮದ ಅಗಸಿ ಬಾಗಿಲ ಬಳಿಯಿರುವ ಸಹಗಮನ ಶಿಲ್ಪಕ್ಕೆ ಆಕಳು ಕರು ಹಾಕಿದಾಗ ಎಡೆಯನ್ನು ಕೊಡುವ ಪದ್ಧತಿಯಿದೆ. ಇದೇ ರೀತಿ ಆಕಳು

ಕರು ಹಾಕಿದ ಮನೆಯವರು ಒಂದು ಅಥವಾ ಎರಡು ವಾರ ಬೆಣ್ಣೆ ತೆಗೆದು ಅದನ್ನು ಯಾರೂ ತಿನ್ನದೇ ಮೂರೂ ಸ್ಮಾರಕಶಿಲ್ಪಗಳಿಗೆ ಬೆಣ್ಣೆ ಹಚ್ಚಿ ಪೂಜೆ ಮಾಡಿಕೊಂಡು ತಮ್ಮ ನಂಬಿಕೆಗಳನ್ನು ಶೃತಪಡಿಸುತ್ತಾರೆ. ಯಲವಟ್ಟಿ ಗ್ರಾಮದಲ್ಲಿ ಆಕಳು ಹಾಲು ಕರೆಯದಿದ್ದರೆ, ಇಲ್ಲವೇ ರಕ್ತದ ಹಾಲು ನೀಡುತ್ತಿದ್ದರೆ ಮಾಸ್ತಿಶಿಲ್ಪಕ್ಕೆ ಪೂಜೆ ಮಾಡುತ್ತಾರೆ. ಈ ದೇವಿಗೆ ಪೂಜೆ ಮಾಡಿಕೊಂಡು ಹೋದರೆ ಮಾರನೇ ದಿನ ಬೆಳಿಗ್ಗೆಯಿಂದಲೇ ಬೆಳ್ಳನೆಯ ಹಾಲನ್ನು ನೀಡುತ್ತದೆ ಎಂದು ಸ್ಥಳೀಯರು ನಂಬಿದ್ದಾರೆ. ತಣಿಗೆರೆ ಗ್ರಾಮದ ಮಾಸ್ತಿಶಿಲ್ಪಕ್ಕೂ ಆಕಳು ಕರೆದ ಮೊದಲ ಹಾಲನ್ನು ಅರ್ಪಿಸಲಾಗುತ್ತದೆ. ಕೋಡಿಹಳ್ಳಿ ಗ್ರಾಮದಲ್ಲಿ ಮೊದಲ ಹಾಲಿನ ಗಿಣ್ಣವನ್ನು ಮಾಸ್ತಿಶಿಲ್ಪಕ್ಕೆ ಹಚ್ಚುತ್ತಾರೆ. ಹದಿನೈದು ದಿನಗಳ ನಂತರ ಬೆಣ್ಣೆ ಹಚ್ಚಿ ಪೂಜೆ ಮಾಡಿಕೊಂಡು ಹೋಗುತ್ತಾರೆ.

ಹೊದಿಗೆರೆ ಗ್ರಾಮದಲ್ಲಿ ಮಕ್ಕಳಾಗದಿದ್ದವರು ಅಲ್ಲಿನ ಮಾಸ್ತಿಶಿಲ್ಪಕ್ಕೆ ಹರಕೆ ಹೊತ್ತುಕೊಳ್ಳುತ್ತಾರೆ. ಗ್ರಾಮದ ಮಲ್ಲಣ್ಣ ಎಂಬುವರು ಮಾಸ್ತಿಗೆ ದೇವಸ್ಥಾನವನ್ನು ಕಟ್ಟಿಸಿದ್ದರಿಂದ ಅವರಿಗೆ ಗಂಡು ಮಗು ಪ್ರಾಪ್ತಿಯಾತೆಂದು ಹೇಳುತ್ತಾರೆ. ಇದೇ ರೀತಿ ದಾಗಿನಕಟ್ಟೆಯಲ್ಲಿ ಸಂತಾನ ಫಲಕ್ಕಾಗಿ ಮಾಸ್ತಿಶಿಲ್ಪವನ್ನು ಪೂಜಿಸಲಾಗುತ್ತಿದೆ. ಮಳಲಕೆರೆಯಲ್ಲಿ ಗರ್ಭಿಣಿಯಾದ ಮಹಿಳೆಯರು ಮೂರು ತಿಂಗಳು ತುಂಬುವುದರೊಳಗೆ ಮಾಸ್ತಿಯ ಸ್ಮಾರಕವನ್ನು ಬೆಣ್ಣೆ ಮತ್ತು ಬಿಸಿನೀರಿನಿಂದ ತೊಳೆದು ಬಾಳೆಹಣ್ಣಿನ ನೈವೇದ್ಯವನ್ನು ಮಾಡುತ್ತಾರೆ. ಹೀಗೆ ಮಾಡುವುದರಿಂದ ತಮ್ಮ ಹೆರಿಗೆ ಯಾವುದೇ ತೊಂದರೆ ಇಲ್ಲದೆ ನೆರವೇರುತ್ತದೆಯೆಂದು ಅಲ್ಲಿಯ ಜನರು ನಂಬಿದ್ದಾರೆ. ಇದೇ ರೀತಿಯ ನಂಬಿಕೆ ಮೈದೂರು ಗ್ರಾಮದಲ್ಲಿಯೂ ಕೂಡಾ ಕಾಣುತ್ತೇವೆ. ಇನ್ನೂ ಕೆಲವು ಗ್ರಾಮಗಳಲ್ಲಿ ಸ್ಮಾರಕಗಳನ್ನು ಪೂಜಿಸುವುದರಿಂದ ನಮ್ಮ ಮಕ್ಕಳ ಆರೋಗ್ಯ ಸುಧಾರಿಸುತ್ತದೆ ಎಂದು ನಂಬಿದ್ದಾರೆ. ಎಳೆಹೊಳೆ ಗ್ರಾಮದಲ್ಲಿ ಜ್ವರ ಬಂದ ಮಕ್ಕಳಿಗೆ ವೀರಗಲ್ಲುಗಳ ಮೇಲಿನ ಆಧಾರವನ್ನು(ಕುಂಕುಮ) ಅವರ ದೇಹದ ಮೇಲೆ ಎರಚುತ್ತಾರೆ. ಹೀಗೆ ಮಾಡಿದರೆ ಅವರು ಜ್ವರದಿಂದ ಗುಣಮುಖರಾಗುತ್ತಾರಂತೆ. ಇದೇ ರೀತಿಯ ನಂಬಿಕೆಗಳನ್ನು ಕುಂದೂರು, ಲೋಕಿಕೆರೆ, ಸಾಸ್ವಿಹಳ್ಳಿಯ ಗ್ರಾಮದ ಜನರು ಆ ಗ್ರಾಮದಲ್ಲಿರುವ ಮಾಸ್ತಿಶಿಲ್ಪಗಳ ಮೇಲೆ ಹೊಂದಿರುವುದು ಕಂಡುಬರುತ್ತದೆ. ಕ್ಯಾಸಿನಕೆರೆ ಗ್ರಾಮದ ಮಾಸ್ತಿಗಲ್ಲಿಗೆ ಹುಲ್ಲುಬಸರಮ್ಮ ಎಂದು ಕರೆಯುತ್ತಾರೆ. ಮನೆಗಳಲ್ಲಿ ಕೆಂಜಿಗೆ ಇರುವೆ ಕಾಣಿಸಿಕೊಂಡರೆ ಆ ಮನೆಯವರು ಮಾಸ್ತಿಶಿಲ್ಪದ ಮೇಲೆ ಎಣ್ಣೆ ಮತ್ತು ತುಪ್ಪವನ್ನು ಹಾಕುತ್ತಾರೆ. ಹೀಗೆ ಮಾಡುವುದರಿಂದ ಮನೆಯಲ್ಲಿ ಕೆಂಜಿಗೆ ಇರುವೆಗಳು ಕಾಣಿಸಿಕೊಳ್ಳುವುದಿಲ್ಲವಂತೆ. ಹರೋಸಾಗರದಲ್ಲಿ ಮಾಸ್ತಿಶಿಲ್ಪವನ್ನು ನೋಡಿ ಯಾರಾದರೂ ನಕ್ಕರೆ ಅವರ ಎದೆಯ ಭಾಗವು ಸ್ತನಗಳಂತೆ ಉಬ್ಬುತ್ತವಂತೆ. ಈ ಹಿಂದೆ ಕೆಲವರಿಗೆ ಆ ರೀತಿ ಆಗಿದ್ದವು. ಅವರು ಈ ತಾಯಿಯ ಮುಂದೆ ಬಂದು ನಿನ್ನನ್ನು ನೋಡಿ ನಗುವುದಿಲ್ಲ ಮತ್ತು ಆಡಿಕೊಳ್ಳುವುದಿಲ್ಲ ಎಂದು ಪೂಜೆ ಮಾಡಿಕೊಂಡು ಹೋದ ನಂತರವೇ ಅವರ ಎದೆಯ ಭಾಗವು ಸಹಜ ಸ್ಥಿತಿಗೆ ಬಂದಿವೆಯೆಂದು ಹೇಳುತ್ತಾರೆ. ಹೀಗೆ ತಮ್ಮದೇ ಆದ ನಂಬಿಕೆಗಳನ್ನು ಜನಪದರು ಸ್ಮಾರಕಶಿಲ್ಪಗಳ ಮೇಲೆ ಹೊಂದಿರುವುದನ್ನು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಗುರುತಿಸಲಾಗಿದೆ.

## ೭.೨. ಆಚರಣೆಗಳು

ಒಂದು ನಿರ್ದಿಷ್ಟ ಸ್ಥಳ ಮತ್ತು ಕಾಲದಲ್ಲಿ ನಡೆಯುವ ಕ್ರಿಯೆಗಳನ್ನೇ ಆಚರಣೆಗಳೆನ್ನಲಾಗುತ್ತದೆ. ಮಾನವನ ನಂಬಿಕೆಯು ಭೌತಿಕ ರೂಪವೇ ಆಚರಣೆಗಳೆಂದು ವಿದ್ವಾಂಸರು ಅಭಿಪ್ರಾಯಿಸಿರುವುದುಂಟು.[೩] ಪ್ರಕೃತಿಯಲ್ಲಿನ ವೈಪರೀತ್ಯಗಳು ಮಾನವನಿಗೆ ಅಸಾಮಾನ್ಯವೆನಿಸಿದ್ದವು. ಅವುಗಳ ಹಿಂದೆ ಅಡಗಿರುವ ಅಗೋಚರ ಶಕ್ತಿಯನ್ನು ಕಂಡು ಆ ಶಕ್ತಿಯನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದನು. ಹೀಗೆ ತನ್ನ ಕಲ್ಪನೆಯ ಆಳದಲ್ಲಿ ಅಡಗಿದ ದೈವಗಳಿಗೆ ಭಕ್ತಿ, ಗೌರವ, ಶ್ರದ್ಧೆಯಿಂದ ಆರಾಧಿಸುವುದರಲ್ಲಿ ತೊಡಗಿದನು. ಇದರ ಪ್ರತಿಯಾಗಿ ಹಲವು ಆಚರಣೆಗಳು ಉಗಮಗೊಂಡವೆಂದು ತೋರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿನ ಆಚರಣೆಗಳು ವ್ಯಕ್ತಿಗತ ನೆಲೆಯಲ್ಲಿ ರೂಪುಗೊಂಡಿವೆ. ವೀರರು ಮತ್ತು ಮಹಾಸತಿಯರ ಆತ್ಮಗಳು ಸ್ಮಾರಕಗಳಲ್ಲಿ ನೆಲೆಸಿವೆ. ಅದರಲ್ಲಿ ಪ್ರತಿಷ್ಠಾಪಿತವಾಗಿರುವ ಅವರು ತಮಗೆ ಕಷ್ಟದಲ್ಲಿ ನೆರವಾಗುತ್ತಾರೆ ಎಂಬ ಮನೋಭಾವ ಜನಪದರದಾಗಿತ್ತು. ಈ ಮನೋಭಾವವೇ ಆಚರಣೆಗಳಿಗೆ ಮುಖ್ಯ ಕಾರಣವಾಗಿರಬೇಕು. ಪ್ರಸ್ತುತ ಅಧ್ಯಯನ ಪ್ರದೇಶದ ಆಚರಣೆಗಳನ್ನು ಶಾಸನೋಕ್ತ ಆಚರಣೆಗಳು ಮತ್ತು ಜನಪದರ ಆಚರಣೆಗಳೆಂದು ವಿಂಗಡಿಸಿಕೊಂಡು ಈ ಕೆಳಕಂಡಂತೆ ಅಧ್ಯಾಯಿನಿಸಲಾಗಿದೆ.

### ೭.೨.೧. ಶಾಸನೋಕ್ತ ಆಚರಣೆಗಳು

ಪ್ರಸ್ತುತ ಅಧ್ಯಯನ ಪ್ರದೇಶದ ಕೆಲವು ಸ್ಮಾರಕಶಿಲ್ಪಗಳ ಪಾಠವನ್ನು ಗಮನಿಸಿದಾಗ ಆಚರಣೆಗಳು ಕುರಿತು ಉಲ್ಲೇಖಿಸಿರುವುದು ಕಂಡುಬರುತ್ತದೆ. 'ಯಿಂಪೀ ಮರ್ಯಾದೆಯಂ ಆಚಂದ್ರಾರ್ಕ್ಕತಾರಂಬರಂ ಸಲ್ಲಿಸುವರು' ಎಂಬುದಾಗಿ ಒಂದು ಶಾಸನ ಉಲ್ಲೇಖಿಸುತ್ತದೆ.[೪] ಇದು ತಮ್ಮ ಮುಂದಿನ ತಲೆಮಾರಿನವರೂ ಸ್ಮಾರಕಶಿಲ್ಪಕ್ಕೆ ಈ ಮರ್ಯಾದೆ ನಡೆಸಿಕೊಡಬೇಕೆಂದು ಅವುಗಳನ್ನು ಪ್ರತಿಷ್ಠಾಪಿಸಿದವರು ಅಪೇಕ್ಷೆಪಟ್ಟಿದ್ದಾರೆ. ಸ್ಮಾರಕಶಿಲ್ಪಗಳ ಪೂಜೆಗಾಗಿಯೇ ದತ್ತಿ ಬಿಟ್ಟಿರುವುದುಂಟು. 'ನಿಲ್ಸಿಯಾ ವೀರನಂಗಭೋಗ... ಗಭೋಗ ಪೂಜೆ ಮಹಾರಕ್ಕಂ ಆ ಸ್ಥಳದ ಹನುಮಗೌಡ ಬೊಂಮಗೌಡಂಗಳು ಮುಖ್ಯವಾಗಿ ಕೊಟ್ಟ ಭೂಮಿ' ಎಂಬ ಉಲ್ಲೇಖ ಶಾಸನವೊಂದರಲ್ಲಿ ಪ್ರಸ್ತಾಪಗೊಂಡಿದೆ.[೫] "ಬೀರಗಲ್ಲಪೂಜೆ ಪುನಸ್ಕಾರಕೆ ಊರಿಂಮೂಡಣ... ಬ್ರಹ್ಮಪುರಿಯಕೆ, ಪಡುವಲು ಪಂಚಲಿಂಗದೇ... ಬಡಗಲು ಕಂಬ ೧೨ ನೂಸಂಕಿಯ ಸಹಣಿಯರುಬಿಟ್ಟದರ್ಮ್ಮಯಿ" ಎಂದು ಮತ್ತೊಂದು ಶಾಸನ ಉಲ್ಲೇಖಿಸುತ್ತದೆ.[೬] "ಪೂಜೆ.. ದುಕ್ಕೆ ಗದ್ದೆ ಕ ೫ ಬೆದ್ದಲೆ ಕ ೧೦ ಬೀರಗವುಡ ಸಂಕಗವುಡ ಕಡಲಗವುಡನಾದಿ ಆಗಿ ಗವುಡಿಂಗೆ ಸರ್ವ್ವವುಂಬಳಿಸಾಸನಕ್ರಮವೆಂತೆಂ... ಳದ ತೋಟ ಸಹಿತ ಗದ್ದೆ ಮತ್ತುರು ೩ ಬಜಿತಲೆ ಮತ್ತರು ೩ ಬೆದ್ದಲೆ ಮತ್ತರು ಅಜು ೬ ಅನ್ತುಮ ೧೨" ಎಂಬ ಉಲ್ಲೇಖವು ಇನ್ನೊಂದು ಶಾಸನದಲ್ಲಿ ಪ್ರಸ್ತಾಪಿತವಾಗಿದೆ.[೭] ಮೇಲಿನ ನಿದರ್ಶನಗಳನ್ನು ಗಮನಿಸಿದಾಗ, ಪೂಜೆಗಾಗಿ ದತ್ತಿಯನ್ನು ಬಿಟ್ಟಿರುವುದು ಕಂಡುಬರುತ್ತದೆ. 'ತಂಮಜೀಯಮನು ಬೀರಗಲನಿಲಸಿ ಪ್ರತಿಪಾಲಿಸಿದನೆಂದು' ಶಾಸನವೊಂದು ಪ್ರಸ್ತಾಪಿಸುತ್ತದೆ.[೮] ಇಲ್ಲಿ ಪ್ರತಿಪಾಲಸಿದನೆಂಬುದು

ಆಚರಣೆಯನ್ನು ಮಾಡಿದನೆನ್ನುವ ಅರ್ಥವನ್ನೇ ನೀಡುತ್ತದೆ. ಇನ್ನೂ ಕೆಲವು ಸ್ಮಾರಕ ಶಿಲ್ಪಗಳಲ್ಲಿ 'ಮಕ್ಕಳು ಮಕ್ಕಳುವರಂ ಸಲಿಸುವರು' ಎಂಬ ಉಲ್ಲೇಖಗಳು ಕಂಡುಬರುತ್ತವೆ. ಇದರರ್ಥ ವೀರನ ಸ್ಮಾರಕಕ್ಕೆ ನೀಡಿದ ದತ್ತಿ ಮತ್ತು ಪೂಜಾ ಕಾರ್ಯಗಳನ್ನು ಪಾಲಿಸಿಕೊಂಡು ಬರುವುದನ್ನೇ ಸೂಚಿಸುತ್ತದೆ. ಹೀಗೆ ಶಾಸನಾದೇಶದ ಮೂಲಕ ಆಚರಣೆಗಳು ಅಸ್ತಿತ್ವದಲ್ಲಿದ್ದವೆಂದು ತೋರುತ್ತದೆ. ಕಾಲಾನಂತರದಲ್ಲಿ ಯಾವುದೋ ಕಾರಣದಿಂದ ಆಚರಣೆಗಳು ನಿಂತುಹೋಗಿರುವುದು ಕಂಡುಬರುತ್ತದೆ.

**೭.೨.೨. ಜನಪದರ ಆಚರಣೆಗಳು**

ಸ್ಮಾರಕಶಿಲ್ಪಗಳ ಮೇಲೆ ಗೌರವ, ಭಯ, ಭಕ್ತಿಗಳನ್ನು ಹೊಂದಿರುವ ಜನರು ಅವುಗಳ ಮೇಲೆ ತಮ್ಮದೇ ಆದ ಆಚರಣೆಗಳನ್ನು ರೂಪಿಸಿಕೊಂಡಿದ್ದಾರೆ. ವರ್ಷಕ್ಕೊಮ್ಮೆ ಅಥವಾ ಹಬ್ಬ ಹರಿದಿನಗಳಲ್ಲಿ ಅವುಗಳನ್ನು ಚಾಚುತಪ್ಪದೇ ಪಾಲಿಸಿಕೊಂಡು ಬರುವುದನ್ನು ಕಾಣುತ್ತೇವೆ. ಇಂತಹ ಆಚರಣೆಗಳು ಜನಪದರ ಸಂಸ್ಕೃತಿಯಾಗಿ ಪ್ರತಿಬಿಂಬಿತವಾಗಿವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆಯುವ ವಿಶಿಷ್ಟ ಸಾಂಸ್ಕೃತಿಕ ಆಚರಣೆಗಳನ್ನು ಈ ಮುಂದಿನಂತೆ ವಿಶ್ಲೇಷಿಸಲಾಗಿದೆ. ಕೊಂಡದಹಳ್ಳಿಯಲ್ಲಿರುವ ಮಾಸ್ತಮ್ಮ ಆ ಗ್ರಾಮದ ಪ್ರಮುಖ ದೇವತೆಯಾಗಿದ್ದಾಳೆ. ಮಾಸ್ತಿಯ ಜಾತ್ರೆ ಮಾಡದೆ ನೇಗಿಲನ್ನು ಉಳುವುದಿಲ್ಲ. ವರ್ಷಕ್ಕೊಮ್ಮೆ ಯುಗಾದಿ ಅನಂತರ ಜಾತ್ರೆ ನಡೆಯುತ್ತದೆ. ಜಾತ್ರೆ ಆಗುವುದಕ್ಕೆ ಮೂರು ದಿನಗಳ ಮೊದಲು ಗ್ರಾಮದ ಐವರು ಮುತ್ತೈದೆಯರು ಉಪವಾಸವಿದ್ದು ಪೂಜಾ ಕಾರ್ಯಗಳನ್ನು ನೆರವೇರಿಸುತ್ತಾರೆ. ಹಬ್ಬದ ದಿನ ಬೆಳಗ್ಗೆ ಅಭಿಷೇಕ ಹಾಗೂ ಬಾಸಿಂಗ ಕಟ್ಟುವ ಕಾರ್ಯವಿರುತ್ತದೆ. ಈ ಗ್ರಾಮದ ಆಚಾರಿಗಳ ಮನೆಯಿಂದ ತಂದ ಬಾಸಿಂಗವನ್ನು ಮಾಸ್ತಮ್ಮಳಿಗೆ; ರಾಮಗನಹಳ್ಳಿ ಕುಂಬಾರರ ಮನೆಯಿಂದ ತಂದ ಬಾಸಿಂಗವನ್ನು ಮಾಸ್ತಿ ಗಂಡನಿಗೆ ಕಟ್ಟುತ್ತಾರೆ. ಅಭಿಷೇಕದ ನಂತರ ಮಾಸ್ತಿಕಲ್ಲಿಗೆ ನೂರೊಂದು ಪೂಜೆಯನ್ನು ಮಾಡುತ್ತಾರೆ. ಮುಖಪದ್ಮ ಮುಂತಾದ ಆಭರಣಗಳಿಂದ ಮಾಸ್ತಿಕಲ್ಲನ್ನು ಅಲಂಕರಿಸಲಾಗಿರುತ್ತದೆ. ಗಂಡನ ಕಲ್ಲಿಗೆ ಹೆಚ್ಚಿನ ಅಲಂಕಾರ ಮಾಡುವುದಿಲ್ಲ. ಇದು ಮಾಸ್ತಮ್ಮ ಸಹಗಮನ ಮಾಡುವ ಮೊದಲು ಅಲಂಕಾರ ಮಾಡಿಕೊಳ್ಳುತ್ತಿದ್ದುದರ ಮತ್ತು ಅವಳಿಗೂ ಅವಳ ಸತ್ತ ಗಂಡನಿಗೂ ಮತ್ತೆ ಮದುವೆ ಶಾಸ್ತ್ರ ಮಾಡಿದುದರ ಸಂಕೇತವಿರಬೇಕು.[೧೦] ಈ ದಿನ ದೇವಸ್ಥಾನದ ಹೊರಗಡೆ ನಡೆಯುವ ಅನ್ನದಾಸೋಹದೊಂದಿಗೆ ಹಬ್ಬ ಮುಕ್ತಾಯವಾಗುತ್ತದೆ. ಸಾಯಂಕಾಲ ಹೊಲ ಉಳುವ ರೈತನಿಗೆ ಉಳುವ ಆಜ್ಞೆಯಾದ ನಂತರವೇ ಅವನು ಕೆಲಸ ಆರಂಭಿಸುತ್ತಾನೆ. ಈ ಹಬ್ಬ ಮಾಡದೆ ರೈತರು ಉಳುವಂತಿಲ್ಲ. ತಪ್ಪಿ ನಡೆದರೆ ಮಾಸ್ತ್ಯಮ್ಮ ಶಿಕ್ಷಿಸುತ್ತಾಳೆ ಎಂಬ ಭಯ, ಭಕ್ತಿ ಅವರದ್ದಾಗಿದೆ. ವಿದ್ವಾಂಸರಾದ ಬಸವರಾಜ ಕಲ್ಗುಡಿ ಅವರು ಈ ಹಬ್ಬದಲ್ಲಿ ಜಾತಿ ಮತ ಭೇದವಿಲ್ಲದೆ ಎಲ್ಲರೂ ಭಾಗವಹಿಸುತ್ತಾರೆ ಎಂದು ಅಭಿಪ್ರಾಯಿಸಿದ್ದಾರೆ.[೧೧] ಆದರೆ ಕಪ್ಪು ಜನಕ್ಕೆ (ಮಾದಿಗರಿಗೆ) ನಿರಾಕರಿಸಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಕೊಳ್ಳಲಾಗಿದೆ. ಚಿಕ್ಕಡ ಗ್ರಾಮದಲ್ಲಿ ಬೇಡ ಜನಾಂಗದಲ್ಲಿ ಮದುವೆಯಾಗುವವರು ಮೊದಲು ಮಾಸ್ತಿಶಿಲ್ಪಕ್ಕೆ ಬಂದು ಪೂಜೆ ಮಾಡುತ್ತಾರೆ.

ಮೊದಲಿಗೆ ಹೆಣ್ಣಿಗೆ ಮಾಡುವ ಶೃಂಗಾರ ಆಭರಣಗಳನ್ನೆಲ್ಲ ಮಾಸ್ತಿಗೆ ಹಾಕುತ್ತಾರೆ. ಗಂಡಿಗೆ ಮಾಡುವ ಶೃಂಗಾರ ಆಭರಣಗಳನ್ನು ವೀರನಿಗೆ ಹಾಕುತ್ತಾರೆ. ಪೂಜೆ ನಂತರ ಅವುಗಳನ್ನು ತೆಗೆದು ವಧು-ವರರು ಶೃಂಗರಿಸಿಕೊಳ್ಳುತ್ತಾರೆ. ಮಾಸ್ತ್ಯಮ್ಮನ ಹಾರೈಕೆ ನಮ್ಮ ಮೇಲಿರಲಿ ಎನ್ನುವುದು ಅದರ ಹಿಂದೆ ಇರುವ ಉದ್ದೇಶವಾಗಿದೆ.[೧೨] ಕೋಗಲೂರಿನಲ್ಲಿ ಕೆರೆ (ಹುಲುಸು) ಆಚರಣೆ ನಡೆಯುತ್ತದೆ. ಈ ಗ್ರಾಮದ ಗಂಡು ಮಾದಿಗ ಪಣತೊಟ್ಟು ತ್ಯಾವಣಿಗಿಯಲ್ಲಿನ ಹುಲುಸನ್ನು ತಮ್ಮ ಊರಿಗೆ ತರುತ್ತಾನೆ. ಹುಲುಸು ತಮ್ಮ ಊರು ಬಿಡುತ್ತಲ್ಲ ಎಂದು ತ್ಯಾವಣಿಗಿ ಜನರು ಅವನನ್ನು ಬೆನ್ನಟ್ಟಿಕೊಂಡು ಬಂದು ತಲೆಕಡೇದು ಹಾಕುತ್ತಾರಂತೆ. ಇದರ ಪ್ರಭಾವದಿಂದಾಗಿಯೇ ಏನೋ ಕೋಗಲೂರು ಗ್ರಾಮದಲ್ಲಿ ಹುಲುಸು ಆಚರಣೆ ನಡೆಸುತ್ತಾರೆ. ಇಲ್ಲಿನ ವೀರಭದ್ರನ ದೇವಸ್ಥಾನದಲ್ಲಿ ಬೇವಿನಸೊಪ್ಪು ಮುಂತಾದವನ್ನು ಕಟ್ಟುತ್ತಾರೆ. ಕರೆ (ಹುಲುಸು) ನಡೆಯುವ ದಿನ ಇದನ್ನು ಮನೆಗೆ ತೆಗೆದುಕೊಂಡು ಹೋದವರಿಗೆ 'ಹುಲುಸು' ಹೆಚ್ಚುತ್ತದೆ. ಆದ್ದರಿಂದ ಇದನ್ನು ತೆಗೆದುಕೊಂಡು ಹೋಗಲು ಗಂಡಸರೆಲ್ಲ ತಾ ಮುಂದೆ ನಾ ಮುಂದು ಎಂದು ನುಗ್ಗುತ್ತಾರೆ. ಅದನ್ನು ತೆಗೆದುಕೊಳ್ಳುವುದಕ್ಕಾಗಲಿ ಗಲಾಟೆಯಾಗುತ್ತದೆ, ಪರಚಾಡುತ್ತಾರೆ, ಕಿತ್ತುಕೊಳ್ಳುತ್ತಾರೆ. ಬೇರೆ ಊರಿನ ಮಂದಿ ಯಾರು ಇದನ್ನು ತೆಗೆದುಕೊಂಡು ಹೋಗುವಂತಿಲ್ಲ. ಹುಲುಸನ್ನು ಯಾರು ತೆಗೆದುಕೊಂಡು ಹೋಗದಂತೆ ಗ್ರಾಮದ ಸುತ್ತಲೂ ಕಾವಲಿರುತ್ತದೆ. ಬೇರೆ ಊರಿನವರು ತೆಗೆದುಕೊಂಡು ಹೋದರೆ ಊರಿನ ಹುಲುಸು ಹೋಗುತ್ತದೆ ಎಂಬ ನಂಬಿಕೆ ಜನರದ್ದು, ಯಾರಾದರೂ ತೆಗೆದುಕೊಂಡು ಹೋದರೆ ಅವರನ್ನು ಅವರ ಊರು ಗಡಿ ತಲುಪುವದರೊಳಗೆ ಅಟ್ಟಿಸಿಕೊಂಡು ಹೋಗಿ ಕೊಲೆ ಮಾಡುತ್ತಾರಂತೆ.

ನೆಲಹೊನ್ನೆ ಗ್ರಾಮದಲ್ಲಿ ತಳವಾರ (ನಾಯಕ) ಸಮುದಾಯದ ಮನೆಗಳಲ್ಲಿ ಮದುವೆ, ಮಕ್ಕಳು ಹುಟ್ಟಿದಾಗ ಅಥವಾ ಆಕಳು ಕರು ಹಾಕಿದಾಗ ಆ ಮನೆಯವರು ಒಂದು ಸೇರು ಅಕ್ಕಿ, ಬೆಲ್ಲ, ಊದಿನಕಡ್ಡಿ, ಹಾಲು, ಮೊಸರು ಮತ್ತು ಬೆಣ್ಣೆಯನ್ನು ಈ ಗ್ರಾಮದ ಲಿಂಗಾಯಿತರ ಪುಟ್ಟಪ್ಪನ ಮನೆಯವರಿಗೆ ಗುರುವಾರ ಅಥವಾ ಭಾನುವಾರದ ದಿನಗಳಂದು ತಂದು ಕೊಡುತ್ತಾರೆ. ಪುಟ್ಟಪ್ಪನ ಮನೆಯವರು ಆ ದಿನ ತಮ್ಮ ಮನೆಯನ್ನು ಸ್ವಚ್ಛಗೊಳಿಸಿ ತಳವಾರರು ತಂದುಕೊಟ್ಟು ಆಹಾರ ಧಾನ್ಯಗಳನ್ನು ಮನೆಯಲ್ಲಿ ಬೇಯಿಸುತ್ತಾರೆ. ನಂತರ ಮನೆಯ ಹಿಂದೆ ಇರುವ ಮಾಸ್ತಿಶಿಲ್ಪಕ್ಕೆ ಎಡೆಯನ್ನು ಹಾಕುತ್ತಾರೆ. ಪೂಜೆಯ ನಂತರ ಎಡೆಯನ್ನು ಅಲ್ಲಿ ನೆರೆದಿದ್ದವರಿಗೆಲ್ಲ ಹಂಚುತ್ತಾರೆ. ಈ ಪದ್ಧತಿ ಹಿಂದಿನಿಂದಲೂ ಮಾಡಿಕೊಂಡು ಬರಲಾಗುತ್ತದೆ ಎಂದು ಆ ಮನೆಯಲ್ಲಿರುವ ಹಿರಿಯ ಅಜ್ಜಿ ಅಭಿಪ್ರಾಯಪಡುತ್ತಾಳೆ. ಗಿರಿಯಾಪುರದಲ್ಲಿ ಉಪ್ಪಾರ ಸಮುದಾಯದವರು ಶಿವರಾತ್ರಿಯ ದಿನ ಮಾಸ್ತಿಕಲ್ಲುಗಳಿಗೆ ಹಾಲಿನ ಅಭಿಷೇಕ ಮಾಡುತ್ತಾರೆ. ಆ ದಿನ ಹೈನರ್ ಸಮುದಾಯದ ಐದು ಜನ ಕೋರಿ ಹುಡುಗರನ್ನು ಕರೆಸಿಕೊಂಡು ಹೊಸ ಬಟ್ಟೆಯನ್ನು ನೀಡುತ್ತಾರೆ. ಹಾಲಿನ ಅಭಿಷೇಕ ಮತ್ತು ಪೂಜೆಯ ನಂತರ ಹುಡುಗರು ಪ್ರಸಾದವನ್ನು ಮೊದಲು ಸ್ವೀಕರಿಸುತ್ತಾರೆ. ಮಹಿಳೆಯರು ತಾವು ತಂದ ಹೊಸ ಬಟ್ಟೆಗಳನ್ನು

ಮಾಸ್ತಿಕಲ್ಲುಗಳ ಮೇಲೆ ಹಾಕಿ ನಂತರ ತಾವು ಧರಿಸುವ ಪದ್ಧತಿಯುಂಟು. ಬೇನಕನಹಳ್ಳಿಯಲ್ಲಿ ಸಾದರಲಿಂಗಾಯಿತ ಜಾತಿಯಲ್ಲಿ ಮದುವೆಯಾಗುವ ಯುವತಿಯರು ಇಲ್ಲಿನ ವೀರ ಮಾಸ್ತಿಶಿಲ್ಪಕ್ಕೆ ಪೂಜೆ ಮಾಡಿದ ನಂತರ ಮೈಗೆ ಅರಿಶಿಣವನ್ನು ಹಚ್ಚಿ ಮದುಮಗಳನ್ನು ಮಾಡುತ್ತಾರೆ. ಇದೇ ರೀತಿ ಯರಗಟ್ಟಹಳ್ಳಿಯಲ್ಲಿ ಮದುವೆಯಾಗುವ ಯುವಕರು ವೀರನಕಲ್ಲಿಗೆ ಪೂಜೆ ಮಾಡಿದ ನಂತರವೇ ಮದುಮಗನನ್ನು ಮಾಡುತ್ತಾರೆ. ಕೊಡತಾಳು ಗ್ರಾಮದಲ್ಲಿ ವರ್ಷದ ಶ್ರಾವಣ ಮಾಸದ ಮೂರನೇ ವಾರದಂದು ಮಾಸ್ತಿಶಿಲ್ಪಕ್ಕೆ ಅಭಿಷೇಕ ಮಾಡಿಸುತ್ತಾರೆ. ಆ ದಿನ ಶಿಲ್ಪಕ್ಕೆ ಬೆಳ್ಳಿ ಮುಖ ಮತ್ತು ಸೀರೆಯನ್ನು ತೊಡಿಸಿ ಪೂಜೆಗಳನ್ನು ನೆರವೇರಿಸುತ್ತಾರೆ. ಮುದುಗರೆ ಗ್ರಾಮದಲ್ಲಿರುವ ವೀರ ಮಾಸ್ತಿಶಿಲ್ಪವನ್ನು ಅಜ್ಜ-ಅಜ್ಜಿ ಎಂದು ಕರೆಯುತ್ತಾರೆ. ಆ ಶಿಲ್ಪಕ್ಕೆ ಪ್ರತಿ ವರ್ಷ ಗೌರಿಹುಣ್ಣಿಮೆಯ ದಿನದಂದು ನಾಯಕ ಜನಾಂಗದವರಿಂದ ಪೂಜೆಗಳು ನಡೆಯುತ್ತವೆ. ಆ ದಿನ ಅಡುಗೆ ಮಾಡುವ ಹೆಣ್ಣು ಮಕ್ಕಳು ಉಪವಾಸವಿದ್ದು ಸಿಹಿ ಮತ್ತು ಖಾರದೂಟವನ್ನು ತಯಾರು ಮಾಡುತ್ತಾರೆ. ಪೂಜೆಯ ನಂತರ ಸಾಮೂಹಿಕವಾಗಿ ನಡೆಯುವ ಊಟದಲ್ಲಿ ಭಾಗಿಯಾಗುತ್ತಾರೆ. ಇದೇ ರೀತಿಯ ಸಂಪ್ರದಾಯ ಮಲಹಾಳ್ ಗ್ರಾಮದ ನಾಯಕ ಜನಾಂಗದವರಲ್ಲಿ ಕಾಣುತ್ತೇವೆ. ಚಿಕ್ಕಹಾಲಿವಣದಲ್ಲಿರುವ ಮಾಸ್ತಿಶಿಲ್ಪಗಳನ್ನು ಗೊಲ್ಲ ಜನಾಂಗದವರು ತಮ್ಮ ಹಿರಿಯರು ಎಂದು ಪೂಜಿಸುತ್ತಾರೆ. ಯುಗಾದಿ ಮತ್ತು ಮಹಾಲಯ ಅಮವಾಸ್ಯೆ ದಿನ ಈ ಸಮುದಾಯದ ಪ್ರತಿ ಮನೆಯಲ್ಲಿ ಒಬ್ಬ ಗಂಡಸರು ಉಪವಾಸವಿದ್ದು ಮಾಸ್ತಿಶಿಲ್ಪಗಳಿಗೆ ಎಡೆಗಳನ್ನು ಹಾಕುತ್ತಾರೆ. ನಂತರ ಮನೆಗೆ ಬಂದು ಮೂರು ಮನೆಯಲ್ಲಿ ಮಾಸ್ತಿಯ ಉತ್ಸವಮೂರ್ತಿಯನ್ನು ಕೂರಿಸಿ ನೂರವೊಂದು ಎಡೆಗಳನ್ನು ಹಾಕಿ ಪೂಜೆ ಮಾಡುತ್ತಾರೆ. ಉಪವಾಸವಿದ್ದು ಗಂಡಸರು ಮೊದಲು ಎಡೆಯನ್ನು ತಿನ್ನುವ ಪದ್ಧತಿಯಿದೆ. ಮಾಸಡಿ ಗ್ರಾಮದಲ್ಲಿ ಶ್ರಾವಣ ಮಾಸದ ಯಾವುದಾದರೊಂದು ಶನಿವಾರ ದಾಸರ ಸಮ್ಮುಖದಲ್ಲಿ ಅಲ್ಲಿನ ಸ್ಮಾರಕಶಿಲ್ಪಗಳಿಗೆ ಅಭಿಷೇಕ ಮಾಡಿಸುತ್ತಾರೆ. ಆ ದಿನ ಕುಂಚಿಟಿಗ ಸಮುದಾಯದವರಿಂದ ದಾಸರಿಗೆ ಅನ್ನ ಸಮರ್ಪಣೆಯನ್ನು ಮಾಡಲಾಗುತ್ತದೆ. ಇದೇ ರೀತಿ ಗುಂಡಿಚಟ್ನಿಹಳ್ಳಿ, ದಾಸರಹಟ್ಟಿ, ಸೂರಗೊಂಡನಕೊಪ್ಪಗಳಲ್ಲಿರುವ ಮಾಸ್ತಿಶಿಲ್ಪಗಳಿಗೆ ವರ್ಷಂಪ್ರತಿ ಬ್ರಾಹ್ಮಣರ ಸಮ್ಮುಖದಲ್ಲಿ ಅಭಿಷೇಕಗಳು ನಡೆಯುತ್ತವೆ. ಹೊದಿಗೆರೆಯಲ್ಲಿ ಮಾರಮ್ಮ ಮೊದಲಾದ ದೇವತೆಗಳಿಗೆ ಪ್ರಾಣಿ ಬಲಿ ಕೊಟ್ಟಂತೆ, ಮಾಸ್ತ್ಯಮ್ಮನ ಸ್ಮಾರಕಕ್ಕೂ ಕುರಿ ಬಲಿಯನ್ನು ನೀಡುತ್ತಾರೆ. ದಾಗಿನಕಟ್ಟೆ ಮತ್ತು ಬೆಂಡೀಗೆರೆ ಗ್ರಾಮಗಳಲ್ಲಿಯೂ ಮಾಸ್ತ್ಯಮ್ಮನ ಶಿಲ್ಪಗಳಿಗೆ ಪ್ರಾಣಿಗಳನ್ನು ಬಲಿ ನೀಡಲಾಗುತ್ತದೆ.

### ೭.೩. ಐತಿಹ್ಯಗಳು

'ಇತಿ', 'ಇತಿಹ' ಎನ್ನುವ ಸಂಸ್ಕೃತ ರೂಪದಿಂದ 'ಐತಿಹ್ಯ'ವು ನಿಷ್ಪನ್ನವಾಗಿದ್ದು ಈ ಶಬ್ದ ರೂಪಗಳಿಗೆ ಹೀಗೆ, ಹೀಗಿತ್ತು, ಹೀಗೆ ನಡೆದದ್ದು ಎಂಬಿತ್ಯಾದಿ ಅರ್ಥಗಳಿವೆ.[೧೩] ಯಾವುದನ್ನು 'ಐತಿಹ್ಯ' ಎಂದು ಗುರುತಿಸುತ್ತೇವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯ ನಿರೂಪಣೆಯಾಗಿರುತ್ತದೆ. ವ್ಯಕ್ತಿ, ಸ್ಥಳ, ಘಟನೆಗಳಿಗೆ ಸಂಬಂಧಿಸಿದಂತೆ ಯಾವುದೋ ನಿರ್ದಿಷ್ಟ

ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳನ್ನು ಐತಿಹ್ಯಗಳೆನ್ನುತ್ತೇವೆ.[೧೪] ವಿದ್ವಾಂಸರಾದ ವಸಂತ ಕುಮಾರ ತಾಳ್ತಜೆ ಅವರು ಐತಿಹ್ಯವನ್ನು ಹೀಗೆ ವಿಶ್ಲೇಷಿಸುತ್ತಾರೆ. ಐತಿಹ್ಯವು ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ತಿ ಕಲ್ಪಿತ ದಂತಕಥೆಯೂ ಅಲ್ಲ, ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆಯು ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಆ ನಿರ್ದಿಷ್ಟ ಘಟನೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶಗಳನ್ನು ಸೇರಿಸಿಬಿಡುತ್ತಾನೆ. ಆ ಪರಿಷ್ಕೃತ ಅಂಶವನ್ನು ಹರಡುತ್ತಾನೆ. ಹೀಗೆ ಒಂದು ಘಟನೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ರೂಪು ತಾಳುತ್ತದೆ ಎಂದಿದ್ದಾರೆ.[೧೫] ಜನಪದರಲ್ಲಿ ಪ್ರಚಲಿತವಿರುವ ಹಲವು ನಂಬಿಕೆ, ಆಚಾರ–ವಿಚಾರಗಳನ್ನು ಒಳಗೊಂಡ ಕಥೆಗಳು ಐತಿಹ್ಯಗಳಲ್ಲಿ ಕಂಡುಬರುವ ಸಂಗತಿಗಳು ಸಾಮಾನ್ಯವಾದುದು. ಅವು ಲಿಖಿತವಾಗಿಯೇನೂ ಇರುವುದಿಲ್ಲ, ಲಿಖಿತ ದಾಖಲೆಗಳಿಗೂ, ಐತಿಹ್ಯಗಳಿಗೂ ಕೆಲವೊಮ್ಮೆ ಸಾಮ್ಯ ಸಂಬಂಧ ಕಂಡುಬರುವುದು. ಐತಿಹ್ಯ ಎಂಬ ಮೌಖಿಕ ಇತಿಹಾಸವು ನೈಜ ಘಟನೆಗಳ ನಿರೂಪಣೆಯೂ ಆಗಿರಬಹುದು. ಕೆಲವು ಐತಿಹ್ಯದಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಹುಟ್ಟಿಕೊಂಡಿರುತ್ತವೆ. ಒಂದು ದೃಷ್ಟಿಯಿಂದ ನೋಡಿದರೆ ಇತಿಹಾಸ ಮತ್ತು ಸಾಹಿತ್ಯ ಇವೆರಡರ ಅಂಶಗಳೂ ಇದರೊಳಗಿವೆ. ಹಿಂದೆ ನಡೆದ, ನಡೆದಿರಬಹುದಾದ, ಕೇಳದ ಘಟನೆಯೊಂದರ ಪುನರ್‌ಸೃಷ್ಟಿ ಇದಾಗಿದ್ದರೂ ಇತಿಹಾಸ ರಚನೆಗೆ ಮೌಖಿಕ ಚರಿತ್ರೆ ಪ್ರಮುಖ ಆಕರವಾಗಿ ಬಳಕೆಯಾಗುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ವೀರರು ಮತ್ತು ಮಹಾಸತಿಯರ ಕುರಿತು ಹಲವು ಕಥೆ ಅಥವಾ ಐತಿಹ್ಯಗಳು ಹುಟ್ಟಿಕೊಂಡಿವೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಐತಿಹ್ಯಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

ಚಿಕ್ಕುಡೇವಿನ ಮಾಸ್ತ್ಯಮ್ಮನ ಕುರಿತ ಕಥೆಯೊಂದು ಹೀಗಿದೆ. ಮಾಸ್ತ್ಯಮ್ಮ ತವರುಮನೆ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ. ಅವಳನ್ನು ಚಿಕ್ಕುಡೇವಿನ ಕರಿಯಪ್ಪನೆಂಬುವವನಿಗೆ ನಿಶ್ಚಯವಾಗಿತ್ತು. ಆದರೆ ಮದುವೆಯಾಗುವ ಮೊದಲೇ ಕರಿಯಪ್ಪ ಹೋರಾಟವೊಂದರಲ್ಲಿ ತೀರಿಕೊಂಡ. ಸೈನ್ಯದಲ್ಲಿದ್ದ ಅವನ ಮಿತ್ರನೊಬ್ಬ ಈ ವಿಷಯವನ್ನು ಬರೆದು ಕಾಗೆಯ ಕೊರಳಿಗೆ ಕಟ್ಟಿ ಕಳುಹಿಸಿದ. ಕಾಗೆ ಚೀಟಿ ತೆಗೆದುಕೊಂಡು ಬಂದು ಮಾಸ್ತಮ್ಮಳ ಎದುರಿಗೆ ಒಗೆಯಿತು. ಸತ್ತ ವಿಷಯ ತಿಳಿದ ಮಾಸ್ತಮ್ಮ ಗಂಡನಾಗಬೇಕಿದ್ದ ಕರಿಯಪ್ಪನನ್ನು ಹುಡುಕುತ್ತ ಮಾಸ್ತಮ್ಮ ಹೊರಡುತ್ತಾಳೆ. ನಾಗೇಂದ್ರ (ನಾಗರಹಾವು) ದಾರಿ ತೋರುತ್ತ ನಡೆದ. ಅವಳು ದಾರಿಯ ಮಧ್ಯೆ ಎದುರಾದ ಮಡಿವಾಳಪ್ಪ, ಬೇಸಾಯ ಮಾಡುವವರನ್ನು ಕೇಳಿದಳು. ಅವರು ನಾವು ಕಾಣೆವು, ನಾವು ಕಾಣೆವು ಎಂದರು. ಕೊನೆಗೆ ಹೋರಾಟ ನಡೆದ ಸ್ಥಳಕ್ಕೆ ಬಂದಳು. ವೀರನ ರುಂಡ, ಮುಂಡಗಳು ದಿಕ್ಕಿಗೊಂದು ಬಿದ್ದಿದ್ದವು. ವೀರನ ಮೇಲೆ ನಾಗೇಂದ್ರ ಹೆಡೆಯೆತ್ತಿ ನಿಂತಿತ್ತು. ಮಾಸ್ತಮ್ಮ ವೀರನ ದೇಹದ

ಭಾಗಗಳನ್ನು ಒಡಲಿಗೆ ಕಟ್ಟಿಕೊಂಡು ತವರುಮನೆಗೆ ಹೋಗಿ ಒಡಲಕ್ಕಿಯನ್ನು ಕೇಳುತ್ತಾಳೆ. ತವರುಮನೆಯವರು ಮಾಸ್ತಮ್ಮ ಚಿಕ್ಕ ಹುಡುಗಿ ಮೂರು ಕೋಟೆ ಮೇಲೆ ಆಳಬೇಕಾದಂತಹವಳು ಅವಳು ಕೊಂಡ ಹೋಗುವುದು ಬೇಡ ಎಂದರು. ಗೌಡನ ಆಳ್ವಿಕೆ, ಅವನ ಜೊತೆ ನನ್ನ ಗಂಡನ ಸುರಾಯಿಗೆ ಬೆಲೆ ಇಲ್ಲ ನಾನು ಕೊಂಡವಾಗುವವಳೇ ಎಂದು ಮಾಸ್ತಮ್ಮ ಪ್ರತಿಕ್ರಿಯಿಸುತ್ತಾಳೆ. ನಂತರ ಗಂಡನ ಮನೆಗೆ ಬಂದು ಒಡಲಕ್ಕಿ ಕಿಚ್ಚು ಕೇಳಿದಳು. ಅವರು ನಿನ್ನನ್ನು ಮದುವೆಯಾಗಿರಲಿಲ್ಲ. ಆದ್ದರಿಂದ ಕೊಡುವುದಿಲ್ಲ ಎಂದರು. ಎರಡೂ ಮನೆಗಳಿಗೆ ಶಾಪ ಹಾಕಿ ತ್ಯಾವಣಿಗೆಯ ಗೌಡನ ಬಳಿ ಒಡಲಕ್ಕಿ ಕೇಳಲು ಹೋಗುತ್ತಾಳೆ. ಗೌಡರು ನೀಡಿದ ಒಡಲಕ್ಕಿ, ಕಿಚ್ಚು, ತೆಂಗಿನ ಗರಿ, ಕಾಯಿ ಮುಂತಾದವುಗಳನ್ನು ತೆಗೆದುಕೊಂಡು ಚಿಕ್ಕುಡೇವಿಗೆ ಬಂದು ಅಗ್ನಿಪ್ರವೇಶ ಮಾಡಲು ನಿರ್ಧರಿಸುತ್ತಾಳೆ. ಆದರೆ ಊರಿನವರು ಒಪ್ಪದೇ ಕೊಂಡದ ಸಿದ್ಧತೆಯನ್ನು ಮಾಡಲು ನಿರಾಕರಿಸುತ್ತಾರೆ. ಮಾಸ್ತಮ್ಮಳ ಭಕ್ತಿಯಿಂದ ಅದ್ಭುತವೆಂಬಂತೆ ಜೋಡು ಹುಣಸೇಮರ ಸುರಯ, ಕನ್ನಡಿಹಳ್ಳು, ಒಂಭತ್ತು ಗಾಡಿ ಶ್ರೀಗಂಧ ಬಂದವು. ಕೊಂಡದಲ್ಲಿ ಗಂಡನನ್ನು ಕಟ್ಟಿ ತಾನು ಬೀಳುತ್ತಾಳೆ.[೧೬] ಹೊದಿಗೆರೆಯ ಮಾಸ್ತಿ ಕಥೆ ಇದಕ್ಕಿಂತ ಭಿನ್ನವಾಗಿದೆ. ಮಾಸ್ತಮ್ಮ ಲಿಂಗಾಯಿತ (ಗೋಧಿ ಗೌಡರು) ಮನೆ ಮಗಳು. ಈ ವಂಶದಲ್ಲಿ ಹಿಂದೆ ಹಿರೇಗೌಡ ಮತ್ತು ಚಿಕ್ಕೇಗೌಡ ಎಂಬ ಅಣ್ಣತಮ್ಮಂದಿರು ಇದ್ದರು. ಚಿಕ್ಕೇಗೌಡ ಮಹಾ ಹಟವಾದಿಯಾಗಿದ್ದ. ಒಂದು ದಿನ ಕ್ಷೌರ ಮಾಡಿಸಿಕೊಂಡು ಬಂದು ಹೆಂಡತಿಗೆ ನೀರು ಕಾಯಿಸಲು ಹೇಳಿದ. ಹೆಂಡತಿ ನೀರು ಕಾಯಿಸಲಿಲ್ಲ, ಬುತ್ತಿ ಕಟ್ಟುವುದು ಎಲ್ಲಿ? ಅಡುಗೆ ಮಾಡುದು ಎಲ್ಲಿ? ಎಂದು ಅವಳು ಸುಮ್ಮನೆ ಕುಳಿತಳು. ಚಿಕ್ಕೇಗೌಡನಿಗೆ ಕೋಪ ಬಂತು, ತನ್ನ ಹೆಂಡತಿಯ 'ಗ್ಯಾರೆ ಮೆಟ್ಟಿ ಗ್ಯಾರೆ ಸಿಗಿದ' ಅವಳ ಕಾಲನ್ನು ಮೆಟ್ಟಿ ಹಿಡಿದು, ಎಳೆದು ಹೋಳು ಮಾಡಿದ. ಹೀಗೆ ಸೀಳಿದ್ದನ್ನು ಕೋಟೆ ಗೋಡೆಯಿಂದ ಆಚೆ ಎಸೆದ, ನಂತರ ಒಂದೇ ದಿನದಲ್ಲಿ ವಡ್ಡರ ಕೈಯಲ್ಲಿ ಬಾವಿಯನ್ನು ತೋಡಿಸಿ ಸ್ನಾನ ಮಾಡಿದ. ಊರ ಹಿರಿಯರು ಇವನು ಮಾಡಿದ ಹತ್ಯೆಯನ್ನು ಸ್ತ್ರೀ ಹತ್ಯೆ, ಅಬಲೆಯ ಹತ್ಯೆ ಎಂದು ಹೇಳಿ, ಈ ಕರ್ಮವನ್ನು ಕಳೆಯಲು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ಹೇಳಿದರು. ಚಿಕ್ಕೇಗೌಡ ತನ್ನ ಪಾಪ ಪರಿಹಾರಾರ್ಥವಾಗಿ ಅವಳ ಸ್ಮರಣ ಸೂಚಕವಾದ ವೀರಮಾಸ್ತಿಯನ್ನು ಮಾಡಿ ನಿಲ್ಲಿಸಿದ.[೧೭] ಈ ಕಥೆಯಲ್ಲಿ ಗಂಡನೇ ಶಿಲ್ಪವನ್ನು ಮಾಡಿಸಿದನೆಂದು ಹೇಳುತ್ತಾರೆ. ಆದರೆ ಸ್ಮಾರಕದಲ್ಲಿ ಸತಿಪತಿಗಳಿಬ್ಬರು ಇರುವುದರಿಂದ ಘಟನೆಯ ನಂತರ ಗಂಡನು ಮಡಿದಿರಬಹುದು. ಆ ನಂತರ ಯಾರೋ ಸಂಬಂಧಿಕರು ಅವರಿಬ್ಬರ ಸ್ಮರಣಾರ್ಥ ಈ ಸ್ಮಾರಕವನ್ನು ನೆಟ್ಟಿರುವ ಸಾಧ್ಯತೆಯಿದೆ.

ಕಮ್ಮಾರಗಟ್ಟೆಯ ಮಾಸ್ತಮ್ಮನ ಕುರಿತಾಗಿ ಹೇಳುವ ಐತಿಹ್ಯ ಹೀಗಿದೆ. ಮಾಸ್ತಿ ದುಮ್ಮಿ ಗ್ರಾಮದ ಲಿಂಗಾಯಿತರ ಮನೆಯ ಮಗಳು. ಕೆಂಚಪ್ಪ ತನ್ನ ಹೆಂಡತಿಯ ಮನೆಗೆ ರಾತ್ರಿ ಹೋಗಿ ರಾತ್ರಿಯೇ ತಿರುಗಿ ಕಮ್ಮಾರಗಟ್ಟೆಗೆ ಬರುತ್ತಿದ್ದ ಕೆಂಚಪ್ಪ ಹೀಗೆ ಮಾಡುವುದನ್ನು ಯಾರು ನೋಡಿರಲಿಲ್ಲ. ಒಂದು ದಿನ ಅವನ ಹೆಂಡತಿಯ ಅಕ್ಕ ನೋಡಿದಳು. ಅವರು ಯಾರು

ಎಂದು ತಂಗಿಯನ್ನು ಕೇಳಿದಳು. ತಂಗಿ ಅವರು ತನ್ನ ಗಂಡ ಎಂದು ಹೇಳುತ್ತಾಳೆ. ಆದರೆ ಅವರ ಅಣ್ಣಂದಿರು ನೀನು ಯಾರನ್ನೋ ಕೂಡಿಕೊಂಡು ಗರ್ಭಿಣಿಯಾಗಿದ್ದೀಯೆ! ಆದ್ದರಿಂದ ನಿನ್ನನ್ನು ಕೊಲ್ಲುತ್ತೇವೆ ಎಂದು ಹೆದರಿಸಿದರು. ತಂಗಿ ಅಣ್ಣಂದಿರು ಕೊಡುವ ಶಿಕ್ಷೆ ಏನೇ ಇದ್ದರೂ ಅದನ್ನು ಎದುರಿಸುತ್ತೇನೆ ಅಂದಳು. ಅಣ್ಣಂದಿರು ಅವಳಿಗೆ ಒಂದು ಷರತ್ತನ್ನು ಹಾಕುತ್ತಾರೆ. ಕಟ್ಟೆಯ ಮೇಲೆ ಇರುವ ಹಳೆಯ ಬಂಡಿಯ ಗಾಲಿಯನ್ನು ಬಾವಿಯೊಳಕ್ಕೆ ಹಾಕುತ್ತೇವೆ. ಅದನ್ನು ನಿನ್ನ ಗಂಡ ಎತ್ತಿ ಪಡಸಾಲೆಯಲ್ಲಿ ಇಟ್ಟರೆ ನಿನ್ನ ಗಂಡನೇ ರಾತ್ರಿ ಓಡಾಡುತ್ತಿದ್ದ ಎಂದು ತಿಳಿಯುತ್ತೇವೆ ಎಂದು ಹೇಳಿದರು. ಅವಳ ಗಂಡ ಅದನ್ನು ತೆಗೆದು ಪಡಸಾಲೆಯ ಕಟ್ಟೆಯಲ್ಲಿ ಇಟ್ಟುಬಿಟ್ಟ. ಕೆಲವು ದಿನಗಳ ಮೇಲೆ ಅವಳು ಗಂಡು ಮಗುವಿಗೆ ಜನ್ಮ ಕೊಟ್ಟಳು. ಅಣ್ಣಂದಿರು ಅವಳ ಗಂಡನಿಗೆ ಕರೆದುಕೊಂಡು ಹೋಗಲು ಹೇಳಿದರು. ಕರೆದುಕೊಂಡು ಹೋಗುವ ದಿನ ಕರಿಗಡಬು ಮುಂತಾದವನ್ನು ಮಾಡಿ ತುಪ್ಪದೊಂದಿಗೆ ಊಟ ಮಾಡಿದರು. ಊಟ ಆದಮೇಲೆ ಮಧ್ಯಾಹ್ನದ ಬಿಸಿಲಿನಲ್ಲಿ ಒಬ್ಬ ಮಾದಿಗನನ್ನು ಜೊತೆಗೆ ಕಳುಹಿಸಿ ಬಿಟ್ಟುಬರಲು ಹೇಳಿದರು. ಆದರೆ ಇವರೆಲ್ಲ ಒಳಗೊಳಗೆ ಸಂಚು ಮಾಡಿ ಗಂಡನ ತಲೆ ಕಡಿಸಲು ಉಪಾಯ ಮಾಡಿದ್ದರು. ಬಿಸಿಲಿನ ತಾಪದಿಂದ ಗಂಡ ನೀರು ಕುಡಿಯಲು ಸೂಳೆಕೇರಿ ಹಳ್ಳಕ್ಕೆ ಇಳಿದು ವರ್ತನೆ ತೆಗೆದು ನೀರು ಕುಡಿಯಲಿಕ್ಕೆ ಬಗ್ಗಿದಾಗ ಮಾದಿಗರವನು ಪಟೇಲ(ಗಂಡ)ನ ತಲೆಯನ್ನು ಕತ್ತರಿಸಿ ಪಟೇಲನ ಹೆಂಡತಿಯ ಹತ್ತಿರ ಬಂದು ತಾನು ಅವನ ತಲೆಯನ್ನು ಕತ್ತರಿಸಿದ ವಿಷಯ ಹೇಳಿದ. ಅವಳು ಮಾದಿಗನನ್ನು ಕುರಿತು ಗಂಡನ ತಲೆಯನ್ನು ಕಡಿದ ರೀತಿ ಹೇಗೆ ಎಂದು ಕೇಳಿದಳು. ಅವನು ಕುಡುಗೋಲನ್ನು ಅವಳ ಕೈಯಲ್ಲಿ ಕೊಟ್ಟು ಅವಳ ಗಂಡ ನೀರು ಕುಡಿಯುತ್ತಿದ್ದ ರೀತಿಯನ್ನು ತೋರಿಸಲು ಬಗ್ಗಿದ. ತಕ್ಷಣ ಮಾಸ್ತಿ ಅವನ ತಲೆಯನ್ನು ಕತ್ತರಿಸಿಬಿಟ್ಟಳು. ಇವರ ಜೊತೆಯಲ್ಲಿದ್ದ ನಾಯಿಯೊಂದು ಅವರ ರಕ್ತದಲ್ಲಿ ಹೊರಳಾಡಿ ಕಮ್ಮಾರಗಟ್ಟೆಗೆ ಬಂದಿತು. ಯಾಕೆ ಹೀಗೆ ಎಂದು ಕಮ್ಮಾರಗಟ್ಟೆಯಲ್ಲಿ ಜನರು ಯೋಚಿಸುವುದರೊಳಗಾಗಿ ಈ ಮಹಾಸತಿ ಗಂಡನ ತಲೆ ಹಾಗೂ ಮಗನನ್ನು ಮಡಿಲಲ್ಲಿ ಕಟ್ಟಿಕೊಂಡು ಕಮ್ಮಾರಗಟ್ಟೆಗೆ ಬಂದಳು. ಮಾಸ್ತಿಯ ಗಂಡ ಮಾಸಡಿಯಲ್ಲಿ ಸೂಳೆಯನ್ನು ಇಟ್ಟುಕೊಂಡಿದ್ದ. ಅವಳೂ ಸಹ ಕಮ್ಮಾರಗಟ್ಟೆಗೆ ಬಂದಳು. ಅಲ್ಲಿ ಕೊಂಡ ಮಾಡಿಸಿ ಇಬ್ಬರೂ ಅಗ್ನಿ ಪ್ರವೇಶ ಮಾಡಿದರು. ಅಲ್ಲಿಯ ಮಣ್ಣನ್ನು ಯಾರು ಹೇರುವುದಿಲ್ಲ. ಹೇರಿದರೆ ರಕ್ತಕಾರಿ ಸಾಯುವರೆಂದು ಹೇಳುತ್ತಾರೆ.[೧೮]

ಕೊಂಡದಹಳ್ಳಿಯ ಮಾಸ್ತಿ ಐತಿಹ್ಯವು ಇದೇ ರೀತಿಯಿದೆ. ಆದರೆ ಇಲ್ಲಿ ಹಳ್ಳದ ಹೆಸರು ಬೇರೆಯದು. ಕೊಂಡದಹಳ್ಳಿಯ ಹತ್ತಿರವೇ ಹರಿಯುತ್ತಿರುವ 'ಹಿರೇಹಳ್ಳ'ದ ಹೆಸರು ಈ ಐತಿಹ್ಯದಲ್ಲಿದೆ. ಕಥೆಯಲ್ಲಿ ಸ್ವಲ್ಪ ಬದಲಾವಣೆ ಇದೆ. ಕೊಲೆ ಮಾಡಿ ಬಂದ ಮಾದಿಗ ಇವಳನ್ನು ಮದುವೆಯಾಗು ಎಂದು ಕೇಳುತ್ತಾನೆ. ಇವಳು ಒಪ್ಪಿದ ಹಾಗೆ ಮಾಡಿ, ನೀರಡಿಕೆಯಾಗಿದೆಯೆಂದು ಹೇಳುತ್ತಾಳೆ. ಮಾದಿಗ ನೀರನ್ನು ಶುಚಿ ಮಾಡಿ ಕುಡಿಯಲು ಹೇಳಿದಾಗ, ಅವಳು ಹೊಸಗಂಡ

ಕುಡಿದು ಬಿಟ್ಟ ನೀರನ್ನು ಕುಡಿಯುವೆನೆನ್ನುವಳು. ಅವನು ನೀರು ಕುಡಿಯಲು ಬಗ್ಗಿದಾಗ ಮಾಸ್ತಿ ಕುಡುಗೋಲಿನಿಂದ ಅವನ ತಲೆಯನ್ನು ಕಡಿದುಬಿಡುತ್ತಾಳೆ. ಕೊಂಡದಹಳ್ಳಿಗೆ ಬಂದು ಅಗ್ನಿಪ್ರವೇಶ ಮಾಡುತ್ತಾಳೆ. ಹೀರೆಕೋಗಲೂರಿನ ಮಾಸ್ತಿಯ ಕುರಿತಾಗಿ ಇರುವ ಐತಿಹ್ಯವು ಹೀಗಿದೆ. ಹಿರೇಕೋಗಲೂರಿನ ವ್ಯಕ್ತಿಯೊಬ್ಬನು ತ್ಯಾವಣಿಗಿ ಊರಿನಲ್ಲಿ ಸೂಳೆಯೊಂದಿಗೆ ಸಂಬಂಧ ಇಟ್ಟುಕೊಂಡಿದ್ದನು. ಅವನು ಕಾರಹುಣ್ಣಿಮೆಯೆಂದು ತ್ಯಾವಣಿಗೆಗೆ ಹೋಗಿ ಪ್ರೇಯಸಿಗೆ ಅಲ್ಲಿಯ ಕರಿ(ಬಳ್ಳಿ) ತೆಗೆದುಕೊಂಡು ಹೋಗುವುದಾಗಿ ಹೇಳಿದನು. ಪ್ರೇಯಸಿ ಬೇಡವೆಂದು ಹೇಳಿದರೂ ಅವನು ಕೇಳದೆ 'ಕರಿ' ತೆಗೆದುಕೊಂಡು ಕೋಗಲೂರಿಗೆ ಹೊರಟನು. ತ್ಯಾವಣಿಗೆ ಜನರು ಅವನನ್ನು ಬೆನ್ನಟ್ಟಿದರು. ವಿಶ್ರಾಂತಿಗೆಂದು ಅವನು ಒಂದೆಡೆ ಕುಳಿತಾಗ ಹುಡುಕುತ್ತ ಬಂದ ತ್ಯಾವಣಿಗಿಯವರು ಗಾಣಗಿತ್ತಿಯೊಬ್ಬಳಿಂದ ಅವನು ಕುಳಿತುಕೊಂಡ ವಿಷಯ ತಿಳಿದು ಅಲ್ಲಿಗೆ ಬಂದು ಅವನನ್ನು ಕೊಂದರು. ಅವನು ಸಾಯುವಾಗ ಬಳ್ಳಿಯನ್ನು (ಕರಿ) ನುಂಗಿದ. ತ್ಯಾವಣಿಗಿಯವರು ರುಂಡವನ್ನು ತೆಗೆದುಕೊಂಡು ಹೋದರು. ಹಿರೇಕೋಗಲೂರಿನ ಜನರು ಈತನನ್ನು ಸಮಾಧಿ ಮಾಡಿದರು. ಈ ವಿಷಯ ತಿಳಿದ ಅವನ ಪ್ರೇಯಸಿ ತಾನೂ ಸತ್ತುಹೋದಳು. ಅವಳೇ ಹೀರೇಕೋಗಲೂರಿನ ಮಾಸ್ತಿ ಎನಿಸಿದ್ದಾಳೆ.[೧೯]

ಕಮ್ಮತ್ತಹಳ್ಳಿಯ ವೀರಗಲ್ಲನ್ನು ಹುಲುಸಪ್ಪ ಎಂದು ಕರೆಯುತ್ತಾರೆ. ಬಸವನಕೋಟೆ ಜಾತ್ರೆಯಲ್ಲಿ ಚರಗವನ್ನು ಚೆಲ್ಲುವಾಗ ಕಂಚಿಕೆರೆಯ ವ್ಯಕ್ತಿಯೊಬ್ಬ ಅದನ್ನು ತೆಗೆದುಕೊಂಡು ಕುದುರೆ ಹೇರಿ ಹೊರಡುತ್ತಾನೆ. ಕಮ್ಮತ್ತಹಳ್ಳಿಯ ಗಡಿಭಾಗದಲ್ಲಿ ಅವನ ಕುದುರೆ ಕಾಲಿಗೆ ಮುಳ್ಳು ತಾಗಿ ಕೆಳಗೆ ಬೀಳುತ್ತಾನೆ. ಬೆನ್ನತ್ತಿ ಬಂದಿದ್ದ ಹೊಸಕೋಟೆಯ ಜನರು ಅವನನ್ನು ಹಿಡಿದು ತಲೆಯನ್ನು ಕತ್ತರಿಸುತ್ತಾರೆ. ಅವನಿಗಾಗಿಯೇ ಇಲ್ಲಿ ವೀರಗಲ್ಲನ್ನು ನಿಲ್ಲಿಸಲಾಗಿದೆ.[೨೦] ಮತ್ತಿ ಗ್ರಾಮದ ಮಾಸ್ತಿಯ ಕುರಿತು ಹೀಗೆ ಹೇಳುತ್ತಾರೆ. ಮಾಯಕೊಂಡ ಆಳುತ್ತಿದ್ದ ತಿಮ್ಮಣ್ಣನಾಯಕನು ತನ್ನನ್ನು ಮೋಹಿಸಿದ ಹಾರುವರ ಹೆಣ್ಣು ಮಗಳನ್ನು ಲಗ್ನವಾದನು. ಅದನ್ನು ಸಹಿಸದ ಹೆಣ್ಣುಮಗಳ ಕಡೆಯವರು ಯುದ್ಧಕ್ಕೆ ಬಂದರು. ಯುದ್ಧದಲ್ಲಿ ತಿಮ್ಮಣ್ಣನಾಯಕ ಮರಣ ಹೊಂದಲು, ಅದನ್ನು ಕೇಳಿ ಮತ್ತಿಯಲ್ಲಿ ಆ ಹೆಣ್ಣುಮಗಳು ಕೊಂಡ ಏರಿದಳು.[೨೧] ಇದೇ ರೀತಿ ಅಲ್ಪ ವ್ಯತ್ಯಾಸದೊಂದಿಗೆ ಹೇಳುವ ಕಥೆ ಸೊರಟೂರು ಗ್ರಾಮದಲ್ಲಿದೆ. ಈ ಗ್ರಾಮದ ಸಾದರಲಿಂಗಾಯಿತರ ಹೆಣ್ಣು ಮಾಸ್ತಮ್ಮ ಹರಿಜನ ವ್ಯಕ್ತಿಯೊಬ್ಬನನ್ನು ಮೆಚ್ಚಿ ಮದುವೆಯಾಗುತ್ತಾಳೆ. ಈ ವಿಷಯ ತಿಳಿದ ಹೆಣ್ಣಿನ ಕಡೆಯವರು ಆಕೆಯ ಗಂಡನನ್ನು ಹುಡುಕಿ ತಲೆ ಕಡಿಯುತ್ತಾರೆ. ಆಗ ಮಾಸ್ತಮ್ಮ ಬೆಂಕಿಗೆ ಹೋಗಿದ್ದಾಳೆ. ಆಗಿನಿಂದ ಈಕೆ ನಮ್ಮ ಊರು ಕಾಯುವ ದೇವತೆಯಾಗಿದ್ದಾಳೆಂದು ಹೇಳುತ್ತಾರೆ.[೨೨] ಬೀಜೋಗಟ್ಟೆ ಗ್ರಾಮದ ವೀರಶೈವ ಲಿಂಗಾಯಿತ ಹೆಣ್ಣು ಮಗಳನ್ನು ಬಸವನಹಳ್ಳಿ ಗ್ರಾಮದ ಹುಡುಗನಿಗೆ ಮದುವೆ ಮಾಡಿ ಕೊಡಲಾಗಿತ್ತು. ಈ ಮದುವೆ ಗಂಡಿನ ಕಡೆಯವರಿಗೆ ಇಷ್ಟವಿರಲಿಲ್ಲ. ಮದುವೆಯ ನಂತರ ಅವರಿಗೆ ಕಿರುಕುಳವನ್ನು ನೀಡುತ್ತಾರೆ. ಇದರಿಂದ ಗಂಡ–ಹೆಂಡತಿ ಇಬ್ಬರು ಬೀಜೋಗಟ್ಟೆಗೆ ಬಂದು ನೆಲೆಸುತ್ತಾರೆ. ಕೆಲವು ದಿನಗಳ ನಂತರ ಇಬ್ಬರು

ಬಾವಿಗೆ ಬಿದ್ದು ಸಾಯುತ್ತಾರೆ.[೨೩] ಅವರು ಬಿದ್ದು ಸತ್ತಿರುವರೆಂದು ಹೇಳುವ ಬಾವಿಯನ್ನು ಜನ ಈಗಲೂ ತೋರಿಸುತ್ತಾರೆ. ಬೆನಕನಹಳ್ಳಿ ಮಾಸ್ತಿಯ ಕುರಿತು ಐತಿಹ್ಯವೊಂದು ಹೀಗಿದೆ. ಈ ಗ್ರಾಮದ ಸಾದರಲಿಂಗಾಯಿತರು ಮೂಲತಃ ಬಿಜಾಪುರದವರು. ಇವರ ಮನೆಯ ದೇವರು ಬೇಲೂರು ಚನ್ನಕೇಶವ. ಒಮ್ಮೆ ದರ್ಶನಕ್ಕೆಂದು ಎತ್ತಿನ ಗಾಡಿಯಲ್ಲಿ ಹೋಗುವಾಗ ಗಾಡಿಯ ಅಚ್ಚು ಮುರಿಯುತ್ತದೆ. ಆಗ ಜ್ಯೋತಿಷರೊಬ್ಬರು ಚನ್ನಕೇಶವನನ್ನು ನಿಮ್ಮ ಮನೆದೇವರಾಗಿ ಸ್ವೀಕರಿಸಿ ಎಂದರಂತೆ. ಆಗಿನಿಂದಲೂ ಈ ಮನೆತನದವರು ಚನ್ನಕೇಶವನ ದರ್ಶನಕ್ಕೆ ಹೋಗಿಬರುವ ಪರಿಪಾಠವಿರುತ್ತದೆ. ಒಮ್ಮೆ ಅಜ್ಜ-ಅಜ್ಜಿ ಬೇಲೂರು ಚೆನ್ನಕೇಶವನ ದರ್ಶನ ಪಡೆದು ಹಿಂದಿರುಗಿ ಬರುತ್ತಿರುವಾಗ ಕಳ್ಳರು ಅಜ್ಜನ ತಲೆಯನ್ನು ಕಡಿಯುತ್ತಾರೆ. ಅಜ್ಜಿ ಗಂಡನ ತಲೆಯನ್ನು ಸೆರಗಿನಲ್ಲಿ ಇಟ್ಟುಕೊಂಡು ಊರಿನ ಅಕ್ಷಯ ಬಾಗಿಲ ಬಳಿ ಬಂದು ನಿಲ್ಲುತ್ತಾಳೆ. ತನ್ನ ಸಮುದಾಯದವರೆನ್ನೆಲ್ಲ ಕರಿಸಿಕೊಂಡು ತಾನು ಅಗ್ನಿಪ್ರವೇಶ ಮಾಡುವುದಾಗಿ ವಿನಂತಿಸುತ್ತಾಳೆ. ಆಕೆಯ ಕೋರಿಕೆಯಂತೆ ಗ್ರಾಮಸ್ಥರು ಅಗ್ನಿಪ್ರವೇಶವನ್ನು ನೆರವೇರಿಸುತ್ತಾರೆ. ನಂತರ ಜ್ಯೋತಿಷರು ಹೇಳಿದಂತೆ ಸಾದರಲಿಂಗಾಯಿತ ಹೆಗ್ಗಡೆ ಗೌಡ್ರು ಮನೆತನದವರು ಅಜ್ಜ-ಅಜ್ಜಿಗೆ ಶಿಲ್ಪವನ್ನು ಮಾಡಿಸಿ ಗುಡಿಯನ್ನು ಕಟ್ಟಿದ್ದಾರೆ.[೨೪] ಕಡತಿ ಗ್ರಾಮದಲ್ಲಿರುವ ಮಾಸ್ತಿ ಯುಗಾದಿ ಪಾಡ್ಯ ದಿನ ಸ್ನಾನ ಮಾಡುವುದಕ್ಕಾಗಿ ಬೇವಿನ ಸೊಪ್ಪು, ಹೂ ತೆಗೆದುಕೊಂಡು ಬರಲು ಹೋದಾಗ ಕಲ್ಲಾಗಿದ್ದಾಳಂತೆ. ಆರುಂಡಿಯಲ್ಲಿ ಪಂಚಮಸಾಲಿ ಹೆಣ್ಣುಮಗಳು ಮನೆಯಲ್ಲಿ ಜಗಳ ಮಾಡಿಕೊಂಡು ಬೆಂಕಿಗೆ ಹಾರಿ ಕಲ್ಲಾಗಿದ್ದಾಳೆಂದು ಹೇಳುತ್ತಾರೆ.

ಹೀಗೆ ವೀರರು ಮತ್ತು ಮಹಾಸತಿಯರ ಕುರಿತು ಹೆಣೆದುಕೊಂಡಿರುವ ಹಲವು ಐತಿಹ್ಯಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರಕುತ್ತವೆ. ಈ ಐತಿಹ್ಯಗಳಲ್ಲಿ ಹೆಚ್ಚು ಉತ್ಪ್ರೇಕ್ಷೆ, ವರ್ಣನಾಭವದಿಂದ ಕೂಡಿದ್ದರೂ ಅವರ ಕುರಿತಾಗಿರುವ ವಾಸ್ತವಿಕ ಸಂಗತಿಗಳು ಬೆಳೆದುಬಂದಿರುವುದನ್ನು ಕಾಣುತ್ತೇವೆ. ಈ ಕುರಿತಾಗಿ ಜನಪದರಲ್ಲಿ ಹುಟ್ಟಿರುವ ನಂಬಿಕೆ ಮತ್ತು ಆಚರಣೆಗಳು ಜಿಲ್ಲೆಯಲ್ಲಿ ವಿಶಿಷ್ಟ ಸಾಂಸ್ಕೃತಿಕ, ಪರಂಪರೆಯಾಗಿ ಬೆಳೆದುಬಂದಿವೆ. ಇದರೊಂದಿಗೆ ವೀರರು ಮತ್ತು ಮಹಾಸತಿಯರು ಜನರ ದೃಷ್ಟಿಯಲ್ಲಿ ದೇವರೆನಿಸಿ ಅಲೌಕಿಕವಾದ ಸ್ಥಾನವನ್ನು ಪಡೆದುಕೊಂಡಿರುವುದನ್ನು ಕಂಡುಕೊಳ್ಳಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ದೇ.ಜವರೇಗೌಡ, ೨೦೦೧, ಜಾನಪದ ಅಧ್ಯಯನ, ಪು. ೩೨೪.

೨. ಈಶ್ವರಪ್ಪ ಎಂ.ಜಿ., ೧೯೯೯, ಜಾನಪದ ಇಬ್ಬನಿಗಳು, ಪು. ೫೦.

೩. ದೇ.ಜವರೇಗೌಡ, ೨೦೦೧, ಜಾನಪದ ಅಧ್ಯಯನ, ಪು. ೩೨೩-೩೨೪.

೪. ಎ.ಕ.ಸಂ.೧೧, ದಾವಣಗೆರೆ, ಶಾ.ಸಂ. ೧೧೫, ವಾಸನ.

೫. ಅದೇ, ಶಾ.ಸಂ. ೮೭, ಗಂಗನರಸಿ.

೬. ಎ.ಕ.ಸಂ.೭, ಹೊನ್ನಾಳಿ, ಶಾ.ಸಂ. ೧೧೭, ಹನಗವಾಡಿ.

೭. ಅದೇ, ಚನ್ನಗಿರಿ ಶಾ.ಸಂ. ४೫, ದೊಂದ್ರಗಟ್ಟಿ

೮. ಅದೇ, ಹೊನ್ನಾಳಿ, ಶಾ.ಸಂ. ೫೪, ಕುಳ್ಳಹಳ್ಳಿ.

೯. ಅದೇ, ಹೊನ್ನಾಳಿ, ಶಾ.ಸಂ. ೩೫, ೪೪, ೪೭, ೪೮, ಬೆಳಗುತ್ತಿ.

೧೦. ಚಿದಾನಂದಮೂರ್ತಿ ಎಂ., ಗ್ರಾಮೀಣ, ಪು. ೧೨೦.

೧೧. ಬಸವರಾಜ ಕಲ್ಗುಡಿ, ೧೯೮೫, ಮಹಾಸತಿ ಆಚರಣೆ: ಒಂದು ಅಧ್ಯಯನ, ಪು. ೧೮೨.

೧೨. ಅದೇ, ಪು. ೧೮೩.

೧೩. ಸುಬ್ಬಣ್ಣ ರೈ. ಎ., ೧೯೯೪, ದ. ಕ. ಜಿಲ್ಲೆಯ ಐತಿಹ್ಯಗಳು, ಪು. ೧೦.

೧೪. ದೇ.ಜ.ಗೌ, ೨೦೧೦, ಮಾತೆ ಸಾವಿತ್ರಮ್ಮ, ದೇಜಗೌ ಸಾಹಿತ್ಯಮಾಲೆ ಕುಸುಮ ೮, ಜಾನಪದ ಮಹಾಸಂಪುಟ, ಪು. ೧೭೯.

೧೫. ಪುರುಷೋತ್ತಮ ಬಿಳಿಮಲೆ, ೨೦೦೬, ಐತಿಹ್ಯಗಳು, ಸುವರ್ಣ ಜಾನಪದ ಲೇಖನಗಳು, ಪು. ೪೬.

೧೬. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೧೮೨-೧೮೩

೧೭. ಶೇಠ ಬಿ.ಎಸ್., ೧೯೯೧, ಕರ್ನಾಟಕದಲ್ಲಿ ಸತಿಪದ್ಧತಿ, ಪು. ೬೩.

೧೮. ಬಸವರಾಜ ಕಲ್ಗುಡಿ, ೧೯೮೫, ಪೂರ್ವೋಕ್ತ, ಪು. ೧೭೯.

೧೯. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೬೧-೬೨.

೨೦. ಮಾಹಿತಿ ನೀಡಿದವರು: ರಾಧಾಕೃಷ್ಣ ಬಿ., ನಾಯಕ, ಕಮ್ಮತ್ತಹಳ್ಳಿ.

೨೧. ಶೇಠ ಬಿ.ಎಸ್., ೧೯೯೧, ಪೂರ್ವೋಕ್ತ, ಪು. ೬೧.

೨೨. ಮಾಹಿತಿ ನೀಡಿದವರು: ನಾಗರಾಜ ಟಿ., ವಾಲ್ಮೀಕಿ ಸೊರಟೂರು.

೨೩. ಮಾಹಿತಿ ನೀಡಿದವರು: ಮಹೇಶ್ವರಪ್ಪ, ಸಾದರಲಿಂಗಾಯಿತ, ಬೀಜೋಗಟ್ಟಿ.

೨೪. ಮಾಹಿತಿ ನೀಡಿದವರು: ಬೆನಕೇಶ್, ಸಾದರಲಿಂಗಾಯಿತ, ಬೆನಕನಹಳ್ಳಿ.

## ಅಧ್ಯಾಯ: ಎಂಟು

# ಸಮಾರೋಪ

ಇತಿಹಾಸದ ಹಂದರವನ್ನು ಕಟ್ಟಲು ಸ್ಮಾರಕಶಿಲ್ಪಗಳು ಬಹು ಪ್ರಾಮುಖ್ಯತೆ ಪಡೆದ ಆಕರಗಳಾಗಿ ಪರಿಗಣಿಸಲ್ಪಟ್ಟಿವೆ. ಅಂಥ ಹಲವಾರು ಸಂಖ್ಯೆಯಲ್ಲಿರುವ ಸ್ಮಾರಕಶಿಲ್ಪಗಳನ್ನು ಕುರಿತಂತೆ ಅಧ್ಯಯನಗಳು ತಕ್ಕಮಟ್ಟಿಗೆ ಜರುಗಿವೆ. ಆದರೆ ಅಂಥವುಗಳಲ್ಲಿ ಹೆಚ್ಚಿನವು ಅಖಂಡ ಕರ್ನಾಟಕವನ್ನೇ ಭೌಗೋಳಿಕ ವ್ಯಾಪ್ತಿಯನ್ನಾಗಿಟ್ಟುಕೊಂಡು ನಡೆದಿರುವ ಅಧ್ಯಯನಗಳಾಗಿವೆ. ಬೆರಳಣಿಗೆ ಸಂಖ್ಯೆಯಲ್ಲಿ ರಚನೆಗೊಂಡಿರುವ ಇಂಥ ಅಧ್ಯಯನಗಳಿಂದ ಸ್ಮಾರಕಶಿಲ್ಪಗಳ ಕುರಿತಾದ ಒಂದು ಸ್ಪಷ್ಟ ಚಿತ್ರಣವು ನಮಗೆ ದೊರೆತಿದೆ ಎಂದರೆ ತಪ್ಪಾಗಲಾಗದು. ಆದರೂ ಆ ಅಧ್ಯಯನಗಳೆಲ್ಲವೂ ಅವರವರ ಇತಿಮಿತಿಗಳಲ್ಲಿ ನಡೆದ ಅಧ್ಯಯನಗಳಾಗಿವೆಂಬುದು ಕೂಡಾ ಅಷ್ಟೇ ದಿಟ. ಆದರೆ ನಿರಂತರವಾಗಿ ಇಂದಿಗೂ ಹೊಸ ಹೊಸ ಸ್ಮಾರಕಶಿಲ್ಪಗಳು ಬೆಳಕಿಗೆ ಬರುತ್ತಲೇ ಇವೆ. ಕಾರಣ ಅವುಗಳ ಬಗೆಗೆ ತಿಳಿದುಕೊಳ್ಳಲು ಪ್ರತಿ ಜಿಲ್ಲೆಯ ಹಳ್ಳಿ-ಹಳ್ಳಿಗಳಲ್ಲಿ ಅವುಗಳ ಕುರಿತ ವಿಷಯಗಳನ್ನು ಸಂಗ್ರಹಿಸುವ ಮತ್ತು ಅಧ್ಯಯನ ಮಾಡುವ ಅನಿವಾರ್ಯತೆ ಇದೆ. ಇವುಗಳ ಕುರಿತು ಇನ್ನಷ್ಟು ಸೂಕ್ಷ್ಮ ಮತ್ತು ಸ್ಥಳೀಯ ಅಧ್ಯಯನಗಳು ನಡೆದರೆ ಪ್ರಾದೇಶಿಕವಾದ ಚರಿತ್ರೆ ಅರ್ಥಪೂರ್ಣವಾಗಿ ಅನಾವರಣಗೊಳ್ಳುತ್ತದೆ. ಜೊತೆಗೆ ಸ್ಮಾರಕಶಿಲ್ಪಗಳ ಬಗೆಗಿನ ನಮ್ಮ ಅರಿವು ಇನ್ನಷ್ಟು ಗಟ್ಟಿಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ 'ದಾವಣಗೆರೆ ಜಿಲ್ಲೆಯ ಸ್ಮಾರಕಶಿಲ್ಪಗಳು' ಎಂಬ ಶೀರ್ಷಿಕೆ ಅಡಿಯಲ್ಲಿ ಕೈಗೊಂಡಿರುವ ಈ ಸಂಶೋಧನಾ ಮಹಾಪ್ರಬಂಧವು ದಾವಣಗೆರೆ ಜಿಲ್ಲೆಯ ಸ್ಮಾರಕಶಿಲ್ಪಗಳನ್ನು ಆಧರಿಸಿ ಹಾಗೂ ಪೂರಕವೆಂಬಂತೆ ಸಾಹಿತ್ಯಿಕ ಆಧಾರಗಳನ್ನು ಬಳಸಿಕೊಂಡು ಪ್ರಸ್ತುತ ಅಧ್ಯಯನ ಪೂರೈಸುವ ಪ್ರಯತ್ನ ಮಾಡಲಾಗಿದೆ. ಈ ಮಹಾಪ್ರಬಂಧದಕ್ಕೆ ದಾವಣಗೆರೆ ಜಿಲ್ಲೆಯ ಚನ್ನಗಿರಿ, ಹೊನ್ನಾಳಿ, ಹರಿಹರ, ದಾವಣಗೆರೆ, ಜಗಲೂರು ಮತ್ತು ಹರಪನಹಳ್ಳಿ ತಾಲೂಕುಗಳನ್ನು ಅಧ್ಯಯನದ ಭೌಗೋಳಿಕ ವ್ಯಾಪ್ತಿಯಾಗಿಟ್ಟುಕೊಂಡು ಒಟ್ಟು ಎಂಟು ಅಧ್ಯಾಯಗಳಲ್ಲಿ ಸ್ಮಾರಕಶಿಲ್ಪಗಳಿಗೆ ಸಂಬಂಧಿಸಿದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಲವು ವಿಷಯಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಸ್ಮಾರಕಶಿಲ್ಪಗಳ ಶಾಸನಪಾಠ ಮತ್ತು ಶಿಲ್ಪಗಳನ್ನು ಪ್ರಧಾನ ಆಧಾರಗಳನ್ನಾಗಿಟ್ಟುಕೊಂಡು ಮಾಡಿದ ಈ ಅಧ್ಯಯನದ ಸಂದರ್ಭದಲ್ಲಿ ಸ್ಮಾರಕಶಿಲ್ಪಗಳಿಗೆ ಸಂಬಂಧಿಸಿದ ಪ್ರಾದೇಶಿಕ

ವೈಶಿಷ್ಟ್ಯತೆಯುಳ್ಳ ವಿಚಾರಗಳು ಬೆಳಕಿಗೆ ಬಂದಿವೆ. ಇಲ್ಲಿ ಅವುಗಳನ್ನು ಬೇರೆ ಪ್ರದೇಶಗಳು ಇಲ್ಲವೇ ಕಾಲಘಟ್ಟಗಳಿಗೆ ಹೋಲಿಕೆ ಮಾಡಿರುವುದಿಲ್ಲ. ಸ್ಥಳೀಯವಾಗಿ ಅವುಗಳಿಗೆ ಸಂಬಂಧಿಸಿದ ವಾಸ್ತವಾಂಶಗಳು ಮತ್ತು ವೈವಿಧ್ಯತೆಗಳನ್ನು ಗುರುತಿಸುವ ಕಾರಣದಿಂದ ಅವುಗಳನ್ನು ಹಾಗೆಯೇ ಪ್ರಸ್ತುತಪಡಿಸಲಾಗಿದೆ. ಪ್ರತಿಯೊಂದು ಪ್ರದೇಶದ ಬಗೆಗೂ ಬಿಡಿ ವಿಚಾರಗಳು ಪ್ರಾಸಂಗಿಕವಾಗಿ ವ್ಯಕ್ತವಾಗಿದ್ದರೂ ಅವು ಒಟ್ಟಾರೆ ಸಮಗ್ರತೆಯನ್ನು ತಂದುಕೊಡುವುದಿಲ್ಲ. ಅಂಥ ಕೊರತೆಯನ್ನು ಬಹುಮಟ್ಟಿಗೆ ನಿವಾರಿಸಿಕೊಳ್ಳಲು ನಿರ್ದಿಷ್ಟಪಡಿಸಿದ ಭೌಗೋಳಿಕ ಚೌಕಟ್ಟಿನಲ್ಲಿರುವ ಆಮೂಲಾಗ್ರ ವಿವರಗಳನ್ನು ವಿಭಾಗಿಸಿಕೊಂಡು ಚರ್ಚಿಸಿ ವಿಶ್ಲೇಷಿಸುವ ಅವಶ್ಯಕತೆ ಇರುತ್ತದೆ. ಅಂಥ ಪ್ರಯತ್ನವನ್ನು ಈ ಮಹಾಪ್ರಬಂಧದಲ್ಲಿ ಮಾಡಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಾಯಗಳವಾರು ಪ್ರಮುಖ ವಿಷಯಗಳನ್ನು ಸಂಕ್ಷಿಪ್ತವಾಗಿ ವಿವರಿಸಿ ಕೊನೆಯಲ್ಲಿ ಅಧ್ಯಯನದ ಫಲಿತಗಳನ್ನು ನೀಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸಮೀಕ್ಷೆ ಮತ್ತು ಸ್ವರೂಪವನ್ನು ಕುರಿತು ಸಮಗ್ರವಾದ ರೂಪುರೇಷೆಗಳನ್ನು ರಚಿಸಿಕೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯ ಅಂಶಗಳನ್ನು ವಿವರಿಸಲಾಗಿದೆ. ದಾವಣಗೆರೆ ಮಲೆನಾಡು ಅಲ್ಲದ, ಬಯಲುಸೀಮೆಯೂ ಅಲ್ಲದ ವಿಶಿಷ್ಟ ಪರಿಸರವುಳ್ಳ ಅರೆಮಲೆನಾಡು ಪ್ರದೇಶವಾಗಿದೆ. ಅರೆಮಲೆನಾಡು ಪರಿಸರವಾಗಿದ್ದರೂ ಇಲ್ಲಿ ಪ್ರಾಗೈತಿಹಾಸಿಕ ಮಾನವನ ಸಂಸ್ಕೃತಿ ವಿಶೇಷವಾಗಿ ಬೆಳೆಯಲು ಕಾರಣ ಇಲ್ಲಿನ ಭೌಗೋಳಿಕ ಸಂಪತ್ತು. ಪ್ರಾಕೃತಿಕವಾಗಿ ದೊರೆಯುವ ಬೆಟ್ಟ, ಕಲ್ಲು-ಮಣ್ಣು, ಖನಿಜ, ಜಲ, ಅರಣ್ಯ ಮತ್ತು ಪ್ರಾಣಿ ಸಂಪತ್ತು ಇವುಗಳನ್ನು ಅತ್ಯಂತ ವ್ಯವಸ್ಥಿತವಾಗಿ ಬಳಸಿಕೊಂಡು ತನ್ನ ಜೀವನ ನಿರ್ವಹಣೆ ಮಾಡಿರುವ ಸಂಗತಿ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬೆಳಕಿಗೆ ಬಂದ ಹಲವು ನೆಲೆಗಳಿಂದ ದೃಢವಾಗುತ್ತದೆ. ಶಾಸನಗಳಿಂದ ತಿಳಿದುಬರುವ ಮಾಹಿತಿಗಳಿಂದ ಈ ಪ್ರದೇಶ ಕಾಲದಿಂದ ಕಾಲಕ್ಕೆ ಅಭಿವೃದ್ಧಿ ಹೊಂದುತ್ತಾ ಪ್ರಮುಖ ಜಿಲ್ಲೆಯಾಗಿ ರಚನೆಗೊಂಡಿರುವುದನ್ನು ಮನಗಾಣಬಹುದು.

ಮಾನವನ ಬದುಕಿಗೆ ಅತ್ಯಂತ ಯೋಗ್ಯವಾದ ಪರಿಸರವಿರುವ ಹಿನ್ನೆಲೆಯಲ್ಲಿಯೇ ಈ ಪ್ರದೇಶ ಆದಿಮ ಸಂಸ್ಕೃತಿಯ ನೆಲೆವೀಡಾಗಿದೆ. ಇಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಹಿಡಿದು ಆಧುನಿಕ ಕಾಲಘಟ್ಟದವರೆಗೂ ನಿರಂತರವಾಗಿ ಮಾನವನ ಸಾಂಸ್ಕೃತಿಕ ಪರಂಪರೆ ಕೊಂಡಿಯೋಪಾದಿಯಲ್ಲಿ ಸಾಗಿ ಬಂದಿರುವುದು ಗಮನಾರ್ಹ. ಶಿಲಾಯುಗ ಕಾಲದ ಮಾನವ ಈ ಪರಿಸರದ ನೈಸರ್ಗಿಕ ಸಂಪತ್ತನ್ನು ವ್ಯವಸ್ಥಿತವಾಗಿ ಬಳಸಿ ಜೀವನ ಸಾಗಿಸಿದ ಕುರುಹಾಗಿ ವಿಭಿನ್ನ ಸಾಂಸ್ಕೃತಿಕ ನೆಲೆಗಳು ದೊರೆತಿವೆ.

೧೮೮೮ರಲ್ಲಿ ಸಿಂಗಲ್‌ಬೆಡ್ ಎಂಬವನು ನ್ಯಾಮತಿಯಲ್ಲಿ ಆದಿ ಹಳೆಶಿಲಾಯುಗಕ್ಕೆ ಸೇರಿದ ಎರಡು ಶಿಲಾಯುಧಗಳನ್ನು ಶೋಧಿಸಿದನು. ಇದರಿಂದ ಜಿಲ್ಲೆಯಲ್ಲಿ ಪ್ರಾಗಿತಿಹಾಸ ಮಾನವ ತಾಣಗಳ ಇರುವಿಕೆ ಮೊಟ್ಟಮೊದಲು ಬೆಳಕಿಗೆ ಬಂದಿತು. ಇದುವರೆಗೆ ದೊರೆತ ಆಕರಗಳ

ಹಿನ್ನೆಲೆಯಲ್ಲಿ ಪ್ರಸ್ತುತ ಪರಿಸರವು ಹಳೆಶಿಲಾಯುಗ ಕಾಲದಿಂದ ಇಂದಿನವರೆಗೂ ಮಾನವನ ಜೀವನದ ಅವಿಭಾಜ್ಯ ಅಂಗವಾಗಿರುವುದು ವೇದ್ಯವಾಗುತ್ತದೆ. ಈಗಾಗಲೇ ದಾಖಲಾಗಿರುವ ಪ್ರಾಗ್ಯೈತಿಹಾಸಿಕ ನೆಲೆಗಳ ಜೊತೆಗೆ ನೂತನವಾಗಿ ಶೋಧಿಸಿದ ಆರು ನೆಲೆಗಳನ್ನು ವಿವರಿಸಲಾಗಿದೆ. ಪ್ರಾಗ್ಯೈತಿಹಾಸಿಕ ಮಾನವನ ಹುಟ್ಟು ಮತ್ತು ಬೆಳವಣಿಗೆ ಇಲ್ಲಿನ ಭೌಗೋಳಿಕ ಪರಿಸರದ ಪಾತ್ರ ಎಷ್ಟೆಂಬುದು ಅವುಗಳಿಂದ ದೃಢವಾಗುತ್ತದೆ.

ದಾವಣಗೆರೆ ಜಿಲ್ಲೆ ಆಯಕಟ್ಟಿನ ಸ್ಥಳವಾಗಿದ್ದರೂ ರಾಜಕೀಯವಾಗಿ ಅಷ್ಟೇ ಮಹತ್ವವನ್ನು ಪಡೆದಿದೆ. ಈ ಪರಿಸರದಲ್ಲಿ ವಿವಿಧ ಚಾರಿತ್ರಿಕ ಕಾಲಘಟ್ಟಗಳಾದ ಮೌರ್ಯ, ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚೂರಿ, ಸೇವುಣ, ಹೊಯ್ಸಳ, ವಿಜಯನಗರ ಅರಸು ಮನೆತನಗಳು; ಬೆಳಗುತ್ತಿ ಸಿಂಧರು, ಉಚ್ಚಂಗಿ ಪಾಂಡ್ಯ, ನೊಳಂಬ ಸಾಮಂತ ಅರಸು ಮನೆತನಗಳು; ಚಿತ್ರದುರ್ಗ, ಹರಪನಹಳ್ಳಿ, ಸಂತೆಬೆನ್ನೂರು, ಕಣಕುಪ್ಪೆ, ಬಿಳಿಚೋಡು ಮತ್ತು ಉಚ್ಚಂಗಿದುರ್ಗದ ಪಾಳೆಯಗಾರರು ಮುಂತಾದವರ ಆಳ್ವಿಕೆಗೆ ಒಳಪಟ್ಟಿರುವುದು ದಾಖಲಾರ್ಹ. ಅದರಲ್ಲೂ ವಿಜಯನಗರೋತ್ತರ ಕಾಲದ ನಾಯಕ ಅರಸರ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯ ಪ್ರಭಾವ ಈ ಪರಿಸರದಲ್ಲಿ ಹೆಚ್ಚಾಗಿರುವುದು ಗಮನಾರ್ಹ ಅಂಶವಾಗಿದೆ. ಕ್ರಿ.ಶ. ೧೮ನೇ ಶತಮಾನದ ಆದಿಭಾಗದಲ್ಲಿ ನಾಯಕ ಅರಸು ಮನೆತನಗಳು ಪತನಗೊಂಡು ತಮ್ಮ ಸಾಂಸ್ಕೃತಿಕ ಚರಿತ್ರೆಗೆ ವಿದಾಯ ಹೇಳಿದ್ದುದನ್ನು ಆಧಾರಗಳು ಸಾಕ್ಷೀಕರಿಸುತ್ತವೆ.

ಮೂರನೆಯ ಅಧ್ಯಾಯದಲ್ಲಿ ಸ್ಮಾರಕಶಿಲ್ಪಗಳ ಸ್ವರೂಪ, ಬೆಳವಣಿಗೆಯನ್ನು ನಿರೂಪಿಸಲಾಗಿದೆ. ಸ್ಮಾರಕಶಿಲ್ಪಗಳನ್ನು ಹಾಕಿಸುತ್ತಿದ್ದವರು, ಸ್ಮಾರಕಶಿಲ್ಪಗಳಲ್ಲಿ ಮೂಡಿದ ಸ್ವರ್ಗದ ಚಿತ್ರಣ ಹಾಗೂ ಸ್ಮಾರಕಶಿಲ್ಪಗಳ ವಿನ್ಯಾಸ ಕ್ರಮವನ್ನು ವಿವರಿಸಲಾಗಿದೆ. ಸ್ಮಾರಕ ಎಂಬ ಪದದ ಅರ್ಥ ವಿವರಣೆಯ ಜೊತೆಗೆ ಸ್ಮಾರಕಶಿಲ್ಪ ಮತ್ತು ಇತರೆ ಸ್ಮಾರಕಗಳಿಗಿರುವ ಸಂಬಂಧವನ್ನು ಕಂಡುಕೊಳ್ಳಲಾಗಿದೆ. ಸ್ಮಾರಕಶಿಲ್ಪದ ಬೆಳವಣಿಗೆಯು ವಿವಿಧ ಅರಸು ಮನೆತನಗಳ ಪ್ರಭಾವದೊಂದಿಗೆ ಬೆಳೆದುಬಂದ ರೀತಿಯನ್ನು ವಿಸ್ತೃತವಾಗಿ ವಿಶ್ಲೇಷಿಸಲಾಗಿದೆ. ಸ್ಮಾರಕಶಿಲ್ಪಗಳನ್ನು ಕುಟುಂಬದವರು ಮತ್ತು ಸಂಬಂಧಿಕರು ನಿರ್ಮಿಸಿರುವ ಅಂಶವು ರಾಜ್ಯವು ಸ್ಮಾರಕ ಸ್ಥಾಪಿಸುವ ಜವಾಬ್ದಾರಿ ಹೊಂದಿರಲಿಲ್ಲ ಎನ್ನುವುದನ್ನು ಸ್ಪಷ್ಟಪಡಿಸಿದೆ.

ನಾಲ್ಕನೆಯ ಅಧ್ಯಾಯದಲ್ಲಿ ವೀರ ಮರಣದ ಸ್ಮಾರಕಶಿಲ್ಪಗಳನ್ನು ವಿವಿಧ ಹಂತಗಳಲ್ಲಿ ವರ್ಗೀಕರಿಸಿಕೊಂಡು ವಿಶ್ಲೇಷಿಸಲಾಗಿದೆ. ಇದರ ಮುಖ್ಯ ಉದ್ದೇಶ ಹೋರಾಟದ ವಿಧಗಳನ್ನು ಸ್ಪಷ್ಟಗೊಳಿಸುವುದಾಗಿದೆ. ಇಲ್ಲಿ ದೊರೆತಿರುವ ಶಾಸನೋಕ್ತ ಮತ್ತು ಶಾಸನರಹಿತವಾದ ವೀರಮರಣದ ಸ್ಮಾರಕಶಿಲ್ಪಗಳು ಈ ಪ್ರದೇಶದಲ್ಲಿನ ಅಧಿಕಾರ ಸಂಘರ್ಷದ ಒತ್ತಡವನ್ನು ಖಚಿತಪಡಿಸುತ್ತದೆ. ಅಧ್ಯಯನ ಪ್ರದೇಶದ ಹರಪನಹಳ್ಳಿ, ಹೊನ್ನಾಳಿ, ಜಗಲೂರು, ಹರಿಹರ, ದಾವಣಗೆರೆ ಮತ್ತು ಚನ್ನಗಿರಿ ತಾಲೂಕು ಪ್ರದೇಶಗಳಲ್ಲಿ ಕ್ರಮವಾಗಿ ಹೆಚ್ಚಿನ ಸಂಖ್ಯೆಯ ಯುದ್ಧ-ಹೋರಾಟದ

ಸ್ಮಾರಕಶಿಲ್ಪಗಳು ಕಂಡುಬರುತ್ತವೆ. ಇದು ಈ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯ ಯುದ್ಧಗಳು ನಡೆದಿರುವುದನ್ನು ತೋರಿಸುತ್ತದೆ. ಹೋರಾಟದ ಘಟನೆಗಳನ್ನು ಅವಲೋಕಿಸಿದಾಗ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ನೊಳಂಬ, ಉಚ್ಚಂಗಿ ಪಾಂಡ್ಯ, ಹೊಯ್ಸಳ, ಬೆಳಗುತ್ತಿ ಸಿಂದರು, ಯಾದವರು ಹಾಗೂ ವಿಜಯನಗರ ಸೈನ್ಯಗಳು ಇಲ್ಲಿಗೆ ಬಂದು ಯುದ್ಧಗಳನ್ನು ನಡೆಸಿರುವುದು ಕಂಡುಬರುತ್ತದೆ. ಈ ಪ್ರದೇಶ ಮಧ್ಯ ಕರ್ನಾಟಕದ ಆಯಕಟ್ಟಿನ ಪ್ರದೇಶವಾಗಿದ್ದರಿಂದ ಮತ್ತು ವರದಾ–ತುಂಗಭದ್ರಾ ಬಯಲು ಪ್ರದೇಶವು ನಿರಂತರ ಯುದ್ಧ ಭೂಮಿಯಾಗಿರುವುದು ಕಂಡುಬರುತ್ತದೆ. ಸ್ಥಳೀಯವಾಗಿ ಆಡಳಿತ ನಡೆಸುತ್ತಿದ್ದ ಬೆಳಗುತ್ತಿ ಸಿಂದರು ಕ್ರಿ.ಶ. ೧೨ನೇ ಶತಮಾನದಲ್ಲಿ ಪ್ರಭುತ್ವ ಸ್ಥಾಪನೆಗಾಗಿ ನಡೆಸಿದ ಪ್ರಯತ್ನ ಹಾಗೂ ಕ್ರಿ.ಶ. ೧೦, ೧೧ ಮತ್ತು ೧೩ನೇ ಶತಮಾನಗಳಲ್ಲಿ ಪ್ರಬಲ ಸಂಸ್ಥಾನಗಳು ರಾಜಕೀಯ ವಿಸ್ತರಣೆಗಾಗಿ ನಡೆಸಿದ ಪ್ರಯತ್ನಗಳು ಈ ಪ್ರದೇಶದಲ್ಲಿ ಯುದ್ಧಗಳು ಗಮನಾರ್ಹ ಸಂಖ್ಯೆಯಲ್ಲಿ ಏರಿಕೆಗೆ ಕಾರಣವಾಗಿದೆ.

ಅಧ್ಯಯನ ಪ್ರದೇಶದಲ್ಲಿ ತುರುಗೋಳ್ ಘಟನೆಗಳನ್ನು ಗಮನಿಸಿದಾಗ ಪ್ರಾದೇಶಿಕ ವೈವಿಧ್ಯತೆಯು ಕಂಡುಬರುತ್ತದೆ. ಹೊನ್ನಾಳಿ, ಹರಪನಹಳ್ಳಿ ತಾಲೂಕುಗಳಲ್ಲಿ ತುರುಕಾಳಗಗಳು ಹೆಚ್ಚು ನಡೆದಿದ್ದರೆ, ಹರಿಹರ, ದಾವಣಗೆರೆ, ಜಗಲೂರು ಮತ್ತು ಚನ್ನಗಿರಿ ತಾಲೂಕುಗಳಲ್ಲಿ ಈ ಪ್ರಕರಣಗಳು ಕಡಿಮೆ ನಡೆದಿರುವುದು ಕಂಡುಬರುತ್ತದೆ.

ಗ್ರಾಮಗಳ ಮೇಲೆ ನಡೆಯುತ್ತಿದ್ದ ದಾಳಿ ಮತ್ತು ಲೂಟಿಗಳು ಹಾಗೂ ಪೆಣ್ಬುಯ್ಯಲ್ ನಂತಹ ಘಟನೆಗಳು ಅಂದಿನ ದಿನಗಳಲ್ಲಿ ಸಾಮಾಜಿಕ ಜೀವನವು ಸುರಕ್ಷಿತವಾಗಿರದೇ ಇದ್ದುದನ್ನು ತೋರಿಸುತ್ತದೆ. ಊರಿಜೆನ ದಾಳಿಗಳು ಚನ್ನಗಿರಿ, ಹರಪನಹಳ್ಳಿ, ದಾವಣಗೆರೆ ತಾಲೂಕುಗಳಲ್ಲಿ ಅಪರೂಪವಾಗಿ ಕಂಡುಬರುತ್ತವೆ. ಆದರೆ ಉಳಿದ ತಾಲೂಕುಗಳಲ್ಲಿ ಇಂತಹ ಪ್ರಕರಣಗಳು ಗೋಚರಿಸುವುದಿಲ್ಲ. ಪೆಣ್ಬುಯ್ಯಲ್ ಘಟನೆಗಳು ಹೊನ್ನಾಳಿ ಮತ್ತು ಚನ್ನಗಿರಿ ತಾಲೂಕು ಪ್ರದೇಶಗಳಲ್ಲಿ ಮಾತ್ರ ವಿರಳವಾಗಿ ನಡೆದಿರುವುದು ಕಂಡುಬರುತ್ತದೆ. ಘೋಷಿತ ಮತ್ತು ನಿರ್ಧರಿತ ದಾಳಿಗಳಿಗಿಂತ ಅಘೋಷಿತ ಮತ್ತು ಅನಿರೀಕ್ಷಿತ ದಾಳಿಯ ಪ್ರಕರಣಗಳು ಅಧಿಕವಾಗಿ ನಡೆದಿರುವುದು ಕಂಡುಬರುತ್ತದೆ. ಕೋಟೆಕಾಳಗದ ಸ್ಮಾರಕಶಿಲ್ಪಗಳಲ್ಲಿ ಕೋಟೆಯ ಮುತ್ತಿಗೆ ಹಾಕುವ ವಿಧಾನವನ್ನು ವರ್ಣಿಸಲಾಗಿದ್ದು, ಅದರಿಂದ ಕೋಟೆದಾಳಿಯ ಕುರಿತು ಒಂದು ಸೀಮಿತ ಚಿತ್ರಣವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗುತ್ತದೆ. ಈ ಕೋಟೆ ದಾಳಿಯ ಪ್ರಕರಣಗಳು ಅಧ್ಯಯನ ಪ್ರದೇಶದ ಕೆಲವೇ ಶಾಸನಗಳಲ್ಲಿ ಉಲ್ಲೇಖವಾಗಿರುವುದನ್ನು ಗುರುತಿಸಿ ವಿವರಿಸಲಾಗಿದೆ.

ವ್ಯಾಪಾರಿಗಳನ್ನು ದಾರಿಗಳ್ಳರು ಅಡ್ಡಗಟ್ಟಿ ಅವರ ಸಂಪತ್ತನ್ನು ದೋಚುತ್ತಿದ್ದರು. ಅವರ ವಿರುದ್ಧ ಹೋರಾಡಿದ ವಿವರಣೆಗಳು ದೊರೆಯುತ್ತವೆ. ಸ್ಮಾರಕಶಿಲ್ಪಗಳಲ್ಲಿ ಸಹಾಯಕರು ಹೆಗಲು ಮತ್ತು ತಲೆಯ ಮೇಲೆ ಹೊತ್ತು ಸಾಮಗ್ರಿಗಳನ್ನು ಸಾಗಿಸುತ್ತಿರುವ ಚಿತ್ರಣಗಳು ಕಂಡುಬರುತ್ತವೆ. ಇಲ್ಲಿನ ವ್ಯಾಪಾರ ವಸ್ತುಗಳ ಸಾಗಾಣಿಕೆಯು ಕೂಡ ಹೇರುಗಳ ರೂಪದಲ್ಲಿ ನಡೆಯುತ್ತಿದ್ದದ್ದು

ಕಂಡುಬರುತ್ತದೆ. ಊರಿಗೆ ನುಗ್ಗಿ ಜನಗಳಿಗೆ, ದನಗಳಿಗೆ ತೊಂದರೆ ನೀಡುತ್ತಿದ್ದ ದುಷ್ಟಮೃಗಗಳನ್ನು ಕೊಂದುಹಾಕಿದ ಅಥವಾ ಕೊಲ್ಲಲು ಹೋಗಿ ತಾವೇ ಮರಣವನ್ನಪ್ಪಿದ ವೀರರ ಸ್ಮಾರಕಶಿಲ್ಪಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಕರಡಿ ದಾಳಿಯಿಂದ ಮಡಿದ ವೀರ ಮತ್ತು ನಾಯಿ ಹಾಗೂ ಗೂಳಿಯನ್ನು ಪಳಗಿಸಲು ಹೋಗಿ ಮಡಿದ ವೀರರ ವಿಶೇಷ ಸ್ಮಾರಕಶಿಲ್ಪಗಳನ್ನು ಗುರುತಿಸಿ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಲೌಕಿಕ ಮತ್ತು ಧಾರ್ಮಿಕ ಆತ್ಮಬಲಿದಾನದ ಸ್ವರೂಪಕ್ಕೆ ಸಂಬಂಧಿಸಿದಂತೆ ಹಲವು ವಿಚಾರಗಳನ್ನು ವಿಶ್ಲೇಷಿಸಲಾಗಿದೆ. ಅಂದಿನ ಕಾಲದಲ್ಲಿ ಆತ್ಮಬಲಿದಾನ ಜೀವನದ ಮಹಾ ಮೌಲ್ಯವಾಗಿ ಪರಿಗಣಿತವಾಗಿತ್ತು. ದೇವರ ಪ್ರೀತ್ಯರ್ಥವಾಗಿ ಕೈಗೊಳ್ಳುವ ಧಾರ್ಮಿಕ ಆತ್ಮಬಲಿದಾನ, ಪ್ರಿಯ ವ್ಯಕ್ತಿಯ ಪ್ರೀತ್ಯರ್ಥವಾಗಿ ಕೈಗೊಳ್ಳುವ ಲೌಕಿಕ ಬಲಿದಾನ ಎಂಬ ಎರಡು ವಿಧಾನದಲ್ಲಿ ಈ ಪದ್ಧತಿ ನಡೆದುಬಂದಿರುವುದು ತಿಳಿಯುತ್ತದೆ. ಮಹಾಸತಿ ಮರಣವು ಪ್ರಿಯ ವ್ಯಕ್ತಿಗಾಗಿ ಕೈಗೊಂಡ ಆತ್ಮಬಲಿದಾನವಾಗಿದೆ. ಇದು ಸಹಗಮನ ಮತ್ತು ಅನುಗಮನ ಎಂಬ ಎರಡು ವಿಧಾನಗಳಲ್ಲಿ ಆಚರಿಸಲ್ಪಟ್ಟಿದೆ. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಕ್ರಿ.ಶ.ಸು. ೮ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ (ಶಾಸನೋಕ್ತ ಉಲ್ಲೇಖಗಳು ಕ್ರಿ.ಶ. ೧೮೬೨ರವರೆಗೆ) ವಿವಿಧ ಕಾಲಘಟ್ಟಗಳಲ್ಲಿ ಸತಿಘಟನೆಗಳು ನಡೆದಿರುವುದು ಕಂಡುಬರುತ್ತವೆ. ಒಬ್ಬ ಸತಿಯಿಂದ ಹಿಡಿದು ಹತ್ತು ಮಂದಿ ಸತಿಯರು ಸಹಗಮನ ಮತ್ತು ಅನುಗಮನದ ಮೂಲಕ ಸತಿ ಹೋಗಿರುವುದನ್ನು ವಿಶ್ಲೇಷಿಸಲಾಗಿದೆ. ಈ ಪ್ರದೇಶದಲ್ಲಿ ಸಹಗಮನಗೊಂಡ ಸತಿಯ ಸ್ಮಾರಕಶಿಲ್ಪಗಳಿಗಿಂತ, ಅನುಗಮನದ ಮೂಲಕ ಸತಿ ಹೋದವರ ಸ್ಮಾರಕಶಿಲ್ಪಗಳೇ ಅಧಿಕವಾಗಿ ಕಂಡುಬರುತ್ತವೆ. ಈ ಸತಿ ಘಟನೆಗಳನ್ನು ಗಮನಿಸಿದಾಗ ಪ್ರಾದೇಶಿಕ ವೈವಿಧ್ಯತೆಯು ಕಂಡುಬರುತ್ತದೆ. ಹೊನ್ನಾಳಿ, ಚನ್ನಗಿರಿ, ಹರಪನಹಳ್ಳಿ ತಾಲೂಕು ಪ್ರದೇಶಗಳಲ್ಲಿ ಸತಿ ಸ್ಮಾರಕಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿ ಗೋಚರಿಸುತ್ತವೆ. ಇದು ಈ ಪ್ರದೇಶಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಸತಿ ಘಟನೆಗಳು ಜರುಗಿರುವುದನ್ನು ತೋರಿಸುತ್ತದೆ. ದಾವಣಗೆರೆ ಜಗಲೂರು ಹಾಗೂ ಹರಿಹರ ತಾಲೂಕು ಪ್ರದೇಶಗಳಲ್ಲಿ ಈ ಪ್ರಕರಣಗಳು ವಿರಳವಾಗಿ ನಡೆದಿರುವುದು ಕಂಡುಬರುತ್ತದೆ. ಸಹಗಮನ ಮತ್ತು ಅನುಗಮನ ಸತಿ ಸ್ಮಾರಕಶಿಲ್ಪಗಳನ್ನು ವಿಶ್ಲೇಷಿಸಿ ಅವುಗಳ ವೈಶಿಷ್ಟ್ಯತೆಯನ್ನು ಕಂಡುಕೊಳ್ಳಲಾಗಿದೆ.

ವೇಳಾವಳಿ ಮರಣಗಳು ಅಧ್ಯಯನ ಪ್ರದೇಶದಲ್ಲಿ ವಿರಳವಾಗಿ ನಡೆದಿರುವುದು ಕಂಡುಬರುತ್ತದೆ. ಆದರೂ ಅಪರೂಪದ ವೇಳಾವಳಿ ಮರಣಗಳಿಗೆ ಈ ಪ್ರದೇಶ ಸಾಕ್ಷಿಯಾಗಿದೆ. ಅಧ್ಯಯನ ಪ್ರದೇಶದ ಕ್ರಿ.ಶ. ೯ನೇ ಶತಮಾನದ ಕಿಜ್ಗಿಂಟೆ ಸ್ಮಾರಕವೊಂದರಿಂದ ಸೇವಕನೊಬ್ಬ ತನ್ನ ಒಡೆಯನ ಚಿತೆಯ ಸಮ್ಮುಖದಲ್ಲೇ ಆತ್ಮಾರ್ಪಣೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲೇ ಇದೊಂದು ಏಕೈಕ ಚಿತೆ ಸಹಿತವಿರುವ ಕಿಜ್ಗಿಂಟೆ ಸ್ಮಾರಕವೆಂದು ಅಭಿಪ್ರಾಯಿಸಲಾಗಿದೆ. ಶಾಸನರಹಿತವಾದ ಆತ್ಮಬಲಿಯ ಸ್ಮಾರಕಶಿಲ್ಪಗಳನ್ನು ವಿಶ್ಲೇಷಿಸಿ ಅವುಗಳ

ಶಿಲ್ಪ ವೈಶಿಷ್ಟ್ಯತೆಯನ್ನು ಕಂಡುಕೊಳ್ಳಲಾಗಿದೆ. ಧಾರ್ಮಿಕ ಆತ್ಮಬಲಿದಾನಕ್ಕೆ ಸಂಬಂಧಿಸಿದಂತೆ ಕೆಲವೇ ಸ್ಮಾರಕಶಿಲ್ಪಗಳು ಅಧ್ಯಯನ ಪ್ರದೇಶದಲ್ಲಿ ದೊರೆತಿವೆ. ಇದರಿಂದ ಹಿಂದೂ ಮತ್ತು ಜೈನ ಧಾರ್ಮಿಕ ಬಲಿದಾನದ ಪ್ರಕರಣಗಳು ಈ ಪ್ರದೇಶದಲ್ಲಿ ಹೆಚ್ಚು ವ್ಯಾಪಿಸಿಕೊಂಡಿಲ್ಲದಿರುವುದು ತಿಳಿದುಬರುತ್ತದೆ.

ಅಧ್ಯಾಯ ಆರರಲ್ಲಿ ವಿವಿಧ ಹೋರಾಟಗಳಲ್ಲಿ ಪ್ರಮುಖ ಪಾತ್ರ ವಹಿಸಿರುವ ವೀರರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಕುರಿತು ವಿಶ್ಲೇಷಿಸಲಾಗಿದೆ. ಸಾಂಪ್ರದಾಯಿಕ ರಾಜಕೀಯ ಇತಿಹಾಸದಲ್ಲಿ ಚಕ್ರವರ್ತಿಗಳು, ರಾಜರು ಮತ್ತು ಅಧಿಕಾರಿಗಳು ಮಾತ್ರ ಉಲ್ಲೇಖಿತರಾಗುತ್ತಾರೆ. ಆದರೆ ರಾಜ್ಯ ವಿಸ್ತರಣೆಯಲ್ಲಿ ಪ್ರಮುಖ ಪಾತ್ರ ವಹಿಸಿದ ಸೈನಿಕ ವರ್ಗವು ನಿರ್ಲಕ್ಷಿಸಲ್ಪಟ್ಟಿರುವುದು ಸಾಮಾನ್ಯವಾಗಿರುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಪ್ರದೇಶದ ವೀರರ ಸಾಮಾಜಿಕ, ಆರ್ಥಿಕ ಹಿನ್ನೆಲೆಗೆ ಸಂಬಂಧಿಸಿದಂತೆ ಗಮನಹರಿಸಲಾಗಿದೆ. ಶಾಸನೋಕ್ತ ಸ್ಮಾರಕಶಿಲ್ಪಗಳ ಆಧಾರದಿಂದ ವೀರರ ಹಿನ್ನೆಲೆಯನ್ನು ಅವಲೋಕಿಸಿದಾಗ ಸಮಾಜದ ಹಲವು ಕೆಳಸ್ತರ ಜಾತಿಗಳಿಗೆ ಮತ್ತು ವೃತ್ತಿಗಳಿಗೆ ಸೇರಿದ ವೀರರು ಬೇರೆ ಬೇರೆ ಸಂದರ್ಭಗಳಲ್ಲಿ ಯುದ್ಧಗಳಲ್ಲಿ ಭಾಗಿಯಾಗಿರುವುದು ಕಂಡುಬಂದಿದೆ. ಇದಕ್ಕೆ ಅಂದಿನ ರಾಜಕೀಯ ಸಂದರ್ಭವು ಕಾರಣವಾಗಿರಬಹುದು. ವರ್ಣವು ವೃತ್ತಿ ಆಧಾರಿತವಾಗಿ ನಿರ್ಧರಿಸಲ್ಪಡುವುದಾದರೆ ಈ ಎಲ್ಲಾ ವೀರರನ್ನು ಅವರ ಜಾತಿ, ಸಮುದಾಯ ಮತ್ತು ವೃತ್ತಿಯನ್ನು ಬದಿಗಿರಿಸಿ ಕ್ಷತ್ರಿಯ ವರ್ಗದವರೆಂದು ಪರಿಗಣಿಸಬಹುದಾಗಿದೆ.

ಏಳನೆಯ ಅಧ್ಯಾಯದಲ್ಲಿ ಸ್ಮಾರಕಶಿಲ್ಪಗಳ ಕುರಿತಿರುವ ನಂಬಿಕೆ, ಆಚರಣೆ ಮತ್ತು ಐತಿಹ್ಯಗಳ ಬಗ್ಗೆ ಗಮನಹರಿಸಲಾಗಿದೆ. ಎಂದೋ ಆರಂಭವಾದ ಅವುಗಳನ್ನು ಗ್ರಾಮಗಳಲ್ಲಿ ಇಂದಿಗೂ ಆಚರಿಸಲ್ಪಡುತ್ತಿರುವುದು ಗಮನಾರ್ಹವಾಗಿದೆ. ಆದರೆ ಶಾಸನಗಳ ಮೂಲಕ ನಿರ್ದೇಶಿಸಿರುವ ಪೂಜೆ ಪುರಸ್ಕಾರಗಳು ಇಂದು ಕಣ್ಮರೆಯಾಗಿರುವುದು ಕಂಡುಬರುತ್ತದೆ. ಅಧ್ಯಯನ ಪ್ರದೇಶದಲ್ಲಿ ವೀರರ ಸ್ಮಾರಕಶಿಲ್ಪಗಳಿಗಿಂತ ಮಾಸ್ತಿ ಸ್ಮಾರಕಶಿಲ್ಪಗಳು ಹೆಚ್ಚು ಆಚರಣೆಗೊಳಪಟ್ಟಿರುವುದು ಗಮನಾರ್ಹವಾಗಿದ್ದು, ಅವುಗಳನ್ನು ದೀರ್ಘವಾಗಿ ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು, ಇದು ಒಟ್ಟಾರೆ ಅಧ್ಯಯನದ ಸಂಕ್ಷಿಪ್ತ ರೂಪವಾಗಿದೆ. ಅಧ್ಯಯನದಲ್ಲಿ ಕಂಡುಕೊಂಡ ಒಟ್ಟು ಫಲಿತಗಳನ್ನು ನೀಡಲಾಗಿದೆ. ಕೊನೆಯಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನುಬಂಧ ಮತ್ತು ಛಾಯಾಚಿತ್ರಗಳನ್ನು ವಿಶ್ಲೇಷಣೆಯನ್ನು ಇನ್ನಷ್ಟು ಸ್ಪಷ್ಟಗೊಳಿಸುವ ಉದ್ದೇಶದಿಂದ ನೀಡಲಾಗಿದೆ.

ಒಟ್ಟಾರೆ ದಾವಣಗೆರೆ ಜಿಲ್ಲೆಯ ಸ್ಮಾರಕಶಿಲ್ಪಗಳ ಕುರಿತು ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ರೂಪುಗೊಂಡಿರುವ ಇಂಥ ಸಮಗ್ರ ಮಾಹಿತಿಗಳನ್ನು ಹಲವು ಬಗೆಯ ಚರ್ಚೆಗಳ ಮೂಲಕ ಆ ಪ್ರದೇಶದ ಸ್ಮಾರಕಶಿಲ್ಪಗಳ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವ ಕಿರು ಪ್ರಯತ್ನ ಪ್ರಸ್ತುತ ಮಹಾಪ್ರಬಂಧದ್ದಾಗಿದೆ.

## ಅಧ್ಯಯನದ ಫಲಿತಗಳು

* ದಾವಣಗೆರೆ ಜಿಲ್ಲೆಯ ಸ್ಮಾರಕಶಿಲ್ಪಗಳಿಗೆ ಸಂಬಂಧಿಸಿದಂತೆ ಮೊದಲ ಬಾರಿಗೆ ಸಮಗ್ರವಾದ ಅಧ್ಯಯನವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಮಾಡಲಾಗಿದೆ.
* ಜಿಲ್ಲೆಯ ಭೌಗೋಳಿಕ ವ್ಯಾಪ್ತಿಯಲ್ಲಿ ಬರುವ ೯೧೮ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಕಂಡುಬಂದ ಒಟ್ಟು ಸ್ಮಾರಕಶಿಲ್ಪಗಳ ಸಂಖ್ಯೆ ೭೦೫, ಅವುಗಳಲ್ಲಿ ೨೯೯ ಪ್ರಕಟಗೊಂಡಿದ್ದರೆ ಉಳಿದ ೪೦೬ ಸ್ಮಾರಕಶಿಲ್ಪಗಳನ್ನು ಹೊಸದಾಗಿ ಗುರುತಿಸಿ ಪ್ರಸ್ತುತ ಮಹಾಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.
* ಅಧ್ಯಯನ ಪ್ರದೇಶದಲ್ಲಿ ಸ್ಮಾರಕಶಿಲ್ಪಗಳು ಕ್ರಿ.ಶ.ಸು. ೮ನೇ ಶತಮಾನದಿಂದ ಕ್ರಿ.ಶ. ೧೯೩೮ರವರೆಗೆ ಗೋಚರಿಸುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.
* ಈ ಪ್ರದೇಶದಲ್ಲಿ ಕಂಡುಬಂದ ೧೩೪ ಶಾಸನರಹಿತವಾದ ಯುದ್ಧ-ಹೋರಾಟದ ಸ್ಮಾರಕಶಿಲ್ಪಗಳನ್ನು ಹೊಸದಾಗಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.
* ಅಧ್ಯಯನ ಪ್ರದೇಶದ ಚಿರಸ್ತಹಳ್ಳಿಯ ರಾಷ್ಟ್ರಕೂಟ ಕಾಲದ ಸ್ಮಾರಕಶಿಲ್ಪವೊಂದು ಅಪರೂಪದ ದೃಶ್ಯವನ್ನು ಸೆರೆಹಿಡಿದಿದೆ. ಈ ಸ್ಮಾರಕದಲ್ಲಿ ಎತ್ತರವಾದ ನಿಲುವನ್ನು ಹೊಂದಿರುವ ವೀರನು ಉದ್ದನೆಯ ಭರ್ಜಿಯಿಂದ ಶತ್ರುವಿನ ಹೊಟ್ಟೆಯ ಭಾಗಕ್ಕೆ ಇರಿದು ಮೇಲಕ್ಕೆತ್ತಿ ಹಿಡಿದಿದ್ದಾನೆ. ನೋವು ತಾಳಲಾರದೆ ವೈರಿಯು ಎರಡು ಕೈಗಳನ್ನು ಅಗಲಿಸಿದ್ದಾನೆ. ಕೈಯಲ್ಲಿ ಕತ್ತಿ, ಗುರಾಣಿಗಳಿವೆ. ಅವನ ತಲೆಯ ಕೂದಲು ಗಾಳಿಗೆ ಹಾರುತ್ತಿರುವಂತೆ ಚಿತ್ರಿಸಿರುವುದು ಗಮನಾರ್ಹವಾಗಿದೆ.
* ಇದುವರೆಗೆ ದೊರೆತಿರುವ ಸ್ಮಾರಕಶಿಲ್ಪಗಳಲ್ಲಿ ವೀರರು ಹೋರಾಟಕ್ಕೆ ಮಚ್ಚು, ಕೂಡಗೋಲು ಮತ್ತು ಗಂಟೆ ಆಯುಧವನ್ನು ಬಳಸಿದ ನಿದರ್ಶನಗಳಿಲ್ಲ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದ ಹೊಸಕೋಟೆ, ಈಶಾಪುರ, ತುರ್ಚಗಟ್ಟೆ ಗ್ರಾಮಗಳಲ್ಲಿ ಕಂಡುಬಂದಿರುವ ಸ್ಮಾರಕಗಳಲ್ಲಿ ವೀರರು ಅಂಥ ಆಯುಧಗಳನ್ನು ಹೋರಾಟಕ್ಕೆ ಬಳಸಿರುವುದನ್ನು ಗುರುತಿಸಲಾಗಿದೆ.
* ಅಧ್ಯಯನ ಪ್ರದೇಶದ ಕಡಕೋಳ ಗ್ರಾಮದಲ್ಲಿ ದೊರೆತಿರುವ ಒಂದು ಸ್ಮಾರಕಶಿಲ್ಪವು ಅಪರೂಪದ್ದಾಗಿದೆ. ಈ ಸ್ಮಾರಕದಲ್ಲಿ ಸ್ತ್ರೀಯರಿಬ್ಬರು ಬಿಲ್ಲಿಗೆ ಬಾಣವನ್ನು ಹೂಡಿ ಯುದ್ಧ ಸನ್ನದ್ಧರಾಗಿರುವಂತೆ ಕೆತ್ತಲಾಗಿದೆ. ಇಬ್ಬರು ಸೊಂಟದಲ್ಲಿ ಕಿರುಗತ್ತಿ, ಬೆನ್ನ ಹಿಂದೆ ಬಿಲ್ಲುಗಳ ಬತ್ತಳಿಕೆಯನ್ನು ಕಟ್ಟಿರುವುದನ್ನು ತೋರಿಸಿದೆ. ಇಲ್ಲಿ ಸ್ತ್ರೀಯರಿಬ್ಬರು ಯಾವುದೋ ಹೋರಾಟದಲ್ಲಿ ಮಡಿದಿರುವುದು ಗಮನಾರ್ಹವಾಗಿದೆ.
* ಅಧ್ಯಯನ ಪ್ರದೇಶದ ಚನ್ನಗಿರಿ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ ಅಪರೂಪದ ಸ್ಮಾರಕಶಿಲ್ಪಗಳನ್ನು ಗುರುತಿಸಿದೆ. ಈ ಸ್ಮಾರಕಶಿಲ್ಪಗಳಲ್ಲಿನ ವೀರರ ವೇಷಭೂಷಣಗಳು ಇತರೆ ಸ್ಮಾರಕಶಿಲ್ಪಗಳಲ್ಲಿ ಕಂಡುಬರುವ ವೀರರಿಗಿಂತ ಭಿನ್ನವಾಗಿವೆ. ವೀರರು ತಲೆಯಲ್ಲಿ ಮುಡಿ ಕಟ್ಟಿ ಟೋಪಿಯನ್ನು ಹಾಕಿ ಉರಿಮೀಸೆ ಹಾಗೂ ಉದ್ದವಾದ ಗಡ್ಡವನ್ನು ಬಿಟ್ಟಿರುವಂತೆ ಚಿತ್ರಿಸಿರುವುದು ವಿಶೇಷವಾಗಿ ಕಂಡುಬರುತ್ತದೆ. ಈ ವೀರರು ಚನ್ನಗಿರಿ ಪರಿಸರದಲ್ಲಿ ನೆಲೆಸಿದ್ದ

ಮರಾಠ ಸಮುದಾಯದವರೇ ಆಗಿರಬಹುದೆಂಬುದು ದೃಢಪಡಿಸುವ ಪ್ರಯತ್ನ ಮಾಡಲಾಗಿದೆ. ಇಂತಹ ಲಕ್ಷಣಗಳಿರುವ ಸ್ಮಾರಕಶಿಲ್ಪಗಳು ಈವರೆಗೆ ಕರ್ನಾಟಕದ ಯಾವುದೇ ಭಾಗದಲ್ಲಿ ಕಂಡುಬಂದಿರುವುದಿಲ್ಲ.

* ಈ ಪ್ರದೇಶದ ಬೆಳಗುತ್ತಿ ಗ್ರಾಮದ ಶಾಸನೋಕ್ತ ಮೂರು ಸ್ಮಾರಕಶಿಲ್ಪಗಳು ಮಹತ್ವದ ಮಾಹಿತಿಯನ್ನು ನೀಡುತ್ತವೆ. ಹೊಯ್ಸಳ ಬಲ್ಲಾಳನ ರಾಣಿ ಉಮಾದೇವಿ ಬೆಳಗುತ್ತಿಯ ಮಂಡಳೇಶ್ವರ ಮಲ್ಲದೇವರಸನ ವಿರುದ್ಧ ಕ್ರಿ.ಶ. ೧೧೯೬ರ ಒಂದೇ ವರ್ಷದ ಅವಧಿಯಲ್ಲಿ ಮೂರು ಬಾರಿ ದಂಡೆತ್ತಿ ಹೋಗಿರುವುದು ತಿಳಿಯುತ್ತದೆ. ಇಲ್ಲಿ ಸ್ತ್ರೀಯೊಬ್ಬಳು ತುರು ಸೆರೆಹಿಡಿದ ಪ್ರಸಂಗಕ್ಕೆ ಈ ಸ್ಮಾರಕಶಿಲ್ಪಗಳು ಅಪರೂಪದ ಉದಾಹರಣೆಗಳಾಗಿವೆ.

* ಅಧ್ಯಯನ ಪ್ರದೇಶದ ಕುಂಕೋವಾ ಗ್ರಾಮದ ತುರುಗೋಳ್ ಸ್ಮಾರಕಶಿಲ್ಪದಲ್ಲಿ ಅಪರೂಪದ ಶಿಲ್ಪವನ್ನು ಕಂಡರಿಸಲಾಗಿದೆ. ಇಲ್ಲಿ ದೇಹದಾರ್ಢ್ಯನಾಗಿರುವ ವೀರನು ಆಳೆತ್ತರದ ಬಿಲ್ಲು ಹಿಡಿದು ಯುದ್ಧಸನ್ನದ್ಧನಾಗಿದ್ದಾನೆ. ಅವನು ಉದ್ದವಾದ ಕೇಶ ಬಿಟ್ಟಿರುವಂತೆ ಶಿಲ್ಪಿ ಸುಂದರವಾಗಿ ಚಿತ್ರಿಸಿದ್ದಾನೆ. ವೀರನ ಕಾಲುಗಳ ಬಳಿ ಮಡಿದು ಬಿದ್ದಿರುವ ಇಬ್ಬರ ಹೆಣಗಳ ಚಿತ್ರಣವಿದೆ. ತುರುಗಳನ್ನು ಕಳೆದುಕೊಂಡ ದನಗಾಯಿಗನೊಬ್ಬ ಎಡಗೈಯನ್ನು ತಲೆಯ ಮೇಲೆ ಇಟ್ಟುಕೊಂಡು ಚಿಂತಾಗ್ರಸ್ತನಾಗಿ ಕುಳಿತಿರುವಂತೆ ಕೆತ್ತಲಾಗಿದೆ. ಅವನ ಹಿಂಬದಿ ಹಸು ಮತ್ತು ಎಮ್ಮೆಗಳು ಹೆದರಿ ಓಡುತ್ತಿರುವ ದೃಶ್ಯವಿದೆ. ಹಸುಗಳೊಂದಿಗೆ ಎಮ್ಮೆಗಳನ್ನು ಕದ್ದಿರುವ ಉದಾಹರಣೆಗಳು ನಮಗೆ ಕಂಡುಬರುತ್ತವೆ. ಆದರೆ ತುರುಗಳನ್ನು ಕಳೆದುಕೊಂಡು ರೋದಿಸುತ್ತಿರುವ ದನಗಾಯಿಗನ ಚಿತ್ರಣವಿರುವ ಸ್ಮಾರಕಶಿಲ್ಪಗಳು ಈವರೆಗೆ ಕಂಡುಬಂದಿರುವುದಿಲ್ಲ. ಈ ದೃಷ್ಟಿಯಿಂದ ಸ್ಮಾರಕಶಿಲ್ಪವು ಗಮನಾರ್ಹವಾಗಿದೆ.

* ಈ ಪ್ರದೇಶದ ೪೭ ಶಾಸನರಹಿತವಾದ ತುರುಗೋಳ್ ಸ್ಮಾರಕಶಿಲ್ಪಗಳನ್ನು ಅಧ್ಯಯನದ ಮೂಲಕ ಹೊಸದಾಗಿ ಬೆಳಕಿಗೆ ತರಲಾಗಿದೆ.

* ಚಿಕ್ಕಬಿದಿರೆ ಕೋಟೆಕಾಳಗ ಸ್ಮಾರಕಶಿಲ್ಪವೊಂದರಲ್ಲಿ ಅಪರೂಪದ ದೃಶ್ಯವನ್ನು ಶಿಲ್ಪಿ ಚಿತ್ರಿಸಿದ್ದಾನೆ. ಇಲ್ಲಿ ವೀರನು ಕೊಂದ ಸೈನಿಕರನ್ನು ಒಬ್ಬರ ಮೇಲೆ ಒಬ್ಬರು ಮಲಗಿರುವಂತೆ ಕಂಡರಿಸಿರುವುದು ವಿಶೇಷವಾಗಿದ್ದು ಸಾಮಾನ್ಯವಾಗಿ ಕಂಡುಬರುವ ಶಿಲ್ಪಗಳಿಗಿಂತ ಭಿನ್ನವಾಗಿರುವುದನ್ನು ಗಮನಿಸಲಾಗಿದೆ.

* ಅಧ್ಯಯನ ಪ್ರದೇಶದಲ್ಲಿ ದೊರೆತ ಏಳು ಪೆಣ್ಬುಯ್ಯಲ್ ಸ್ಮಾರಕಶಿಲ್ಪಗಳನ್ನು ಹೊಸದಾಗಿ ವಿಶ್ಲೇಷಿಸಲಾಗಿದೆ. ಹನಗವಾಡಿ ಗ್ರಾಮದ ಒಂದು ಪೆಣ್ಬುಯ್ಯಲ್ ಸ್ಮಾರಕಶಿಲ್ಪವು ಮಹತ್ವದ್ದಾಗಿದೆ. ಇಲ್ಲಿ ವೀರನು ಒಂದು ಕೈಯಲ್ಲಿ ಶತ್ರುವಿನ ತಲೆ ಕೂದಲನ್ನು ಹಿಡಿದು, ಮತ್ತೊಂದು ಕೈಯಲ್ಲಿ ಬಾಕುವನ್ನು ಹಿಡಿದು ಶತ್ರುವನ್ನು ಹೆದರಿಸುತ್ತಿದ್ದಾನೆ. ಶತ್ರುಗಳ ಆಕ್ರಮಣಕ್ಕೆ ಒಳಗಾದ ಮಹಿಳೆಯ ಮುಡಿ ಬಿಚ್ಚಿಕೊಂಡಿರುವಂತೆ ಚಿತ್ರಿಸಲಾಗಿದೆ. ತನ್ನನ್ನು ರಕ್ಷಿಸಿದ ಕೃತಜ್ಞತೆಯಿಂದಾಗಿ ಆ ಮಹಿಳೆ ತನ್ನೆರಡು ಕೈಗಳಿಂದ ನಮಸ್ಕರಿಸುತ್ತಿರುವುದನ್ನು ಕಂಡರಿಸಿರುವುದು ಗಮನಾರ್ಹವಾಗಿದೆ.

* ಕಳ್ಳರೊಡನೆ ಹೋರಾಡಿ ಮಡಿದ ವೀರರ ಸ್ಮಾರಕಶಿಲ್ಪಗಳನ್ನು ಶಾಸನಪಾಠವಿರುವ ಸ್ಮಾರಕಶಿಲ್ಪಗಳಿಂದ ಮಾತ್ರವೇ ಗುರುತಿಸಲು ಸಾಧ್ಯವೆಂದು ವಿದ್ವಾಂಸರು ಅಭಿಪ್ರಾಯಿಸಿರುವುದುಂಟು. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬಂದ ಶಾಸನರಹಿತವಾದ ಸ್ಮಾರಕಶಿಲ್ಪಗಳಲ್ಲಿ ಕಳ್ಳರೊಂದಿಗೆ ಹೋರಾಡಿ ಮಡಿದಿರುವುದನ್ನು ಗುರುತಿಸಲಾಗಿದೆ. ಚಿಗಟೇರಿ ಗ್ರಾಮದ ಒಂದು ಸ್ಮಾರಕಶಿಲ್ಪದಲ್ಲಿ ವೀರನು ಒಂದು ಕೈಯಲ್ಲಿ ಆಳೆತ್ತರದ ಬಿಲ್ಲು, ಮತ್ತೊಂದು ಕೈಯಲ್ಲಿ ಕಡುಗತ್ತಿಯನ್ನು ಹಿಡಿದು ಶತ್ರುಗಳೊಂದಿಗೆ ಹೋರಾಡುತ್ತಿರುವನು. ಅವನ ಹಿಂಬದಿಯಲ್ಲಿ ಚಿತ್ರಿಸಿರುವ ಇಬ್ಬರು ಸ್ತ್ರೀಯರು ಚೌಕಾಕಾರದ ವಸ್ತುವೊಂದನ್ನು (ಪ್ರಾಯಶಃ ಟ್ರಂಕ್) ತಲೆಯ ಮೇಲೆ ಹೊತ್ತಿರುವರು. ಪುರುಷನೊಬ್ಬ ಉದ್ದವಾದ ದಂಡಕ್ಕೆ ಎರಡು ಬದಿಯಲ್ಲಿ ವಸ್ತುಗಳನ್ನು ಕಟ್ಟಿ ತನ್ನ ಬಲಭುಜದ ಮೇಲೆ ಇಟ್ಟುಕೊಂಡಿದ್ದಾನೆ. ಅವರೆಲ್ಲರೂ ಬಲಗೈಯಿಂದ ತಮ್ಮ ವಸ್ತುಗಳನ್ನು ಹಿಡಿದುಕೊಂಡಿದ್ದರೆ, ಮತ್ತೊಂದು ಕೈಯಿಂದ ತಮ್ಮ ಮರ್ಮಾಂಗಗಳನ್ನು ಮುಚ್ಚಿಕೊಂಡಿರುವಂತೆ ಕಂಡರಿಸಲಾಗಿದೆ. ಪ್ರಾಯಶಃ ಕಳ್ಳರು ಅವರನ್ನು ವಿವಸ್ತ್ರಗೊಳಿಸಿ ವಸ್ತುಗಳನ್ನು ದೋಚಲು ಯತ್ನಿಸಿರಬಹುದೆಂದು ತೋರುತ್ತದೆ.

* ಹುಲಿಯೊಂದಿಗೆ ಹೋರಾಡಿ ಮಡಿದ ವೀರನ ನಾಲ್ಕು ಹಂತಗಳಲ್ಲಿರುವ ಸ್ಮಾರಕಶಿಲ್ಪವು ಇದುವರೆಗೂ ಬೇರೆಲ್ಲೂ ದೊರಕಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದ ಚಿರಸ್ತಹಳ್ಳಿಯಲ್ಲಿ ನಾಲ್ಕು ಹಂತದಲ್ಲಿ ಚಿತ್ರಿಸಿರುವ ಸ್ಮಾರಕಶಿಲ್ಪ ಕಂಡುಬರುವುದನ್ನು ಗುರುತಿಸಲಾಗಿದೆ.

* ಹಲವು ಪ್ರಾಣಿಗಳೊಂದಿಗೆ ಹೋರಾಡಿ ಮಡಿದ ವೀರರ ಸ್ಮಾರಕಶಿಲ್ಪಗಳು ಈವರೆಗೆ ದೊರೆತಿವೆ. ಆದರೆ ಕರಡಿ ದಾಳಿ ಅಥವಾ ಕರಡಿಯೊಂದಿಗೆ ಹೋರಾಡಿ ಮಡಿದ ವೀರರ ಸ್ಮಾರಕಶಿಲ್ಪಗಳು ನಮಗೆ ಇದುವರೆಗೆ ಕಂಡುಬಂದಿರಲಿಲ್ಲ. ಪ್ರಸ್ತುತ ಅಧ್ಯಯನ ಪ್ರದೇಶದ ಮುದಿಗೆರೆ ಗ್ರಾಮದಲ್ಲಿ ಕರಡಿಯೊಂದಿಗೆ ಹೋರಾಡಿದ ವೀರನ ಸ್ಮಾರಕಶಿಲ್ಪವನ್ನು ಗುರುತಿಸಿ ಮೊದಲ ಬಾರಿಗೆ ವಿಶ್ಲೇಷಿಸಲಾಗಿದೆ.

* ಗೂಳಿಯನ್ನು ಪಳಗಿಸಲು ಹೋಗಿ ಹೋರಾಡಿ ಮಡಿದ ವೀರರ ಸ್ಮಾರಕಶಿಲ್ಪಗಳು ಅಧ್ಯಯನ ಪ್ರದೇಶದಲ್ಲಿ ವಿಶೇಷವಾಗಿ ಕಂಡುಬರುವುದನ್ನು ಗುರುತಿಸಲಾಗಿದೆ. ಆಲೂರು ಗ್ರಾಮದ ಕ್ರಿ.ಶ. ೧೨೦೦ರ ಒಂದು ಸ್ಮಾರಕಶಿಲ್ಪದಲ್ಲಿ ಗೂಳಿಯೊಂದು ಹಲವರನ್ನು ಕೊಂದ ವಿಷಯವಿದೆ. ಆ ಗೂಳಿಯೊಡನೆ ಅಲ್ಲಿಯ ಭೂಮಾದ ಸೆಟ್ಟಿ ಹಾಗೂ ಆತನ ಮಗ ನಾದಿಯಣ್ಣ ಎಂಬುವರು ಮಡಿದಿರುವುದು ತಿಳಿಯುತ್ತದೆ. ಇದೇ ರೀತಿ ಗೂಳಿಯೊಂದಿಗೆ ಹೋರಾಡಿ ಮಡಿದ ವೀರನ ಶಾಸನರಹಿತವಾದ ಸ್ಮಾರಕಶಿಲ್ಪವೊಂದು ಅಧ್ಯಯನ ಪ್ರದೇಶದ ಸಿದ್ದಮ್ಮನಹಳ್ಳಿಯಲ್ಲಿ ಕಂಡುಬರುವುದು. ಈ ಸ್ಮಾರಕದಲ್ಲಿ ನಿಂತಿರುವ ಗೂಳಿಯನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಅದರ ಮುಂದೆ ಕತ್ತಿಯನ್ನು ಹಿಡಿದಿರುವ ವೀರ ಬಲಗಾಲು ಮಂಡಿಯನ್ನು ನೆಲಕ್ಕೆ ಊರಿ ನಿಂತಿರುವಂತೆ ಕಂಡರಿಸಲಾಗಿದೆ. ಗೂಳಿಯ ಕಾಲುಗಳಿಗೆ ದಪ್ಪವಾಗಿರುವ

ಕಡಗ ಮತ್ತು ಬಾಯಿ ಸುತ್ತ ಅಗ್ಗದ ಕಟ್ಟನ್ನು ಹಾಕಿದೆ. ಅದನ್ನು ಪಳಗಿಸಲು ಅವುಗಳನ್ನು ಹಾಕಿದ್ದರೋ ಅಥವಾ ಅದೊಂದು ದೇವರಿಗೆ ಬಿಟ್ಟ ಗೂಳಿ ಎಂದು ಸೂಚಿಸಲು ಆ ರೀತಿ ಶೃಂಗರಿಸಲಾಗಿದೆಯೋ ತಿಳಿಯದು.

* ಈ ಪ್ರದೇಶದಲ್ಲಿ ಕಂಡುಬರುವ ೫೮ ಸಹಗಮನ, ೭೧ ಅನುಗಮನ ಮಹಾಸತಿಗಲ್ಲುಗಳನ್ನು ಅಧ್ಯಯನದ ಮೂಲಕ ಹೊಸದಾಗಿ ಬೆಳಕಿಗೆ ತರಲಾಗಿದೆ.
* ಅಧ್ಯಯನದ ಪ್ರದೇಶದ ಅಣಬೂರು ಗ್ರಾಮದಲ್ಲಿ ಅಪರೂಪದ ಸತಿಗಲ್ಲು ಕಂಡುಬರುವುದನ್ನು ಗುರುತಿಸಲಾಗಿದೆ. ಈ ಸ್ಮಾರಕದಲ್ಲಿ ವೀರನೊಬ್ಬನ ಹತ್ತು ಮಂದಿ ಪತ್ನಿಯರು ಸಹಗಮನಗೊಂಡಿರುವುದನ್ನು ಬಿಡಿಸಲಾಗಿದೆ. ಇಂತಹ ಸತಿಗಲ್ಲುಗಳು ಈವರೆಗೆ ಕರ್ನಾಟಕದ ಯಾವುದೇ ಭಾಗದಲ್ಲಿ ಕಂಡುಬಂದಿರುವುದಿಲ್ಲ.
* ಈ ಪ್ರದೇಶದಲ್ಲಿ ಹರಳಹಳ್ಳಿಯಲ್ಲಿ ಕಂಡುಬರುವ ಸಹಗಮನ ಸ್ಮಾರಕಶಿಲ್ಪವೊಂದು ವಿಶಿಷ್ಟ ಲಕ್ಷಣವನ್ನು ಹೊಂದಿದೆ. ವೀರನು ಕೈಮುಗಿದು ನಿಂತಿದ್ದಾನೆ. ವೀರನ ಎಡಬದಿಯಲ್ಲಿ ಆತನ ಹೆಂಡತಿ ಬಲಗೈ ಮೇಲೆತ್ತಿ ನಿಂಬೆಹಣ್ಣು ಹಿಡಿದಿದ್ದಾಳೆ. ಈಕೆಯ ಎಡಭಾಗದಲ್ಲಿ ಸಣ್ಣ ಹುಡುಗನೊಬ್ಬನು ನಿಂತಿದ್ದಾನೆ. ಇವನನ್ನು ವೀರನ ಹೆಂಡತಿ ತನ್ನ ಕೈಯಿಂದ ಹಿಡಿದಿದ್ದಾಳೆ. ಈ ಬಾಲಕ ಯಾರು? ಆ ವೀರ ದಂಪತಿಗಳ ಮಗನೇ? ಅವನು ಯುದ್ಧದಲ್ಲಿ ಶತ್ರುಗಳ ಹೊಡೆತಕ್ಕೆ ಸಿಕ್ಕಿ ಮರಣ ಹೊಂದಿದನೇ? ಅಥವಾ ತಮ್ಮ ಮಗುವನ್ನು ಅನಾಥವಾಗಿ ಬಿಡುವುದಕ್ಕಿಂತ ತಮ್ಮೊಡನೆಯೇ ಕರೆದೊಯ್ಯುವುದು ಉತ್ತಮವೆಂದು ಕರೆದೊಯ್ದರೆ? ಅಥವಾ ಹುಡುಗನನ್ನು ಆ ವೀರದಂಪತಿಗಳು ಆ ಇನ್ನೊಬ್ಬ ವ್ಯಕ್ತಿಗೆ ಒಪ್ಪಿಸಿ ಸತ್ತರೇ? ಎಂಬ ಹಲವಾರು ಸಂಶಯಗಳು ಬರುತ್ತವೆ. ಈ ರೀತಿಯ ಚಿತ್ರಣವಿರುವ ಸ್ಮಾರಕಶಿಲ್ಪಗಳು ನಮ್ಮ ಗಮನಕ್ಕೆ ಕರ್ನಾಟಕದ ಬೇರಾವ ಭಾಗದಲ್ಲಿ ಕಂಡುಬಂದಿಲ್ಲ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.
* ಅಧ್ಯಯನ ಪ್ರದೇಶದ ಬೊಮ್ಮನಹಳ್ಳಿಯ ಅನುಗಮನ ಸ್ಮಾರಕಶಿಲ್ಪಗಳಲ್ಲಿ ಸತಿಯರು ಹಿಂಭಾಗದಲ್ಲಿ ಉದ್ದವಾದ ಜಡೆಯನ್ನು ಬಿಟ್ಟಿರುವಂತೆ ಚಿತ್ರಿಸಿರುವುದು ವಿಶಿಷ್ಟವಾಗಿದೆ. ಮೊಗ್ಗಿನ ಜಡೆಯನ್ನು ಹಾಕಿಕೊಂಡು ತುದಿಯಲ್ಲಿ ಕುಚ್ಚು ಕಟ್ಟಿರುವ ರೀತಿ ಮನಮೋಹಕವಾಗಿದೆ. ಇಂತಹ ಶಿಲ್ಪಗಳು ಕರ್ನಾಟಕದಲ್ಲಿ ಮತ್ತೊಂದು ಇಲ್ಲ ಎಂದು ವಿದ್ವಾಂಸರು ಅಭಿಪ್ರಾಯಿಸಿರುವರು. ಆದರೆ ಈ ಶಿಲ್ಪಗಳಿಗೂ ವೈಭವಯುತವಾಗಿರುವ ಸತಿಗಲ್ಲೊಂದು ಅಧ್ಯಯನ ಪ್ರದೇಶದ ಜೋಳದಾಳ್ ಮಾಸ್ತಿಕಟ್ಟೆ ಅರಣ್ಯದಲ್ಲಿ ಗುರುತಿಸಲಾಗಿದೆ. ಈ ಸ್ಮಾರಕದಲ್ಲಿ ಸತಿ ಹೆಣೆದುಕೊಂಡಿರುವ ಮೊಗ್ಗಿನ ಜಡೆಯನ್ನು ಹಿಂಭಾಗದಲ್ಲಿರುವಂತೆ ಚಿತ್ರಿಸದೆ, ಎಡಗೈ ಭುಜದ ಮೇಲಿಂದ ಕೆಳಮುಖವಾಗಿ ಇಳಿಬಿದ್ದಂತೆ ಚಿತ್ರಿಸಲಾಗಿದೆ. ಅದರ ತುದಿಯಲ್ಲಿ ಕುಚ್ಚನ್ನು ಹಾಕಿಕೊಂಡಿರುವಂತೆ ತೋರಿಸಿರುವುದು ಗಮನಾರ್ಹವಾಗಿದೆ.
* ಪತಿಗೆ ಸೇರಿದ ಯಾವುದಾದರೂ ವಸ್ತುವೊಂದನ್ನು ಸ್ವತಃ ಸತಿಯೇ ಹಿಡಿದು ಅನುಗಮನಗೊಂಡ ಸ್ಮಾರಕಶಿಲ್ಪಗಳ ಉದಾಹರಣೆಗಳಿಲ್ಲ. ಕೇವಲ ಕಂಬದಿಂದ ಹೊರಟ ತೋಳಗೈ ಶಿಲ್ಪದ

ಯಾವುದಾದರೂ ಒಂದು ಕಡೆ ಕತ್ತಿಯನ್ನು ಚಿತ್ರಿಸಿರುವಂತಹ ಉದಾಹರಣೆಗಳಿವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ಶಿಲ್ಪಗಳಲ್ಲಿ ಸತಿಯರೇ ಸ್ವತಃ ಕತ್ತಿ ಮತ್ತು ತಟ್ಟೆಗಳನ್ನು ಹಿಡಿದು ಸತಿಹೋಗಿರುವುದನ್ನು ಅಧ್ಯಯನದ ಮೂಲಕ ಮೊದಲ ಬಾರಿಗೆ ಗುರುತಿಸಲಾಗಿದೆ. ಹಿರೇಹಾಲಿವಾಣ ಗ್ರಾಮದ ಸ್ಮಾರಕಶಿಲ್ಪದಲ್ಲಿ ಸತಿ ಬಲಗೈ ಮೇಲೆತ್ತಿ ಕತ್ತಿಯನ್ನು ಅಡ್ಡವಾಗಿ ಹಿಡಿದಿದ್ದಾಳೆ. ಮಾದೇನಹಳ್ಳಿಯ ಶಿಲ್ಪದಲ್ಲಿ ಇಬ್ಬರು ಸತಿಯರು ಬಲಗೈಯಲ್ಲಿ ಕತ್ತಿಯನ್ನು ಮೇಲುಮುಖವಾಗಿ ಹಿಡಿದು ನಿಂತಿದ್ದಾರೆ. ಉಪನಾಯಕನಹಳ್ಳಿಯ ಐದು ಶಿಲ್ಪಗಳಲ್ಲಿ ಸತಿಯರು ತಮ್ಮ ಪತಿಯರು ಉಪಯೋಗಿಸಿರಬಹುದಾದ ಕತ್ತಿ ಮತ್ತು ತಟ್ಟೆಗಳನ್ನು ಹಿಡಿದು ಸತಿಹೋಗಿರುವುದು ವಿಶೇಷವಾಗಿದೆ.

* ಈ ಪ್ರದೇಶದಲ್ಲಿ ದೊರೆತ ಹನ್ನೊಂದು ಆತ್ಮಬಲಿದಾನ ಸ್ಮಾರಕಶಿಲ್ಪಗಳನ್ನು ಹೊಸದಾಗಿ ಗುರುತಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

* ಅಧ್ಯಯನ ಪ್ರದೇಶದ ನಂದಿಗುಡಿಯಲ್ಲಿ ಅಪರೂಪದ ಆತ್ಮಬಲಿ ಸ್ಮಾರಕಶಿಲ್ಪವೊಂದಿದೆ. ಈ ಶಿಲ್ಪವು ಕ್ರಿ.ಶ. ೯ನೆಯ ಶತಮಾನಕ್ಕೆ ಸಂಬಂಧಿಸಿದ ರಾಷ್ಟ್ರಕೂಟ ಕಾಲದ್ದಾಗಿದೆ. ಈ ಸ್ಮಾರಕ ವಿಶೇಷವೆಂದರೆ ಸೇವಕನೊಬ್ಬ ತನ್ನ ಒಡೆಯನ ಚಿತೆಯ ಸಮ್ಮುಖದಲ್ಲೇ ಆತ್ಮಾರ್ಪಣೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲೇ ಇದೊಂದು ಏಕೈಕ ಚಿತ ಸಹಿತವಿರುವ ಕಿಳ್ಗುಂಟೆ ಸ್ಮಾರಕಶಿಲ್ಪವೆಂದು ಗುರುತಿಸಲಾಗಿದೆ.

* ಒಡೆಯನಿಗಾಗಿ ಸೇವಕನೊಬ್ಬ ಕಿಳ್ಗುಂಟೆ, ವೇಳವಾಳಿ, ಬೆಂಕಿಬಲಿ, ಶೂಲಬಲಿ, ಸಿಡಿತಲೆ ಬಲಿ, ಉರಿ ಉಯ್ಯಾಲೆ ಬಲಿ, ಲೆಂಕ ಮುಂತಾದ ವಿಧಾನದ ಮೂಲಕ ದೇಹತ್ಯಾಗ ಮಾಡಿಕೊಂಡಿರುವ ಸ್ಮಾರಕಶಿಲ್ಪಗಳು ಈವರೆಗೆ ಕಂಡುಬಂದಿವೆ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದ ಉಪನಾಯಕನಹಳ್ಳಿಯಲ್ಲಿ ದೊರೆತಿರುವ ಸ್ಮಾರಕಶಿಲ್ಪದಲ್ಲಿ ಒಡೆಯನಿಗಾಗಿ ಸೇವಕನೊಬ್ಬ ಚಾಟಿ ಏಟಿನಿಂದ ಶಿಕ್ಷಿಸಿಕೊಂಡು ಮಡಿದಿರುವುದನ್ನು ತಿಳಿಸುವ ಸ್ಮಾರಕಶಿಲ್ಪವನ್ನು ಮೊದಲ ಬಾರಿಗೆ ಗುರಿತಿಸಲಾಗಿದೆ. ಈ ಶಿಲ್ಪದಲ್ಲಿ ನಿಂತಿರುವ ವೀರನು ಇಳಿಬಿಟ್ಟ ಬಲಗೈಯಲ್ಲಿ ಚಾಟಿ ಹಿಡಿದಿದ್ದಾನೆ. ಅದು ಬಲಭುಜದ ಮೇಲಿಂದ ಕುತ್ತಿಗೆ ಹಿಂಭಾಗದಲ್ಲಿ ಹಾದು ಎಡಗೈ ಭುಜದ ಮೇಲಿಂದ ಅದರ ಕೊನೆಯ ತುದಿಯು ಇಳಿಬಿದ್ದಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ.

* ವೀರರ ಸಾಮಾಜಿಕ ಸ್ಥಿತಿಯನ್ನು ಗಮನಿಸಿದಾಗ ಸಮಾಜದ ಹಲವು ಜಾತಿಗಳಿಗೆ ಮತ್ತು ವಿವಿಧ ವೃತ್ತಿಗಳಿಗೆ ಸೇರಿದ ವೀರರು ಬೇರೆ ಬೇರೆ ಸಂದರ್ಭಗಳಲ್ಲಿ ಯುದ್ಧಗಳಲ್ಲಿ ಭಾಗಿಯಾಗಿರುವುದು ಕಂಡುಬಂದಿದೆ. ಇದರಿಂದ ವರ್ಣವು ವೃತ್ತಿ ಆಧಾರಿತವಾಗಿ ನಿರ್ಧರಿಸಲ್ಪಡುವುದಾದರೆ ಈ ಎಲ್ಲಾ ವೀರರನ್ನು ಅವರ ಜಾತಿ, ಸಮುದಾಯ ಮತ್ತು ವೃತ್ತಿಯನ್ನು ಬದಿಗಿರಿಸಿ ಕ್ಷತ್ರಿಯ ವರ್ಗದವರೆಂದು ಪರಿಗಣಿಸಬಹುದಾಗಿದೆ.

* ಅಧ್ಯಯನ ಪ್ರದೇಶದ ಹಲವು ಗ್ರಾಮಗಳಲ್ಲಿ ಸ್ಮಾರಕಶಿಲ್ಪಗಳ ಕುರಿತು ಇರುವ ನಂಬಿಕೆ, ಆಚರಣೆ, ಐತಿಹ್ಯಗಳು ಇಂದಿಗೂ ಪ್ರಚಲಿತವಾಗಿವೆ. ಅವು ವೀರರು ಮತ್ತು ಮಹಾಸತಿಯರ

ನೆನಪಿನಲ್ಲಿ ಹುಟ್ಟಿಕೊಂಡಿದ್ದು ಅವರ ಮೇಲೆ ಹೊಸ ಬೆಳಕನ್ನು ಬೀರುವವುಗಳಾಗಿವೆ. ಅವುಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

* ವೀರತ್ವ ಪಡೆದ ನಂತರ ಸ್ವರ್ಗ ಸ್ಥಾನವು ಅಂತಿಮವೆಂದು ಪರಿಭಾವಿಸಲಾಗಿತ್ತು. ಆದರೆ ಅಂದಿನ ಸಮಾಜದ ನಂಬಿಕೆಗಳು ಆಯಾ ಕಾಲದ ಸಮಕಾಲೀನ ಮತಗಳ ಪ್ರತಿಕ್ರಿಯೆಗಳನ್ನು ತೋರಿಸುತ್ತವೆ. ಅಂದರೆ ಇಲ್ಲಿ ತಿಳಿಯಬಹುದಾದ ಸ್ಪಷ್ಟವಾದ ಅಂಶವೆಂದರೆ, ವೀರನು ಯಾವ ಮತಕ್ಕೆ ಸೇರಿರುವನೋ ಆ ಮತದ ದೇವರಿಗೆ ಸೇರಿದ ಲೋಕದಲ್ಲಿ ಅಂತಿಮ ಸ್ಥಾನ ಪಡೆಯುತ್ತಾನೆ ಎಂಬ ನಂಬಿಕೆಯು ಅಂದಿನ ಕಾಲದಲ್ಲಿ ಹೆಚ್ಚು ಪ್ರಚಲಿತಗೊಳ್ಳುತ್ತಾ ರೂಪುಗೊಂಡಿತು. ಹಾಗಾಗಿ ವೀರ ಮರಣ ಪಡೆದವನಿಗೆ ಅಂತಿಮ ಅನ್ನುವುದು ಸ್ವರ್ಗಲೋಕ ಮಾತ್ರವಾಗಿರಲಿಲ್ಲ. ಸಮಕಾಲೀನ ಮತ ಪಂಥಗಳ ಹಿನ್ನೆಲೆಯಲ್ಲಿ ವೀರಮರಣ ಕಲ್ಪನೆಯನ್ನು ಅಂದಿನ ಸಮಾಜವು ಒಪ್ಪಿಕೊಂಡಿತ್ತು ಎಂಬುದನ್ನು ಸ್ಮಾರಕಶಿಲ್ಪಗಳಲ್ಲಿ ವ್ಯಕ್ತವಾಗಿರುವ ಚಿತ್ರಣಗಳು ದೃಢಪಡಿಸುತ್ತವೆ.

* ಶಿಲ್ಪಗಳ ನಿರ್ಮಾಣ ಕೇವಲ ಸಮಾಜೋ-ಧಾರ್ಮಿಕ ವ್ಯವಸ್ಥೆಯನ್ನು ಪ್ರತಿನಿಧಿಸುವ ಅಂಶಗಳಾಗಿ ಉಳಿಯಲಿಲ್ಲ. ಸ್ಮಾರಕ ಶಿಲ್ಪಗಳ ತಯಾರಿಕೆಯು ಉದ್ಯಮದ ಸ್ವರೂಪವನ್ನು ಪಡೆಯಿತು.

* ಇತಿಹಾಸ ಅಥವಾ ಚರಿತ್ರೆಯ ಬರವಣಿಗೆಯಲ್ಲಿ ಪುರಾತತ್ವ ಆಕರಗಳು ತುಂಬಾ ಮಹತ್ವದ ಪಾತ್ರವಹಿಸಿವೆ. ಇವುಗಳಲ್ಲದೆ ಜಾನಪದೀಯ ಅಥವಾ ಮೌಖಿಕ ಕಥನಗಳು ಕೂಡಾ ಹೊಸ ಬಗೆಯ ಚರಿತ್ರೆಯ ರಚನೆಯಲ್ಲಿ ಪ್ರಮುಖ ಆಕರಗಳೆಂದು ಪರಿಗಣಿತವಾಗುತ್ತಿವೆ. ಈ ಹಿನ್ನೆಲೆಯಲ್ಲಿ ಜಾನಪದೀಯ ಅಥವಾ ಮೌಖಿಕ ಕಥನಗಳನ್ನು ಸಮರ್ಪಕಗೊಳಿಸಲು ಪುರಾತತ್ವ ಆಕರಗಳಾದ ಸ್ಮಾರಕಶಿಲ್ಪಗಳು ಹಾಗೂ ಶಾಸನ ವಿವರಗಳು ಹೇಗೆಲ್ಲಾ ಬೆಂಬಲಿಸಿವೆ ಎಂಬುದನ್ನು ಖಚಿತಪಡಿಸಿಕೊಳ್ಳುವ ನಿಟ್ಟಿನಲ್ಲಿ ಹೊಸ ವಿವರಗಳನ್ನು ಪ್ರಸ್ತುತ ಪ್ರಬಂಧದಲ್ಲಿ ದಾಖಲಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು
೨. ಸ್ಮಾರಕ ಶಿಲ್ಪಗಳ ಪಟಿ
೩. ನಕ್ಷೆಗಳು
೪. ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು


**ಶಾಸನ ಸಂಪುಟಗಳು**

ಗಂಗಾನಾಯಕ್ ಕೆ.ಎನ್. (ಪ್ರಸಂ), ಭಾರತೀ ಬಿ.ಆರ್. (ಸಂ), ೨೦೧೧, ರಾಷ್ಟ್ರಕೂಟರ ಶಾಸನಗಳು ಸಂ-೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಗಂಗಾನಾಯಕ್ ಕೆ.ಎನ್. (ಪ್ರಸಂ), ಭಾರತೀ ಬಿ.ಆರ್. (ಸಂ), ೨೦೧೧, ರಾಷ್ಟ್ರಕೂಟರ ಶಾಸನಗಳು ಸಂ-೨, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಗಂಗಾನಾಯಕ್ ಕೆ.ಎನ್. (ಪ್ರಸಂ), ನಾಗಯ್ಯ ಜೆ.ಎಂ. (ಸಂ), ೨೦೧೧, ಕಲ್ಯಾಣ ಚಾಲುಕ್ಯರ ಶಾಸನಗಳು ಸಂ-೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಗಂಗಾನಾಯಕ್ ಕೆ.ಎನ್. (ಪ್ರಸಂ), ಶೈಲಜ ಬಿ.ಎಂ. (ಸಂ), ೨೦೧೨, ಪಾಳೆಯಗಾರರ ಶಾಸನಗಳು ಸಂ-೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಗಂಗಾನಾಯಕ್ ಕೆ.ಎನ್. (ಪ್ರಸಂ), ಪುಟ್ಟಸ್ವಾಮಿ (ಸಂ), ೨೦೧೨, ಪಾಳೆಯಗಾರರ ಶಾಸನಗಳು ಸಂ-೨, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಚನ್ನಬಸಪ್ಪ ಎಸ್. ಪಾಟೀಲ, ವಿನೋದಾ ಪಾಟೀಲ (ಸಂ), ೧೯೯೭, ಬಳ್ಳಾರಿ ಜಿಲ್ಲೆಯ ಶಾಸನಗಳು ಸಂ-೨, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ್, ಭಟ್‌ಸೂರಿ ಕೆ.ಜಿ., ಪರಮಶಿವಮೂರ್ತಿ ಡಿ.ವಿ. (ಸಂ), ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೧, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರೈಸ್ ಬಿ.ಎಲ್. (ಸಂ), ೧೯೦೨, ಎಪಿಗ್ರಾಫಿಯ ಕರ್ನಾಟಿಕ ಸಂ-VII, ಮೈಸೂರು ಗವರ್ನಮೆಂಟ್ ಪ್ರೆಸ್, ಬೆಂಗಳೂರು.

ರೈಸ್ ಬಿ.ಎಲ್. (ಸಂ), ೧೯೦೩, ಎಪಿಗ್ರಾಫಿಯ ಕರ್ನಾಟಿಕ ಸಂ-XI, ಮೈಸೂರು ಗವರ್ನಮೆಂಟ್ ಪ್ರೆಸ್, ಬೆಂಗಳೂರು.

**ಗೆಜೆಟಿಯರ್‌ಗಳು**

ಅಭಿಶಂಕರ್ ಕೆ., ೧೯೭೨, ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಬೆಂಗಳೂರು.

ಅಭಿಶಂಕರ್ ಕೆ., ೧೯೭೫, ಶಿವಮೊಗ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್, ಬೆಂಗಳೂರು.

ಫ್ರಾನ್ಸಿಸ್ ಡಬ್ಲ್ಯೂ, ೧೯೦೪, ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಮದ್ರಾಸ್.

ಸತ್ಯನ್ ಬಿ.ಎನ್ (ಸಂ), ೧೯೬೭, ಚಿತ್ರದುರ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್, ಕರ್ನಾಟಕ ಸರ್ಕಾರ, ಬೆಂಗಳೂರು.

**Mysore Archaealogical Reports and Indian Archaealogical Reports**

M.A.R - 1926, 1935, 1942, 1947, 1993

I.A.R - 1977-78, 1981, 1983-84

**ವಿಶ್ವಕೋಶಗಳು**

ಅರವಿಂದ ಮಾಲಗಿತ್ತಿ (ಪ್ರ.ಸಂ.), ೨೦೦೫, ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ ಸಂಪುಟ-೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಅಂಬಳಿಕೆ ಹಿರಿಯಣ್ಣ (ಪ್ರ.ಸಂ.), ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

**ನಿಯತಕಾಲಿಕೆ ಹಾಗೂ ಸ್ಮರಣ ಸಂಚಿಕೆಗಳು**

ಇತಿಹಾಸ ದರ್ಶನ - ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

ಪ್ರಬುದ್ಧ ಕರ್ನಾಟಕ - ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಮಾನವಿಕ ಕರ್ನಾಟಕ - ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ವಿಜಯನಗರ ಅಧ್ಯಯನ - ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ

ಶಾಸನ ಅಧ್ಯಯನ - ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಈಶ್ವರಪ್ಪ ಎಂ.ಜಿ. (ಸಂ), ೧೯೯೨, ದವನಸಿರಿ, ಸ್ಮರಣ ಸಂಚಿಕೆ, ಸ್ವಾಗತ ಸಮಿತಿ ಅಖಿಲ ಭಾರತ ೬೧ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ದಾವಣಗೆರೆ

ಹೂಗಾರ್ ಎಸ್.ಎಚ್. (ಪ್ರಸಂ), ೨೦೦೬, ಜೀವಧಾರೆ (ಸ್ಮರಣ ಸಂಚಿಕೆ), ಸ್ವಾಗತ ಸಮಿತಿ, ದಾವಣಗೆರೆ ಜಿಲ್ಲಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಕಾರಿಗನೂರು, ಚನ್ನಗಿರಿ ತಾಲೂಕು ದಾವಣಗೆರೆ ಜಿಲ್ಲೆ, ಕನ್ನಡ ಸಾಹಿತ್ಯ ಪರಿಷತ್ತು ಜಿಲ್ಲಾ ಘಟಕ, ದಾವಣಗೆರೆ

ಬುರುಡೇಕಟ್ಟೆ ಮಂಜಪ್ಪ, ೨೦೧೩, ಬಾತಿಯ ಬೆಳಗು (ಸ್ಮರಣ ಸಂಚಿಕೆ), ದಾವಣಗೆರೆ ತಾಲೂಕು ೫ನೇ ಕನ್ನಡ ಸಾಹಿತ್ಯ ಸಮ್ಮೇಳನ, ದೊಡ್ಡಬಾತಿ, ಕನ್ನಡ ಸಾಹಿತ್ಯ ಪರಿಷತ್ತು, ದಾವಣಗೆರೆ ತಾಲೂಕು

**ಕನ್ನಡ ಕೃತಿಗಳು**

ಕಲಬುರ್ಗಿ ಎಂ.ಎಂ., ೧೯೯೯, ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿ ಎಂ.ಎಂ., ೨೦೦೬, ಸಂಸ್ಕೃತಿ-ವಿಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಕಲಬುರ್ಗಿ ಎಂ.ಎಂ., ೨೦೧೦, ಮಾರ್ಗ ಸಂ-೨, ಸಪ್ನ ಬುಕ್ ಹೌಸ್, ಬೆಂಗಳೂರು.

ಕಲಬುರ್ಗಿ ಎಂ.ಎಂ., ೨೦೧೧, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಸಪ್ನ ಬುಕ್ ಹೌಸ್, ಬೆಂಗಳೂರು.

ಕಲಬುರ್ಗಿ ಎಂ.ಎಂ., ೨೦೧೨, ಮಹಾರಾಷ್ಟ್ರದ ಕನ್ನಡ ಶಾಸನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕೃಷ್ಣಮೂರ್ತಿ ಹನೂರು (ಸಂ), ೧೯೮೭, ಜನಪದ ವೀರಗೀತೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕೃಷ್ಣಮೂರ್ತಿ ಹನೂರು (ಸಂ), ೧೯೯೩, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಕೃಷ್ಣಮೂರ್ತಿ ಸಿ.ಎನ್., ೨೦೧೨, ಸ್ವಾತಂತ್ರ್ಯ ಚಳುವಳಿಗೆ ಹರಿಹರ ತಾಲೂಕಿನ ಕೊಡುಗೆ, ಶ್ರೀ ವಿ.ಎ. ಪ್ರಕಾಶನ, ಹರಿಹರ.

ಕೊಟ್ರೇಶ್ ಎಂ., ೨೦೦೬, ಐತಿಹಾಸಿಕ-ಧಾರ್ಮಿಕ ಶ್ರೀಕ್ಷೇತ್ರ ಉಚ್ಚಂಗಿದುರ್ಗ, ನಮ್ಮೂರ ಪ್ರಕಾಶನ, ಉಚ್ಚಂಗಿದುರ್ಗ.

ಕೊಟ್ರೇಶ್ ಎಂ., ೨೦೧೦, ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರೇಶ್ ಎಂ., ೨೦೧೦, ಹರಪನಹಳ್ಳಿ ತಾಲೂಕಿನ ರಕ್ಷಣಾ ಸ್ಮಾರಕಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರೇಶ್ ಉತ್ತಂಗಿ ನಾ., ೨೦೦೪, ಹೊನ್ನೆಲೆಗಳು, ಸಹನಾದ್ರಿ ಪ್ರಕಾಶನ, ಹೊನ್ನಾಳಿ.

ಕೊಟ್ರೇಶ್ ಉತ್ತಂಗಿ ನಾ., ೨೦೧೪, ಹರಿಹರದೆಳೆಗಳು, ಸಹನಾದ್ರಿ ಪ್ರಕಾಶನ, ಹೊನ್ನಾಳಿ.

ಗಿರಿಜ ಟಿ., ೧೯೮೫, ದಾವಣಗೆರೆ ದರ್ಶಿನಿ. ದಾವಣಗೆರೆ

ಗಿರಿಜ ಟಿ., ೧೯೯೧, ಚಿತ್ರದುರ್ಗ ಜಿಲ್ಲಾದರ್ಶಿನಿ, ರೇಖಾ ಪ್ರಕಾಶನ, ದಾವಣಗೆರೆ.

ಗಿರಿಜ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ, ನಿಹಾರಿಕಾ ಪ್ರಕಾಶನ, ದಾವಣಗೆರೆ.

ಗೋಪಾಲರಾವ್ ಎಚ್.ಎಸ್. ಮತ್ತು ಶ್ರೀನಿವಾಸಮೂರ್ತಿ ಎಸ್.ಎಲ್. (ಸಂ), ೨೦೧೭, ಡಾ. ಆರ್. ಶೇಷಶಾಸ್ತ್ರಿ ಅಭಿನಂದನಾ ಗ್ರಂಥ ವಿಶೇಷ, ಚಿತ್ಕಲಾ ಪ್ರಕಾಶನ, ಕುಪ್ಪಂ.

ಗೋಪಾಲರಾವ್ ಎಚ್.ಎಸ್. (ಸಂ), ಕುಲಕರ್ಣಿ ಆರ್.ಎಚ್. (ಲೇ), ೨೦೦೮, ಕರ್ನಾಟಕದ ಆರಂಭಿಕ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲರಾವ್ ಎಚ್.ಎಸ್. (ಸಂ), ಶೀಲಾಕಾಂತ ಪತ್ತಾರ (ಲೇ), ೨೦೦೮, ಬಾದಾಮಿ ಚಾಲುಕ್ಯ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲರಾವ್ ಎಚ್.ಎಸ್. (ಸಂ), ದೇವರಕೊಂಡಾರೆಡ್ಡಿ (ಲೇ), ೨೦೦೮, ಗಂಗ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲರಾವ್ ಎಚ್.ಎಸ್. (ಸಂ) ಮತ್ತು (ಲೇ), ೨೦೦೮, ರಾಷ್ಟ್ರಕೂಟ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲರಾವ್ ಎಚ್.ಎಸ್. (ಸಂ), ಕರುಣಾ ವಿಜಯೇಂದ್ರ (ಲೇ), ೨೦೦೮, ಕಲ್ಯಾಣ ಚಾಲುಕ್ಯ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲರಾವ್ ಎಚ್.ಎಸ್. (ಸಂ), ವಸಂತಲಕ್ಷ್ಮಿ ಕೆ. (ಲೇ), ೨೦೦೮, ಹೊಯ್ಸಳ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲರಾವ್ ಎಚ್.ಎಸ್. (ಸಂ), ನರಸಿಂಹನ್ ಅ.ಲ. (ಲೇ), ೨೦೦೮, ವಿಜಯನಗರ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲರಾವ್ ಎಚ್.ಎಸ್. (ಸಂ), ತಮಿಳ್ ಸೆಲ್ವಿ (ಲೇ), ೨೦೦೮, ಪಲ್ಲವ–ಚೋಳ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಗೋಪಾಲ ಬಾ.ರಾ., ೧೯೯೬, ಇತಿಹಾಸ ಶಾಸ್ತ್ರ ಮತ್ತು ಸಿದ್ಧಾಂತ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಗೋಪಾಲ್ ಆರ್. (ಸಂ), ೨೦೦೫, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

ಚನ್ನಬಸವಯ್ಯ ಹಿರೇಮಠ, ೨೦೧೪, ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚನ್ನಬಸವಯ್ಯ ಹಿರೇಮಠ, ೧೯೯೫, ಕುರುಗೋಡು ಸಿಂದರು ಒಂದು ಅಧ್ಯಯನ, ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ.

ಚನ್ನಕ್ಕ ಎಲಿಗಾರ, ೧೯೭೭, ಮಾಸ್ತಿಕಲ್ಲು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಚನ್ನಕ್ಕ ಎಲಿಗಾರ, ೧೯೯೦, ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಚಂದ್ರಪೂಜಾರಿ ಎಂ., ೨೦೦೫, ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚನ್ನಬಸಪ್ಪ ಎಸ್. ಪಾಟೀಲ, ೧೯೯೯, ಕರ್ನಾಟಕದ ಕೋಟೆಗಳು ಸಂ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿದಾನಂದಮೂರ್ತಿ ಎಂ., ೧೯೮೨, ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು, ಐಬಿಎಚ್ ಪ್ರಕಾಶನ, ಬೆಂಗಳೂರು.

ಚಿದಾನಂದಮೂರ್ತಿ ಎಂ., ೨೦೧೫, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್‌ಹೌಸ್, ಬೆಂಗಳೂರು.

ಚಿದಾನಂದಮೂರ್ತಿ ಎಂ., ೨೦೦೬, ಬೃಹತ್ ಕರ್ನಾಟಕ: ಭಾಷಿಕ ಸಾಂಸ್ಕೃತಿಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಚಿದಾನಂದಮೂರ್ತಿ ಎಂ., ೨೦೧೧, ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಸಪ್ನ ಬುಕ್ ಹೌಸ್, ಬೆಂಗಳೂರು.

ಚಿನ್ನಸ್ವಾಮಿ ಸೋಸಲೆ ಎನ್., ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿನ್ನಸ್ವಾಮಿ ಸೋಸಲೆ ಎನ್., ೨೦೦೮, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚೆಲುವರಾಜು, ೨೦೦೦, ಹಂಪಿಯ ಸ್ಮಾರಕಗಳಲ್ಲಿ ಜನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತಿಪ್ಪೇರುದ್ರಸ್ವಾಮಿ ಎಚ್., ೨೦೧೫, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

ತಿಪ್ಪೇಸ್ವಾಮಿ ಪಿ.ಆರ್., ನರಸಿಂಹನ್ ಮತ್ತು ಮರಿಶಾಮಾಚಾರ್ ಎನ್., ೧೯೯೩, ಚಿತ್ರಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

ದೇವರಕೊಂಡಾರೆಡ್ಡಿ, ೧೯೯೪, ಭಾರತೀಯ ವಾಸ್ತು ವಿದ್ಯೆ, ರೆಡ್ಡಿ ಪ್ರಕಾಶನ, ಬೆಂಗಳೂರು.

ದೇ. ಜವರೇಗೌಡ, ೨೦೦೧, ಜಾನಪದ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ನರಸಿಂಹಮೂರ್ತಿ ಎ.ವಿ., ೨೦೦೮, ಭಾರತೀಯ ನಾಣ್ಯ ಪರಂಪರೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ನರಸಿಂಹಾಚಾರ್ ಆರ್. ಮತ್ತು ದೇಸಾಯಿ ಪಿ.ಬಿ., ೧೯೭೨, ಪ್ರಾಚೀನ ಭಾರತೀಯ ಚರಿತ್ರೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ನರಸಿಂಹಮೂರ್ತಿ ಎ.ವಿ. (ಪ್ರ.ಸಂ), ನಾಗರಾಜರಾವ್ ಎಚ್.ಎಂ. (ಸ.ಸಂ), ೨೦೦೬, ವೇದಯುಗ ಭಾಗ-೧ ಮತ್ತು ೨, ಭಾರತೀಯ ವಿದ್ಯಾಭವನ, ಬೆಂಗಳೂರು.

ನರಸಿಂಹಮೂರ್ತಿ ಎ.ವಿ., ೧೯೮೩, ಕರ್ನಾಟಕ ಶಾಸನ ಸಂಪತ್ತು, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು.

ನರಸಿಂಹಮೂರ್ತಿ ಎ.ವಿ., ೧೯೯೧, ಕರ್ನಾಟಕದ ಸೇವುಣರ ಇತಿಹಾಸ, ಮೈಸೂರು.

ನಾಗರಾಜ ಎಂ.ಜಿ., ೧೯೯೦, ಶಾಸನ ಶಿಲ್ಪಗಳು, ಶ್ರೀ ಗೌರಿ ಗಂಗ ಪ್ರಕಾಶನ, ಬೆಂಗಳೂರು.

ನಾಗಭೂಷಣ ಸಿ., ೧೯೯೪, ಕನ್ನಡ ನಾಡಿನ ಶಾಸನಗಳ ಅಧ್ಯಯನ: ಕೆಲವು ಗ್ರಹಿಕೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಗಯ್ಯ ಜೆ.ಎಂ., ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ೨೦೦೨, ಲೋಹಿಯಾ ಪ್ರಕಾಶನ, ಬಳ್ಳಾರಿ.

ನೇಗಿನಾಳ ಎಂ.ಬಿ., ೧೯೮೨, ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ನೇಗಿನಾಳ ಎಂ.ಬಿ., ೧೯೯೯, ನೇಗಿನಾಳ ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಮಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಮಶಿವಮೂರ್ತಿ ಡಿ.ವಿ., ೨೦೧೦, ಪೆಣ್ಬುಯ್ಯಲ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಮಶಿವಮೂರ್ತಿ ಡಿ.ವಿ., ೨೦೧೧, ತುಱುಗೋಳ್ ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಗೇಗೌಡ ಎಚ್.ಎಲ್., ೨೦೦೬, ಪ್ರವಾಸಿ ಕಂಡ ಇಂಡಿಯಾ ಸಂಪುಟ-೧-೫, ಐಬಿಎಚ್ ಪ್ರಕಾಶನ, ಬೆಂಗಳೂರು.

ನಾಯಕ ಬಿ.ಜೆ., ೧೯೮೬, ಚನ್ನಗಿರಿ ತಾಲೂಕು ದರ್ಶನ, ಐಬಿಎಚ್ ಪ್ರಕಾಶನ, ಬೆಂಗಳೂರು.

ಪುಟ್ಟಣ್ಣ ಎಂ.ಎಸ್., ೧೯೭೭, ಚಿತ್ರದುರ್ಗ ಪಾಳೆಯಗಾರರು, ಮದಕರಿ ಪ್ರಕಾಶನ, ಚಿತ್ರದುರ್ಗ.

ಪುಟ್ಟಪ್ಪ ಕೆ.ವಿ., ೧೯೫೪, ಭಾರತೀಯ ಸಂಸ್ಕೃತಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪ್ರಭಾಕರ ರಾವ್ ಕೆ., ೨೦೦೬, ಮಧ್ಯಕಾಲೀನ ಕರ್ನಾಟಕದಲ್ಲಿ ಯುದ್ಧಗಳು-ಸಂಶೋಧನಾ ಪ್ರಬಂಧ, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

ಪ್ರಭಾಕರ ಎ.ಎಸ್., ೨೦೦೬, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಸವರಾಜ ಕಲ್ಗುಡಿ, ೧೯೮೫, ಮಹಾಸತಿ ಆಚರಣೆ ಒಂದು ಅಧ್ಯಯನ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಭಟ್‌ಸೂರಿ ಕೆ.ಜಿ., ೨೦೦೫, ಶಾಸನ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಭಾರತೀ, ೧೯೫೭, ಮಹಾಸತಿ, ನೆಹರು ಪ್ರಕಟನಾಲಯ, ಬೆಂಗಳೂರು.

ಬೆಟಗೇರಿ ಕೃಷ್ಣಶರ್ಮ, ೧೯೬೩, ಕರ್ನಾಟಕ ಜನ ಜೀವನ, ಸಮಾಜ ಪುಸ್ತಕಾಲಯ, ಧಾರವಾಡ.

ಮಹದೇವ ಸಿ., ೨೦೧೫, ವಿಜಯನಗರದ ಗಾರೆಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಥ ಸಿ.ಯು., ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಚಿತ್ಕಲಾ ಪ್ರಕಾಶನ, ಕುಪ್ಪಂ.

ಮಂಜುನಾಥ ಸಿ.ಯು., ೨೦೦೯, ಕರ್ನಾಟಕ ಸಾಂಸ್ಕೃತಿಕ ಇತಿಹಾಸ, ಸುಮುಖ ಪ್ರಕಾಶನ, ಬೆಂಗಳೂರು.

ಮಂಜುನಾಥ ಎಂ.ಜಿ., ೨೦೦೯, ನಿಸಿದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಿಂಚು ಮಲ್ಟಿಗ್ರಾಫ್ ಪ್ರಕಾಶನ, ಮೈಸೂರು.

ಮಂಜುನಾಥ ಎಂ.ಜಿ., ೨೦೧೧, ಮಾಸ್ತಿಕಲ್ಲು ವೀರಗಲ್ಲು ಮತ್ತು ನಿಸಿದಿ ಶಾಸನಗಳು, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

ಮರಿಶಾಮಾಚಾರ್ ಎನ್., ೨೦೦೦, ಭಾರತೀಯ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಮಂಜುನಾಥ ಬೇವಿನಕಟ್ಟಿ (ಸಂ), ೨೦೦೭, ವ್ಯಾಧ ಚರಿತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಯ್ಕ ಆರ್., ೨೦೧೬, ಚನ್ನಗಿರಿ ತಾಲೂಕಿನ ಪುರಾತತ್ವ ಅವಶೇಷಗಳು, ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಸೊಂಡೂರು.

ಮುಗಳಿ ರಂ.ಶ್ರೀ, ೧೯೭೬, ಕರ್ನಾಟಕ ಸಂಸ್ಕೃತಿ ಪರಂಪರೆ, ಸಮಾಜ ಪುಸ್ತಕಾಲಯ, ಧಾರವಾಡ.

ಮುತ್ತಾಚಾರ್ಯ ಟಿ.ಬಿ., ೧೯೮೭, ಭಾರತೀಯ ಶಿಲ್ಪಶಾಸ್ತ್ರ ಸಾರ ಭಾಗ-೧, ಶಿಲ್ಪಕಲಾ ಪರಿಷತ್, ಧಾರವಾಡ.

ಮೋಹನ್‌ಕೃಷ್ಣ ರೈ ಕೆ., ೨೦೦೪, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೋಹನ್‌ಕೃಷ್ಣ ರೈ ಕೆ., ೨೦೦೯, ಚರಿತ್ರೆ ಕಥನ, ಪಲ್ಲವ ಪ್ರಕಾಶನ, ಚನ್ನಪಟ್ಟಣ.

ಯೋಗೀಶ್ವರಪ್ಪ ಡಿ.ಎನ್., ೨೦೦೯, ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರಮೇಶ ಕೆ.ವಿ., ೧೯೭೧, ಕರ್ನಾಟಕ ಶಾಸನ ಸಮೀಕ್ಷೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ರಹಮತ್ ತರೀಕೆರೆ (ಸಂ), ೨೦೦೦, ಕನ್ನಡ ವಿಶ್ವವಿದ್ಯಾಲಯ ಕೋಶ-೨ ಧರ್ಮ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಮೇಶ ನಾಯಕ (ಸಂ), ೨೦೦೭, ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಂಗನಾಥ ಎಸ್.ಬಿ. (ಸಂ), ೨೦೦೪, ದಾವಣಗೆರೆ ಜಿಲ್ಲಾ ಕಥಾ ಸಂಕಲನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರಂಗಲಕ್ಷ್ಮಿ ಪಿ.ಎ., ೨೦೦೫, ಪಾವಗಡ ತಾಲೂಕಿನ ಜಾನಪದ ವೀರ ನಾಯಕರು, ಸುಮುಖ ಪ್ರಕಾಶನ, ಬೆಂಗಳೂರು.

ರಾಜಶೇಖರ ಎಸ್., ೧೯೯೬, ದಕ್ಷಿಣ ಭಾರತದ ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ರಾಜರಾಮ ಹೆಗಡೆ, ೨೦೧೧, ಲೌಕಿಕ-ಅಲೌಕಿಕ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ.

ರಾಮಚಂದ್ರ ರಾವ್ ಎಸ್.ಕೆ., ೨೦೧೨, ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ರಾಜಾರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್ (ಸಂ), ೨೦೦೧, ಮಲೆ ಕರ್ನಾಟಕದ ಅರಸುಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜಶೇಖರಪ್ಪ ಬಿ., ೨೦೦೧, ಇತಿಹಾಸ ಕಥನ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

ರಾಜಶೇಖರಪ್ಪ ಬಿ., ೨೦೦೧, ದುರ್ಗದ ಶೋಧನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರಾಜಶೇಖರಪ್ಪ ಬಿ. (ಸಂ), ೨೦೦೭, ಚಿತ್ರದುರ್ಗ ಪಾಳೆಯಗಾರರ ದಾಖಲೆಗಳು, ಕರ್ನಾಟಕದ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು.

ರಾಬರ್ಟ್ ಸಿವೆಲ್ (ಮೂಲ), ಸದಾನಂದ ಕನವಳ್ಳಿ (ಅನು), ೧೯೯೭, ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಮದಾಸ ರೆಡ್ಡಿ ಎಸ್.ಈ., ೨೦೦೯, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಲಕ್ಷ್ಮಣ್ ತೆಲಗಾವಿ (ಸಂ), ೧೯೯೧, ಸಂಶೋಧನ, ಡಾ.ಎಂ. ಚಿದಾನಂದಮೂರ್ತಿ ಗೌರವ ಸಂಪುಟ, ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ, ಬೆಂಗಳೂರು.

ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ. (ಸಂ), ೧೯೯೫, ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ಹುಲ್ಲೂರು ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ. (ಸಂ), ೧೯೭೯, ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.

ಲಕ್ಷ್ಮಣ್ ತೆಲಗಾವಿ, ೨೦೧೦, ಎಪ್ಪತ್ತೇಳು ಪಾಳೆಯಗಾರರು: ಸಂಖ್ಯಾ ಆಶಯ ನೆಲೆಯ ಚಾರಿತ್ರಿಕ ವಿವೇಚನೆ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

ಲಕ್ಷ್ಮಣ್ ತೆಲಗಾವಿ ಮತ್ತು ಇತರರು (ಸಂ), ೧೯೮೦, ಚಿತ್ರದುರ್ಗ ಜಿಲ್ಲಾದರ್ಶಿನಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿ, ಚಿತ್ರದುರ್ಗ.

ಲಕ್ಷ್ಮಣ್ ತೆಲಗಾವಿ (ಸಂ), ೧೯೮೭, ಹರಿತಿಸಿರಿ, ಸಾಹಿತ್ಯ ಸಂಪದ, ಹರ್ತಿಕೋಟೆ,

ಲಕ್ಷ್ಮಣ್ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಲಲಿತಾಂಬ ಎನ್.ಆರ್., ೨೦೧೭, ಶಾಸನವಲ್ಲಿ ಕರ್ನಾಟಕದ ಹೆಮ್ಮೆಯ ವೀರ ಕುಡಿಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಳಿ (ರಿ), ಧಾರವಾಡ.

ವಸು ಎಂ.ವಿ. (ಸಂ), ೨೦೦೪, ಮೌಖಿಕ ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು.

ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೆಂಕೋಬರಾವ್, ೧೯೨೪, ಶಿಲ್ಪಕಲಾ ಪ್ರಪಂಚ, ಕರ್ನಾಟಕ ಸಂಘ, ಬೆಂಗಳೂರು.

ವಿವೇಕ ರೈ ಬಿ.ಎ., ೨೦೧೪, ಪ್ರವಾಸಿ ಕಂಡ ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿಜಯ್ ಪೂಣಚ್ಚ ತಂಬಂಡ, ವಿರೂಪಾಕ್ಷಿ ಪೂಜಾರಹಳ್ಳಿ (ಸಂ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

ಶಿವರಾಮ ಕಾರಂತ ಕೆ., ೧೯೭೫, ಭಾರತೀಯ ಶಿಲ್ಪ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶಿವರಾಮ ಕಾರಂತ ಕೆ., ೧೯೮೩, ಕರ್ನಾಟಕದಲ್ಲಿ ಶಿಲ್ಪ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಶಿವರಾಮ ಕಾರಂತ ಕೆ., ೧೯೯೪, ಶಿಲ್ಪಕಲಾ ಪ್ರಪಂಚ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಿವರಾಮ ಕಾರಂತ ಕೆ., ೧೯೭೫, ಚಿತ್ರ ಶಿಲ್ಪ ವಾಸ್ತು ಕಲೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀನಿವಾಸ ಪಾಡಿಗಾರ, ೧೯೯೭, ಪುರಾತತ್ವಶಾಸ್ತ್ರ ಪರಿಚಯ, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ.

ಶ್ರೀನಿವಾಸ ಪಾಡಿಗಾರ, ೨೦೦೮, ಭಾರತೀಯ ಇತಿಹಾಸದ ಶಾಸನ ಆಕರಗಳು, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ.

ಶ್ರೀಧರ ಬಿ.ಎಚ್., ೧೯೮೮, ಭಾರತೀಯ ಮೂರ್ತಿಶಿಲ್ಪ, ರಂಗಸಂಗ ಮತ್ತು ಕಲಾರಂಗ ಪ್ರಕಾಶನ, ಶಿರಸಿ.

ಶ್ರೀನಿವಾಸ ರಿತ್ತಿ (ಸಂ), ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶ, ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು.

ಶೆಟ್ಟರ್ ಎಸ್., ೨೦೧೫, ಸಾವನ್ನು ಸ್ವಾಗತಿಸಿ–I, ಅಭಿನವ ಪ್ರಕಾಶನ, ಬೆಂಗಳೂರು.

ಶೆಟ್ಟರ್ ಎಸ್., ೨೦೧೫, ಸಾವನ್ನು ಸ್ವಾಗತಿಸಿ-II, ಅಭಿನವ ಪ್ರಕಾಶನ, ಬೆಂಗಳೂರು.

ಶೆಟ್ಟರ್ ಎಸ್., ೨೦೧೮, ಪ್ರಾಕೃತ ಜಗದ್ವಲಯ, ಅಭಿನವ ಪ್ರಕಾಶನ, ಬೆಂಗಳೂರು.

ಶಂಕರನಾರಾಯಣ ಹೆಚ್.ಎಂ., ೧೯೮೨, ಶ್ರೀ ಹರಿಹರೇಶ್ವರ ದೇವಾಲಯ, ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಕೇಷನ್ ಹೌಸ್, ಮೈಸೂರು.

ಶೇಷಶಾಸ್ತ್ರಿ ಆರ್., ೨೦೧೮, ಕರ್ನಾಟಕದ ವೀರಗಲ್ಲುಗಳು, ಕಾಮಧೇನು ಪುಸ್ತಕ ಭವನ, ಬೆಂಗಳೂರು.

ಶೇಷಶಾಸ್ತ್ರಿ ಆರ್., ೨೦೦೫, ಶಾಸನ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಶೇಠ ಬಿ.ಎಸ್., ೧೯೯೧, ಕರ್ನಾಟಕದಲ್ಲಿ ಸತಿ ಪದ್ಧತಿ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ.

ಷೇಕ್ ಅಲಿ ಬಿ., ೧೯೭೭, ದಕ್ಷಿಣ ಭಾರತೀಯ ಇತಿಹಾಸ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಷೇಕ್ ಅಲಿ ಬಿ. ಮತ್ತು ಇತರರು, ೨೦೧೮, ಕರ್ನಾಟಕ ಚರಿತ್ರೆ ಸಂಪುಟಗಳು ೧-೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸದಾಶಿವಪ್ಪ ಕುಂ.ಬಾ., ೨೦೦೬, ಹರಪನಹಳ್ಳಿ ಪಾಳೇಗಾರರ ಇತಿಹಾಸ ದರ್ಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಸದಾಶಿವಪ್ಪ ಕುಂ.ಬಾ., ೨೦೦೮, ಹರಪನಹಳ್ಳಿ ತಾಲ್ಲೂಕು ಪರಿಚಯ, ಮಾಲತೇಶ್ ಪ್ರಕಾಶನ, ಹರಪನಹಳ್ಳಿ.

ಸದಾಶಿವಪ್ಪ ಶ್ಯಾಗಲೆ (ಸಂ), ೨೦೧೦, ದಾವಣಗೆರೆ ಜಿಲ್ಲೆ ಒಂದು ಪಕ್ಷಿನೋಟ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ದಾವಣಗೆರೆ.

ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ೨೦೧೦, ದಾವಣಗೆರೆ ಜಿಲ್ಲೆ ಇತಿಹಾಸದ ಕೆಲವು ಹೆಜ್ಜೆಗಳು, ವಿಜಯ ಯುವಕ ಸಂಘ ಪ್ರಕಾಶನ, ಸಂತೆಬೆನ್ನೂರು.

ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ೨೦೧೭, ದಾವಣಗೆರೆ ಜಿಲ್ಲೆ ಇತಿಹಾಸದ ಇನ್ನಷ್ಟು ಹೆಜ್ಜೆಗಳು, ವಿಜಯ ಯುವಕ ಸಂಘ ಪ್ರಕಾಶನ, ಸಂತೆಬೆನ್ನೂರು.

ಸುರೇಶ್ ಬಿ., ೨೦೦೯, ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಸಂಶೋಧನಾ ಪ್ರಕಾಶನ, ಬಾಲೇನಹಳ್ಳಿ.

ಸೂರ್ಯನಾಥ ಕಾಮತ್, ೨೦೧೫, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಸಿ. ಪಬ್ಲಿಕೇಷನ್ಸ್, ಬೆಂಗಳೂರು.

ಸೋಮಶೇಖರ್ ಎಸ್.ವೈ., ೨೦೦೦, ವಿಜಯನಗರ ಕಾಲದ ಸೈನಿಕ ಆಡಳಿತ ವ್ಯವಸ್ಥೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮಶೇಖರ್ ಎಸ್.ವೈ., ೨೦೧೦, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೪, ಜಗಲೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೂರ್ಯನಾರಾಯಣರಾವ್ (ಮೂಲ), ಬಾಲಸುಬ್ರಹ್ಮಣ್ಯ (ಅನು), ೨೦೦೦, ಮರೆಯಲಾಗದ ಮಹಾಸಾಮ್ರಾಜ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಿರೇಮಠ ಬಿ.ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹಿರೇಮಠ ಬಿ.ಆರ್., ೧೯೭೬, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹಿರೇಮಠ ಎಸ್.ಎಂ., ೧೯೯೮, ಶಾಸನಾಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ.

ಹಿರೇಮಠ ಎಸ್.ಎಂ., ೨೦೧೪, ಶಾಸನಾನುಸಂಧಾನ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

ಜ್ಞಾನಾನಂದ ಜಿ., ೨೦೦೨, ಶಿಲ್ಪಾದರ್ಶ ಭಾಗ-೧-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಜ್ಞಾನಾನಂದ ಜಿ., ೧೯೯೪, ವಾಸ್ತು ಪುರುಷ ನೆಲೆ-ಹಿನ್ನೆಲೆ, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು.

**ಇಂಗ್ಲೀಷ್ ಗ್ರಂಥಗಳು**

Altekar A.S., 1962, The Position of women in Hindu Civilization, Motilal Banarsidass, Jawahar Nagar, Delhi.

Dubois J.A., 1817, Description of the Character, Manners and customs of the people of India, Printed for longman hurst press, London.

Dinkar Desai, 1951, Mahamandaleshwar Under the Chalukya of Kalyana, Indian Historical Research Institute, Saint xavieris college, Bombay.

Foote R.B., 1914, India Prehistoric and protohistoric Antiqvities, Printed by the Superintendent, Government Press, Madras.

Gururaja Rao B.K., 1972, the Megalithic culture in South India, Prasaranga, University of Mysore, Mysore.

Gordon Childe, Megaliths Ancient India.

Gopal B.R., 1981, Minar Dynastic of South India, Karnataka, New Era Publications, Madras.

Gopal B.R., Campers of Kadamba inscriptions Vol-1, Kadamba Institute of Cultural Studies, Shrshi, Karnataka.

James Hastings (Ed), Encyclopaedia of Religion and Ethics.

Krishna murthy M.S., 1980, the Nolambas, University of Mysore, Mysore.

Kosambi D.D., 1992, Myth and Reality, Popular Prakashana, Bombay.

Krishnaswamy V.D., The Neolithic Patran of India, Ancient Inida Vol-16.

Mugali R.S., 1946, The Heritage of Karnataka, Bangalore.

Nagaswamy R., 1973, Hero stones of Tamilnadu, Journal of Indian History, Vol-51, Tamilnadu.

Romila Thapar (Ed), 2000, Cultural pasts: Essays in Early Indian History, O.U.P. New Delhi.

Ramachandra Dikshitra V.R., 1999, War in Ancient India, Cosmo Publications, London.

Rajan K., 2000, South Indian Memorial Stones, Manoo Pathippakam Publication, Andhra Pradesh.

Settar S (Ed), 1982, Memorial Stones, Prasaranga, Karnataka University, Dharawad.

Settar S., 1986, Inviting Death, Prasaranga, Karnataka University, Dharawad.

Settar S., 1990, Parsving Death, Prasaranga, Karnataka University, Dharawad.

Saletore B.A., 1934, Social and Political life in the Vijayanagara Empire, Madras.

Srinivas M.V. (Ed), 2011, Studies in Karnataka History and Culture, Vol-X, Karanataka History Congress-February 2011, Bangalore.

Sheshadri M., 1956, The stone using cultures of prehistoric and protishistoric Mysore, Mysore.

Sharna R.K. (Ed), 1986, Indian Archaeology New Prospectives.

Saali S.A., 1996, The asper paleolithic and Mesolithic cultures of Maharastra.

Sankalia H.D., 1987, Mesolithic and Premesolithic Industries from Excavation at Sanganakallu, Ballary, Poona, Deccan College.

Sundara A., 1975, Early Chamber Tombs of South India.

Subharao B., 1949, Prehistoric and Early Historic Bellary, Ph.D. Thesis, University of Bombay.

Urlanis B., 1971, Wars and Population, Beekman Publishers, Moscow.

**ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

ತಿಪ್ಪೇಸ್ವಾಮಿ ಹೆಚ್., ೨೦೦೧, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಧನುಂಜಯಪ್ಪ ಬಿ.ಎಸ್., ೨೦೦೧, ಚಿತ್ರದುರ್ಗ ಮತ್ತು ದಾವಣಗೆರೆ ವೀರಶೈವ ಮಠಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಮದ್ರಾಸ್ ವಿಶ್ವವಿದ್ಯಾಲಯ, ಮದ್ರಾಸ್.

ಪ್ರವೀಣ್ ದೊಡ್ಡಗೌಡ್ರ, ೨೦೧೮, ದಾವಣಗೆರೆ ಜಿಲ್ಲೆಯ ಪುರಾತತ್ವ ನೆಲೆಗಳು ಮತ್ತು ಅವಶೇಷಗಳ ಅಧ್ಯಯನ (ವಿಶೇಷವಾಗಿ ಹೊನ್ನಾಳಿ, ಹರಿಹರ, ಜಗಳೂರು, ಹರಪನಹಳ್ಳಿ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ), ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ.

ಮಂಜುನಾಥ ಹ. ಪಾಟೀಲ, ೨೦೦೨, ದಾವಣಗೆರೆ ಜಿಲ್ಲೆಯ ಶಾಸನಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮಂಜುನಾಥ ಜಿ.ವಿ., ೨೦೧೦, ದಾವಣಗೆರೆ ಜಿಲ್ಲೆಯ ದೇವಾಲಯಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಲ್ಲಿಕಾರ್ಜುನಪ್ಪ ಜೆ.ಕೆ., ೨೦೧೬, ಹರಪನಹಳ್ಳಿ ಪಾಳೆಯಗಾರರ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಥ ಟಿ., ೨೦೦೧, ಚಿತ್ರದುರ್ಗ ಹಾಗೂ ಸುತ್ತಮುತ್ತಲಿನ ಪಾಳೆಯಗಾರರ ಸಾಂಸ್ಕೃತಿಕ ಇತಿಹಾಸ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ.

ಮಂಜಣ್ಣ ಟಿ., ೨೦೧೦, ಚಿತ್ರದುರ್ಗ ಪಾಳೆಯಗಾರರ ಅವನತಿ: ಒಂದು ಅಧ್ಯಯನ (ಕ್ರಿ.ಶ. ೧೭೦೦–೧೮೦೦), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಭಾರತಿ ಅಳವಂಡಿಮಠ, ೨೦೦೪, ಬಾಗಳಿಯ ಶಾಸನಗಳು ಮತ್ತು ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಯೋಗಾನಂದ ಎಸ್.ಕೆ., ೨೦೧೮, ಚನ್ನಗಿರಿ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಮೇಶ ಹೆಚ್., ೨೦೧೭, ಹರಿಹರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಂತೋಷ ಎನ್.ಜಿ., ೨೦೦೯, ದಾವಣಗೆರೆ ಜಿಲ್ಲೆಯ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ.

ಸಿದ್ದಪ್ಪ ಜಿ., ೨೦೧೦, ಜಗಳೂರು ತಾಲ್ಲೂಕು: ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

Ramappa Y., 1994, Hoysala Temples of Shimoga and Chitradurga District, University of Mysore, Mysore.

**ಅಪ್ರಕಟಿತ ಎಂ.ಫಿಲ್. ನಿಬಂಧಗಳು**

ಆಂಜನೇಯಸ್ವಾಮಿ ಡಿ.ಕೆ., ೨೦೧೫, ದಾವಣಗೆರೆ ಜಿಲ್ಲೆಯ ಪ್ರಾಚೀನ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಐಶ್ವರ್ಯಮ್ಮ, ೨೦೧೫, ದಾವಣಗೆರೆ ಜಿಲ್ಲೆಯ ಶಾಸನೋಕ್ತ ಮತ್ತು ಜನಪದ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚನ್ನಬಸಪ್ಪ ಎಸ್., ೨೦೦೭, ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಥ ಡಿ., ೧೯೯೭, ಮಧ್ಯಕಾಲದಲ್ಲಿ ದೇವಾಲಯದ ಆಶ್ರಯ ಪಾಲನೆ ಮತ್ತು ನಿರ್ವಹಣೆ: ಹರಿಹರ ದೇವಾಲಯದ ಒಂದು ಅಧ್ಯಯನ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ.

ಮಂಜಣ್ಣ ಪಿ.ಬಿ., ೨೦೧೦, ಕಣಕುಪ್ಪೆ ಪರಿಸರ: ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಲ್ಲೇಶಪ್ಪ ಪಿ., ೨೦೧೩, ಬಿಳಿಚೋಡು ಪರಿಸರದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತಿಪ್ಪೇಸ್ವಾಮಿ ಟಿ., ೨೦೦೭, ಚರಿತ್ರೆ ರಚನಾಶಾಸ್ತ್ರ: ದಾವಣಗೆರೆ ಜಿಲ್ಲೆಯನ್ನು ಕುರಿತ ಅಧ್ಯಯನಗಳ ಸಮೀಕ್ಷೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಾರುತಿ ಹೆಚ್., ೨೦೧೮, ಕಲ್ಲೇದೇವರಪುರ ಪರಿಸರದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೇವನಾಯ್ಕ ಆರ್., ೨೦೧೫, ಹರಪನಹಳ್ಳಿ ಪರಿಸರದ ವೀರಗಲ್ಲು ಮತ್ತು ಮಾಸ್ತಿಗಲ್ಲುಗಳ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹನುಮಂತಪ್ಪ ಪಿ., ೨೦೧೫, ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹರೀಶ್ ಕೆ., ೨೦೧೬, ದಾವಣಗೆರೆ ಕಸಬಾ ಹೋಬಳಿ ಪರಿಸರ: ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

Poonacha K.P., 1990, Archaeology of Malnad Religion, Karnataka Unviersity, Dharwad.

### ಸಂಶೋಧನ ಲೇಖನಗಳು

ಅಳವಂಡಿಮಠ ಭಾರತಿ, ೨೦೦೨, ಹರಪನಹಳ್ಳಿ ಮೊದಲ ಪಾಳೆಯಗಾರ ಬಾಗಳಿಯ ದಾದಯ್ಯ ನಾಯಕ, ಇತಿಹಾಸ ದರ್ಶನ, ಸಂ-೧೭, ಕ.ಇ.ಅ. ಬೆಂಗಳೂರು.

ಉಷಾರಾಣಿ ಹೆಚ್.ಎಸ್., ೨೦೧೨, ಹರಿಶ್ಚಂದ್ರದತ್ತಿ ಅಗ್ರಹಾರ ಒಂದು ಅಧ್ಯಯನ, ಇತಿಹಾಸ ದರ್ಶನ ಸಂ-೨೭, ಕ.ಇ.ಅ. ಬೆಂಗಳೂರು.

ಕೆಳದಿ ವೆಂಕಟೇಶ ಜೋಯಿಸ್, ೨೦೦೦, ಲಿಂಗಣ್ಣ ಕವಿಯ ಕೆಳದಿ ನೃಪವಿಜಯದಲ್ಲಿ ಹರಪನಹಳ್ಳಿ ಪಾಳೇಗಾರರು, ಇತಿಹಾಸ ದರ್ಶನ ಸಂ-೧೫, ಕ.ಇ.ಅ. ಬೆಂಗಳೂರು.

ಕೃಷ್ಣಮೂರ್ತಿ ಸಿ.ಎನ್., ೨೦೧೪, ದಾವಣಗೆರೆ ಜಿಲ್ಲೆಗೆ ಮೈಸೂರು ಒಡೆಯರ ಕೊಡುಗೆಗಳು, ಇತಿಹಾಸ ದರ್ಶನ ಸಂ-೨೯, ಕ.ಇ.ಅ. ಬೆಂಗಳೂರು.

ಕೊಟ್ರಪ್ಪ ಲಕ್ಕಪ್ಪ, ೧೯೯೭, ಹಗರಿಗುಡಿಹಳ್ಳಿ ಈಶ್ವರ ದೇವಾಲಯ ಒಂದು ಅಧ್ಯಯನ, ಇತಿಹಾಸ ದರ್ಶನ ಸಂ-೧೨, ಕ.ಇ.ಅ. ಬೆಂಗಳೂರು.

ಕೊಟ್ರೇಶ್ ಎಂ., ೨೦೦೬, ನೂತನ ಶಿಲಾಯುಗದ ನೆಲೆ-ಗಡಿಗುಡಾಹಾಳ, ಇತಿಹಾಸ ದರ್ಶನ ಸಂ-೨೧, ಕ.ಇ.ಅ. ಬೆಂಗಳೂರು.

ಕೊಟ್ರೇಶ್ ಎಂ., ೨೦೦೭, ಅಲಗಿಲವಾಡದ ಹೊಸ ಶಿಲಾಶಾಸನ, ಇತಿಹಾಸ ದರ್ಶನ ಸಂ-೨೨, ಕ.ಇ.ಅ. ಬೆಂಗಳೂರು.

ಗಿರಿಜ ಟಿ., ೨೦೦೦, ದಾವಣಗೆರೆ ಸ್ಥಳನಾಮದ ಬಗ್ಗೆ ಒಂದು ಸಮೀಕ್ಷೆ, ಇತಿಹಾಸ ದರ್ಶನ ಸಂ-೧೫, ಕ.ಇ.ಅ. ಬೆಂಗಳೂರು.

ಚನ್ನಬಸಪ್ಪ ಎಸ್. ಪಾಟೀಲ, ೧೯೯೨, ಹೊಯ್ಸಳರಿಗೆ 'ಗಿರಿದುರ್ಗ ಮಲ್ಲ' ಮತ್ತು 'ಶನಿವಾರ ಸಿದ್ಧ' ಬಿರುದುಗಳನ್ನಿತ್ತ ಉಚ್ಚಂಗಿದುರ್ಗ, ಇತಿಹಾಸ ದರ್ಶನ ಸಂ-೭, ಕ.ಇ.ಅ. ಬೆಂಗಳೂರು.

ಚಂದನ್, ೧೯೯೨, ಹರಿಹರದ ಸಂಗಮೇಶ್ವರ ದೇವಾಲಯದ ಪರಿಚಯ, ಇತಿಹಾಸ ದರ್ಶನ ಸಂ-೭, ಕ.ಇ.ಅ. ಬೆಂಗಳೂರು.

ಚಂದನಾ ವೈ. ನೀಲಪ್ಪ, ೧೯೯೭, ಜಿಗಳಿಯ ಅಪ್ರಕಟಿತ ದೇಗುಲಶಾಸನ-ಶಿಲ್ಪ, ಇತಿಹಾಸ ದರ್ಶನ ಸಂ-೧೨, ಕ.ಇ.ಅ. ಬೆಂಗಳೂರು.

ಚಂದನಾ ವೈ. ನೀಲಪ್ಪ, ೨೦೦೧, ಹರಿಹರದ ಗುತ್ತೂರಿನ ಇತಿಹಾಸ, ಇತಿಹಾಸ ದರ್ಶನ ಸಂ–೧೬, ಕ.ಇ.ಅ. ಬೆಂಗಳೂರು.

ಜಯದೇವಪ್ಪ ಜೈನಕೇರಿ, ೧೯೯೯, ಶಿವಮೊಗ್ಗ ಪರಿಸರದಲ್ಲಿಯ ಬೃಹತ್ ಶಿಲಾ ಸಂಸ್ಕೃತಿಯ ಗೀರುಬಂಡೆ ಚಿತ್ರಗಳು ಒಂದು ಹೊಸ ಶೋಧನೆ, ಇತಿಹಾಸ ದರ್ಶನ ಸಂ–೧೪, ಕ.ಇ.ಅ. ಬೆಂಗಳೂರು.

ಜಗದೇಶ್ ಎಂ., ೨೦೦೦, ದೊಡ್ಡಸಂಕಣ್ಣನಾಯಕನ ಅಪ್ರಕಟಿತ ತೋಟಗಂಟಿ ಶಾಸನ, ಇತಿಹಾಸ ದರ್ಶನ ಸಂ–೧೫, ಕ.ಇ.ಅ. ಬೆಂಗಳೂರು.

ಜಗದೀಶ, ೨೦೧೫, ಹೊನ್ನಾಳಿ ಹೀರೇಕಲ್ಮಠದ ಶಾಸನೋಲ್ಲೇಖ–ಒಂದು ಟಿಪ್ಪಣಿ, ಇತಿಹಾಸ ದರ್ಶನ ಸಂ–೨೦, ಕ.ಇ.ಅ. ಬೆಂಗಳೂರು.

ಜಗದೀಶ್ ಎಂ.ಎಚ್., ೨೦೦೬, ಮುಕ್ತೇನಹಳ್ಳಿಯ ಪ್ರಾಚೀನ ಅವಶೇಷಗಳು ಮತ್ತು ಅಪ್ರಕಟಿತ ಶಾಸನ, ಇತಿಹಾಸ ದರ್ಶನ ಸಂ–೨೧, ಕ.ಇ.ಅ. ಬೆಂಗಳೂರು.

ಜಯದೇವ್ ಟಿ.ಎಸ್., ೨೦೦೯, ಮತ್ತಿ ತಿಮ್ಮಣ್ಣನಾಯಕರ ಸಮಾಧಿ ಅವಶೇಷಗಳು, ಇತಿಹಾಸ ದರ್ಶನ ಸಂ–೨೪, ಕ.ಇ.ಅ. ಬೆಂಗಳೂರು.

ದೇವರಾಜಸ್ವಾಮಿ ಜಿ.ಕೆ., ೨೦೦೧, ತೀರ್ಥಹಳ್ಳಿ ತಾಲೂಕು ಮೃಗವಧೆಯಲ್ಲಿನ ಪ್ರಾಗೈತಿಹಾಸಿಕ ಚಿತ್ರಗಳು, ಇತಿಹಾಸ ದರ್ಶನ ಸಂ–೧೬, ಕ.ಇ.ಅ. ಬೆಂಗಳೂರು.

ದೇವರಕೊಂಡಾರೆಡ್ಡಿ, ೨೦೧೨, ಕದಂಬ ರವಿವರ್ಮನ ದಾವಣಗೆರೆಯ ತಾಮ್ರಶಾಸನ, ಇತಿಹಾಸ ದರ್ಶನ ಸಂ–೨೭, ಕ.ಇ.ಅ. ಬೆಂಗಳೂರು.

ನಾಗಭೂಷಣ ಎಸ್.ಎಂ., ೨೦೦೭, ದಾವಣಗೆರೆಯ ದೇಗುಲ ವಾಸ್ತು ಮತ್ತು ಶಿಲ್ಪಗಳು, ಇತಿಹಾಸ ದರ್ಶನ ಸಂ–೨೨, ಕ.ಇ.ಅ. ಬೆಂಗಳೂರು.

ನಾಗರಾಜಪ್ಪ ಎಸ್., ೨೦೧೫, ಕುಂಬಳೂರು ಗ್ರಾಮದ ಅಪ್ರಕಟಿತ ತುಱುಗೋಳ್–ಊರಳಿವಿನ ಸ್ಮಾರಕಗಳು, ಇತಿಹಾಸ ದರ್ಶನ ಸಂ–೩೦, ಕ.ಇ.ಅ. ಬೆಂಗಳೂರು.

ನೆಲ್ಕುದ್ರಿ ಸದಾನಂದಪ್ಪ, ೨೦೧೪, ನಂದಿಬೇವೂರು ಗ್ರಾಮದ ಮಾಸ್ತಿಕಲ್ಲುಗಳು, ಇತಿಹಾಸ ದರ್ಶನ ಸಂ–೧೯, ಕ.ಇ.ಅ. ಬೆಂಗಳೂರು.

ಪ್ರತಿಭಾ ಚಿಣ್ಣಪ್ಪ, ೧೯೯೨, ಕರ್ನಾಟಕದಲ್ಲಿ ಬಲಿ–ಆತ್ಮ ತ್ಯಾಗ, ಇತಿಹಾಸ ದರ್ಶನ ಸಂ–೭, ಕ.ಇ.ಅ. ಬೆಂಗಳೂರು.

ಬಸವರಾಜಪ್ಪ ಪರಪ್ಪ ಕಂದಗಲ್, ೨೦೦೫, ಚನ್ನಗಿರಿ ತಾಲೂಕಿನ ವಿಶಿಷ್ಟ ಐತಿಹಾಸದ ಸೂಳೆಕೆರೆ (ಶಾಂತಿಸಾಗರ), ಇತಿಹಾಸ ದರ್ಶನ ಸಂ–೨೦, ಕ.ಇ.ಅ. ಬೆಂಗಳೂರು.

ಬಸವರಾಜಪ್ಪ, ೨೦೦೯, ಕಂದಗಲ್ಲಿನ ವೀರಗಲ್ಲುಗಳು ಮತ್ತು ಸ್ಮಾರಕಗಳು, ಇತಿಹಾಸ ದರ್ಶನ ಸಂ–೨೪, ಕ.ಇ.ಅ. ಬೆಂಗಳೂರು.

ಬಾಲಸುಬ್ರಮಣ್ಯ, ೨೦೦೫, ಹೊನ್ನಾಳಿ ತಾಲೂಕಿನ ಕೆಲವು ವಿಶಿಷ್ಟ ಶಿಲ್ಪಗಳು, ಇತಿಹಾಸ ದರ್ಶನ ಸಂ–೨೦. ಕ.ಇ.ಅ. ಬೆಂಗಳೂರು.

ಬುರುಡೇಕಟ್ಟೆ ಮಂಜಪ್ಪ, ೨೦೦೯, ದೊಡ್ಡಬಾತಿಯ ಬೃಹತ್ ಶಿಲಾಯುಗದ ಕುಳಿಭರಿತ ಶಿಲಾಸಮಾಧಿಗಳು, ಇತಿಹಾಸ ದರ್ಶನ ಸಂ–೨೪, ಕ.ಇ.ಅ. ಬೆಂಗಳೂರು.

ಬುರುಡೇಕಟ್ಟೆ ಮಂಜಪ್ಪ, ೨೦೧೩, ಕುಂದವಾಡದ ಉಚ್ಚಂಗಿ ಪಾಂಡ್ಯರ ಕಾಲದ ಅಪ್ರಕಟಿತ ಶಾಸನ (ಕ್ರಿ.ಶ. ೧೧೨೩) ಇತಿಹಾಸ ದರ್ಶನ ಸಂ–೨೮, ಕ.ಇ.ಅ. ಬೆಂಗಳೂರು.

ಬುರುಡೇಕಟ್ಟೆ ಮಂಜಪ್ಪ, ೨೦೧೪, ದಾವಣಗೆರೆ ತಾಲೂಕು ಬೇತೂರಿನ ವಿಜಯಪಾಂಡ್ಯದೇವನ ಅಪ್ರಕಟಿತ ಶಾಸನ, ಇತಿಹಾಸ ದರ್ಶನ ಸಂ–೨೯, ಕ.ಇ.ಅ. ಬೆಂಗಳೂರು.

ಮಹದೇವ ಸಿ., ೨೦೧೫, ಕನ್ನಡ ಗಾದೆಗಳಲ್ಲಿ ನಂದರ ನಾಣ್ಯ, ಇತಿಹಾಸ ದರ್ಶನ ಸಂ–೩೦, ಕ.ಇ.ಅ. ಬೆಂಗಳೂರು

ಮಲ್ಲಿಕಾರ್ಜುನಪ್ಪ ಜೆ.ಕೆ., ೨೦೧೧, ಹರಪನಹಳ್ಳಿ ಪಾಳೇಗಾರರ ಕಾಲದ ಬಂಡ್ರಿ, ಇತಿಹಾಸ ದರ್ಶನ ಸಂ–೨೬, ಕ.ಇ.ಅ. ಬೆಂಗಳೂರು.

ಮಲ್ಲಿಕಾರ್ಜುನಪ್ಪ ಜೆ.ಕೆ., ೨೦೧೨, ನರಸಪ್ಪನ ಬೆಟ್ಟ ಒಂದು ಐತಿಹಾಸಿಕ ಪರಿಶೀಲನೆ, ಇತಿಹಾಸ ದರ್ಶನ ಸಂ–೨೭, ಕ.ಇ.ಅ. ಬೆಂಗಳೂರು.

ಮಲ್ಲಿಕಾರ್ಜುನಪ್ಪ ಜೆ.ಕೆ., ೨೦೧೩, ಹಿರೇಮ್ಯಾಗಳಗೇರಿ ಪರಿಸರದ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ ಸಂ–೨೮, ಕ.ಇ.ಅ. ಬೆಂಗಳೂರು.

ಮಂಜಣ್ಣ ಪಿ.ಬಿ., ೨೦೧೫, ಜಗಳೂರು ತಾಲೂಕು ಗುಹೇಶ್ವರ ಗುಡ್ಡದ ಬಳಿ ಕಬ್ಬಿಣಯುಗದ ಬೃಹತ್ ಶಿಲಾಗೇರಿ ನೆಲೆಯ ಹೊಸಶೋಧ, ಇತಿಹಾಸ ದರ್ಶನ ಸಂ–೩೦, ಕ.ಇ.ಅ. ಬೆಂಗಳೂರು.

ಮಾಡಲಗೇರಿ ಕೊಟ್ರೇಶ್, ೧೯೯೮, ಗಿರಿದುರ್ಗ ಉಚ್ಚಂಗಿ ಪ್ರದೇಶ–ಒಂದು ಪರಿಶೀಲನೆ, ಇತಿಹಾಸ ದರ್ಶನ ಸಂ–೧೩, ಕ.ಇ.ಅ. ಬೆಂಗಳೂರು.

ಮಾಡಲಗೇರಿ ಕೊಟ್ರೇಶ್, ೨೦೦೧, ಉಚ್ಚಂಗಿದುರ್ಗದಲ್ಲಿ ಮುತ್ತು ಕಟ್ಟಿಸುವ ಪದ್ಧತಿ–ವಿಧಿ ವಿಧಾನಗಳು, ಇತಿಹಾಸ ದರ್ಶನ ಸಂ–೨೬, ಕ.ಇ.ಅ. ಬೆಂಗಳೂರು.

ಮಾಡಲಗೇರಿ ಕೊಟ್ರೇಶ್, ೨೦೧೩, ಶಾಸನೋಕ್ತ ಐತಿಹಾಸಿಕ ನೆಲೆ ಮಾಡಲಗೇರಿ, ಇತಿಹಾಸ ದರ್ಶನ ಸಂ–೧೮, ಕ.ಇ.ಅ. ಬೆಂಗಳೂರು.

ಯೋಗೀಶ್ವರಪ್ಪ ಡಿ.ಎನ್., ೨೦೦೫, ಹೊಳೆದಂಡೆ ಹೊನ್ನಾಳಿ ಐತಿಹಾಸಿಕ ಅವಲೋಕನ, ಇತಿಹಾಸ ದರ್ಶನ ಸಂ-೨೦, ಕ.ಇ.ಅ. ಬೆಂಗಳೂರು.

ರಮೇಶ್ ಹೆಚ್., ೨೦೧೫, ಹರಿಹರ ತಾಲೂಕಿನ ಶಾಸನೋಕ್ತ ಸ್ಥಳನಾಮಗಳು, ಇತಿಹಾಸ ದರ್ಶನ ಸಂ-೩೦, ಕ.ಇ.ಅ. ಬೆಂಗಳೂರು.

ರಾಮಭಟ್ಟ ಬಿ.ಎಸ್., ೧೯೯೯, ಬೆಳಗುತ್ತಿ ಅರಸರು, ಇತಿಹಾಸ ದರ್ಶನ ಸಂ-೧೪, ಕ.ಇ.ಅ. ಬೆಂಗಳೂರು.

ರಾಜಗೋಪಾಲ್ ಕ.ವೆಂ., ೨೦೦೩, ಬಾಗಳಿಯ ಪಂಚಾಂಗ, ಇತಿಹಾಸ ದರ್ಶನ ಸಂ-೧೮, ಕ.ಇ.ಅ. ಬೆಂಗಳೂರು.

ರಾಜಶೇಖರಪ್ಪ ಬಿ., ೨೦೦೩, ದಾವಣಗೆರೆಯ ಎರಡು ಹೊಸ ಶಾಸನಗಳು, ಇತಿಹಾಸ ದರ್ಶನ ಸಂ-೧೮, ಕ.ಇ.ಅ. ಬೆಂಗಳೂರು.

ರಾಜಶೇಖರಪ್ಪ ಬಿ., ೨೦೧೧, ಲೋಕಿಕೆರೆಯಲ್ಲಿ ದೊರೆತ ಉಚ್ಚಂಗಿ ಪಾಂಡ್ಯರ ಕಾಲದ ಒಂದು ಹೊಸ ಶಾಸನ, ಇತಿಹಾಸ ದರ್ಶನ ಸಂ-೨೬, ಕ.ಇ.ಅ. ಬೆಂಗಳೂರು.

ರಾಕೇಶ್ ಬಿ.ಸಿ., ೨೦೦೫, ಕೋಣನತಲೆ ಗ್ರಾಮದ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ ಸಂ-೨೦, ಕ.ಇ.ಅ. ಬೆಂಗಳೂರು.

ರಾಕೇಶ್ ಬಿ.ಸಿ., ೨೦೦೮, ಹರಿಹರ ತಾಲ್ಲೂಕು ಭೈರನಪಾದದ ಪ್ರಾಚೀನ ಅವಶೇಷಗಳು, ಇತಿಹಾಸ ದರ್ಶನ ಸಂ-೨೩, ಕ.ಇ.ಅ. ಬೆಂಗಳೂರು.

ರಾಕೇಶ್ ಬಿ.ಸಿ., ೨೦೧೩, ಹೊನ್ನಾಳಿ ತಾಲ್ಲೂಕಿನ ಐತಿಹಾಸಿಕ ಪರಿಶೀಲನೆ, ಇತಿಹಾಸ ದರ್ಶನ ಸಂ-೨೮, ಕ.ಇ.ಅ. ಬೆಂಗಳೂರು.

ರಾಕೇಶ್ ಬಿ.ಸಿ., ೨೦೧೪, ೧೨ನೇ ಶತಮಾನದ ಅಪ್ರಕಟಿತ ಜಿನಶಿಲ್ಪ ಶಾಸನ, ಇತಿಹಾಸ ದರ್ಶನ ಸಂ-೨೯, ಕ.ಇ.ಅ. ಬೆಂಗಳೂರು.

ರಾಘವೇಂದ್ರಾಚಾರಿ ಕೆ.ಎಂ., ೨೦೧೪, ಹರಪನಹಳ್ಳಿ ತಾಲ್ಲೂಕು ಹಳ್ಳಿಕೆರೆ ರಾಷ್ಟ್ರಕೂಟರ ಅಸಗನ ಶಾಸನ, ಇತಿಹಾಸ ದರ್ಶನ ಸಂ-೨೯, ಕ.ಇ.ಅ. ಬೆಂಗಳೂರು.

ಲಕ್ಷ್ಮಣ್ ತೆಲಗಾವಿ, ೨೦೦೦, ಚಿತ್ರದುರ್ಗ ಮತ್ತು ಹರಪನಹಳ್ಳಿ ನಾಯಕ ಅರಸರ ಸಂಬಂಧ-ಕೆಲವು ಸಮಸ್ಯೆಗಳು, ಇತಿಹಾಸ ದರ್ಶನ ಸಂ-೧೫, ಕ.ಇ.ಅ. ಬೆಂಗಳೂರು.

ಲಲಿತಾಂಬ ಎನ್.ಆರ್., ೨೦೦೭, ಹೊಯ್ಸಳ ವೀರ ಪಡೆ ಭೇರುಂಡನ ಮೊತ್ತದ ಕೂಸುಗಳು, ಇತಿಹಾಸ ದರ್ಶನ ಸಂ-೨೨, ಕ.ಇ.ಅ. ಬೆಂಗಳೂರು.

ಲಲಿತಾಂಬ ಎನ್.ಆರ್., ೨೦೧೦, ಎಕ್ಕಟಿಗ ವೀರಪಡೆ, ಇತಿಹಾಸ ದರ್ಶನ ಸಂ-೨೫, ಕ.ಇ.ಅ. ಬೆಂಗಳೂರು.

ಲಲಿತಾಂಬ ಎನ್.ಆರ್., ೨೦೧೨, ಕೋಶಿಗರ್ ಎಪ್ಪಿತ್ತರ್ ಪ್ರಾಚೀನ ವೀರಪಡೆ, ಇತಿಹಾಸ ದರ್ಶನ ಸಂ-೨೭, ಕ.ಇ.ಅ. ಬೆಂಗಳೂರು.

ಲಲಿತಾಂಬ ಎನ್.ಆರ್., ೨೦೧೩, ಎಕ್ಕಟಿಗ ವೀರರು ಮತ್ತಷ್ಟು ಶಾಸನ ಹಾಗೂ ಸಾಹಿತ್ಯಿಕ ಉಲ್ಲೇಖಗಳ ಬೆಳಕಿನಲ್ಲಿ, ಇತಿಹಾಸ ದರ್ಶನ ಸಂ-೨೮, ಕ.ಇ.ಅ. ಬೆಂಗಳೂರು.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಅಣಜಿ ಗ್ರಾಮದ ಪುರಾತತ್ವ ಮತ್ತು ಚರಿತ್ರೆ, ಇತಿಹಾಸ ದರ್ಶನ ಸಂ-೧೭, ಕ.ಇ.ಅ. ಬೆಂಗಳೂರು.

ವಿನೋದಮ್ಮ ಕೆ., ೨೦೦೫, ಕುರುವಗಡ್ಡೆ ರಾಮೇಶ್ವರ ದೇವಸ್ಥಾನದ ಸಂಕ್ಷಿಪ್ತ ಇತಿಹಾಸ, ಇತಿಹಾಸ ದರ್ಶನ ಸಂ-೨೦, ಕ.ಇ.ಅ. ಬೆಂಗಳೂರು.

ಶಾಸ್ತ್ರಿ ಎ.ಕೆ., ೨೦೦೦, ಶೃಂಗೇರಿ ಮಠದೊಂದಿಗೆ ಹರಪನಹಳ್ಳಿ ಅರಸುಗಳ ಸಂಬಂಧ, ಇತಿಹಾಸ ದರ್ಶನ ಸಂ-೧೫, ಕ.ಇ.ಅ. ಬೆಂಗಳೂರು.

ಶಿವಶಂಕರಯ್ಯ ಎಂ., ೨೦೦೫, ಹೊನ್ನಾಳಿ ಶ್ರೀ ಚನ್ನಪ್ಪಸ್ವಾಮಿ ಮಠದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಅಧ್ಯಯನ, ಇತಿಹಾಸ ದರ್ಶನ ಸಂ-೨೦, ಕ.ಇ.ಅ. ಬೆಂಗಳೂರು.

ಸದಾಶಿವಪ್ಪ ಕುಂ.ಬಾ., ಷಡಕ್ಷರಯ್ಯ ರು.ಮ., ೧೯೯೦, ಬಾಗಳಿ ಕಂಚಿನ ಪತ್ರ, ಇತಿಹಾಸ ದರ್ಶನ ಸಂ-೫, ಕ.ಇ.ಅ. ಬೆಂಗಳೂರು.

ಸದಾಶಿವಪ್ಪ ಕುಂ.ಬಾ., ೨೦೦೦, ಹರಪನಹಳ್ಳಿ ಪರಿಸರದ ಹೊಸ ಶಾಸನಗಳು ಮತ್ತು ಯಕ್ಷಗಾನ ಕವಿಗಳು ಒಂದು ಟಿಪ್ಪಣಿ, ಇತಿಹಾಸ ದರ್ಶನ ಸಂ-೧೫, ಕ.ಇ.ಅ. ಬೆಂಗಳೂರು.

ಸದಾಶಿವಪ್ಪ ಕುಂ.ಬಾ., ೨೦೦೩, ನೊಳಂಬವಾಡಿ-೩೨೦೦೦ ರಾಜ್ಯ ಹಾಗೂ ಉಚ್ಚಂಗಿ ಪಾಂಡ್ಯರು, ಇತಿಹಾಸ ದರ್ಶನ ಸಂ-೧೮, ಕ.ಇ.ಅ. ಬೆಂಗಳೂರು.

ಸದಾಶಿವಪ್ಪ ಕುಂ.ಬಾ., ೨೦೧೦, ಹರಪನಹಳ್ಳಿ ತಾಲ್ಲೂಕು ಅರಸಿಕೆರೆ ಗ್ರಾಮದ ಪ್ರಾಚೀನ ಪರಿಸರ ಶೋಧ, ಇತಿಹಾಸ ದರ್ಶನ ಸಂ-೨೫, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೧೯೯೮, ಸಂತೇಬೆನ್ನೂರು ಪಾಳೇಗಾರರು, ಇತಿಹಾಸ ದರ್ಶನ ಸಂ-೧೩, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೨, ಚನ್ನಗಿರಿ ತಾಲೂಕಿನಲ್ಲಿ ಉಚ್ಚಂಗಿ ಪಾಂಡ್ಯರ ಕಾಲದ ಎರಡು ಅಪ್ರಕಟಿತ ಶಾಸನಗಳು, ಇತಿಹಾಸ ದರ್ಶನ ಸಂ-೧೭, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೩, ಸಂತೆಬೆನ್ನೂರು ನಾಯಕರ ಅಪ್ರಕಟಿತ ತಾಮ್ರಶಾಸನ, ಇತಿಹಾಸ ದರ್ಶನ ಸಂ-೧೮, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೪, ಚನ್ನಗಿರಿ ತಾಲ್ಲೂಕಿನಲ್ಲಿ ಈಚೆಗೆ ದೊರೆತ ಹೊಯ್ಸಳರ ಒಂದು ಶಾಸನ, ಇತಿಹಾಸ ದರ್ಶನ ಸಂ-೧೯, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೫, ಸಂತೇಬೆನ್ನೂರು ನಾಯಕರ ಒಂದು ತಾಮ್ರಶಾಸನ, ಇತಿಹಾಸ ದರ್ಶನ ಸಂ-೨೦, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೬, ಉಪ್ಪನಾಯ್ಕನಹಳ್ಳಿಯ ಅಪೂರ್ವ ಮಾಸ್ತಿಶಿಲ್ಪಗಳು, ಇತಿಹಾಸ ದರ್ಶನ ಸಂ-೨೧, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೦೮, ಹೊಯ್ಸಳ ವೀರಬಲ್ಲಾಳ ಕಾಲದ ಅಪ್ರಕಟಿತ ಶಾಸನ ಪ್ರತಿ, ಇತಿಹಾಸ ದರ್ಶನ ಸಂ-೨೩, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೧೦, ದಾವಣಗೆರೆ ಜಿಲ್ಲೆ ಭೀಮನೆರೆ ಗ್ರಾಮದ ಒಂದು ಹೊಸ ತಾಮ್ರಶಾಸನ, ಇತಿಹಾಸ ದರ್ಶನ ಸಂ-೨೫, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೧೧, ಸಂತೇಬೆನ್ನೂರು ನಾಯಕರ ಮೂರು ಹೊಸ ಶಾಸನಗಳು, ಇತಿಹಾಸ ದರ್ಶನ ಸಂ-೨೬, ಕ.ಇ.ಅ. ಬೆಂಗಳೂರು.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ೨೦೧೨, ದಾವಣಗೆರೆ ಜಿಲ್ಲೆಯ ಬಲ್ಲೂರು ಗ್ರಾಮದಲ್ಲಿ ದೊರೆತ ಉಚ್ಚಂಗಿ ಪಾಂಡ್ಯರ ಒಂದು ಶಿಲಾಶಾಸನ, ಇತಿಹಾಸ ದರ್ಶನ ಸಂ-೨೭, ಕ.ಇ.ಅ. ಬೆಂಗಳೂರು.

ಸಂತೋಷ್ ಎನ್.ಜಿ., ನಾಗವೇಣಿ ಜೆ.ಬಿ., ೨೦೧೩, ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೆರೆ ನೀರಾವರಿ ವ್ಯವಸ್ಥೆ, ಇತಿಹಾಸ ದರ್ಶನ ಸಂ-೧೩, ಕ.ಇ.ಅ. ಬೆಂಗಳೂರು.

ಸಂತೋಷ್ ಎನ್.ಜಿ., ರಮೇಶ್ ಹೆಚ್., ೨೦೧೫, ದಾವಣಗೆರೆ ಜಿಲ್ಲೆಯ ಬಾವಿಗಳು ಒಂದು ಅಧ್ಯಯನ (ಕ್ರಿ.ಶ. ೧೩೩೬-೧೮೦೦), ಇತಿಹಾಸ ದರ್ಶನ ಸಂ-೩೦, ಕ.ಇ.ಅ. ಬೆಂಗಳೂರು.

ಸಾಮಕ್ ಎಸ್.ಜಿ., ೨೦೦೫, ಹೊನ್ನಾಳಿ ತಾಲ್ಲೂಕು ಕುಂದೂರಿನ ಅಪ್ರಕಟಿತ ತಾಮ್ರಶಾಸನ, ಇತಿಹಾಸ ದರ್ಶನ ಸಂ-೨೦, ಕ.ಇ.ಅ. ಬೆಂಗಳೂರು.

ಸಿದ್ದಪ್ಪ ಕೆ., ೨೦೧೨, ಕಮ್ಮಾರಗಟ್ಟೆಯ ಪರಿಸರದ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ ಸಂ-೨೭, ಕ.ಇ.ಅ. ಬೆಂಗಳೂರು.

ಸುಂದರ ಅ., ೧೯೯೭, ಹಿರೆಕೆರೂರು-ಹೊನ್ನಾಳಿ ಪ್ರದೇಶದಲ್ಲಿ ಬಿಲ್ಲುದೇವರು ಮತ್ತು ರಾಮಬಾಣ ಒಂದು ವಿವೇಚನೆ, ಇತಿಹಾಸ ದರ್ಶನ ಸಂ-೧೨, ಕ.ಇ.ಅ. ಬೆಂಗಳೂರು.

ಸೋಮಶೇಖರ್ ಎಸ್.ವೈ., ೧೯೯೭, ಆಕನೂರು ಗ್ರಾಮದ ಬಳಿ ಆದಿ ಇತಿಹಾಸ ಕಾಲದ ಕುರುಹುಗಳು, ಇತಿಹಾಸ ದರ್ಶನ ಸಂ-೧೨, ಕ.ಇ.ಅ. ಬೆಂಗಳೂರು.

ಸೋಮಶೇಖರ್ ಎಸ್.ವೈ., ೨೦೧೭, ಸಂಗೇನಹಳ್ಳಿ ಕೆರೆ ಪರಿಸರದಲ್ಲಿ ಹಳೆಯ ಶಿಲಾಯುಗದ ಕೈಕೊಡಲಿ ಪತ್ತೆ, ಇತಿಹಾಸ ದರ್ಶನ ಸಂ-೩೨, ಕ.ಇ.ಅ. ಬೆಂಗಳೂರು.

ಹರಿಹರ ಶ್ರೀನಿವಾಸರಾವ್, ೨೦೦೫, ಹರಿಹರದ ಶಾಸನಗಳಲ್ಲಿ ಗಿಡ, ಮರ, ಭೂಮಿ, ನೀರು, ಸುಂಕ ಇತ್ಯಾದಿ ಒಂದು ವೈಜ್ಞಾನಿಕ ನೋಟ, ಇತಿಹಾಸ ದರ್ಶನ ಸಂ-೨೦, ಕ.ಇ.ಅ. ಬೆಂಗಳೂರು.

ಹೊನ್ನೂರಸ್ವಾಮಿ ಹೆಚ್., ೨೦೧೭, ಚಿಕ್ಕನಹಳ್ಳಿ ಗ್ರಾಮದ ಅಪ್ರಕಟಿತ ವೀರಮಾಸ್ತಿ ಶಾಸನ, ಇತಿಹಾಸ ದರ್ಶನ ಸಂ-೩೨, ಕ.ಇ.ಅ. ಬೆಂಗಳೂರು.

ಹೊನ್ನೂರಸ್ವಾಮಿ ಹೆಚ್., ೨೦೧೮, ಮಲೆಮಾಚಿಕೆರೆ ಗ್ರಾಮದ ಅಪ್ರಕಟಿತ ವೀರಗಲ್ಲು ಶಾಸನ, ಇತಿಹಾಸ ದರ್ಶನ ಸಂ-೩೩, ಕ.ಇ.ಅ. ಬೆಂಗಳೂರು.

